ಶ್ರೀವ್ಯಾಸರಾಜ ಶ್ರೀವಿಜಯೀಂದ್ರತೀರ್ಥ ಗುರುಸಾರ್ವಭೌಮ ವಿರಚಿತ

# ನ್ಯಾಯಾಮೃತಾಮೋದ

## ವಿಪ್ರತಿಪತ್ತಿವಿಚಾರ


ಅನುವಾದಕರು

ವಿದ್ವಾನ್ ಹಯವದನ ಪುರಾಣಿಕರು

ರಾಷ್ಟ್ರಪತಿ ಪ್ರಶಸ್ತಿ ಪುರಸ್ಕೃತರು



ಪ್ರಕಾಶನ

ಶ್ರೀ ಗುರುಸಾರ್ವಭೌಮ ಸಂಶೋಧನ ಮಂದಿರ

ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲಮಹಾಸಂಸ್ಥಾನ

ಶ್ರೀರಾಘವೇಂದ್ರ ಸ್ವಾಮಿ ಮಠ, ಮಂತ್ರಾಲಯ.

ಶ್ರೀವ್ಯಾಸರಾಜ ಶ್ರೀವಿಜಯೀಂದ್ರತೀರ್ಥ ಗುರುಸಾರ್ವಭೌಮ ವಿರಚಿತ

# ನ್ಯಾಯಾಮೃತಾಮೋದ-ವಿಪ್ರತಿಪತ್ತಿವಿಚಾರ

ಅನುವಾದಕರು

**ವಿದ್ವಾನ್ ಹಯವದನ ಪುರಾಣಿಕರು**

ಪ್ರಥಮ ಮುದ್ರಣ - 2019

ಪ್ರತಿಗಳು : 1000



ಪ್ರಕಾಶಕರು

**ಶ್ರೀಗುರುಸಾರ್ವಭೌಮ ಸಂಶೋಧನಾ ಮಂದಿರ**

**ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ**

**ಶ್ರೀರಾಘವೇಂದ್ರಸ್ವಾಮಿಗಳವರ ಮಠ,**

**ಮಂತ್ರಾಲಯ-518345**

ಅಕ್ಷರ ಮತ್ತು ಪುಟ ವಿನ್ಯಾಸ : ಆರ್.ಎಸ್. ಪ್ರೇಮಕುಮಾರ್, ಮೊ.9964334285

ಮುದ್ರಣ : **ಶ್ರೀರಾಘವೇಂದ್ರಸ್ವಾಮಿ ಆಫ್‌ಸೆಟ್ ಪ್ರಿಂಟಿಂಗ್ ಪ್ರೆಸ್**

ಎಮ್ಮಿಗನೂರು-518360, ಮೊ : 9247188605, 9247853681

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ

॥ಸ್ವಸ್ತಿಶ್ರೀ ವಿಜಯಾಭ್ಯುದಯ ಗತಶಾಲಿವಾಹನಶಕೆ 1940 ನೇ
ಶ್ರೀವಿಲಂಬಿನಾಮ ಸಂವತ್ಸರ ಮಾರ್ಗಶಿರ ಕೃಷ್ಣ ಪಂಚಮಿ ಗುರುವಾರ ದಿನಾಂಕ 27-12-2018
ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣ ಪಾರಾವಾರ ಪಾರಂಗತ
ಸರ್ವತಂತ್ರ ಸ್ವತಂತ್ರ ಶ್ರೀಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ
ಶ್ರೀಮನ್ಮೂಲರಘುಪತಿ ವೇದವ್ಯಾಸದೇವ ದಿವ್ಯ ಶ್ರೀಪಾದಪದ್ಮಾರಾಧಕ
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನಾಧೀಶ್ವರರಾದ
ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತಸಾಮ್ರಾಜ್ಯ ದಿಗ್ವಿಜಯವಿದ್ಯಾಸಿಂಹಾಸನಾಧೀಶ್ವರರಾದ
ಶ್ರೀಮತ್ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲಸಂಜಾತರಾದ
ಶ್ರೀಮತ್ಸುಯತೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರಕರಾದ

# ಪರಮಪೂಜ್ಯ 1008 ಶ್ರೀಸುಬುಧೇಂದ್ರತೀರ್ಥ ಶ್ರೀಪಾದಂಗಳವರ

## ಅನುಗ್ರಹವಚನ

ಮುನಿತ್ರಯರಲ್ಲಿ ಒಬ್ಬರಾದ ಶ್ರೀವ್ಯಾಸರಾಜಗುರುಸಾರ್ವಭೌಮರು ಬರೆದ ಗ್ರಂಥಗಳು ವಿದ್ವತ್ ಪ್ರಪಂಚದಲ್ಲಿ ವಿಶಿಷ್ಟ ಸ್ಥಾನವನ್ನಲಂಕರಿಸಿವೆ. ಶ್ರೀನರಸಿಂಹದೇವರ ಮೂರು ಕಣ್ಣುಗಳಂತೆ ಪ್ರಸಿದ್ಧವಾಗಿವೆ ಎಂದು ಶ್ರೀವಾದೀಂದ್ರತೀರ್ಥರು ಗುರುಗುಣಸ್ತವನದಲ್ಲಿ ವರ್ಣಿಸಿರುತ್ತಾರೆ.

ಪ್ರಕೃತ ಶ್ರೀವ್ಯಾಸತೀರ್ಥರು ಬರೆದ ನ್ಯಾಯಾಮೃತವನ್ನು ಆಮೋದಸಹಿತ ಬೇರೆ ಬೇರೆ ಟಿಪ್ಪಣಿಗಳ ವಿಶೇಷತೆಯನ್ನೊಳಗೊಂಡಂತೆ ಅನುವಾದ ಮಾಡಲು ನಮ್ಮ ಶ್ರೀಮಠದ ಆಸ್ಥಾನ ವಿದ್ವಾಂಸರಾದ ಹಯವದನ ಪುರಾಣಿಕರಿಗೆ ಸೂಚಿಸಿದ್ದೆವು. ಅವರು "ನ್ಯಾಯಾಮೃತಾಮೋದ-ಶ್ರುತ್ಯರ್ಥ ವಿಚಾರ" ಮತ್ತು "ನ್ಯಾಯಾಮೃತಾಮೋದ-ಪರತತ್ವವಿಚಾರ" ಎಂಬ ಶೀರ್ಷಿಕೆಗಳಲ್ಲಿ ನ್ಯಾಮಾಮೃತದಲ್ಲಿ ಬಂದ ಅನೇಕ ವಿಚಾರಗಳನ್ನು ಶ್ರೀವಿಜಯೀಂದ್ರತೀರ್ಥರ ಟಿಪ್ಪಣಿ ಎನಿಸಿದ ನ್ಯಾಯಾಮೃತಾಮೋದದ ಬೆಳಕಿನಲ್ಲಿ ಬಹಳ ಯೋಗ್ಯವಾದ ರೀತಿಯಲ್ಲಿ ಅನುವಾದಮಾಡಿ, ಪ್ರಸಕ್ತವಾದ ಸ್ಥಳದಲ್ಲಿ ಉಳಿದ ಅನೇಕ ಟಿಪ್ಪಣಿಗಳ ಸ್ವಾರಸ್ಯವನ್ನು ತಿಳಿಸಿದ್ದಾರೆ. ಇದೀಗ ಅದೇರೀತಿಯಲ್ಲಿ ಅವರು 'ನ್ಯಾಯಾಮೃತಾಮೋದ -ವಿಪ್ರತಿಪತ್ತಿ ವಿಚಾರ' ಎಂಬ ಸಂಪುಟವನ್ನು ಹೊರತರುತ್ತಿದ್ದಾರೆ. ಉತ್ತಮ ವಿದ್ವಾಂಸರಾದ ಹಯವದನ ಪುರಾಣಿಕರಂಥಹ ವಿದ್ವಾಂಸರಿಂದಲೇನೇ ಇಂಥಹ ಕಠಿಣ ಗ್ರಂಥಗಳ ಅನುವಾದವು ಸಾಧ್ಯ. ಅಂಥಹ ಒಂದು ಕಾರ್ಯವನ್ನು ಮಾಡಿ ಶ್ರೀಗುರುರಾಜರಿಗೆ ಸಮರ್ಪಿಸಿದ ಪುರಾಣಿಕರನ್ನು ತುಂಬು ಹೃದಯದಿಂದ ಅಭಿನಂದಿಸುತ್ತೇವೆ.

ಈ ಗ್ರಂಥವನ್ನು ನಮ್ಮ ಪರಮೇಷ್ಠಿ ಗುರುಗಳಾದ ಪ್ರಾತಃಸ್ಮರಣೀಯರಾದ ಶ್ರೀಸುಜಯೀಂದ್ರತೀರ್ಥರ ಜನ್ಮಶತಮಾನೋತ್ತರ ಶತಮಾನೋತ್ಸವವೇ ಮೊದಲಾದ ಉತ್ಸವತ್ರಯಗಳಲ್ಲಿ ಬಿಡುಗಡೆಗೊಳಿಸುತ್ತಿರುವುದು ನಮಗೆ ಎಷ್ಟೋ ಆನಂದವನ್ನು ಮೂಡಿಸಿದೆ. ಅನುವಾದಕರಾದ ವಿದ್ವಾನ್ ಹಯವದನ ಪುರಾಣಿಕರಿಗೆ ಮತ್ತಷ್ಟು ಇಂಥಹ ಸಾರಸ್ವತ ಸೇವೆಯಲ್ಲಿ ತೊಡಗುವ ಶಕ್ತಿಯನ್ನು ದಯಪಾಲಿಸಲೆಂದು ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತಭಾರತೀರಮಣ ಮುಖ್ಯಪ್ರಾಣಾಂತರ್ಗತ ಅಸ್ಮದುಪಾಸ್ಯಮೂರ್ತಿ ಶ್ರೀಮನ್ಮೂಲರಘುಪತಿವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ. ಇತಿ ನಾರಾಯಣ ಸ್ಮರಣೆಗಳು.

ಶ್ರೀವ್ಯಾಸರಾಜ ಶ್ರೀವಿಜಯೀಂದ್ರತೀರ್ಥ ಗುರುಸಾರ್ವಭೌಮ ವಿರಚಿತ

# ನ್ಯಾಯಾಮೃತಾಮೋದ

## ವಿಪ್ರತಿಪತ್ತಿವಿಚಾರ

ಅನುವಾದಕರು


**ವಿದ್ವಾನ್ ಹಯವದನ ಪುರಾಣಿಕರು**

ರಾಷ್ಟ್ರಪತಿ ಪ್ರಶಸ್ತಿ ಪುರಸ್ಕೃತರು



ಪ್ರಕಾಶನ

**ಶ್ರೀ ಗುರುಸಾರ್ವಭೌಮ ಸಂಶೋಧನ ಮಂದಿರ**

ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲಮಹಾಸಂಸ್ಥಾನ

ಶ್ರೀರಾಘವೇಂದ್ರ ಸ್ವಾಮಿ ಮಠ, ಮಂತ್ರಾಲಯ.

# ಶುಭ ಸಂದೇಶ

ದ್ವೈತವೇದಾಂತದ ವಾಙ್ಮಯಪ್ರಪಂಚದ ಭವ್ಯ ಇತಿಹಾಸದ ವಿಶಾಲ ಆಕಾಶದಲ್ಲಿ ಧ್ರುವತಾರೆಯಂತೆ ಬೆಳಗುವ ಮಹನೀಯರಲ್ಲಿ ಶ್ರೀವ್ಯಾಸರಾಜರದು ವಿಶಿಷ್ಟ ಸ್ಥಾನ. ಬಗೆ ಬಗೆಯ ಭಾರತೀಯ ದಾರ್ಶನಿಕರ ವಿಚಾರಧಾರೆಯನ್ನು ವಿಮರ್ಶೆಯ ಒರೆಗಲ್ಲಿಗೆ ಹಚ್ಚಿ ತೀಕ್ಷ್ಣವಾದ ಪರಾಮರ್ಶೆಯನ್ನು ನಡೆಸಿ ಅದರ ಅಸಾರತೆ ಅತಾರ್ಕಿಕತೆಗಳನ್ನು ಸಮರ್ಥವಾದ ರೀತಿಯಲ್ಲಿ ತೋರಿದ್ದಾರೆ. ಮಧ್ವಸಿದ್ಧಾಂತದ ನೆಲೆಗಟ್ಟಿನಲ್ಲಿ ವಿಮರ್ಶೆ ನಡೆಸುವ ಮೂಲಕ ಶ್ರೀಮಧ್ವರ ತತ್ತ್ವವಾದದ ಪ್ರಾಮಾಣಿಕತೆ ಹಾಗು ಗಟ್ಟಿಯಾದ ವೈಚಾರಿಕತೆಯನ್ನೂ ಪ್ರಬುದ್ಧರೀತಿಯಲ್ಲಿ ಪ್ರದರ್ಶನ ಮಾಡಿದ್ದಾರೆ.

ಶ್ರೀನರಸಿಂಹದೇವರ ಮೂರು ಕಣ್ಣುಗಳಂತೆ ಎಂದು ವರ್ಣಿತವಾದ ವ್ಯಾಸತ್ರಯದಲ್ಲಿ ಒಂದಾದ ನ್ಯಾಯಾಮೃತ ವಿಶೇಷವಾಗಿ ಮಾಯಾವಾದದ ವಿಮರ್ಶೆಗೆ ಮೀಸಲಾದ ಗ್ರಂಥ. ಮಾಯಾವಾದಿಗಳು ಅದ್ವೈತಪರವಾಗಿ ಅಂದರೆ ವಿಶ್ವಮಿಥ್ಯಾತ್ವ ಹಾಗು ಜೀವಬ್ರಹ್ಮೈಕ್ಯಪ್ರತಿಪಾದನೆಗಾಗಿ ಉದಾಹರಿಸಿರುವ ಶ್ರುತಿಗಳ ಆಪಾತಾರ್ಥವನ್ನು ಪ್ರಖರವಿಮರ್ಶೆಯಿಂದ ಅಲ್ಲಗಳೆದು, ಶ್ರೀಮಧ್ವಾಚಾರ್ಯರ ಸೈದ್ಧಾಂತಿಕ ನೆಲೆಯಲ್ಲಿ ಆ ಶ್ರುತಿಗಳ ಪ್ರಮಾಣಸಮ್ಮತವಾದ ಅಭಿಪ್ರಾಯವನ್ನು ಸಪ್ರಮಾಣ ಹಾಗು ಸಯುಕ್ತಿಕವಾಗಿ ನಿಷ್ಕರ್ಷ ಮಾಡಿರುತ್ತಾರೆ.

ಶ್ರೀವ್ಯಾಸರಾಜರ ಪ್ರಿಯ ಶಿಷ್ಯರಾದ ಶ್ರೀವಿಜಯೀಂದ್ರರು ನ್ಯಾಯಾಮೃತಕ್ಕೆ ಆಮೋದ ಎಂಬ ಹೆಸರಿನ ವ್ಯಾಖ್ಯಾನವನ್ನು ಬರೆದು ಸವಿಮರ್ಶವಾಗಿ ಶ್ರುತ್ಯರ್ಥವಿಚಾರವನ್ನು ಹಾಗೂ ಪರತತ್ತ್ವ ವಿಚಾರವನ್ನು ಸುಂದರವಾಗಿ ಸಮರ್ಥವಾಗಿ ವಿವರಿಸಿದ್ದಾರೆ.

ನಮ್ಮ ಪ್ರಿಯಶಿಷ್ಯರಾದ, ಉತ್ತಮ ವಿದ್ವಾಂಸರಾದ ಹಯವದನ ಪುರಾಣಿಕರು ಅನೇಕ ಟಿಪ್ಪಣಿಗಳ ವಿಶೇಷಾಂಶಗಳನ್ನು ಉಲ್ಲೇಖಿಸಿ 'ನ್ಯಾಯಾಮೃತಾಮೋದ-ಶ್ರುತ್ಯರ್ಥವಿಚಾರ' ಮತ್ತು 'ನ್ಯಾಯಾಮೃತಾಮೋದ-ಪರತತ್ತ್ವವಿಚಾರ' ಎಂಬ ಅನುವಾದ ಗ್ರಂಥಗಳನ್ನು ವಿದ್ವಾಂಸರಿಗೆ ಸಂತಸವಾಗುವಂತೆ ಪ್ರೌಢರೀತಿಯಲ್ಲಿ ಮಾಡಿರುತ್ತಾರೆ. ಇದೀಗ ಅವರು 'ನ್ಯಾಯಾಮೃತಾಮೋದ- ವಿಪ್ರತಿಪತ್ತಿವಿಚಾರ' ಎಂಬ ಸಂಪುಟವನ್ನು ಹೊರತರುತ್ತಿದ್ದಾರೆ. ಇಂಥ ಪ್ರಮಾಣ-ಪ್ರಮೇಯಗಳ ವಿಮರ್ಶಾತ್ಮಕವಾದ ಶ್ರೀವ್ಯಾಸರಾಜರ ಹಾಗು ಶ್ರೀವಿಜಯೀಂದ್ರರ ಗ್ರಂಥಗಳ ಅನುವಾದ ಸುಲಭವಾದ ಕೆಲಸವಲ್ಲ. ಸಮರ್ಥವ್ಯುತ್ಪನ್ನ ಪ್ರತಿಭಾವಂತ ಪಂಡಿತರಿಂದ ಮಾತ್ರ ಸಾಧ್ಯ. ಶ್ರೀಹರಿವಾಯುಗುರುಗಳಿಗೆ ಅತಿಪ್ರಿಯವಾದ ಇಂಥ ವಾಙ್ಮಯ ಸೇವೆಯನ್ನು ನಡೆಸಿದ ಹಯವದನ ಪುರಾಣಿಕರನ್ನು ತುಂಬು ಹೃದಯದಿಂದ ಅಭಿನಂದಿಸುತ್ತೇವೆ.

ಶ್ರೀರಾಘವೇಂದ್ರಮಠಾಧೀಶರೂ ನಮ್ಮ ಆತ್ಮೀಯರೂ ಆದ ಶ್ರೀಸುಬುಧೇಂದ್ರತೀರ್ಥ ಶ್ರೀಪಾದಂಗಳವರು ಶ್ರೀರಾಘವೇಂದ್ರಸ್ವಾಮಿಗಳ ಆರಾಧನೆಯ ಶುಭಸಂದರ್ಭದಲ್ಲಿ ಶ್ರೀವ್ಯಾಸರಾಜರ ಹಾಗು ಶ್ರೀವಿಜಯೀಂದ್ರತೀರ್ಥರ ಈ ಪ್ರೌಢಗ್ರಂಥದ ಅನುವಾದವನ್ನು ಹಯವದನ ಪುರಾಣಿಕರಿಂದ ನಡೆಸಿ ಶ್ರೀರಾಘವೇಂದ್ರಗುರುಗಳಿಗೆ ಅರ್ಪಿಸುತ್ತಿರುವುದನ್ನು ಹೃದಯಪೂರ್ವಕ ಅಭಿನಂದಿಸುತ್ತೇವೆ.

ಶ್ರೀಶ್ರೀವಿಶ್ವೇಶತೀರ್ಥ ಶ್ರೀಪಾದರು
ಶ್ರೀಪೇಜಾವರ ಅಧೋಕ್ಷಜ ಮಠ
ಉಡುಪಿ

# H H Sri Sri Vidyadheesha Theertha Swamiji

Jagadguru Sri Madhwacharya Moola Maha Samsthanam
Sri Hrishikesha Theertha Peetam
Paryaya Sri Palimaru Matha, SriKrishna Matha, Udupi-576101, Karnataka

## ಅನುಗ್ರಹ ಸಂದೇಶ

### ಸಪ್ರೇಮ ನಾರಾಯಣಸ್ಮರಣೆಗಳು

ಅಮೃತಕ್ಕಾಗಿ ದೇವ-ದಾನವರು ಪಾಲಗಡಲನ್ನು ಕಡೆದದ್ದು ಒಂದು ಇತಿಹಾಸ. ದುರ್ಮತಗಳೆಂಬ ದಾನವರು ಸನ್ಮತಗಳೆಂಬ ಸುರರು ಸೇರಿ ಶಾಸ್ತ್ರಸಾಗರವನ್ನು ಮಥಿಸಿದಾಗ ಪ್ರಾದುರ್ಭವಿಸಿದ್ದು ಈ ನ್ಯಾಯಾಮೃತ. ಸುಮನಸರು ಸುಸ್ತಾಗಿ ಏನನ್ನೂ ಸಾಧಿಸಲಾರದ ದುರವಸ್ಥೆಗೆ ಬಂದಾಗ ಅಜಿತನಾಗಿ ಶ್ರೀಹರಿಯೇ ಶಾಸ್ತ್ರವನ್ನು ಮಥಿಸಿ ಅಮೃತವನ್ನು ವಿತರಿಸಿದ್ದು ಇನ್ನೊಂದು ಇತಿಹಾಸ. ಗೌತಮರ ಶಾಪದಿಂದ ನಿರ್ವಿಣ್ಣವಾದ ಸಾಧಕವರ್ಗದ ಒಕ್ಕೊರಳ ಕರೆಯನ್ನು ಮನ್ನಿಸಿ ಶೂನ್ಯವಾದ ಶಾಸ್ತ್ರಸಾಗರವನ್ನು ಮತ್ತೆ ಮನನದ ಮೂಲಕ ಮಥಿಸುವುದಕ್ಕೋಸ್ಕರ ದೇವರು ಶ್ರೀವೇದವ್ಯಾಸರಾಗಿ ಅವತರಿಸಿ ವೇದವೇದಾಂತವನ್ನು ಮಥಿಸಿ ಬ್ರಹ್ಮಸೂತ್ರದ ಅಮೃತವನ್ನು ವಿತರಿಸಿದರು. ದುರ್ಮತವೆಂಬ ದಾನವರಲ್ಲಿದ್ದ ಅಮೃತಪಾತ್ರೆಯನ್ನು ಕಿತ್ತುಕೊಂಡು ಭಗವಂತನು ದೇವತೆಗಳಿಗೆ ಉಣಿಸಿದ ಅಮೃತವೇ ಈ ನ್ಯಾಯಾಮೃತ. ಮೃತ ಎಂದರೆ ಸಾವನ್ನು ಹೊಂದಿದವ. ದುರ್ಮತದ-ದುರ್ವಾದಿಗಳ ಮುಂದೆ ಸಾತ್ವಿಕರು ಕಂಗೆಟ್ಟು ಕೈಚೆಲ್ಲಿ ಕೊಡುವ ನಿರುತ್ತರತೆಯ ನೀರವ ಮೌನವೇ ಸಾವು. ಈ ಸಾವಿನ ಅಂಚಿನಿಂದ ಪಾರಾಗುವ ಪರಿಯೇ ಅಮೃತದ ಅನುಭವ ಯಾವುದೇ ಪಂಡಿತಮಂಡಲಿಯ ಗೋಷ್ಠಿಯಲ್ಲಿ ತಲೆ ಎತ್ತಿಮೆರೆಸುವ, ಸಮರ್ಥವಾಗಿ ಸಿದ್ಧಾಂತವನ್ನು ಸಮರ್ಥಿಸುವ ಶಕ್ತಿ ಇದ್ದ ಕೃತಿಯೇ ಈ ನ್ಯಾಯಾಮೃತ. ಇದನ್ನು ಇತ್ತ ಶ್ರೀವ್ಯಾಸರಾಜ ಗುರುಸಾರ್ವಭೌಮರಿಗೆ ಸಹಸ್ರ ಪ್ರಣಾಮಪರಂಪರೆಗಳು.

ಇಂತಹ ಮಹೋನ್ನತ ಮೇರುಕೃತಿಗೆ ಪರಮಪೂಜ್ಯ ಶ್ರೀವಿಜಯೀಂದ್ರಸ್ವಾಮಿಗಳಂತಹ ಮಹಾವಿಜ್ಞಾನಿಗಳಾದ ಪರಮಪೂಜ್ಯ ಶ್ರೀಪಾದರಿಂದ ಪ್ರಾರಂಭಿಸಿ ಶ್ರೀಹಯವದನ ಪುರಾಣಿಕರ ತನಕ ವ್ಯಾಖ್ಯಾನಪರಂಪರೆ ಬೆಳೆದು ಬಂದಿದೆ. ನ್ಯಾಯಾಮೃತದಂತಹ ಪೂರ್ವಪಕ್ಷ-ಸಿದ್ಧಾಂತಪಕ್ಷಗಳ ಖಂಡನ-ಮಂಡನಮಯ ಕಠಿಣಗ್ರಂಥಕ್ಕೂ ಕನ್ನಡದಲ್ಲಿಯೇ ಸುಸಂಸ್ಕೃತವಾದ, ಸುಂದರವಾದ ಆಪಂಡಿತಪಾಮರ ಮನೋರಂಜಕವಾದ ಎಂಥವರಿಗೂ ಅರಿಯಲು-ಅರಗಿಸಲು ಸಾಧ್ಯವಾಗಬಲ್ಲ ಸುಲಲಿತ ವ್ಯಾಖ್ಯಾನ ಕೊಟ್ಟ ದೊಡ್ಡ ಹೆಸರು ಶ್ರೀ ಹಯವದನ ಪುರಾಣಿಕರದ್ದು. ಅದ್ವೈತ ಸಿದ್ಧಿಯಂತಹ ಖಂಡನಗ್ರಂಥಗಳನ್ನು, ಆಮೋದ ತರಂಗಿಣಿಯಂತಹ ಮಂಡನಕೃತಿರತ್ನಗಳನ್ನು ಮಂಡೆಯಲ್ಲಿಟ್ಟುಕೊಂಡು ಪಂಡಿತರ ಮಂಡಲಿಯ ಮುಂದೆ ಮಂಡಿಸಿದ ಸಾಧನೆ

ಶ್ರೀಪುರಾಣಿಕರದ್ದು. ಅತಿಕ್ಲಿಷ್ಟ-ತರ್ಕಭೂಯಿಷ್ಠಗಳಾದ, ಪಂಡಿತರನ್ನೂ ಬೆಚ್ಚಿಬೀಳಿಸುವ ನ್ಯಾಯಾಮೃತದ ಈ ಕೃತಿಯ ಅನುವಾದ ಮಹಾಸಾಧನೆಗೈದ ಪುರಾಣಿಕರ ಸಾಹಸ ಹರಿ-ಗುರುಗಳೇ ಹರಸುವಂಥಾದ್ದು. ನಮ್ಮ ಗುರುಗಳ ಹಾಗೂ ಪರಮಪೂಜ್ಯ ಪೇಜಾವರ ಶ್ರೀಪಾದರ ಅಚ್ಚುಮೆಚ್ಚಿನ ಶಿಷ್ಯರಾದ ಶ್ರೀಪುರಾಣಿಕರು 'ನ್ಯಾಯಾಮೃತಾಮೋದ ಶ್ರುತ್ಯರ್ಥವಿಚಾರ' ಮತ್ತು 'ನ್ಯಾಯಾಮೃತಾಮೋದ ಪರತತ್ತ್ವವಿಚಾರ' ಎಂಬ ಎರಡು ಸಂಪುಟಗಳನ್ನು ಈಗಾಗಲೆ ಹೊರತಂದಿದ್ದಾರೆ. ಈ ಸಂಪುಟಗಳಲ್ಲಿ ಗುರುಗಳೀರ್ವರ ವೈದುಷ್ಯ ಅನುರಣಿಸುತ್ತಿದೆ. ಇದೀಗ 'ನ್ಯಾಯಾಮೃತಾಮೋದ ವಿಪ್ರತಿಪತ್ತಿವಿಚಾರ' ಎಂಬ ಸಂಪುಟವನ್ನು ಹೊರತರುತ್ತಿದ್ದಾರೆ.

ಪೂರ್ವಾಶ್ರಮದಿಂಲೂ ಪುಸ್ತಕದ ನಿರ್ಮಾಣದಲ್ಲಿ ಸಿದ್ಧಹಸ್ತರಾದ, ಮಂತ್ರಾಲಯ ಮಠಾಧೀಶರಾದ ಶ್ರೀಶ್ರೀಸುಬುಧೇಂದ್ರತೀರ್ಥಸ್ವಾಮಿಗಳು ನೂರಾರು ಸಂಸ್ಕೃತ-ಕನ್ನಡಗಳ ಗ್ರಂಥರತ್ನಗಳ ಮುದ್ರಣಕಾರ್ಯವನ್ನು ನಡೆಸಿ ಸಾಧಕರಿಗೆ ಮಾಡಿದ ಪರಮೋಪಕಾರ ವಾಚಕ್ಕೆ ನಿಲುಕದ್ದು. ಶ್ರೀಮನ್ನ್ಯಾಯಸುಧಾಗ್ರಂಥಕ್ಕೆ ಇಪ್ಪತ್ತೈದಕ್ಕಿಂತಲೂ ಅಧಿಕವಾದ ವ್ಯಾಖ್ಯಾನವನ್ನು ಮುದ್ರಣ ಮಾಡಿಸಿ ಸಾಧಕರಿಗಿತ್ತ ಮೊದಲ ಹೆಸರು ಶ್ರೀಪಾದರದ್ದು. ಗ್ರಂಥಾಲಯದಲ್ಲೇ ಅಂತ್ಯಗೊಳ್ಳಬೇಕಾದ ಕೃತಿಗೆ ದಿವ್ಯರೂಪವನ್ನು ಕೊಟ್ಟು ಪುಸ್ತಕದ ಹಾಳೆಗಳಲ್ಲಿ ಮೂಡಿಸಿ ಸಾಧಕವರ್ಗಕ್ಕೆ ಕೊಟ್ಟು ಶ್ರೀಪಾದರು ಮಾಡಿದ ಸಾಧನೆ ಸಾಧಾರಣವೇನೂ ಅಲ್ಲ. ಇಂತಹ ಅಸಾಧಾರಣ ಸಾಧನೆಯ ಪ್ರವಾಹವನ್ನೇ ಮಾಡಿದ ಶ್ರೀಪಾದರ ಕಾರ್ಯಕ್ಕೆ ಸಮಸ್ತ ಆಸ್ತಿಕಸಮಾಜ ಚಿರಋಣಿಯಾಗಿದೆ. ಶ್ರೀಪಾದರನ್ನು ಆತ್ಮೀಯವಾಗಿ ಅಭಿನಂದಿಸುತ್ತೇವೆ.

ನಮ್ಮ ಸಹೃದಯ ವಿದ್ವಾಂಸರಾದ ಕನ್ನಡ-ಸಂಸ್ಕೃತಭಾಷೆಗಳಲ್ಲಿ ಪಳಗಿದ ಶ್ರೀ ಪುರಾಣಿಕರನ್ನು ಕಡೆಗೋಲು ಪಿಡಿದ ಪೊಡವಿಗೊಡೆಯ ಶ್ರೀಕೃಷ್ಣ ಹಾಗೂ ಶ್ರೀಮದಾಚಾರ್ಯರು ಹರಸಲಿ. ಈ ಕೃತಿಯು ವಿದ್ವಾಂಸರಿಗೂ, ವಿದ್ಯಾರ್ಥಿಗಳಿಗೂ ಪಾಠ-ಪ್ರವಚನಗಳಲ್ಲಿ ದಾರಿದೀವಿಗೆ ಆಗಲಿ. ಸಕಲ ಜಿಜ್ಞಾಸುಗಳಿಗೂ ಇದರ ಪ್ರಯೋಜನ ಸಿಗಲಿ. ಇವರಿಂದ ಇಂತಹ ಕೃತಿರತ್ನಗಳ ಅನುವಾದದ ಗಂಗಾಪ್ರವಾಹ ನಿರಂತರ ಹರಿಯಲಿ. ಆಯುರಾರೋಗ್ಯವನ್ನು ಹರಿ-ಗುರುಗಳು ನೀಡಲಿ ಎಂದು ಹಾರೈಸುತ್ತೇವೆ.

ಇತ್ಯನೇಕ ನಾರಾಯಣ ಸ್ಮರಣೆಗಳು

**ಶ್ರೀಶ್ರೀವಿದ್ಯಾಧೀಶತೀರ್ಥ ಶ್ರೀಪಾದರು**

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನದ
ಪರ್ಯಾಯ ಶ್ರೀಪಲಿಮಾರು ಮಠ, ಶ್ರೀಕೃಷ್ಣಮಠ, ಉಡುಪಿ.

## ಶ್ರೀಮದಾನಂದತೀರ್ಥಭಗವತ್ಪಾದರು



ಶ್ರೀಮದಾನಂದತೀರ್ಥೇಂದುಭಾಸನಂ ಮಮ ಮಾನಸೇ ।
ಆಶಾಸೇ ಸಾಧುಶಬ್ದಾರ್ಥಸರಿದೀಶಾಭಿವೃದ್ಧಯೇ ॥

# ಶ್ರೀ ಟೀಕಾರಾಯರು



ಯಸ್ಯ ವಾಕ್ಕಾಮಧೇನುರ್ನಃ ಕಾಮಿತಾರ್ಥಾನ್ಪ್ರಯಚ್ಛತಿ।
ಸೇವೇ ತಂ ಜಯಯೋಗೀಂದ್ರಂ ಕಾಮಬಾಣಚ್ಛಿದಂ ಸದಾ॥

# ಶ್ರೀವ್ಯಾಸರಾಯರು



ಅರ್ಥಿಕಲ್ಪಿತಕಲ್ಪೋಽಯಂ ಪ್ರತ್ಯರ್ಥಿಗಜಕೇಸರೀ ।
ವ್ಯಾಸತೀರ್ಥಗುರುರ್ಭೂಯಾದಸ್ಮದಿಷ್ಟಾರ್ಥಸಿದ್ಧಯೇ ॥

# ಶ್ರೀವಿಜಯೀಂದ್ರತೀರ್ಥರು



ಭಕ್ತಾನಾಂ ಮಾನಸಾಂಭೋಜಭಾನವೇ ಕಾಮಧೇನವೇ।
ನಮತಾಂ ಕಲ್ಪತರವೇ ಜಯೀಂದ್ರಗುರವೇ ನಮಃ॥

# ಶ್ರೀ ರಾಘವೇಂದ್ರ ತೀರ್ಥ ಗುರುಸಾರ್ವಭೌಮರು, ಮಂತ್ರಾಲಯ.



ಮೂಕೋಽಪಿ ಯತ್ಪ್ರಸಾದೇನ ಮುಕುಂದಶಯನಾಯತೇ ।
ರಾಜರಾಜಾಯತೇ ರಿಕ್ತೋ ರಾಘವೇಂದ್ರಂ ತಮಾಶ್ರಯೇ ॥

# ಶ್ರೀ ಸುಜಯೀಂದ್ರ ತೀರ್ಥರು



ಸುಯೀಮೀಂದ್ರಕರಾಬ್ಜೋತ್ಥಂ ಸುವಿದ್ಯಾಬೋಧಕಂ ಸದಾ।
ಸುಮೂಲರಾಮಪೂಜಾಢ್ಯಂ ಸುಜಯೀಂದ್ರಗುರುಂ ಭಜೇ ॥

# ಶ್ರೀಮತ್ಸುಯತೀಂದ್ರ ತೀರ್ಥರು



ಸುಶಮೀಂದ್ರಕರಾಬ್ಜೋತ್ಥಂ ರಾಘವೇಂದ್ರಗುರುಪ್ರಿಯಂ ।
ಸುಯತೀಂದ್ರಗುರುಂ ವಂದೇ ಮೂಲರಾಮಾರ್ಚನೇ ರತಮ್ ॥

# ಶ್ರೀಮತ್ಸುಬುಧೇಂದ್ರತೀರ್ಥರು



ಪ್ರಸ್ತುತ ಪೀಠಾಧಿಪತಿಗಳು

ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

# ಶ್ರೀಸುಜಯೀಂದ್ರತೀರ್ಥ
# ಶ್ರೀಪಾದಂಗಳವರ

## ಅಷ್ಟೋತ್ತರ ಜನ್ಮಶತಮಾನೋತ್ಸವ
## ಪೀಠಾರೋಹಣದ ಸ್ವರ್ಣಮಹೋತ್ಸವ
## ಬೃಂದಾವನ ಪ್ರವೇಶದ
## ರಜತ ಮಹೋತ್ಸವದ ಅಂಗವಾಗಿ

ಪ್ರಕಟಣೆ 2018 - 19

# ಉಪೋದ್ಘಾತ

ದ್ವೈತವೇದಾಂತವೆಂಬ ನರಸಿಂಹನ ಮೂರು ಕಣ್ಣುಗಳಂತಿರುವ ವ್ಯಾಸತ್ರಯವೆಂದು ಪ್ರಸಿದ್ಧವಾದ ನ್ಯಾಯಾಮೃತ-ಚಂದ್ರಿಕಾ-ತರ್ಕತಾಂಡವಗಳೆಂಬ ಮೂರು ಗ್ರಂಥಗಳನ್ನು ಬರೆದು ನವೀನವ್ಯಾಸರೆನಿಸಿದವರು ಶ್ರೀವ್ಯಾಸರಾಜರು. ಅವರು ತರ್ಕರಸಿಕರಿಗೆ ಆಪ್ಯಾಯಮಾನವಾಗುವಂತೆ ನವ್ಯನ್ಯಾಯದ ಪ್ರೌಢಶೈಲಿಯಲ್ಲಿ ಈ ಗ್ರಂಥಗಳನ್ನು ರಚಿಸುವಾಗ ಪರಮತದವರು ಅಲ್ಲಲ್ಲಿ ವಿಕ್ಷಿಪ್ತವಾಗಿ ಹೇಳಿರುವ ಸೂಕ್ಷ್ಮಾತಿಸೂಕ್ಷ್ಮ ವಿಚಾರಗಳನ್ನು ಒಂದನ್ನೂ ಬಿಡದೆ, ಅವರೇ ಮೆಚ್ಚುವಂತೆ, ನೋಡಿ ಆಚ್ಚರಿಪಡುವಂತೆ ಅನುವಾದಿಸಿ ಸಮರ್ಥವಾಗಿ ನಿರಾಸ ಮಾಡಿದ್ದಾರೆ. ವಾದ ಪ್ರತಿವಾದಿಗಳ ಪರಂಪರೆಯನ್ನೇ ಹುಟ್ಟುಹಾಕಿ ವಾದರಸಿಕರಿಗೆ ಭರ್ಜರಿ ರಸದೌತಣ ಉಣಿಸಿ ಪಂಡಿತಮಂಡಲಿ ತಲೆದೂಗಿ ತುಂಬುಹೃದಯದಿಂದ ಕೃತಜ್ಞತೆಗಳನ್ನು ಸಲ್ಲಿಸುವಂತೆ ಮಾಡಿದ ವಿಭೂತಿ ಪುರುಷರು ಶ್ರೀವ್ಯಾಸರಾಜರು.

ನ್ಯಾಯಾಮೃತ ಗ್ರಂಥಕ್ಕೆ ಟಿಪ್ಪಣಿಗಳನ್ನು ರಚಿಸಿದ ಮಹನೀಯರನ್ನು ನೆನೆಯುವುದಾದರೆ ಮೊದಲಿಗೆ ನೆನೆಯಬೇಕಾದುದು ಕೈಮುಗಿದು ನಮಿಸಬೇಕಾದುದು ಶ್ರೀವ್ಯಾಸರಾಜರ ಪ್ರಿಯಶಿಷ್ಯರಾದ ಶ್ರೀ ವಿಜಯೀಂದ್ರರನ್ನು. ಅವರು ನ್ಯಾಯಾಮೃತಕ್ಕೆ ಲಘ್ವಾಮೋದ-ಮಧ್ಯಮಾಮೋದ-ಗುರ್ವಾಮೋದಗಳನ್ನು ರಚಿಸಿದ್ದಾರೆ. ಚತುರಧಿಕ ಶತಗ್ರಂಥರತ್ನಗಳನ್ನು ರಚಿಸಿದ ವಿಭೂತಿಪುರುಷರು ಇವರು.

ಲಘ್ವಾಮೋದವು ಮಂತ್ರಾಲಯ ಶ್ರೀಮಠದಿಂದ ಮುದ್ರಿತವಾಗಿ ಪ್ರಕಾಶಿತವಾಗಿದೆ. ಗೌಡಗೆರೆ ವೆಂಕಟರಮಣಾಚಾರ್ಯರ ಅದ್ವೈತದೀಪಿಕಾ ವಾತಾಗಮದಲ್ಲಿ ಗುರ್ವಾಮೋದ ವಚನಗಳು ಉದಾಹೃತವಾಗಿರುವುದು ಕಂಡುಬರುತ್ತದೆ. ಮಂದರಿಗೂ ಪ್ರೌಢರಿಗೂ ಮುದನೀಡುವಂತೆ ನೂರಾರು ಗ್ರಂಥಗಳನ್ನು ರಚಿಸಿ ಅನುಗ್ರಹಿಸಿದ್ದರಿಂದ, ಇವರಿಗೆ,

ಭಕ್ತಾನಾಂ ಮಾನಸಾಂಭೋಜಭಾನವೇ ಕಾಮಧೇನವೇ ।
ನಮತಾಂ ಕಲ್ಪತರವೇ ಜಯೀಂದ್ರಗುರವೇ ನಮಃ ॥

ಎಂದು ಭಕ್ತರು ಪ್ರಾಂಜಲವಾಗಿ ನಮನ ಸಲ್ಲಿಸುತ್ತಿದ್ದಾರೆ.

ನ್ಯಾಯಾಮೃತಕ್ಕೆ ಮುಂದೆ ಮಧುಸೂದನ ಸರಸ್ವತಿಗಳ ಅದ್ವೈತಸಿದ್ಧಿ ಎಂಬ ಖಂಡನಾಭಾಸ ಗ್ರಂಥ ಬಂದಾಗ ಅದನ್ನು ಮೊದಲಿಗೆ ವ್ಯಸ್ತನಾಥ ರಾಮಾಚಾರ್ಯರು ತರಂಗಿಣೀ ಎಂಬ ಗ್ರಂಥದಿಂದ ನಿರಾಸಮಾಡಿದರು. ಪಾಂಡುರಂಗಿ ಆನಂದಭಟ್ಟಾರಕರೂ ಕಂಟಕೋದ್ಧಾರ ಗ್ರಂಥದಿಂದ ಅದ್ವೈತಸಿದ್ಧಿಯನ್ನು ಅಕ್ಷರಶಃ ಅನುವಾದ ಮಾಡಿ ಖಂಡಿಸಿದರು.

'ಅನುಕ್ತ ಕಥನಾತ್ ಕ್ವಾಪಿ ಸಫಲೋಽಯಂ ಶ್ರಮೋ ಮಮ'

ಎಂದು ನ್ಯಾಯಾಮೃತದಲ್ಲಿ ಹೇಳಿದ್ದಕ್ಕೆ ಇವರು ಆಮೋದದಲ್ಲಿ ಸಮರ್ಥನೆ ನೀಡುತ್ತ 'ಸರ್ವಜ್ಞರೂ ಕೂಡ ತಾವು ತಿಳಿದಿರುವುದನ್ನೆಲ್ಲ ಹೇಳುವುದಿಲ್ಲ. ಆದರಿಂದ ಅನುಕ್ತಾಂಶಗಳನ್ನು ಕೂಡ ನಾನು ಇಲ್ಲಿ ಹೇಳುವುದರಿಂದ ನನ್ನ ಗ್ರಂಥ ಸಾರ್ಥಕವಾಗುತ್ತದೆ ಎನ್ನುತ್ತಾರೆ ಶ್ರೀವ್ಯಾಸರಾಜರು' ಎಂದಿದ್ದಾರೆ. ಇದು ಸಮಂಜಸವಾಗಿದೆ. ಏಕೆಂದರೆ ವ್ಯಾಸರಾಜರು ತಾವೂ ಕೂಡ ತಾವು ತಿಳಿದುದನ್ನೆಲ್ಲ ಹೇಳಿಲ್ಲ. ಚಂದ್ರಿಕಾಗ್ರಂಥದಲ್ಲಿ 'ಪ್ರತಿಸೂತ್ರಂ ಪ್ರಕಾಶ್ಯೇತೇ ಘಟನಾಘಟನೇ ಮಯಾ' ನನ್ನ ಗ್ರಂಥದಲ್ಲಿ ವ್ಯಾಖ್ಯಾನಕ್ಕೆ ನಾನು ಎತ್ತಿಕೊಳ್ಳುವ ಎರಡು ಅಧ್ಯಾಯಗಳಲ್ಲಿ ಪ್ರತಿಸೂತ್ರಕ್ಕೆ ವ್ಯಾಖ್ಯಾನಮಾಡಿ ಅದು ಹೇಗೆ ಕೇವಲ ದ್ವೈತಪರವೆಂಬುದನ್ನು ತೋರಿಸುತ್ತೇನೆ ಎಂದು ಪ್ರತಿಜ್ಞೆಮಾಡಿ ಎರಡು ಅಧ್ಯಾಯಗಳ ಕೊನೆಯಲ್ಲಿ ಗ್ರಂಥವನ್ನು **ಅರ್ಧಕ್ಕೆ ಸಮಾಪ್ತಿ ಮಾಡಿದ್ದಾರೆ.** ಏಕೆಂದರೆ ಇದು ದಿಕ್‌ಪ್ರದರ್ಶನ. ಇದರಂತೆ ಮುಂದೆ ಪ್ರತಿಸೂತ್ರಕ್ಕೆ ದ್ವೈತಪರತ್ವವನ್ನು ನಮ್ಮ ಶಿಷ್ಯಪರಂಪರೆಯವರು ತೋರಿಸಲಿ ಎಂದು. ಶ್ರೀಲಕ್ಷ್ಮೀನಾಥತೀರ್ಥರು ತಮ್ಮ ನ್ಯಾಯಾಮೃತ ಸುಬೋಧಿನೀ ವ್ಯಾಖ್ಯಾನದಲ್ಲಿ ಇದನ್ನೇ ಹೇಳಿದ್ದಾರೆ—

'ಏವಂ ದಿಕ್‌ಪ್ರದರ್ಶನೇನ ಮಚ್ಛಿಷ್ಯೈರೂಹಿತುಂ ಶಕ್ಯಮಿತಿ
ಮಧ್ಯೇ ಸಮಾಪ್ತಿಃ ಕೃತಾ' ಎಂದು.

'**ಕಾರಣಾಂತರದಿಂದ ಮಧ್ಯದಲ್ಲಿ ಸಮಾಪ್ತಿಯಾಯಿತು**' ಎನ್ನಲಿಲ್ಲ. ಆದರಿಂದ 'ಮಂಗಳ ಅಸಮರ್ಪಕವಾಗಿದ್ದರಿಂದ ಗ್ರಂಥ ಮಧ್ಯದಲ್ಲಿ ಸಮಾಪ್ತಿಯಾಗಿರಬಹುದೆಂ'ದು ತಿಳಿಯಬೇಕಾಗಿಲ್ಲ. ಹೀಗೆ ಶ್ರೀವ್ಯಾಸರಾಜರಂತೆಯೆ ಹಿಂದಿನವರು ಕೂಡ ಅವಶ್ಯವಕ್ತವ್ಯವಾದ ವಿಷಯವನ್ನು ಹೇಳದೆ ಬಿಟ್ಟಿರುವುದು ಅಸಂಭವವೇನಲ್ಲ. ಆದರಿಂದ, ಅವರಿಂದ ಅನುಕ್ತವಾದ ಅಂಶಗಳನ್ನು ನಾನು ಹೇಳುವನೆಂದು ಶ್ರೀವ್ಯಾಸರಾಜರು ಹೇಳುತ್ತಿದ್ದಾರೆ.

ಯದ್ಯಪಿ ಕಂಟಕೋದ್ಧಾರದಲ್ಲಿ 'ತನ್ನ ಮನೋರಮಂ' ಎಂದು ಹೇಳುತ್ತಾರೆ. 'ಹಿಂದಿನವರು ಅವಶ್ಯಹೇಳಬೇಕಾಗಿದ್ದನ್ನು ಹೇಳದೆ ಬಿಟ್ಟರೆ ಅದು ಆಲಸ್ಯ ಉಪೇಕ್ಷಾದಿಗಳಿಂದ ಎಂದುತಿಳಿಯುವ ಪ್ರಸಂಗವಿದೆ. ಆದರಿಂದ 'ಅನುಕ್ತ ಕಥನಾತ್' ಎಂಬಲ್ಲಿ 'ಅನುಕ್ತಂ' ಎಂದರೆ ಅನುಕ್ತಮಿವ ಪ್ರತೀಯಮಾನಂ' ಎಂದರ್ಥ ಎನ್ನುತ್ತಾರೆ. ಆದರೆ 'ಅನುಕ್ತಮಿವ ಪ್ರತೀಯಮಾನ'ವೆಂದರೂ, 'ಹಾಗೆ ಪ್ರತೀಯಮಾನವಾಗುವಂತೆ ಹಿಂದಿನವರು ಏಕೆ ಹೇಳಿದ್ದಾರೆ?' ಎಂಬ ಪ್ರಶ್ನೆ ಬರುತ್ತದೆ. ಆಲಸ್ಯಾದಿಗಳೆ? ಅಲ್ಲ. ಅದು ಮಹಾತ್ಮರ ವಿಷಯದಲ್ಲಿ ಅಸಂಭಾವಿತ. 'ಶಿಷ್ಯ ಪರಂಪರೆಯವರು ಹೇಳಲಿ, ಅದಕ್ಕೆ ನನ್ನ ಈ ಗ್ರಂಥ ದಿಕ್‌ಪ್ರದರ್ಶನವಾಗುತ್ತದೆ' ಎಂದೇ ಗುರುಗಳ ಅಭಿಪ್ರಾಯವೆಂದು ತಿಳಿಯುತ್ತಾರೆ. 'ದಶಮೋ ಮತ್ಸಮೋ ಭವೇತ್' ಎಂದು ಶ್ರೀವ್ಯಾಸರಾಜರು ಇದನ್ನು ಹೇಳಿದ್ದೂ

ಉಂಟು. ಹೀಗಾಗಿ 'ಅನುಕ್ತಂ' ಎಂಬುದಕ್ಕೆ 'ಅನುಕ್ತಮಿವ' ಎಂದು ಅಮುಖ್ಯಾರ್ಥ ಮಾಡಿದರೂ, ಆಲಸ್ಯಾದಿ ಶಂಕೆ ಬಂದಾಗ, 'ಅಲ್ಲ, ಇದು ದಿಕ್‌ಪ್ರದರ್ಶನ'ವೆಂದು ಸಮಾಧಾನ ನೀಡುವುದು ಆವಶ್ಯಕ. ಅದರಿಂದ ಅಮುಖ್ಯಾರ್ಥ ಮಾಡುವುದು ಬೇಡ. ಹಿಂದಿನವರಿಂದ ಅನುಕ್ತವೇ ಆಗಿದೆ ಎನ್ನುವುದೇ ಸೂಕ್ತ. ಇದನ್ನು ತಿಳಿದೇ ಕಂಟಕೋದ್ಧಾರಕಾರರು ಪ್ರೌಢಿಯಿಂದ 'ಅನುಕ್ತ' ಶಬ್ದಕ್ಕೆ ಅಮುಖ್ಯಾರ್ಥ ಮಾಡಿದ್ದಾರೆ. ಅದರಿಂದಲೇ ಕಟುವಾಗಿ 'ತನ್ನ ಯುಕ್ತಂ' ಎನ್ನದೆ 'ತನ್ನ ಮನೋರಮಂ' ಎಂದು ನಯವಾಗಿ ಹೇಳಿದ್ದಾರೆ.

ಶ್ರೀನಿವಾಸತೀರ್ಥರು ಅದ್ವೈತಸಿದ್ಧಿ ನಿರಾಸಕ್ಕೆ ಕೈಹಾಕದೆ ಮೂಲಗ್ರಂಥವನ್ನೇ ತಿಳಿಯಾಗಿ ಮಂದರಿಗೂ ತಿಳಿಯುವಂತೆ ವಿಶದವಾಗಿ ಸುಂದರವಾಗಿ ವ್ಯಾಖ್ಯಾನಮಾಡಿ ಮಹೋಪಕಾರ ಮಾಡಿದ್ದಾರೆ.

ಶ್ರೀವ್ಯಾಸರಾಜರು ಆನಂದಬೋಧರ ಅದ್ವೈತಮಕರಂದ, ಚಿತ್ಸುಖರ ತತ್ತ್ವಪ್ರದೀಪ, ನೃಸಿಂಹಾಶ್ರಮರ ಪೃತ್ಯಕ್‌ತತ್ತ್ವ ವಿವೇಕ, ವಾಚಸ್ಪತಿಮಿಶ್ರರ ಭಾಮತಿ, ಪದ್ಮಪಾದರ ಪಂಚಪಾದಿಕಾ, ಪ್ರಕಾಶಾತ್ಮರ ಪಂಚಪಾದಿಕಾವಿವರಣ, ಅಖಂಡಾನಂದರ ತತ್ತ್ವದೀಪನ, ಅಮಲಾನಂದರ ವೇದಾಂತ ಕಲ್ಪತರು ಮುಂತಾದ ಪ್ರೌಢವಾದ ಅದ್ವೈತಗ್ರಂಥ ವಚನಗಳನ್ನು ಉದಾಹರಿಸಿ ನಿರಾಸಮಾಡಿದ್ದಾರೆ. ವ್ಯಾಕರಣಸೂತ್ರ ಮಹಾಭಾಷ್ಯ ಕಾಶಿಕಾವೃತ್ತಿ ಮೀಮಾಂಸಾಸೂತ್ರ ವಾರ್ತಿಕ ಮುಂತಾದವುಗಳನ್ನು ಪುಂಖಾನುಪುಂಖವಾಗಿ ಉದಾಹರಿಸಿದ್ದಾರೆ.

ವ್ಯಾಕರಣಾದಿಶಾಸ್ತ್ರಗಳಲ್ಲಿ ಪ್ರವೇಶವಿಲ್ಲದ, ಕೇವಲ ಸಂಸ್ಕೃತ ಭಾಷಾ ಜ್ಞಾನವುಳ್ಳ ಜಿಜ್ಞಾಸುಗಳಿಗೆ ಶ್ರೀನಿವಾಸತೀರ್ಥರು ಸರಳವಾದ ವ್ಯಾಖ್ಯಾನದಿಂದ ಕ್ಲೇಶ ಪರಿಹಾರಮಾಡುತ್ತಾರೆ.

ಮುಂದೆ ಅದ್ವೈತಸಿದ್ಧಿಗೆ ಗೌಡಬ್ರಹ್ಮಾನಂದಸರಸ್ವತಿಗಳ ಲಘು ಗುರುಚಂದ್ರಿಕಾಗಳು ಬಂದಾಗ, ಅವುಗಳಿಗೂ ಕಾಶಿ ವಿಠ್ಠಲೇಶೋಪಾಧ್ಯಾಯರ ವಿಠ್ಠಲೇಶೀಯ ಟಿಪ್ಪಣಿ ಬಂದಾಗ ಅವುಗಳ ನಿರಾಸಕ್ಕೆ ಪಾಂಡುರಂಗಿ ಕೇಶವಾಚಾರ್ಯರ ಗುರುರಾಜೀಯ, ಲಕ್ಷ್ಮೀನಾಥತೀರ್ಥರ ಸುಬೋಧಿನೀ, ವನಮಾಲಿಮಿಶ್ರರ ನ್ಯಾಯಾಮೃತ ಸೌಗಂಧ್ಯ ಮತ್ತು ತರಂಗಿಣೀ ಸೌರಭಗಳು, ಮನ್ನಾರು ಕೃಷ್ಣಾಚಾರ್ಯರ ಮಾಧುರೀ, ಕೂರ್ಮ ನರಹರಿ ಆಚಾರ್ಯರ ನ್ಯಾಯಕಲ್ಪಲತಾ, ಐಜಿ ಆಚಾರ್ಯರ ಮಕ್ಷಿಕಾವ್ಯಜನಗಳು ಬರಬೇಕಾಯಿತು.

'ಮಕ್ಷಿಕಾವ್ಯಜನ'ವೆಂದರೆ ಬೀಸಣಿಗೆ ಬೀಸಿ ನೊಣಗಳನ್ನು ಓಡಿಸುವುದೆಂದರ್ಥ. ಏಕೆ ಈ ಹೆಸರು!

ದುರ್ವಾದಿ ಮಲಿನ ಸ್ವಾಂತ ಪ್ರೋತ್ಥ ದುರ್ಯುಕ್ತಿ ಮಕ್ಷಿಕಾಃ ।
ಅಪಾಸ್ಯ ವ್ಯಜನಾದ್ ಧೀರಾ ನಿಃಶಂಕಂ ಪಿಬತಾಮೃತಂ ॥

ದುರ್ವಾದಿವಾಗ್ ಘರ್ಮತಾಪಂ ಧೀರಾ ನ್ಯಾಯಾಮೃತಾಪ್ಲುತಂ ।
ವ್ಯಜನಂ ಸಮುಪಾದಾಯ ಶಮಯಂತು ನಿರಂತರಂ ॥

ಶ್ರೀವ್ಯಾಸರಾಜ ಹೃದಯ ಸಿಂಹಾಸನ ಮಧಿಷ್ಠಿತಃ ।
ಸರ್ವೋತ್ಕೃಷ್ಟೋSಜಿತಃ ಶ್ರೀಶೋ ವೀಜಿತೋ ವ್ಯಜನಾದ್ ಭವೇತ್ ॥

'ದುರ್ವಾದಿಗಳ ಮಲಿನ ಅಂತಃಕರಣದಿಂದ ಎದ್ದು ಬಂದ ದುರ್ಯುಕ್ತಿಗಳೆಂಬ ನೊಣಗಳು ನ್ಯಾಯಾಮೃತವೆಂಬ ಅಮೃತಾನ್ನದ ಮೇಲೆ ಕುಳಿತಿವೆ. ಅವುಗಳನ್ನು ಈ ವ್ಯಾಖ್ಯಾನವೆಂಬ ಬೀಸಣಿಗೆಯಿಂದ ಬೀಸಿ ಓಡಿಸಿ ಭೋಜನ ಮಾಡಿರಿ. ಇಲ್ಲದಿದ್ದರೆ ಪ್ರಥಮಕವಳೇ ಮಕ್ಷಿಕಾಪಾತ!

'ದುರ್ವಾದಿಗಳ ದುರ್ವಾಕ್ಯ ಬೇಗೆಯಿಂದ ಬೇಯುತ್ತಿರಬೇಡಿರಿ. ನ್ಯಾಯಾಮೃತರಸದಿಂದ ತೊಯ್ದ ಈ ಬೀಸಣಿಗೆಯಿಂದ ಬೀಸಿಕೊಳ್ಳಿರಿ.

'ಶ್ರೀವ್ಯಾಸರಾಜರ ಹೃದಯಸಿಂಹಾಸನದಲ್ಲಿ ಕುಳಿತ ಶ್ರೀರಮಣನಿಗೆ ಬೀಸಣಿಗೆಯ ಸೇವೆ ಮಾಡಿರಿ.'

ಶ್ರೀ ಆಚಾರ್ಯರು ಹೀಗೆ ಕೇವಲ ತಮ್ಮ ವ್ಯಾಖ್ಯಾನವನ್ನೇ ಪ್ರಶಂಸಿಸುತ್ತಿಲ್ಲ. ಹಿಂದಿನವರ ಎಲ್ಲ ವ್ಯಾಖ್ಯಾನಗಳೂ ಹೀಗೇ. ಅವರು ತಮ್ಮ ವ್ಯಾಖ್ಯಾನಗಳನ್ನು ರಚಿಸುವಾಗ ಕಂಠತಃ 'ಮಕ್ಷಿಕಾವ್ಯಜನ' ಎನ್ನದಿದ್ದರೂ ಭಾವ ಅದೇ ಇರುತ್ತಿತ್ತು.

ಮುಂದೆ ಆನೆಪ್ಪಾಚಾರ್ಯರ ಪಂಚಗ್ರಂಥಿ ಎಂಬ ವ್ಯಾಖ್ಯಾನ. ಇದು ನ್ಯಾಯಾಮೃತ-ಅದ್ವೈತಸಿದ್ಧಿ-ತರಂಗಿಣಿ-ಲಘುಗುರುಚಂದ್ರಿಕಾ ಮತ್ತು ಸೌಗಂಧ್ಯ-ಸೌರಭಗಳೆಂದು ಐದೂ ಗ್ರಂಥಗಳಿಗೆ ವಿವರಣೆ ನೀಡಿದೆ.

ಹುಲಗಿ ಶ್ರೀಪತ್ಯಾಚಾರ್ಯರ ದ್ವೈತದ್ಯುಮಣಿ ಒಂದು ತತ್ತ್ವೋದ್ಯೋತಟಿಪ್ಪಣಿಯೇ ಆದರೂ ಅದು ಗೌಡಬ್ರಹ್ಮಾನಂದ ಸರಸ್ವತಿಗಳ ಗುರುಲಘು ಅದ್ವೈತ ಚಂದ್ರಿಕೆಗಳನ್ನೂ ವಿಟ್ಠಲೇಶೀಯ ಮುಂತಾದ ಗ್ರಂಥಗಳನ್ನೂ ಪ್ರೌಢ ನವ್ಯ ನ್ಯಾಯಶೈಲಿಯಲ್ಲಿ ವಿಸ್ತಾರವಾಗಿ ಅನುವಾದಿಸಿ ನಿರಾಸಮಾಡುವ ಗ್ರಂಥ. ಅವರೇ ಹೇಳುತ್ತಾರೆ—

ಅದ್ವೈತ ಚಂದ್ರಿಕಾ ಛದ್ಮ ತಮೋಹೃತ್ ಪಾಟನೇ ಪಟುಃ ।
ಸನ್ಮನಃ ಪಂಕಜೋಲ್ಲಾಸೀ ಜೇಗೀಯಾದ್ ದ್ವೈತಭಾಸ್ಕರಃ ॥

ಶ್ರೀವಿಶ್ವಪ್ರಿಯ ಮಧ್ವನಾಥತೀರ್ಥರ ನ್ಯಾಯಾಮೃತಕಲಾಧರ, ಜಾಲಿಹಾಳ ಶ್ರೀನಿವಾಸಾಚಾರ್ಯರ ನ್ಯಾಯಾಮೃತಾರ್ಣವ, ಪಡಮನ್ನೂರ ನಾರಾಯಣಾಚಾರ್ಯರ ನ್ಯಾಯಾಮೃತ ಕುಲ್ಯಾ ಟಿಪ್ಪಣಿಗಳೂ ಜಿಜ್ಞಾಸುಗಳಿಗೆ ಅತ್ಯುಪಯುಕ್ತವಾಗಿವೆ.

ತಮ್ಮ ಅದ್ಭುತ ಚಾರಿತ್ರಿಕ ಶ್ರೀಕೃಷ್ಣ ಪಂಚಮ ಪರ್ಯಾಯವನ್ನು ಬಹಳ ವಿಜೃಂಭಣೆಯಿಂದ ಯಶಸ್ವಿಯಾಗಿ ಮಾಡಿ ಪೂರೈಸಿರುವ ವಿಶ್ವವಂದ್ಯರಾದ ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥಶ್ರೀಪಾದರು ತಮ್ಮ ಬಿಡುವಿಲ್ಲದ ನೂರಾರು ಕಾರ್ಯಕ್ರಮಗಳ ನಡುವೆಯೂ ನ್ಯಾಯಾಮೃತನವನೀತವೆಂಬ ಪ್ರೌಢಟಿಪ್ಪಣಿಯಲ್ಲಿ ನ್ಯಾಯಾಮೃತದ ಅಮೃತಾನ್ನವನ್ನು ನವನೀತದಂತೆ, ಬೆಣ್ಣೆ ಮುದ್ದೆಯಂತೆ ತುತ್ತು ತುತ್ತಾಗಿ ಮಾಡಿ ಶಿಷ್ಯರಿಗೆ ಪ್ರೀತಿಯಿಂದ ಉಣಿಸುತ್ತಿದ್ದಾರೆ. ಪೂಜ್ಯರು ನಮ್ಮನ್ನು ಶ್ರೀಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಪಂಜರದ ಗಿಣಿಯಂತೆ ಮುದ್ದಿನಿಂದ ಸಾಕಿ ಸಲಹಿ ಪರವಿದ್ಯೆಯನ್ನು ನೀಡಿ ಪೂರ್ಣಾನುಗ್ರಹ ಮಾಡಿದ್ದಾರೆ.

ಪರಮಪೂಜ್ಯ ಗುರುಪಾದರು ಪರಮಾನುಗ್ರಹ ಮಾಡಿ ನನ್ನ ನ್ಯಾಯಾಮೃತಾಮೋದ ಶ್ರುತ್ಯರ್ಥವಿಚಾರ–ಪರತತ್ತ್ವವಿಚಾರ–ವಿಪ್ರತಿಪತ್ತಿವಿಚಾರ ಎಂಬ ಈ ಮೂರೂ ಸಂಪುಟಗಳಿಗೆ ಹಾರ್ದಿಕವಾದ ಶುಭಾಶೀರ್ವಚನಗಳಿಂದ ಹರಸಿದ್ದಾರೆ. ಪರಮಪೂಜ್ಯರಾದ ಪ್ರಸಕ್ತ ಪರ್ಯಾಯ ಪೀಠದಲ್ಲಿ ವಿರಾಜಮಾನರಾಗಿರುವ ಶ್ರೀಶ್ರೀವಿದ್ಯಾಧೀಶಶ್ರೀಪಾದರು ಕೂಡ ಪ್ರೀತಿಯಿಂದ ತುಂಬು ಹೃದಯದಿಂದ ನನ್ನನ್ನು ಹರಸಿದ್ದಾರೆ.

ಶ್ರೀವ್ಯಾಸರಾಜರ ಅಪರಾವತಾರ ಶ್ರೀಮಂತ್ರಾಲಯಪ್ರಭು ಶ್ರೀರಾಘವೇಂದ್ರಸ್ವಾಮಿ ಗಳವರ ಮಠದ ವಿದ್ಯಾಸಿಂಹಾಸನಾಧೀಶ್ವರರಾದ, ಸಂಪ್ರದಾಯಪಾಠ ಹಾಗೂ ಸೂಕ್ಷ್ಮಾಂಶಗಳ ಜೊತೆಗೆ ವ್ಯಾಸತ್ರಯವನ್ನು ಹಲವಾರು ವಿದ್ಯಾರ್ಥಿಗಳಿಗೆ ಬೋಧಿಸುತ್ತಾ ಸಪ್ತಮ ಚಾತುರ್ಮಾಸ್ಯ ವನ್ನು ಸಾರ್ಥಕವನ್ನಾಗಿಸಿರುವ ಪರಮಪೂಜ್ಯ ಶ್ರೀ ಶ್ರೀ ಸುಬುಧೇಂದ್ರತೀರ್ಥರ ಫಲಮಂತ್ರಾಕ್ಷತಾ ಸಹಿತ ಪರಮಾನುಗ್ರಹದಿಂದ ಕನ್ನಡದ ಅಧ್ಯಾತ್ಮ ಬಂಧುಗಳಿಗಾಗಿ ನ್ಯಾಯಾಮೃತಾಮೋದ ಕನ್ನಡಾನುವಾದದ ಈ ಮೂರೂ ಕೃತಿಗಳನ್ನು ಸಮರ್ಪಿಸುತ್ತಿದ್ದೇನೆ.

ಸಜ್ಜನ ವಿಧೇಯ<br>

**ಕೆ.ಹಯವದನ ಪುರಾಣಿಕ**

# ನ್ಯಾಯಾಮೃತಾಮೋದ

## ವಿಪ್ರತಿಪತ್ತಿವಿಚಾರ

### ವಿಷಯಾನುಕ್ರಮಣಿಕೆ

॥ ಶ್ರೀಗುರುಭ್ಯೋನಮಃ ಹರಿಃ ಓಂ ॥

# 01. ಆಮೋದ ಮಂಗಳಾಚರಣ

ॐ स्तम्भाजम्भारिशैलादिव दिवसकरः प्रोज्जिहानस्त्रिलोकी-

ग्रासव्यासक्तनक्तञ्चरवरतिमिरारिष्टमुष्टिन्धयश्रीः ।

शक्राद्यादित्यचक्रप्रभयहरकरः क्लृप्तपद्मानुषङ्गः

सिंहः प्रह्लादमोदी स हरतु दुरितं रंहसा प्रह्वसाध्यः ॥ १ ॥

ಓಂ ಸ್ತಂಭಾಜ್ಜಂಭಾರಿ ಶೈಲಾದಿವ ದಿವಸಕರಃ ಪ್ರೋಜ್ಜಿಹಾನಸ್ತ್ರಿಲೋಕೀ

ಗ್ರಾಸವ್ಯಾಸಕ್ತ ನಕ್ತಂಚರವರ ತಿಮಿರಾರಿಷ್ಟ ಮುಷ್ಟಿಂಧಯಶ್ರೀಃ ।

ಶಕ್ರಾದ್ಯಾದಿತ್ಯಚಕ್ರ ಪ್ರಭಯ ಹರ ಕರಃ ಕ್ಲೃಪ್ತ ಪದ್ಮಾನುಷಂಗಃ

ಸಿಂಹಃ ಪ್ರಹ್ಲಾದ ಮೋದೀ ಸ ಹರತು ದುರಿತಂ ರಂಹಸಾ ಪ್ರಹ್ವಸಾಧ್ಯಃ ॥

**ಸಿಂಹಃ ಜಂಭಾರಿ ಶೈಲಾದ್ ಪ್ರೋಜ್ಜಿಹಾನಃ, ದಿವಸಕರ ಇವ ಸ್ತಂಭಾತ್ ಪ್ರೋಜ್ಜಿಹಾನ :**

'ಜಂಭಾರಿ' ಜಂಭಾಸುರನಿಗೆ ವೈರಿಯಾದ ದೇವೇಂದ್ರ. ಅವನ 'ಶೈಲ' ಪೂರ್ವದಿಕ್ಕಿನಲ್ಲಿರುವ ಉದಯ ಪರ್ವತ. ಅಲ್ಲಿಂದ 'ಪ್ರೋಜ್ಜಿಹಾನಃ' ಉದಿಸುವ 'ದಿವಸಕರ' ಸೂರ್ಯ, ಸೂರ್ಯನಾರಾಯಣ.

ನರಸಿಂಹನೂ ಕೂಡ 'ಸ್ತಂಭಾತ್' ಹಿರಣ್ಯಕಶಿಪುವಿನ ಆಸ್ಥಾನಸ್ತಂಭದಿಂದ 'ಪ್ರೋಜ್ಜಿಹಾನಃ' ಉದಿಸಿದವನು.

**ತ್ರಿಲೋಕೀಗ್ರಾಸ ವ್ಯಾಸಕ್ತ ನಕ್ತಂಚರವರ ತಿಮಿರ–ಅರಿಷ್ಟ ಮುಷ್ಟಿಂಧಯ ಶ್ರೀ :**

'ತ್ರಿಲೋಕೀ ಗ್ರಾಸ' ಮೂಲೋಕವನ್ನು ಗ್ರಾಸಮಾಡುವಲ್ಲಿ ನುಂಗುವಲ್ಲಿ 'ವ್ಯಾಸಕ್ತ' ವಿಶೇಷವಾಗಿ ಆಸಕ್ತವಾಗುವ 'ನಕ್ತಂಚರ ವರ' ಮಹಾರಾಕ್ಷಸರೆಂಬ 'ತಿಮಿರ' ಕತ್ತಲು. ಅದೇ ಅರಿಷ್ಟ, ಕತ್ತಲೆಂಬ ಅರಿಷ್ಟವನ್ನು 'ಮುಷ್ಟಿಂಧಯ' ಬೊಗಸೆಯಲ್ಲಿ ಏಕಾಪೋಶನಗೈವ 'ಶ್ರೀಃ' ಪ್ರಕಾರ ಉಳ್ಳವನು 'ದಿವಸಕರಃ' ಸೂರ್ಯ, ಸೂರ್ಯನಾರಾಯಣ ಮತ್ತು ಮೃತ್ಯುವಿಗೆ ಮೃತ್ಯುವಾಗಿರುವ 'ಸಿಂಹ' ನರಸಿಂಹ.

**ಶಕ್ರಾದ್ಯಾದಿತ್ಯಚಕ್ರ ಪ್ರಭಯ ಹರ ಕರಃ, ದಿವಸಕರ ಇವ ಸಿಂಹಃ:**

'ಶಕ್ರಾದಿ ಆದಿತ್ಯ' ಇಂದ್ರಾದಿ ದೇವತೆಗಳ 'ಚಕ್ರ' ಸಮೂಹಕ್ಕೆ ಕೂಡ ಕತ್ತಲಿನ 'ಪ್ರಭಯ ಹರ' ದೊಡ್ಡ ಭಯವನ್ನು ಕಳೆವ 'ಕರ' ಕಿರಣಉಳ್ಳವನು 'ದಿವಸಕರ' ಸೂರ್ಯನಾರಾಯಣ.

ದೇವತೆಗಳ ಸ್ವರ್ಗಲೋಕ ಸ್ವಯಂಪ್ರಕಾಶವಾದ್ದರಿಂದ ಅಧಿಲೋಕದಲ್ಲಿ ಅವರಿಗೆ ಕತ್ತಲಿನ ಭಯವಿಲ್ಲದಿದ್ದರೂ ಭೂಲೋಕದಲ್ಲಿ ಅವರು ಮನುಷ್ಯರಾಗಿ ಅರ್ಜುನಾದಿ ಅವತಾರ ಮಾಡಿದಾಗ ಮತ್ತು ಮನುಷ್ಯರೊಳಗೆ ತತ್ವಾಭಿಮಾನಿಗಳಾಗಿ ಪ್ರವಿಷ್ಟರಾಗಿರುವಾಗ ಮನುಷ್ಯರಂತೆಯೇ ದೇವತೆಗಳಿಗೂ ಕತ್ತಲಿನ ಭಯವಿದೆ. ಭಯದಿಂದ ರಾತ್ರಿ ಮಲಗಿರುತ್ತಾರೆ. ಪ್ರಾತಃಕಾಲದಲ್ಲಿ ಉದಿಸುವ ಸೂರ್ಯನು ಅವರ ಭಯ ಕಳೆವ 'ಕರ' ಕಿರಣಗಳನ್ನು ಪಸರಿಸುತ್ತಾನೆ.

ನರಸಿಂಹನು ಹಾಗೇ ಹಿರಣ್ಯಕಶಿಪುವಿನ ಪೀಡೆಯಿಂದ ಭಯಭೀತರಾದ ಶಕ್ರಾದಿ ದೇವ ಮಾನವರೆಲ್ಲರಿಗೂ ಭಯಪರಿಹರಿಸುವ 'ಕರ' ಕೈಯುಗುರುಗಳನ್ನು ದಾನವನ ಹೊಟ್ಟೆಯೊಳಗೆ ತೂರಿಸಿ ಭಯಪರಿಹಾರ ಮಾಡುತ್ತಾನೆ.

**ದಿವಸಕರ ಇವ ಕ್ಲೃಪ್ತಪದ್ಮಾನುಷಂಗಃ ಸಿಂಹಃ**

ಸೂರ್ಯನು ಪದ್ಮಗಳ ಮೇಲೆ 'ಕ್ಲೃಪ್ತ' ನಿಯಮೇನ ಹರಿಸುವ 'ಅನುಷಂಗ' ದಯೆ ಮಾಡುತ್ತಾನೆ. ನಿಯಮೇನ ದಯೆಯಿಂದ ಪದ್ಮಗಳನ್ನು ಅರಳಿಸುತ್ತಾನೆ. ಸೂರ್ಯನಾರಾಯಣನೂ ಕೂಡ 'ಕ್ಲೃಪ್ತ ಪದ್ಮಾನುಷಂಗ'ನೆ. ಏಕೆಂದರೆ,

ಧ್ಯೇಯಃ ಸದಾ ಸವಿತೃಮಂಡಲ ಮಧ್ಯವರ್ತೀ
ನಾರಾಯಣಃ ಸರಸಿಜಾಸನ ಸನ್ನಿವಿಷ್ಟಃ ॥

'ಸರಸಿಜಾಸನ ಸನ್ನಿವಿಷ್ಟ'ನಾಗಿದ್ದಾನೆ. ಯದ್ಯಪಿ 'ಧೃತಶಂಖಚಕ್ರ'ನಾಗಿದ್ದಾನೆ. ಗದಾಪದ್ಮ ಗಳನ್ನು ಧರಿಸಿಲ್ಲ. ಆದರೂ 'ಕ್ಲೃಪ್ತ ಪದ್ಮಾನುಷಂಗ'ನೆ. 'ಪದ್ಮ' ಚತುರ್ಮುಖ ಎಂದರೆ ಬ್ರಹ್ಮ, ಬ್ರಹ್ಮಾತ್ಮಕಪದ್ಮ. ಸರಸ್ವತ್ಯಾತ್ಮಕ ದ್ಯುನಾಮಕ ತೇಜೋಮಯವಾದ ಸೂರ್ಯಮಂಡಲದಲ್ಲಿ ಬ್ರಹ್ಮಾತ್ಮಕ ಪದ್ಮದಲ್ಲಿ ನಿಯಮೇನ ಕುಳಿತಿರುವವನು, ಸರಸಿಜಾಸನ ಸನ್ನಿವಿಷ್ಟನು, ಸವಿತೃನಾಮಕ ನಾದ ನಾರಾಯಣ. ಶ್ರೀ ಐ.ಜಿ.ವೆಂಕಟರಾಮಾಚಾರ್ಯರು, ವ್ಯಾಸತತ್ವಜ್ಞರು ಹೇಳುತ್ತಾರೆ—

ದ್ಯುನಾಮಿಕಾಯಾ ಭಾರತ್ಯಾ ರೂಪಂ ಜ್ಯೋತಿರ್ಮಯಂ ಹಿ ತತ್ ।
ಬ್ರಹ್ಮಣಸ್ತದಧಿಷ್ಠಾನಂ ಪದ್ಮರೂಪಧರಸ್ಯ ಚ ।
ತತ್‌ಸರೋಜಾಸನಾವಿಷ್ಟಃ ಪುಂಡರೀಕಾಯತೇಕ್ಷಣಃ ॥

ಅರಳಿದ ಕಮಲದಲ್ಲಿ ಸೂರ್ಯನಾರಾಯಣ ಕುಳಿತಿರುವುದರಿಂದ ಸೂರ್ಯನ ಕಿರಣಗಳೂ ಕಮಲಗಳನ್ನು ಅರಳಿಸುತ್ತಿವೆ.

ನರಸಿಂಹನೂ ಕೂಡ ತೊಡೆಯಲ್ಲಿ ಪದ್ಮೆಯನ್ನು ಲಕ್ಷ್ಮಿಯನ್ನು ಇರಿಸಿಕೊಂಡು ಅವಳಲ್ಲಿ 'ಅನುಷಂಗ'ವನ್ನು ದಯೆಯನ್ನು ಹರಿಸುವುದರಿಂದ ಕ್ಲೃಪ್ತ ಪದ್ಮಾನುಷಂಗನೇ ಆಗಿದ್ದಾನೆ. ಲಕ್ಷ್ಮೀನೃಸಿಂಹನೆನಿಸಿದ್ದಾನೆ. 'ಪದ್ಮಾ' ಎಂದರೆ ಲಕ್ಷ್ಮಿ.

**ದಿವಸಕರ ಇವ ಪ್ರಹ್ಲಾದಮೋದೀ ಸಿಂಹಃ**

ನರಸಿಂಹ 'ಪ್ರಹ್ಲಾದ'ನಿಗೆ 'ಮೋದಿ' ಮುದ ನೀಡಿದವನು. ಸೂರ್ಯನಾರಾಯಣನೂ 'ಪ್ರಹ್ಲಾದ'ರಿಗೆ ಮೋದಿ, 'ಪ್ರ-ಹ್ಲಾದ' ಪ್ರ-ಹ್ರಾದ. ರಲಗಳಿಗೆ ಅಭೇದವಿರುವುದರಿಂದ. ಪ್ರಕೃಷ್ಟವಾದ ಹ್ರಾದ, ಉತ್ತಮವಾದ ಸ್ತೋತ್ರಪ್ರವಚನ ನಿನಾದ ಉಳ್ಳಭಕ್ತರಿಗೆ 'ಮೋದಿ'.

> 'ಪಶ್ಯೇಮ ಶರದಃಶತಂ, ಜೀವೇಮ ಶರದಃಶತಂ, ನಂದಾಮ ಶರದಃಶತಂ,
> ಮೋದಾಮ ಶರದಃಶತಂ ಭವಾಮ ಶರದಃಶತಂ ಶೃಣವಾಮ ಶರದಃಶತಂ
> ಪ್ರಬ್ರವಾಮ ಶರದಃಶತಂ ಅಜಿತಾಃ ಸ್ಯಾಮ ಶರದಃಶತಂ
> ಜ್ಯೋಕ್ಚ ಸೂರ್ಯಂ ದೃಶೇ'

'ಆನಂದದಿಂದ ಶಾಸ್ತ್ರ ಸ್ತೋತ್ರ ಶ್ರವಣ ಮಾಡೋಣ ಪ್ರವಚನ ಮಾಡೋಣ ಸುಖವಾಗಿ ನೂರುಕಾಲ ಬಾಳೋಣ ನೂರುಕಾಲ ಸೂರ್ಯದರ್ಶನ ಮಾಡೋಣ' ಎಂದು ಪ್ರಾರ್ಥಿಸುತ್ತೇವೆ.

**ಪ್ರಹ್ವ ಸಾಧ್ಯಃ ದಿವಸಕರ ಇವ ಸಿಂಹಃ**

ನಮಿಸುವವರಿಗೆ ವಶನಾಗುವವನು, ಸೂರ್ಯನಾರಾಯಣನೂ ನರಸಿಂಹನೂ.

> ಏಕೋಽಪಿ ಕೃಷ್ಣಸ್ಯ ಕೃತಃ ಪ್ರಣಾಮಃ ದಶಾಶ್ವಮೇಧಾವಭೃಥೇನ ತುಲ್ಯಃ ।
> ದಶಾಶ್ವಮೇಧೀ ಪುನರೇತಿ ಜನ್ಮ ಕೃಷ್ಣಪ್ರಣಾಮೀ ನ ಪುನರ್ಭವಾಯ ॥

ಒಂದು ಬಾರಿ ಕೃಷ್ಣನಿಗೆ ನಮಿಸಿದರೂ ಅವನು ವಶನಾಗುವುದರಿಂದ ಅದು ಹತ್ತು ಅಶ್ವಮೇಧಯಾಗಕ್ಕೆ ಸಮಾನವಾಗುವುದು. ಹತ್ತು ಅಶ್ವಮೇಧಯಾಗ ಮಾಡಿದವನಿಗೂ ಪುನರ್ಜನ್ಮ ತಪ್ಪುವುದಿಲ್ಲ. ಆದರೆ ಕೃಷ್ಣನಿಗೆ ನಮಿಸುವವನಿಗೆ ಪುನರ್ಜನ್ಮವಿಲ್ಲ.

ಸೂರ್ಯನಾರಾಯಣನು ಗಾಯತ್ರೀ ಜಪಪೂರ್ವಕ ಸೂರ್ಯನಮಸ್ಕಾರ ಮಾಡುವ 'ಪ್ರಹ್ವ'ನಿಗೆ ಒಲಿದು 'ಆರೋಗ್ಯಂ ಭಾಸ್ಕರಾದಿಚ್ಛೇತ್' ಎಂಬಂತೆ ತನು ಮನಗಳಿಗೆ ಆರೋಗ್ಯ ನೀಡುತ್ತಾನೆ. 'ಧಿಯೋ ಯೋ ನಃ ಪ್ರಚೋದಯಾತ್' ಎಂಬಂತೆ ಜ್ಞಾನಭಕ್ತ್ಯಾದಿಗಳನ್ನು ಪ್ರಚೋದಿಸಿ ಮುಕ್ತಿ ನೀಡುತ್ತಾನೆ.

**ಸಿಂಹಃ ಸ ಹರತು ದುರಿತಂ ರಂಹಸಾ ದಿವಸಕರ ಇವ**

'ರಂಹಸಾ' ವೇಗದಿಂದ ಬೇಗನೆ ನಮ್ಮ 'ದುರಿತಂ' ಪಾಪವನ್ನು 'ಹರತು' ಪರಿಹರಿಸಲಿ, ಸೂರ್ಯನಾರಾಯಣ.

> ನ ಹನ್ಯತೇ ನ ಜೀಯತೇ ತ್ವೋತೋ
> ನೈನ ಮಂಹೋ ಅಶ್ನೋತ್ಯಂತಿತೋ ನ ದೂರಾತ್ ॥

'ಸೂರ್ಯನ ಅನುಗ್ರಹವಾದರೆ ಮಾನವನಿಗೇ ದುಷ್ಕರ್ಮದಿಂದ ಹಿಂಸೆ ಇಲ್ಲ, ಪರಾಜಯವಿಲ್ಲ, ಎಂದಮೇಲೆ, ಹೇ ಸೂರ್ಯನಾರಾಯಣ! ನಿನ್ನನ್ನು ದುಷ್ಕರ್ಮವು ಹತ್ತಿರದಿಂದಾಗಲಿ ದೂರದಿಂದಾಗಲಿ ಪೀಡಿಸದೆಂದು ಬೇರೇನು ಹೇಳಬೇಕು?' 'ನೋಕನೀಯ'ನೆಂದೇ ಪ್ರಸಿದ್ಧನಾಗಿರುವನು. ಈ ಸೂರ್ಯನಾರಾಯಣನಂತೆಯೇ ಶ್ರೀನರಸಿಂಹ.

'ನೃಸಿಂಹಾದಿಕಮನ್ನತ್ತು ದುರಿತಾದಿ ನಿವೃತ್ತಯೇ'

'ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ'

ಎಂಬಂತೆ,

'ದುರಿತ ಕೋಟಿಯ ತರಿದು ಭಾಗ್ಯವನು ಕೊಡುವ

ನರಸಿಂಹ ಮಂತ್ರ ಒಂದಿರಲು ಸಾಕು।'

ಎಂಬಂತೆ, ದುರಿತವನ್ನು 'ರಂಹಸಾ' ವೇಗದಿಂದ ಬೇಗನೆ ಪರಿಹರಿಸುವವನು ನರಸಿಂಹ, ಬೇಗನೆ ಪರಿಹರಿಸಲಿ.

**चीर्णपुण्यजनोपास्यं पूर्णबोधेष्टदैवतम् ।**
**अर्णवं गुणरत्नानां तूर्णं नौमि रमेश्वरम् ॥ २ ॥**

**ಚೀರ್ಣಪುಣ್ಯಜನೋಪಾಸ್ಯಂ ಪೂರ್ಣಬೋಧೇಷ್ಟದೈವತಂ ।**
**ಅರ್ಣವಂ ಗುಣರತ್ನಾನಾಂ ತೂರ್ಣಂ ನೌಮಿ ರಮೇಶ್ವರಂ ॥**

ಶ್ರೀಪೂರ್ಣಬೋಧರಿಗೆ ಇಷ್ಟದೇವತೆಯಾದ ರಮೇಶನು ಚೀರ್ಣಪುಣ್ಯರಾದ ಜನರಿಗೇ ಉಪಾಸ್ಯನಾಗಿ ದೊರಕುತ್ತಾನೆ. 'ಪ್ರಾಚೀನಾಚೀರ್ಣ ಪುಣ್ಯೋಚ್ಚಯ' 'ಪ್ರಾಚೀನ ಆಚೀರ್ಣ' ಪೂರ್ವಜನ್ಮದಲ್ಲಿ ಮಾಡಿದ 'ಪುಣ್ಯೋಚ್ಚಯ' ಪುಣ್ಯರಾಶಿಯಿಂದ ಉಂಟಾದ 'ಚತುರತರಆಚಾರ' ಕೌಶಲ್ಯಪೂರ್ಣ ಆಚಾರದಿಂದ 'ಚಾರುಚಿತ್ತ' ಮನೋಜ್ಞಬುದ್ಧಿ ಉಳ್ಳವರಿಗೇ ಪೂರ್ಣಬೋಧರ ಭಾಷ್ಯಗಳು ರೋಚಕವಾಗುತ್ತವೆ ಎಂದು ಪಂಡಿತಾಚಾರ್ಯರು ಹೇಳುತ್ತಾರೆ. ಹಾಗೆ ಮಧ್ವಶಾಸ್ತ್ರಾನುಸಾರವಾದ ಮಧ್ವೇಶ ರಮಾರಮಣನ ಉಪಾಸನೆ ಜನರಿಗೆ ಕೈಗೂಡಬೇಕಾದರೆ ಅದಕ್ಕೆ ಪೂರ್ವಜನ್ಮದ ಪುಣ್ಯರಾಶಿ ಬೇಕು. ಅಂಥ ಗುಣರತ್ನಗಳಿಗೆ ಸಾಗರನಾದ ಹರಿಗೆ 'ತೂರ್ಣಂ' ಬೇಗನೆ, ಏನೂ ಅನುಮಾನ ಮಾಡದೆ ಭಕ್ತಿಶ್ರದ್ಧೆಗಳಿಂದ 'ನೌಮಿ' ಸ್ತೋತ್ರಮಾಡುವೆನು.

**तं पाणिपल्लवं बाहुशाखं सद्विजसेवितम् ।**
**विद्याहासलतापुष्पं मध्वकल्पद्रुमं भजे ॥ ३ ॥**

**ತಂ ಪಾಣಿಪಲ್ಲವಂ ಬಾಹುಶಾಖಂ ಸದ್‌ದ್ವಿಜ ಸೇವಿತಂ ।**
**ವಿದ್ಯಾಹಾಸಲತಾಪುಷ್ಪಂ ಮಧ್ವಕಲ್ಪದ್ರುಮಂ ಭಜೇ ॥**

'ಶ್ರೀಮಧ್ವಃ ಕಲ್ಪವೃಕ್ಷಶ್ಚ ಜಯಾರ್ಯಾಃ ಕಾಮಧೇನವಃ ।
ಚಿಂತಾಮಣಿಸ್ತು ವ್ಯಾಸಾರ್ಯಃ ಮುನಿತ್ರಯಮುದಾಹೃತಂ ॥'

ಎಂಬಂತೆ ಶ್ರೀಮಧ್ವರು ಕಲ್ಪವೃಕ್ಷರು. ಹೇಗೆ? ಅವರ 'ಪಾಣಿ' ಕೈಗಳೇ 'ಪಲ್ಲವ' ಚಿಗುರೆಲೆ, ಕೋಮಲ, ಸುಂದರ. ಬಾಹುಗಳೇ ಶಾಖೆಗಳು, ಕೊಂಬೆಗಳು. ವೃಕ್ಷವನ್ನು 'ಸದ್ದ್ವಿಜ' ಸುಂದರ ಪಕ್ಷಿಗಳು ಸೇವಿಸುವಂತೆ 'ಸದ್ದ್ವಿಜ'ರು ವಿಪ್ರೋತ್ತಮರು ಇವರನ್ನು ಸೇರಿಸುತ್ತಾರೆ. ವಿದ್ಯಾ-ಹಾಸಗಳೇ ಲತಾ-ಪುಷ್ಪಗಳು. ವಿದ್ಯಾ-ಲತೆಗಳು ಹಾಸ-ಪುಷ್ಪಗಳು ಶ್ರೀಮಧ್ವಕಲ್ಪವೃಕ್ಷದಲ್ಲಿ ಶೋಭಿಸುತ್ತವೆ. ವಿದ್ಯಾಭಿಮಾನಿ ಭಾರತಿಯು ಲತೆಯಂತೆ ಇವರನ್ನು ಬಳಸಿದ್ದಾಳೆ, ಆದರಿಂದ ಅವರ ನಗೆ ಹೂವಿನಂತೆ ಅರಳಿರುತ್ತವೆ. ಅಂಥ ಶ್ರೀಮಧ್ವರನ್ನು ಸೇವಿಸುವೆನು.

**यस्य वाक्कामधेनुर्नः कामितार्थान् प्रयच्छति ।**
**सेवे तं जययोगीन्द्रं कामबाणच्छिदं सदा ॥ ४ ॥**

**ಯಸ್ಯ ವಾಕ್ಕಾಮಧೇನುರ್ನಃ ಕಾಮಿತಾರ್ಥಾನ್ ಪ್ರಯಚ್ಛತಿ ।**
**ಸೇವೇ ತಂ ಜಯಯೋಗೀಂದ್ರಂ ಕಾಮಬಾಣಚ್ಛಿದಂ ಸದಾ ॥**

ಜಯತೀರ್ಥರ ಮಾತೆಂದರೆ ಕಾಮಧೇನು. ಬಯಸಿದ್ದನ್ನೆಲ್ಲ ಕೊಡಬಲ್ಲುದು. ಎಲ್ಲಕ್ಕಿಂತ ದೊಡ್ಡದಾದ ನಾರಾಯಣನೆಂಬ ನಿಧಿಯನ್ನೇ ಶ್ರೀಮಧ್ವರ ಉಪದೇಶ ಬಲದಿಂದ ಅವರು ಮುಮುಕ್ಷುಗಳಿಗೆ ತೋರಿಸಿಕೊಟ್ಟಿದ್ದಾರೆ; ಆದರಿಂದ,

ಆನಂದತೀರ್ಥೋಪದಿಷ್ಟೋ ನಿಧಿರ್ನಾರಾಯಣಾಹ್ವಯಃ ।
ಪ್ರದರ್ಶಿತೋ ಯೇನ ಸಮ್ಯಕ್ ಜಯತೀರ್ಥಂ ತಮಾಶ್ರಯೇ॥

ಎಂದು ತರ್ಕತಾಂಡವ ಪ್ರಾರಂಭದಲ್ಲಿ ಶ್ರೀವ್ಯಾಸರಾಜರು ಶ್ರೀಜಯತೀರ್ಥರನ್ನು ಕೊಂಡಾಡಿದ್ದಾರೆ. ಅವರು ಕಾಮಬಾಣಚ್ಛೇದ ಮಾಡಿದವರು. ಕಾಮಬಾಣ ಎಲ್ಲರನ್ನೂ ಛೇದ ಮಾಡಿದರೆ ಇವರು ಆ ಕಾಮಬಾಣವನ್ನೇ ಛೇದ ಮಾಡುತ್ತಾರೆ. ಐಹಿಕ ಕಾಮಸುಖವೆಂಬುದು ಕಷ್ಟಗೆ ಕುಪಿತವಾದ ನಾಗರ ಹೆಡೆಯ ನೆರಳಿನಂತೆ, ತಿಳಿಯದೆ ಅದನ್ನಾಶ್ರಯಿಸಿದರೆ ಕಷ್ಟೆ ಕ್ಷಣದಲ್ಲಿ ಹಾವಿಗೆ ಗ್ರಾಸವಾಗುತ್ತದೆ. ಎಂದು ತಿಳಿದವರು ಶ್ರೀಜಯತೀರ್ಥರು.

ಕುಪಿತಾಹಿ ಫಣಚ್ಛಾಯಾ ಸಮೀಕೃತ್ಯಾಪರಂ ಸುಖಂ ।
ಸೇವಂತೇ ಯತ್ಪದಂ ಧೀರಾಸ್ತಂ ಭಜೇ ವಲ್ಲಭಂ ಶ್ರಿಯಃ ॥

ಎಂದು ಅವರೇ ನ್ಯಾಯಸುಧೆಯಲ್ಲಿ ಹೇಳಿದ್ದಾರೆ. ಅಂಥ ಯೋಗೀಶ್ವರರಾದ ಜಯತೀರ್ಥರನ್ನು ಸೇವಿಸುತ್ತೇನೆ.

यो व्यासमुनिदावाग्निः सच्छास्त्रमरुता सह ।
ददाह कुमतारण्यं प्रकाशाय तमाश्रये ॥ ५ ॥

ಯೋ ವ್ಯಾಸಮುನಿ ದಾವಾಗ್ನಿಃ ಸಚ್ಛಾಸ್ತ್ರ ಮರುತಾ ಸಹ ।
ದದಾಹ ಕುಮತಾರಣ್ಯಂ ಪ್ರಕಾಶಾಯ ತಂ ಆಶ್ರಯೇ ॥

ಮಧ್ವಶಾಸ್ತ್ರದ ಗಾಳಿಗೆ ಭುಗಿಲೆದ್ದು, ದುರ್ಮತಗಳೆಂಬ ಕಾಡುಗಳನ್ನು ಸುಡುವ ಜ್ಞಾನದ ಕಾಳ್ಗಿಚ್ಚು ಶ್ರೀವ್ಯಾಸರಾಜರು. ಅವರು ಜ್ಞಾನದ ಬೆಳಕನ್ನು ನೀಡಲೆಂದು ಸೇವಿಸುತ್ತೇನೆ.

रमावरास्याम्बुजराजहंसोल्लसत्कथाश्रोत्रकलापदं तम् ।
कुवादिराट्कुञ्जरशीर्षभेदे हरिं भजे व्यासमुनिं मुनीन्द्रम् ॥ ६ ॥

ರಮಾವರಾಸ್ಯಾಂಬುಜ ರಾಜಹಂಸೋ
ಲ್ಲಸತ್ ಕಥಾ ಶ್ರೋತ್ರಕಲಾಪದಂ ತಂ ।
ಕುವಾದಿರಾಟ್ ಕುಂಜರ ಶೀರ್ಷಭೇದೇ
ಹರಿಂ ಭಜೇ ವ್ಯಾಸಮುನಿಂ ಮುನೀಂದ್ರಂ ॥

ರಮೆಯ ವರ ಆಸ್ಯಾಂಬುಜದಲ್ಲಿ ಮುಖಕಮಲದಲ್ಲಿ ಆಸಕ್ತನಾದ ರಾಜಹಂಸ, ರಮಾರಮಣ. ಅವನ ಉಲ್ಲಸತ್ ಕಥೆ ವಾದ-ಜಲ್ಪ-ವಿತಂಡಾ ರೂಪವಾದ ವಾದಕಥೆ ಶ್ರೋತ್ರಗಳಿಗೆ ಕಲಾಪ. ಕಿವಿಗಳಿಗೆ ಅದೇ ನಿಜವಾದ ಆಭರಣ. ರಮಾರಮಣನ ಕುರಿತಾದ ಉಲ್ಲಸತ್ ಶೋಭಾಯಮಾನವಾದ ಕಥೆ ಎಂದರೆ, ಅದುವೇ ಸಜ್ಜನರ ಕಿವಿಗಳಿಗೆ ನಿಜವಾದ ಆಭರಣ. ಅದು, ವಾದ-ಜಲ್ಪ-ವಿತಂಡಾತ್ಮಕವಾದ ನ್ಯಾಯಾಮೃತ ಚಂದ್ರಿಕಾದಿ ವ್ಯಾಸತ್ರಯ ಗ್ರಂಥವಿರಬಹುದು, ಸಿರಿಕೃಷ್ಣಾಂಕಿತವಾದ ದೇವರನಾಮರೂಪದ ದಾಸಸಾಹಿತ್ಯವಿರಬಹುದು. ಅವನ್ನು ಎರಡನ್ನು ಸಜ್ಜನರ ಎರಡು ಕಿವಿಗಳಿಗೆ ಆಭರಣವಾಗಿ ತೊಡಿಸಿದವರು, 'ಕಲಾಪ-ದ'ರು ಆಭರಣದಾಯಕರು, ವ್ಯಾಸರಾಜರು. ಅವರು ಈ ಉತ್ತಮವಾದ ವಾದದಲ್ಲಿ ಶೂರರು, ಕುವಾದಿಗಳೆಂಬ ಆನೆಗಳ ಶೀರ್ಷಭೇದದಲ್ಲಿ, ಕುಂಭಸ್ಥಳವನ್ನು ಸೀಳುವಲ್ಲಿ 'ಹರಿ' ಸಿಂಹವೂ ಆಗಿದ್ದಾರೆ. ಇಂಥ ಮುನೀಂದ್ರರಾದ ಮುನಿಗಳು ವ್ಯಾಸರಾಜರು. ಮುನಿಗಳಲ್ಲಿ ಇಂದ್ರರು, ಶ್ರೇಷ್ಠರು.

ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।
ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥ (ಭ.ಗೀ.2.56)

ದುಃಖದಲ್ಲಿ ಉದ್ವೇಗವಿಲ್ಲ, ಸುಖದಲ್ಲಿ ಆಸೆ ಇಲ್ಲ, ರಾಗ ದ್ವೇಷ ಭಯ ಒಂದೂ ಇಲ್ಲ,

ಇಂಥವನೇ ಮುನಿಗಳಲ್ಲಿ 'ಸ್ಥಿತಧೀ' ಸ್ಥಿತಪ್ರಜ್ಞನೆನಿಸುವ ಶ್ರೇಷ್ಠನಾದ ಮುನಿ, ಮುನೀಂದ್ರ. ಇಂಥ ಮುನೀಂದ್ರರಾದ ವ್ಯಾಸಮುನಿಗಳನ್ನು ಭಜಿಸುವೆನು.

मूकोऽपि वावदूकेन्द्रो जायते यदनुग्रहात् ।
श्रीसुरेन्द्रगुरोः स्तोत्रं कारं कारं भजे गिरम् ॥ ७ ॥

ಮೂಕೋಽಪಿ ವಾವದೂಕೇಂದ್ರೋ ಜಾಯತೇ ಯದನುಗ್ರಹಾತ್ ।
ಶ್ರೀಸುರೇಂದ್ರಗುರೋಃ ಸ್ತೋತ್ರಂ ಕಾರಂ ಕಾರಂ ಭಜೇ ಗಿರಂ ॥

ಶ್ರೀಸುರೇಂದ್ರರ ಅನುಗ್ರಹವಾಯಿತೆಂದರೆ ಮೂಕನೂ ಕೂಡ 'ವಾವದೂಕ'ರಲ್ಲಿ ವಾಗ್ಮಿಗಳಲ್ಲಿ 'ಇಂದ್ರ' ಶ್ರೇಷ್ಠನಾಗುವನು. ಅಂಥ ಗುರುಗಳ ಸ್ತೋತ್ರವನ್ನು ಮತ್ತೂ ಮತ್ತೂ ಮಾಡುತ್ತ 'ಗಿರಂ ಭಜೇ' ಅವರ ಗ್ರಂಥಗಳನ್ನು ಅಧ್ಯಯನ ಮಾಡುವೆನು.

श्रीमन्मध्वमताख्यदुग्धजलधेर्धीमन्दरेण क्रमै-
रामथ्योद्धृतमर्पितं च गुरुभिर्न्यायामृतं यत् पुरा ।
सौवर्णे चषके महीसुरततेर्मोदाय तस्यादराद्
आमोदं सुमनोगुणैर्विजयिनामिन्द्रः करिष्येऽधुना ॥ ८ ॥

ಶ್ರೀಮನ್ ಮಧ್ವಮತಾಖ್ಯ ದುಗ್ಧ ಜಲಧೇರ್ಧೀಮಂದರೇಣ ಕ್ರಮೈ-
ರಾಮಥ್ಯೋದ್ಧೃತಂ ಅರ್ಪಿತಂ ಚ ಗುರುಭಿರ್ನ್ಯಾಯಾಮೃತಂ ಯತ್ ಪುರಾ ।
ಸೌವರ್ಣೇ ಚಷಕೇ ಮಹೀಸುರ ತತೇ ರ್ಮೋದಾಯ ತಸ್ಯಾದರಾದ್
ಆಮೋದಂ ಸುಮನೋಗುಣೈರ್ವಿಜಯಿನಾಂ ಇಂದ್ರಃ ಕರಿಷ್ಯೇಽಧುನಾ ॥

'ವಿಜಯಿನಾಂ ಇಂದ್ರಃ' ವಿಜಯೀಂದ್ರನಾಮಕನು ನಾನು 'ಅಧುನಾ' ಈಗ ನ್ಯಾಯಾಮೃತಕ್ಕೆ 'ಆಮೋದಂ' ಆಮೋದವೆಂಬ ವ್ಯಾಖ್ಯಾನವನ್ನು 'ಕರಿಷ್ಯೇ' ಮಾಡುತ್ತೇನೆ. ಏಕೆಂದರೆ 'ಪುರಾ' ಹಿಂದೆ ಗುರು ಶ್ರೀವ್ಯಾಸರಾಜರು ಶ್ರೀಮನ್ಮಧ್ವಮತವೆಂಬ ಕ್ಷೀರಸಾಗರದಲ್ಲಿ ತಮ್ಮ ಬುದ್ಧಿಪ್ರತಿಭೆಯ ಮಂದರವನ್ನಿಟ್ಟು 'ಕ್ರಮೈಃ ಆಮಥ್ಯ' ಸುತ್ತು ತಿರುಗಿಸುವ ಮೂಲಕ ಮಥನಮಾಡಿ ನ್ಯಾಯಾಮೃತವೆಂಬ ಅಮೃತವನ್ನು 'ಉದ್ಧೃತ್ಯ' ಎತ್ತಿ ತೆಗೆದು 'ಸೌವರ್ಣ ಚಷಕ'ದಲ್ಲಿ ಸು-ವರ್ಣಮಯವಾದ, ಒಳ್ಳೆಯ ಅರ್ಥಗರ್ಭಿತ ಮಾತುಗಳಿಂದ ತುಂಬಿದ ಗ್ರಂಥರೂಪದ ಬಂಗಾರದ ಪಾತ್ರೆಯಲ್ಲಿ 'ಅರ್ಪಿತಂ' ಸಜ್ಜನರಿಗೆ ನೀಡಿದ್ದಾರೆ. ಅದಕ್ಕೆ ಈಗ ನಾನು 'ಸುಮನೋಗುಣೈಃ' 'ಸುಮನ' ಹೂವಿನಂತೆ ಅರಳುವ ನನ್ನ ಬುದ್ಧಿಪ್ರತಿಭೆಯ 'ಗುಣೈಃ' ವ್ಯಂಜನ

ಪದಾರ್ಥಗಳಿಂದ 'ಆಮೋದಂ ಕರಿಷ್ಯೇ' ಹೆಚ್ಚಿನ ಸವಿಯಾದ ಸುವಾಸನೆಯನ್ನುಂಟುಮಾಡುತ್ತೇನೆ. ಬಾದಾಮಿ ಹಾಲಿಗೆ ಕುಂಕುಮಕೇಸರಿ ಹೂವಿನ ಸುವಾಸನೆ ಎಂಬ ವ್ಯಂಜನಪದಾರ್ಥ ಸೇರಿದರೆ 'ಆಮೋದ' 'ಆಮೋದಃ ಸೋಽತಿನಿರ್ಹಾರೀ' ಎಂಬಂತೆ ನ್ಯಾಯಾಮೃತವೆಂಬ ಅಮೃತಕ್ಕೆ ಅತ್ಯಂತ ಆಹ್ಲಾದಕರವಾದ ಸುವಾಸನೆ ಉಂಟಾಗುತ್ತದೆ. ಉಂಟುಮಾಡುತ್ತೇನೆ, ಎನ್ನುತ್ತಾರೆ ವಿಜಯೀಂದ್ರರು.

**व्याख्यानव्याजतोऽन्योक्तदूषणानामलग्नताम् ।**
**प्रदर्श्य गुरुपादोक्तिमहिमाथ प्रकाश्यते ॥ ९ ॥**

**ವ್ಯಾಖ್ಯಾನ ವ್ಯಾಜತೋಽನ್ಯೋಕ್ತ ದೂಷಣಾನಾಂ ಅಲಗ್ನತಾಂ ।**
**ಪ್ರದರ್ಶ್ಯ ಗುರುಪಾದೋಕ್ತಿಮಹಿಮಾಽಥ ಪ್ರಕಾಶ್ಯತೇ ॥**

ನ್ಯಾಯಾಮೃತಕ್ಕೆ ವ್ಯಾಖ್ಯಾನ ಮಾಡುವ ನೆಪದಿಂದ ಪರವಾದಿಗಳು ಹೇಳಿದ ದೋಷಗಳು ಅದಕ್ಕೆ ಹತ್ತುವುದಿಲ್ಲ ಎಂಬುದನ್ನು ತೋರಿಸಿ ಗುರುಪಾದರ ಗ್ರಂಥದ ಮಹಿಮೆಯನ್ನು ಈ ಆಮೋದ ವ್ಯಾಖ್ಯಾನದಲ್ಲಿ ತೋರಿಸುತ್ತೇನೆ.

## 02. ಮಂಗಳಾಚರಣ–ನ್ಯಾಯಾಮೃತದಲ್ಲಿ

ॐ निखिलगुणनिकायं नित्यनिर्धूतहेयं
शुभतममतिमेयं शुद्धसौख्यास्युपायम् ।
सकलनिगमगेयं सर्वशब्दाभिधेयं
नवजलधरकायं नौमि लक्ष्मीसहायम् ॥ १ ॥

प्रारिप्सित ग्रन्थ विघ्न विघाताद्यर्थं शिष्टाचारानुमित वेदबोधित कर्तव्यताकं विशिष्टेष्टाधिकृत देवतानुतिरूपं मङ्गलमादावाचरति— **निखिलगुणनिकायमिति** ।। लक्ष्म्या अपि सकलवाङ्मनसदेवतात्वेन तन्नुतेरावश्यकत्वात्, भगवत्पारतन्त्र्येणैव तत्करणस्येष्टत्वमभिप्रेत्याह **लक्ष्मीसहायमिति** ।। लक्ष्म्याः पतित्वेन सहायमित्यर्थः । लक्ष्मीं संपदं सहत इति लक्ष्मीसहः, अयः शुभावहो विधिः, आयः आदायो वा तत्वज्ञानं वा यस्मात्तं तथोक्तमिति वार्थः । अत्र सहत इति सहपदं पृथगेव संस्कर्तव्यम् । अनेन द्वितीयतृतीयव्याख्यानयोः श्रीकृष्णस्य रामस्य वा सम्पदविरोध्ययादि प्रदत्वं विभावितं द्रष्टव्यम् । सर्वस्य भगवद्रूपस्य नन्तव्यत्वेऽपि नित्यनियतोपासनाविषयत्वेन शीघ्रोपस्थितत्वात् श्रीरामलक्षणस्य श्रीकृष्णलक्षणस्यैव वा तद्रूपस्य प्रकृते तदिति भावेनाह **नवजलधरकायमिति** ।। नवजलधरवत् कायो देहो यस्य सः तं तथोक्तम् ।

ननु नुतेर्गुणिनिष्ठगुणाभिधानरूपतया वस्तुतो निर्गुणस्य नुतिरनुपपन्ना । कथंचिदुपपन्नाप्यस्मदादिविषयनुतिवदेवासत्या स्यादित्यत आह **निखिलगुणनिकायमिति** ।। सकलगुणनिवासमित्यर्थः । यत्किञ्चिद्गुणसत्वेऽप्युपपन्ना नुतिरनेकगुणसत्वे असत्यत्वानुपपन्नत्वशङ्कामेव नार्हतीति भावः ।

निपूर्वाच्चिनोतेर्निवासार्थे निवासचितिशरीरोपसमाधानेष्वादेश्च कः (३-३-४१) इति सूत्रेण घञि सति धात्वादेश्च कादेशे निकायशब्दः । यद्यपि निवासार्थे पाय्यसान्नाय्यनिकाय्यधाय्या मानहविर्निवाससामिधेनीष्विति (३-१-१२९) सूत्रेण निकाय्यशब्दोऽपि व्युत्पादितः । अत एव निकाय्यनिलयालया इति निघण्टावपि निकाय्यशब्दोपादानम् । तथापि प्रत्ययभेदमादाय निकायशब्दो निवासार्थोऽपि

व्युत्पन्नः । यद्वा निखिलगुणराशिमित्यर्थः अत एव स्यान्निकायः पुञ्जराशी इति निघण्टौ निकायशब्दस्याप्युपादानम् । अनेन प्रथमाध्यायार्थो दर्शितः । नन्तव्यत्वप्रयोजक-कल्याणगुणाढ्यत्वेन विशिष्टत्वं च । लोकवेदयोः कल्याणगुणाढ्यस्यैव विशिष्टत्वात् ।

ननु गुणशब्देन दुःखादिष्वपि वैशेषिकादीनां अविगीतव्यवहारदर्शनात् तद्वत्तया प्रतिपादनस्यानुचितत्वात् कथं तादृशधर्मानादाय नुतिरुपपन्ना? नहि लोके असौ दुःखी दुष्टः इत्याद्युक्तिभिर्नुतिरित्यत आह **नित्यनिर्धूतहेयमिति ।** नित्यं सदा निर्धूतं तिरस्कृतं हेयं दुःखादि येन सः तं तथोक्तम् । एतद्विशेषणसमभिव्याहारात् निखिलगुणनिकायमित्यत्र गुणशब्द उपादेयधर्ममात्रपरोऽवसीयत इति । यद्वा लोके गुणाढ्यस्यापि दोषवत्त्वे निन्दाया अपि दर्शनात् किमसावपि तथेत्यत आह **नित्यनिर्धूतहेयमिति ।।** सर्वदा दोषगन्धविधुरमित्यर्थः । तथाच भगवान् सर्वदा स्तोत्रपात्रमेव, नतु कदापि निन्दापात्रमिति भावः । अथवा यत्र गुणास्तत्र दोषाणामप्युपलम्भात्, किमसावपि दोषवानित्याशङ्कायामाह **नित्यनिर्धूतहेय-मिति** ।।

ननु रामकृष्णाद्यवतारेषु छेदभेदादिदोषाणामपि दर्शनात् नित्य निर्धूत हेयत्वमेवासिद्धमित्यत आह **शुभतममतिमेयमिति** ।। शुभतमा निर्दुष्टा मतिर्दर्शनं येषां ते शुभतममतयः । तैर्मेयम् । यद्वा शुभतमा दोषरहिता या मतिस्तया मेयमित्यर्थः । अत्र पक्षे मेयमित्यत्र धातुः प्रत्ययमात्रानुग्रहार्थः । यद्वा शुभतमानां या मतिः तया मेयमित्यर्थः । यद्यपि रामकृष्णादिभगवदवतारेषु छेदभेदादिदोषाः दुष्टमतिभिर्दृष्टाः । तथापि शुभतममतिभिस्ते न दृष्टा इति न तस्य नित्यनिर्धूतहेयत्वमसिद्धमिति भावः । नहि दुष्टबुद्धिविषयोऽर्थः सिद्ध्यति । दोषजन्यबुद्धीनां तु भ्रमत्वनियमादिति । अनेन सोपपत्तिर्द्वितीयाध्यायार्थो दर्शितः ।

अत एव निखिलगुणनिकाय नित्यनिर्धूतहेयत्वादेवासौ लोकवेदयोः शुभतम इत्युच्यत इति वाह **शुभतममिति** ।। अत्र पक्षे शुभतममिति पदविभागः । नन्वेवंभूतः पुमानेव लोकेऽप्रसिद्ध इत्यत आह **अतिमेयमिति** । मेयशब्देन क्षराक्षरशब्दार्थौ गृह्येते ।

तावतिक्रान्तमित्यर्थः । तथाच क्षराक्षरविलक्षणत्वाज्जगज्जन्मादि कारणत्वादि कल्याणगुण विशिष्टो दुःखादिदोषरहितश्च भगवानलौकिक इति तदप्रसिद्धिमात्र-मकिञ्चित्करमिति भावः । अनेन तृतीयाध्यायार्थोऽपि दर्शितः ।

ननु तस्य खलु प्रेक्षावता पर्वतादिव्यावृत्ता नुतिः क्रियते यस्तया प्रसीदति प्रसन्नश्चाभीष्टदः । नचासौ जलधरकायस्तादृशः येन तथाविधनुतिविषयः स्यादित्यत आह **शुद्धसौख्याप्त्युपायमिति** ।। सुखमेव सौख्यम् । स्वार्थे ष्यञ्प्रत्ययः । तस्य शुद्धत्वं सान्तत्व सातिशयत्व दुःखसंभिन्नत्वादि राहित्यम् । शुद्धस्य सौख्यस्याप्तौ प्राप्तावुपायमित्यर्थः । यद्वा शुद्धः प्रत्यवायानापादकः सौख्याप्त्युपायः श्रवणादि भगवत्प्रसादपर्यन्तः सुखोपायः । मुक्त्युपाय इति यावत् । स यस्मात्तं तथोक्तम् । यद्वा शुद्धं परिच्छेदादिदोषरहितं सौख्यं यस्यासौ शुद्धसौख्यो भगवान् । तस्याप्तौ प्राप्तावुपायं तत्स्वरूपभूतमेवेत्यर्थः । अत्र यद्यपि स्त्रियां क्तिन् इति प्रत्ययः गुरोश्च हल इत्यप्रत्ययेन बाध्यते । तथापि क्तिन्नाबादिभ्य इति वार्तिकेन क्तिन्प्रत्यये आप्तिरिति रूपं सिद्ध्यतीति द्रष्टव्यम् । अनेन चतुर्थाध्यायार्थो दर्शितः ।

नन्वेवंभूतो भगवान् प्रत्यक्ष तदुपजीव्यनुमान गम्यश्चेत्तथोपलभ्येत वह्न्या-दिवत् । नचोपलभ्यते । तस्मान्न तथाविधोऽस्तीत्यत आह **सकलनिगमगेयमिति** ।। वेद वेदाविरोधि सकल सदागमैर्ज्ञेयम् । तत्तदुपजीविमात्र प्रमाणकमित्यर्थः । तथाच नोक्तदोष इति भावः । ननु शब्दमात्रावाच्यस्य निगमगेयत्वमेवानुपपन्नम् । सकलनिगमगेयत्वं तु सुतराम् । न च लक्षणया तदुपपन्नम् । वाच्यत्वरहिते प्रत्यक्षाद्यगोचरे च लक्षणाया एवायोगात् । न ह्यनुपस्थिते लक्षणावृत्तिकल्पनं दृष्टचरमित्यत आह **सर्वशब्दाभिधेयमिति** ।। सकलवैदिकशब्द वाच्यमित्यर्थः । यद्वा निखिलगुणनिकायत्वे निगमं प्रमाणयित्वा अपर्यायानन्तशब्द वाच्यत्वान्यथानुपपत्तिं च प्रमाणयितुमाह **सर्वशब्दाभिधेयमिति** ।। नचापर्यायानन्तशब्द वाच्यत्वं प्रवृत्तिनिमित्तभूततावद्धर्मव्यतिरेके संभवतीति तदन्यथानुपपत्तिः सर्वशब्दाभिधेयत्व-रूप विशेषणेन सूचितेति द्रष्टव्यम् ।। १ ।।

❖❖❖

**ನಿಖಿಲಗುಣನಿಕಾಯಂ ನಿತ್ಯನಿರ್ಧೂತಹೇಯಂ**
**ಶುಭತಮಮತಿಮೇಯಂ ಶುದ್ಧಸೌಖ್ಯಾಪ್ಯುಪಾಯಮ್ ।**
**ಸಕಲನಿಗಮಗೇಯಂ ಸರ್ವಶಬ್ದಾಭಿಧೇಯಂ**
**ನವಜಲಧರಕಾಯಂ ನೌಮಿ ಲಕ್ಷ್ಮೀಸಹಾಯಮ್ ॥ 1 ॥**

ಶ್ರೀವ್ಯಾಸರ ಬ್ರಹ್ಮಸೂತ್ರದಲ್ಲಿ ನಾಲ್ಕು ಅಧ್ಯಾಯಗಳಿರುವಂತೆ ಶ್ರೀವ್ಯಾಸರಾಜರ ನ್ಯಾಯಾಮೃತದಲ್ಲಿ ನಾಲ್ಕು ಪರಿಚ್ಛೇದಗಳಿವೆ. ಪ್ರಥಮಾಧ್ಯಾಯದಲ್ಲಿ ಮತ್ತು ಪ್ರಥಮಪರಿಚ್ಛೇದದಲ್ಲಿ ಲಕ್ಷ್ಮೀರಮಣನು 'ನಿಖಿಲಗುಣನಿಕಾಯ'ನೆಂದು ಸಮರ್ಥಿಸುತ್ತಾರೆ. ನಿಖಿಲ ಗುಣಗಳಿಗೆ 'ನಿಕಾಯ' ಆವಾಸಸ್ಥಾನ. 'ನಿಕಾಯ್ಯ ನಿಲಯಾಲಯಾಃ' ಎಂದು ಕೋಶದಂತೆ ಆವಾಸಾರ್ಥದಲ್ಲಿ 'ನಿಕಾಯ್ಯ' ಎಂದಾಗಬೇಕಿತ್ತು. ಆದರೆ ಅದೇ ಅರ್ಥದಲ್ಲಿ 'ನಿಕಾಯ' ಶಬ್ದವೂ ಸಾಧು.

ಏತೇ ಮನೂಂಸ್ತು ಸಪ್ತಾನ್ಯಾನ್ ಅಸೃಜನ್ ಭೂರಿತೇಜಸಃ ।
ದೇವಾನ್ ದೇವನಿಕಾಯಾಂಶ್ಚ ಮಹರ್ಷೀಂಶ್ಚಾಮಿತೌಜಸಃ ॥

ಎಂದು ಮನುಸ್ಮೃತಿ (1.36)ಯಲ್ಲಿ 'ದೇವನಿಕಾಯ'ಗಳೆಂದರೆ ದೇವಲೋಕಗಳು, ದೇವತೆಗಳ ಆವಾಸಸ್ಥಾನವಾದ ಸ್ವರ್ಗಲೋಕಗಳು.

'ನಿವಾಸ ಚಿತಿ ಶರೀರೋಪಸಮಾಧಾನೇಷ್ವಾದೇಶ್ಚ ಕಃ' (3.3.41)

ಎಂದು ಪಾಣಿನಿಸೂತ್ರ ಹೇಳುವಂತೆ ನಿವಾಸಾರ್ಥದಲ್ಲಿ 'ನಿ' ಉಪಸರ್ಗಪೂರ್ವಕ 'ಚಿಞ್ ಚಯನೇ' ಧಾತುವಿಗೆ ಘಞ್ ಪ್ರತ್ಯಯ ಬಂದಾಗ ಆದಿಯ ಚಕಾರಕ್ಕೆ ಕಾದೇಶ, ಇಕಾರಕ್ಕೆ ವೃದ್ಧಿ ಆಯಾದೇಶಗಳಿಂದ 'ನಿಕಾಯ' ರೂಪಸಿದ್ಧಿ.

'ಸ್ಯಾನ್ನಿಕಾಯಃ ಪುಂಜರಾಶೀ' ಎಂದು ನಿಘಂಟುವಿನಲ್ಲಿ ನಿಕಾಯ ಶಬ್ದವೂ ಇದೆ. ಅದರಂತೆ 'ನಿಕಾಯ' ಎಂದರೆ ಸಮೂಹವೆಂದೇ ಅರ್ಥವಿಟ್ಟುಕೊಂಡರೂ ಅನುಪಪತ್ತಿ ಇಲ್ಲ. ನಿಖಿಲ ಗುಣಗಣ ರೂಪನೇ ರಮಾರಮಣ ತಾನೆ?

ಎರಡನೇ ಅಧ್ಯಾಯದಲ್ಲಿ ಮತ್ತು ಎರಡನೆ ಪರಿಚ್ಛೇದದಲ್ಲಿ 'ನಿತ್ಯನಿರ್ಧೂತಹೇಯ' ಗುಣವಿರುವಲ್ಲಿ ದೋಷವೂ ಇರುತ್ತದೆ. ಆದರೆ 'ಎಂದೂ ಯಾವ ದೋಷವೂ ಇಲ್ಲ'ದವನು ಲಕ್ಷ್ಮೀರಮಣ.

ಮೂರನೇ ಅಧ್ಯಾಯದಲ್ಲಿ ಮತ್ತು ಪರಿಚ್ಛೇದದಲ್ಲಿ 'ಶುಭತಮ ಮತಿಮೇಯ' 'ಶುಭತಮ'ರಾದ ಅತ್ಯಂತ ಸಾತ್ವಿಕರಾದ ಸಜ್ಜನರಿಗೆ ಮಾತ್ರ 'ಮತಿಮೇಯ' ಉಪಾಸನಾಗೋಚರ ನಾಗುವವನು ರಮಾರಮಣ.

ನಾಲ್ಕನೇ ಅಧ್ಯಾಯದಲ್ಲಿ ಮತ್ತು ಪರಿಚ್ಛೇದದಲ್ಲಿ 'ಶುದ್ಧಸೌಖ್ಯಾಪ್ಯುಪಾಯ' ಸಜ್ಜನರಿಗೆ ಅವರ ಅಪ್ರಾಕೃತ ಚೈತನ್ಯ ಸ್ವರೂಪವಾದ ಆನಂದವನ್ನು ಮೋಕ್ಷದಲ್ಲಿ ಅಭಿವ್ಯಕ್ತಿಮಾಡಿ ಕೊಡುವವನು ಲಕ್ಷ್ಮೀರಮಣ ಎನ್ನುತ್ತಾರೆ.

ಹರಿ ನಿಖಿಲ ಗುಣಾಶ್ರಯ ಏಕೆಂದರೆ ಅವನೇ 'ಸಕಲ ನಿಗಮಗೇಯ'. ಇಂದ್ರಾದಿ ಸೂಕ್ತದಲ್ಲಿಯೂ ಮುಖ್ಯತಃ ಪ್ರತಿಪಾದ್ಯನಾಗುವುದರಿಂದ ಸಕಲ ವೇದಪ್ರತಿಪಾದ್ಯಗುಣಗಳೂ ಅವನಲ್ಲಿ ಸಿದ್ಧವಾಗುತ್ತವೆ.

ಹರಿ ಸಕಲ ದೋಷ ದೂರ ಏಕೆಂದರೆ, 'ಸರ್ವಶಬ್ದಾಭಿಧೇಯ'. ಜಗತ್ಕಾರಣವನ್ನು ಹೇಳುವಂತೆ ಕಾಣುವ ಪ್ರಕೃತ್ಯಾದಿ ಶಬ್ದಗಳಿಗೂ ಅವನೇ ಮುಖ್ಯ ಅಭಿಧೇಯನಾದ್ದರಿಂದ ಅವನೆ ಸರ್ವಕರ್ತೃ. ಅದರಿಂದ ನಿರ್ದೋಷ.

ವಾಕ್ಯಾರ್ಥರೂಪನಾದ್ದರಿಂದ ಸಕಲನಿಗಮಗೇಯ. ಮತ್ತು ಪದಾರ್ಥರೂಪನಾದ್ದರಿಂದ ಸರ್ವಶಬ್ದಾಭಿಧೇಯ, ಹರಿ. ಅದರಿಂದ ಪುನರುಕ್ತಿ ಇಲ್ಲ.

ಹರಿ ನಿರಾಕಾರನಾದ್ದರಿಂದ ಧ್ಯಾನಾದಿ ಉಪಾಸನೆಗೆ ಹೇಗೆ ಗೋಚರನಾಗುವನು ಎಂಬ ಶಂಕೆಗೆ ಸಮಾಧಾನ, 'ನವ ಜಲಧರಕಾಯ' ಎಂದು. ಪ್ರಾಕೃತಶರೀರ ರಹಿತನಾದ್ದರಿಂದ ನಿರಾಕಾರ ನೆನಿಸಿದರೂ ಅಪ್ರಾಕೃತವಾದ ನವಮೇಘಶ್ಯಾಮಲ ಶರೀರದವನಾದ್ದರಿಂದ 'ಶುಭತಮ- ಮತಿಮೇಯ' ನೆನಿಸುತ್ತಾನೆ.

ಭುಕ್ತಿಮುಕ್ತಿಗಳೆರಡನ್ನೂ ನೀಡುವವಳು ಲಕ್ಷ್ಮಿಯಾಗಿರುವಾಗ ಹರಿ 'ಶುದ್ಧ ಸೌಖ್ಯಾಪ್ತ್ಯುಪಾಯ' ಹೇಗೆ? ಎಂದರೆ ಲಕ್ಷ್ಮಿಗೂ ಹರಿಯ ಸಹಾಯ ಬೇಕು. 'ಮಮ ಯೋನಿರಪ್ಸ್ವಂತಃ ಸಮುದ್ರೇ' ಎಂದು ಸಮುದ್ರಶಾಯಿ ನಾರಾಯಣನು ನನಗೆ ಸಹಾಯ ಎಂದು ಅವಳೇ ಹೇಳುತ್ತಾಳೆ. ಆದರಿಂದ ಲಕ್ಷ್ಮೀರಮಣನನ್ನು 'ಲಕ್ಷ್ಮೀ ಸಹಾಯ' ಅಂದರೆ ಲಕ್ಷ್ಮಿಗೆ ಪತಿಯಾಗಿ ಸಹಾಯ ಎಂದು ವ್ಯಾಸರಾಜರು ಸ್ತುತಿಸಿದ್ದಾರೆ. 'ಶ್ರೀರ್ಯತ್ ಕಟಾಕ್ಷ ಬಲವತ್ಯಜಿತಂ ನಮಾಮಿ' ಎಂದು ಶ್ರೀಮದಾಚಾರ್ಯರು ಸ್ತುತಿಸಿದ್ದಾರೆ.

❖❖❖

**विघ्नौघवारणं सत्याशेषविश्वस्य कारणम् ।**
**करुणासिन्धुमानन्दतीर्थबन्धुं हरिं भजे ॥ २ ॥**

श्रेयांसि बहुविघ्नानि भवन्ति महतामर्पात्यादेः संभावितानेकविघ्नवारणस्यानेक- मङ्गलं विनानुपपत्तेः तमेव हरिशब्दापरपर्यायं कृष्णं रामं वा पुनर्भजते **विघ्नौघवारणमिति** ॥ अनेन विघ्नवारणाक्षमस्य भजनं कृतमपि न तद्वारणस्येष्ट इति शङ्का निरस्ता । विश्वशब्दस्य संकोचे बाधकाभावमभिप्रेत्याह **अशेषेति** ॥ वक्ष्यमाणार्थमुपक्षिपति **सत्येति** ॥ कारणमित्युपलक्षणम् । पालकं नाशकं चेत्यपि

बोद्धव्यम् । एतेन हरिः जगत्पालनमात्रव्यापारकत्वात् ततसृष्टिमात्रव्यापारक चतुर्मुखब्रह्मवत् तत्संहारमात्रव्यापारकरुद्रवच्च गुणभूतमूर्तित्रयान्तर्गत एव । न प्रधानभूतेश्वर इति शंका निरस्ता । अयमर्थोऽस्माभिः **परतत्वप्रकाशिकायां न्यायमौक्तिकमालायां** च सप्रपञ्चमुपपादितस्तत एवानुसन्धेयः । ननु हरेरशेषविश्वकारणत्वेन विघ्नौघवारणसमर्थत्वेऽपि अस्मदादि विघ्नवारणे किमर्थं प्रवर्तते अत आह **करुणासिन्धुमिति** ।। निरुपाधिकपरदुःखप्रहाणेच्छा करुणा । तया सिन्धुरिव तं तथोक्तम् । अनेन कारुणिकानां प्रवृत्तिर्न प्रयोजनमपेक्ष्य भवति । किन्तु स्वभावादेवेति विभावितम् । हरेरस्मदाचार्यबन्धुत्वादपि सम्बन्धद्वयादस्मच्छ्रेयःप्रति-बन्धकविघ्नवारकत्वमवर्जनीयमिति सूचयितुमाह **आनन्दतीर्थबन्धुमिति** ।। २ ।।

**ವಿಘ್ನೌಘವಾರಣಂ ಸತ್ಯಾಶೇಷವಿಶ್ವಸ್ಯ ಕಾರಣಮ್ ।**
**ಕರುಣಾಸಿಂಧುಮಾನಂದತೀರ್ಥಬಂಧುಂ ಹರಿಂ ಭಜೇ ॥ 2 ॥**

ವಿಘ್ನಗಳೆಷ್ಟೇ ಬಂದರೂ ತಡೆಯಬಲ್ಲವನು ಹರಿಯೆ. ಏಕೆಂದರೆ ಸತ್ಯವಾದ ಸಮಸ್ತವಿಶ್ವಕ್ಕೆ ಅವನೇ ಸ್ವತಂತ್ರಕಾರಣ. ಹೊರತು ಸೃಷ್ಟಿಗೆ ಬ್ರಹ್ಮನಂತೆ, ಲಯಕ್ಕೆ ರುದ್ರನಂತೆ, ಪಾಲನಕ್ಕೆ ವಿಷ್ಣುವೂ ಒಬ್ಬ ಅಸ್ವತಂತ್ರಕಾರಣನಲ್ಲ. ಕರುಣಾಸಮುದ್ರನೂ ನಮಗೆ ಗುರುಗಳಾದ ಆನಂದತೀರ್ಥರಿಗೆ ಬಂಧುವೂ ಅವನೇ. ಅವನನ್ನು ಭಜಿಸುತ್ತೇನೆ ಎನ್ನುತ್ತಾರೆ.

❖❖❖

**अभ्रमं भङ्गरहितमजडं विमलं सदा ।**
**आनन्दतीर्थमतुलं भजे तापत्रयापहम् ।। ३ ।।**

विविधतापग्रस्तस्य पुंसः कुशलकर्मसु सुखेन प्रवृत्त्ययोगात् तत्परिहारस्य महातीर्थसेवयापि संभवात् तदर्थमितरतीर्थापेक्षया स्वसेव्यानन्दतीर्थस्य वैलक्षण्यमुपवर्णयन् तं भजते **अभ्रममिति** ।। अत्र सदेत्यस्य सर्वविशेषणैर्भज इत्यनेन चावृत्त्या तन्त्रन्यायेन संबन्धो द्रष्टव्यः । अत्रेतरतीर्थपक्षे भ्रमशब्द आवर्तवचनः । आनन्दतीर्थपक्षे तु मिथ्याज्ञानवचनः । भङ्गरहितमित्यत्रेतरतीर्थपक्षे भङ्गशब्दस्त-रङ्गवाची । आनन्दतीर्थपक्षे पराभववाची । अजडमित्यत्र तत्पुरुषो द्रष्टव्यः । विमलमित्यत्र पङ्कः पापं च मलशब्दार्थः । विग्रहश्च विगतं मलं यस्मात्तं तथोक्तमिति ।

अतुलमित्यत्र तुलाशब्दः सादृश्यपरः । इतरतीर्थस्य तीर्थान्तरसादृश्यमस्तीति तद्राहित्येनानन्दतीर्थस्य ततोऽपि विशेषः । अत एव च तापत्रयापहमिति विशेषणं युक्तम् । तापत्रयमाध्यात्मिकादित्रयमपहन्तीति विग्रहः ।। ३ ।।

**ಅಭ್ರಮಂ ಭಂಗರಹಿತಮಜಡಂ ವಿಮಲಂ ಸದಾ ।**
**ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಮ್ ॥ 3 ॥**

ತಾಪತ್ರಯ ಪೀಡಿತನಾದ ಮಾನವನಿಗೆ ಜಡವಾದ ಗಂಗಾದಿ ಮಹಾತೀರ್ಥವೂ ಕೂಡ ಆಧ್ಯಾತ್ಮಿಕ ಆಧಿಭೌತಿಕ ಆಧಿದೈವಿಕವೆಂದು ಮೂರು ಬಗೆಯಾದ ಎಲ್ಲ ತಾಪಗಳನ್ನೂ ಪರಿಹರಿಸಲಾರವು. ಆನಂದತೀರ್ಥರೆಂಬ ತೀರ್ಥ ಎಲ್ಲ ತಾಪಕ್ಕೂ ಸದಾ ಪರಿಹಾರಕ. 'ತಾಪತ್ರಯಾಪಹ' ಏಕೆಂದರೆ ಆನಂದತೀರ್ಥರಲ್ಲಿ ಭ್ರಮ, ಅನ್ಯಥಾಜ್ಞಾನವಿಲ್ಲ. ಭಂಗ, ದುರ್ವಾದಿಗಳಿಂದ ಪರಾಜಯವಿಲ್ಲ. ಅವರು 'ಜಡ'ರಲ್ಲ, ಅಜ್ಞಾನಿಗಳಲ್ಲ. ಮಲ, ಪಾಪವೆಂಬ ಮಲವಿಲ್ಲದವರು. ಹೀಗಾಗಿ ಸದಾ ಅತುಲ, ಅಸದೃಶವಾದ ಮಹಾತೀರ್ಥವು ಆನಂದತೀರ್ಥರೆ. ಮಹಾತೀರ್ಥದಲ್ಲಿ ಭ್ರಮ, ಸುಳಿ ಇರುತ್ತದೆ. ಭಂಗ, ತೆರೆಗಳಿರುತ್ತವೆ. ಜಡ, ಲಡಯೋರಭೇದಃ, ಜಲರೂಪವಾಗಿದೆ. 'ಮಲ'ರಾಡಿ, ಮಳೆಗಾಲದಲ್ಲಿರುತ್ತದೆ. ಹೀಗೆ, ಅಜ್ಞಾನಾದಿ ದೋಷರಹಿತರಾಗಿದ್ದು ಪರಮಾಪ್ತರಾದ ಆನಂದತೀರ್ಥರನ್ನು ನಾನು ಸದಾ ಸೇವಿಸುತ್ತೇನೆ.

❖❖❖

**चित्रैः पदैश्च गम्भीरैर्वाक्यैर्मानैरखण्डितैः ।**
**गुरुभावं व्यञ्जयन्ती भाति श्रीजयतीर्थवाक् ।। ४ ।।**

नन्वाचार्यवाचामतीव गम्भीरत्वाद्यथावदर्थावगतौ तदनुसारि ग्रन्थ करणोपयुक्त-मङ्गलानुष्ठानं युक्तम् । नहि तावन्मात्रमेव ग्रन्थकरणसामग्री । यथावदर्थावगमं विना तन्निर्वाहायोगादित्यत आह **चित्रैरिति** ।। चित्रैर्व्याकरणसंस्कृतैर्नानाविधैः स्वभावत एव मत्तमरालवन्नानाविधैश्च पदैः सुप्तिङन्तलक्षणशब्दविशेषैश्चरणविन्यासविशेषैश्च वाक्यैः आकाङ्क्षादिमत्पदकदम्बकैः रहःकृतसंकेतोपस्थापक वचनविशेषैश्च । मानैः प्रत्यक्षादि प्रमाणैरीर्ष्यापूर्वकाभिमानैश्च । अखण्डितैः कुयुक्ति पांसुभिरशक्याच्छादनैः स्वप्रतिज्ञानुसारेण प्रणिपात पर्यन्त व्यापारापादकैश्चेति मानविशेषणम् । गुरुभावमाचार्याभिप्रायमात्मनो महत्त्वं च व्यञ्जयन्ती स्फोरयन्ती श्रीजयतीर्थवाक्

श्रिया जयलक्ष्म्या युक्तो यो जयतीर्थः आचार्यग्रन्थटीकाकारो जयतीर्थनामा मुनिस्तस्य वाक् न्यायसुधादिरूपो ग्रन्थविशेषः । ममेति शेषः । भाति स्फुरति । अत्राप्रस्तुतरमण्याः गम्यमानत्वात् समासोक्तिरलंकारः ।

तथाचोक्तैरेतादृशोपायैः साभिप्रायाचार्यग्रन्थार्थस्फोरकैः न्यायसुधादिरूपैरवगत-तदर्थस्य मम तदनुसारिग्रन्थकरणोपयुक्तमङ्गलानुष्ठानं नायुक्तमिति भावः ।

अनेन जयतीर्थनाम्नो मुनेः मद्देशिकस्य व्यासमुनेश्च पदवाक्यप्रमाणाभिज्ञत्वं विभावितम् ।

अत्र यद्यपि पदस्य वाक्यस्य च वाक्यत्वेनाभेदात् न तयोर्वाचो गुरुभावव्यञ्जकत्वे साधनत्वं युक्तम् । एक क्रियायामेकस्यैव कर्तृत्वसाधनत्वयोरयोगात् । तथापि वाक्शब्दार्थभूतस्य न्यायसुधादिग्रन्थविशेषस्य पदवाक्यसमुदायरूपत्वात् समुदाय-समुदायिनोश्च भेदात् तस्य तयोश्च कर्तृत्वेन साधनत्वेन चोपादानं युक्तमिति बोध्यम् ।। ४ ।।

**ಚಿತ್ರೈಃ ಪದೈಶ್ಚ ಗಂಭೀರೈರ್ವಾಕ್ಯೈರ್ಮಾನೈರಖಂಡಿತೈಃ ।**
**ಗುರುಭಾವಂ ವ್ಯಂಜಯಂತೀ ಭಾತಿ ಶ್ರೀಜಯತೀರ್ಥವಾಕ್ ॥ 4 ॥**

ಜಯತೀರ್ಥರ ಟೀಕೆ ಎಂದರೆ ನಾಯಕವಾದ ಸರ್ವಮೂಲಕ್ಕೆ ಮೆಚ್ಚಿನ ನಾಯಕಿಯಂತಿದೆ. ಏಕೆಂದರೆ, 'ಪದ' ನಾಯಕನ ಬಳಿಗೆ ನಡೆಯುವ ನಾಯಿಕೆಯ ಕಾಲನಡಿಗೆ, 'ಚಿತ್ರ' ಮದಿಸಿದ ಹೆಣ್ಣು ಹಂಸಪಕ್ಷಿಯ ನಡೆಯಂತೆ ಸುಂದರವಾಗಿರುತ್ತದೆ. ಆವಳ 'ವಾಕ್ಯ'ವು ನುಡಿಯು, 'ಗಂಭೀರ' ಅರ್ಥಗರ್ಭಿತ, ಸಮಾಗಮ ಯೋಗ್ಯವಾದ ಏಕಾಂತ ಸ್ಥಳದ ಸೂಚನೆ ಅದರಲ್ಲಿ ತುಂಬಿರುತ್ತದೆ. ಆವಳ 'ಮಾನ' ತಾನು ಪ್ರೇಯಸಿ ಎಂಬ ಗರ್ವ, 'ಅಖಂಡಿತ' ನಾಯಕ ಕಾಲಿಗೆ ಬೀಳುವವರೆಗೂ ತಾನು ಸೋತು ವಶಕ್ಕೆ ಬರಲಾರಳು. ನಾಯಿಕೆಯ ಈ ನಡೆ ನುಡಿ ದರ್ಪಗಳೆಲ್ಲವೂ ಜಯತೀರ್ಥರ ಟೀಕೆಯಲ್ಲಿ ಇವೆ. ಏಕೆಂದರೆ 'ಪದ' ಶಬ್ದಪ್ರಯೋಗವು 'ಚಿತ್ರ' ನಾನಾ ಬಗೆಯಾಗಿದ್ದು ವ್ಯಾಕರಣ ಶುದ್ಧವಾಗಿ ಸಾಧುವಾಗಿ ಇರುತ್ತದೆ. 'ವಾಕ್ಯ' ವಾಕ್ಯ ಪ್ರಯೋಗವು 'ಗಂಭೀರ' ಬಹ್ವರ್ಥಗರ್ಭಿತ. 'ಮಾನ' ಸಾಧಕವಾಗಿ ಅವರು ನೀಡುವ ಪ್ರಮಾಣಗಳು ಎಲ್ಲವೂ ಪ್ರತಿವಾದಿಗಳಿಂದ 'ಅಖಂಡಿತ' ಖಂಡಿಸಲಾಗದಂಥವು. ನಾಯಿಕೆ ತನ್ನ ನಡೆನುಡಿ ದರ್ಪಗಳಿಂದ ತನ್ನ 'ಗುರುಭಾವ'ವನ್ನು ಗಾಢವಾದ ಪ್ರಣಯ ಭಾವವನ್ನು ವ್ಯಕ್ತಪಡಿಸುವಂತೆ, ಟೀಕೆಯೂ 'ಗುರುಭಾವ'ವನ್ನು ಗುರು ಶ್ರೀಮಧ್ವರ ಭಾವವನ್ನು ವ್ಯಕ್ತಪಡಿಸುತ್ತದೆ.

ಶ್ಲೇಷೆಯಿಂದ ಸಾಮ್ಯವನ್ನು ಹೇಳುತ್ತಿರುವುದರಿಂದ ಇಲ್ಲಿ ಅನೌಚಿತ್ಯವಿಲ್ಲ. ರಸಭಂಗವಿಲ್ಲ. ಅಪ್ರಸ್ತುತ ನಾಯಿಕಾವೃತ್ತಾಂತವು ಇಲ್ಲಿ ಧ್ವನಿತವಾಗುವುದರಿಂದ ಸಮಾಸೋಕ್ತಿ ಅಲಂಕಾರವೇ ಇದೆ.

ಹೀಗೆ ಶ್ರೀಮದಾಚಾರ್ಯರ ನಿಗೂಢ ಅಭಿಪ್ರಾಯಗಳನ್ನೂ ಪ್ರಾಮಾಣಿಕವಾಗಿ ಸಮರ್ಥವಾಗಿ ಹೊರಗೆ ಪ್ರಕಾಶಪಡಿಸಬಲ್ಲ ನ್ಯಾಯಸುಧಾ ಗ್ರಂಥಗಳಿಂದಲೇ ಶ್ರೀವ್ಯಾಸರಾಜರು ತಾವು ಎಲ್ಲವನ್ನೂ ತಿಳಿದವರಾದ್ದರಿಂದ ಅವುಗಳಿಗೆ ಅನುಸಾರವಾಗಿಯೇ ಗ್ರಂಥರಚನೆ ಮಾಡುವವರು ತಾವು, ಅದಕ್ಕಾಗಿ ಅದಕ್ಕೆ ಉಚಿತವಾದ ಮಂಗಳಾಚರಣ ಮಾಡುತ್ತಿದ್ದೇವೆ ಎಂದು ಸೂಚಿಸುತ್ತಾರೆ. ಮತ್ತು ಪದ ವಾಕ್ಯ ಪ್ರಮಾಣ ಪಾರಾವಾರ ಪಾರೀಣರು ತಾವಿಬ್ಬರೂ ಗುರುಶಿಷ್ಯರುಗಳು ಎಂಬುದನ್ನೂ ಪರ್ಯಾಯವಾಗಿ ತಿಳಿಸುತ್ತಾರೆ. ಶ್ರೀಯುಕ್ತರು, ಜಯಲಕ್ಷ್ಮೀ ಯುಕ್ತರು ಶ್ರೀಜಯತೀರ್ಥರೆಂದೂ ಹೊಗಳುತ್ತಾರೆ.

❖❖❖

**समुत्सार्य तमःस्तोमं सन्मार्गं संप्रकाश्य च ।**
**सदा विष्णुपदासक्तं सेवे ब्रह्मण्यभास्करम्** ॥ ५ ॥

अभिवादनशीलस्य नित्यं वृद्धोपसेविनः ।
चत्वारि तस्य वर्धन्ते आयुः प्रज्ञा यशो बलम् ॥

इति स्मरणात् तत्प्रतिपन्नफलस्य प्रकृतकर्मण्यवश्यापेक्षितत्वात् तस्य वृद्धसेवां विनाऽसम्भवात् वृद्धेष्वपि ज्ञानवृद्धस्यैवाभ्यर्हितत्वात् स्वसेव्यब्रह्मण्यमुनेर्गुरुत्वोपयोगि तादृग्वृद्धत्वं स्फोरयन् तं भास्करत्वेन रूपयन् सेवते **समुत्सार्येति** । अत्र तमःशब्देनाज्ञानान्धकारौ विवक्षितौ । तयोरुभयोरपि प्रकाशशब्दार्थभूतज्ञाना-लोकविरुद्धत्वात् सन्मार्गशब्देन गतिमुक्त्युपायौ विवक्षितौ । तयोश्च सत्त्वं गतिज्ञानप्रतिबन्धककण्टकाद्यवरुद्धत्वासदाचार्योपदिष्टत्व राहित्यम् । संप्रकाश्येत्यत्र प्रकाशशब्देन ज्ञानालोकौ । ज्ञानं जनयित्वा मार्गज्ञानोपायालोकं तत्र प्रसार्य चेत्यर्थः । सदा विष्णुपदासक्तत्वकथनात् प्रसिद्धभास्करस्य तन्नेति विभावितम् । सदेत्यस्य सेवे इत्यनेनापि सम्बन्धः । सदा विष्णुपदासक्तमित्यनेन ब्रह्मण्यभास्करस्य सदा सेव्यत्वे प्रयोजकमुक्तमिति द्रष्टव्यम् ॥ ५ ॥

**ಸಮುತ್ಸಾರ್ಯ ತಮಃಸ್ತೋಮಂ ಸನ್ಮಾರ್ಗಂ ಸಂಪ್ರಕಾಶ್ಯ ಚ ।**
**ಸದಾ ವಿಷ್ಣುಪದಾಸಕ್ತಂ ಸೇವೇ ಬ್ರಹ್ಮಣ್ಯಭಾಸ್ಕರಮ್ ॥ 5 ॥**

ನನ್ನ ಆಶ್ರಮ ಗುರು ಶ್ರೀಬ್ರಹ್ಮಣ್ಯತೀರ್ಥರು ಸೂರ್ಯನಂತೆ ಬೆಳಗುತ್ತಾರೆ. ಅಜ್ಞಾನದ ಕತ್ತಲನ್ನು ಓಡಿಸುತ್ತಾರೆ. ಸೂರ್ಯನು ಜನರಿಗೆ ಸಂಚಾರಮಾರ್ಗವನ್ನು ತೋರಿಸುವಂತೆ, ಇವರೂ ಸಜ್ಜನರಿಗೆ ಮೋಕ್ಷಮಾರ್ಗವನ್ನು ತೋರಿಸುತ್ತಾರೆ. ಸೂರ್ಯನು 'ವಿಷ್ಣುಪದ'ವನ್ನೇ ಆಕಾಶವನ್ನೇ ಆಶ್ರಯಿಸುವಂತೆ ಇವರೂ ವಿಷ್ಣುಪದವನ್ನೇ ಸದಾ ವಿಷ್ಣುವಿನ ಪಾದವನ್ನೇ ಆಶ್ರಯಿಸಿರುತ್ತಾರೆ. ಇಂಥ ಗುರುಗಳನ್ನು ನಾನೂ ಸದಾ ಸೇವಿಸುತ್ತೇನೆ.

❖❖❖

**ज्ञानवैराग्यभक्त्यादिकल्याणगुणशालिनः ।**
**लक्ष्मीनारायणमुनीन् वन्दे विद्यागुरून्मम ॥ ६ ॥**

यस्य देवे परा भक्तिरिति श्रुतेर्गुरुतम गुरुतर गुरुक्रमेण तद्वन्दनस्य महाफलहेतुत्वं निश्चिन्वन् गुरुत्वप्रयोजकधर्मपुरस्कारेणेदानीं विद्यागुरून् वन्दते **ज्ञानवैराग्येति** ।। ज्ञानवैराग्यादीनां कल्याणत्वं मुक्त्युपायत्वादिकं द्रष्टव्यम् । अत्रादिशब्देन निरुपाधिकपरदुःखप्रहाणेच्छारूप दयादयो ग्राह्याः । शालिन इति मत्वर्थीयः प्रत्ययः । लक्ष्मीनारायणमुनीनित्यत्र लक्ष्मीनारायणे ये मुनयः लक्ष्मीनारायणाख्या मुनयश्च लक्ष्मीनारायणमुनय इति विगृह्य एकशेषः । तथाचायमर्थः । लक्ष्मीनारायणे लक्ष्मीविशिष्टनारायणे ये मननशीलास्तान् लक्ष्मीनारायणाख्यान् मुनीनिति । अनेन पूर्वविशेषणोपात्तज्ञानभक्त्योः लक्ष्मीनारायणविषयत्वं सूचितम् । यद्विषयं मननं तेन तद्विषयज्ञानस्यैव संपादनसामर्थ्यात् । यत्र ज्ञानं तत्रैव विषये भक्तेः सम्भवादिति ।। ६ ।।

**ಜ್ಞಾನವೈರಾಗ್ಯಭಕ್ತ್ಯಾದಿ ಕಲ್ಯಾಣಗುಣಶಾಲಿನಃ ।**
**ಲಕ್ಷ್ಮೀನಾರಾಯಣಮುನೀನ್ ವಂದೇ ವಿದ್ಯಾಗುರೂನ್ಮಮ ॥ 6 ॥**

ನನ್ನ ವಿದ್ಯಾಗುರು ಶ್ರೀಶ್ರೀಪಾದರಾಜರು ಜ್ಞಾನ ವೈರಾಗ್ಯ ಭಕ್ತ್ಯಾದಿ ಕಲ್ಯಾಣ ಗುಣಶಾಲಿಗಳು. ಲಕ್ಷ್ಮೀನಾರಾಯಣರನ್ನು ಸದಾ ಮನನ ಮಾಡುವವರು. ಆದರಿಂದ 'ಲಕ್ಷ್ಮೀನಾರಾಯಣ ಮುನಿ'ಗಳೆಂಬ ತಮ್ಮ ನಾಮವನ್ನು ಸಾರ್ಥಕಪಡಿಸಿಕೊಂಡವರು. ಅವರನ್ನು ವಂದಿಸುತ್ತೇನೆ.

❖❖❖

**श्रीमध्वशास्त्रदुग्धाब्धिं धीमन्दरमहीभृता ।**
**आमथ्योद्ध्रियते न्यायामृतं विबुधतृप्तये ॥ ७ ॥**

प्रेक्षावदुपादेयताप्रयोजकप्रामाणिकशास्त्रमूलत्वं स्वग्रन्थस्य प्रतिपादयन् संज्ञाविशेषकरणे निमित्तममृतसादृश्यं च प्रतिपादयन् तत्संज्ञोक्तिपूर्वकं शिष्यमनःसमाधानाय स्वचिकीर्षितं प्रतिजानीते **श्रीमध्वशास्त्रेति** ॥ अत्र श्रीशब्देन वेदत्रयं गृह्यते । ''ऋचः सामानि यजूंषि सा हि श्रीरमृता सतामिति'' श्रुतेः । तथाच श्रिया युक्तं मध्वशास्त्रं श्रीमध्वशास्त्रमिति मध्वशास्त्रं श्रीयुक्तत्वेन विशिंषता मध्वशास्त्रस्य ऋग्यजुःसामवेदमूलकत्वसूचनात् तच्छास्त्रप्रतिपादितार्थानां परम-प्रामाणिकत्वं सूचितम् ।

अनेन स्वग्रन्थस्य मध्वशास्त्रमूलत्वोक्त्या तस्य ये विषयप्रयोजने ये च तत्राधिकारिणः ते एव विषयप्रयोजने त एवाधिकारिण इति सूचनात् तद्वत्त्वरूपप्रेक्षावदुपादेयतालक्षणारम्भणीयताप्रयोजकं रूपं सूचितमिति द्रष्टव्यम् ।

अत्र मध्वशास्त्रस्य दुग्धाब्धित्ववर्णनेन धियो मन्दरत्ववर्णनेन स्वग्रन्थस्या-मृतत्ववर्णनेन श्रोतॄणां विशेषेण बुध्यन्त इति विबुधा इति व्युत्पत्त्या विबुधत्वप्रतिपादनेन च मध्वशास्त्रदुग्धाब्धेर्न्यायामृतोद्धर्तुर्दुग्धाब्धेर्मन्दरपर्वतेनामथ्य विबुधतृप्तये अमृतोद्धर्त्रा नारायणेन स्फुटसादृश्यज्ञापनात् तदधीनचेष्टकत्वाच्च तत्प्रतिबिम्बत्वं सूचितमिति बोध्यम् । अत्रामथ्येत्यस्यालोड्य विचार्य सम्यङ्मथित्वेति चार्थः ॥ ७ ॥

**ಶ್ರೀಮಧ್ವಶಾಸ್ತ್ರದುಗ್ಧಾಬ್ಧಿಂ ಧೀಮಂದರಮಹೀಭೃತಾ ।**
**ಆಮಥ್ಯೋದ್ಧ್ರಿಯತೇ ನ್ಯಾಯಾಮೃತಂ ವಿಬುಧತೃಪ್ತಯೇ ॥ 7 ॥**

ನಾರಾಯಣನು ವಿಬುಧರ ದೇವತೆಗಳ ತೃಪ್ತಿಗಾಗಿ ಕ್ಷೀರಸಾಗರವನ್ನು ಮಂದರಪರ್ವತದಿಂದ ಚೆನ್ನಾಗಿ ಕಡೆದು ಅಮೃತ ನೀಡಿದಂತೆ ನಾನು ವಿ-ಬುಧರ ವಿಶೇಷ ಅಧ್ಯಯನ ಮಾಡುವವರ ತೃಪ್ತಿಗಾಗಿ ಶ್ರೀಮಧ್ವಶಾಸ್ತ್ರವೆಂಬ ಕ್ಷೀರಸಾಗರವನ್ನು ನನ್ನ ಬುದ್ಧಿ ಎಂಬ ಮಂದರದಿಂದ ಚೆನ್ನಾಗಿ ಮಥನಮಾಡಿ ನ್ಯಾಯಾಮೃತವೆಂಬ ಅಮೃತವನ್ನು ಎತ್ತಿಕೊಡುತ್ತಿದ್ದೇನೆ.

'ಶ್ರೀಮಧ್ವಶಾಸ್ತ್ರ'ವೆಂದು ಶ್ರೀಶಬ್ದವು 'ಋಚಃ ಸಾಮಾನಿ ಯಜೂಂಷಿ ಸಾ ಹಿ ಶ್ರೀರಮೃತಾ

ಸತಾಂ' ಎಂಬ ಶ್ರುತಿಯಂತೆ 'ಮೂರು ವೇದಗಳ ಸಾರವೇ ಮಧ್ವಶಾಸ್ತ್ರ' ಎನ್ನುತ್ತಿದೆ. ಮಧ್ವಶಾಸ್ತ್ರ ಪರಮಪ್ರಾಮಾಣಿಕವೆಂದು ಸೂಚಿಸುತ್ತಿದೆ. ಇಂಥ ಮಧ್ವಶಾಸ್ತ್ರ ಮೂಲಕವಾಗಿರುವ ನನ್ನ ಈ ನ್ಯಾಯಾಮೃತಗ್ರಂಥವು ಆದರಣೀಯವಾಗಿದೆ ಎಂದೂ ಸೂಚಿಸುತ್ತದೆ.

ತನ್ನನ್ನು ನಾರಾಯಣನಿಗೆ, ತನ್ನ ಬುದ್ಧಿಯನ್ನು ಮಂದರಕ್ಕೆ ತನ್ನ ಮಧ್ವಶಾಸ್ತ್ರ ಮಥನವನ್ನು ಸಮುದ್ರಮಥನಕ್ಕೆ ತನ್ನ ನ್ಯಾಯಾಮೃತಗ್ರಂಥವನ್ನು ಅಮೃತಕ್ಕೆ ಹೋಲಿಸುವ ಪರಂಪರಿತ ರೂಪಕ ಚಿತ್ರಣದಿಂದ ತದಧೀನ ತತ್ಸದೃಶತ್ವರೂಪ ಪ್ರತಿಬಿಂಬತ್ವವನ್ನು ಇಲ್ಲಿ ಧ್ವನಿಸುತ್ತಿದ್ದಾರೆ ಶ್ರೀವ್ಯಾಸರಾಜರು.

❖❖❖

**विक्षिप्तसङ्ग्रहात् क्वापि क्वाप्युक्तस्योपपादनात् ।**
**अनुक्तकथनात् क्वापि सफलोऽयं श्रमो मम ॥ ८ ॥**

ननु प्रसिद्धेषु प्राचीनप्रबन्धेष्वेवैतद्ग्रन्थप्रतिपाद्यार्थस्य प्रतिपादनात् तैरेव कृतकार्योऽसौ न्यायामृतग्रन्थो विफलत्वान्नारम्भणीय इत्याशङ्क्याह **विक्षिप्तेति ।** क्वापि प्राचीनग्रन्थेषु विक्षिप्तानां भिन्नभिन्नप्रदेशेषु प्रतिपादितानामर्थानां संग्रहात् राशीकृत्य निरूपणात्, क्वापि प्राचीनग्रन्थेषु स्वरूपेणोक्तस्यानुपपादितस्योपपादनात् उपपत्तिपूर्वकनिरूपणात् । उक्तस्येत्येकवचनमविवक्षितार्थम् । अत्रेव तत्र बहूनां सिद्धान्त्यभिप्रेतानामप्यर्थानामनुपपादनात्, क्वापि च तेष्वनुक्तानामपि कथनाच्चायं श्रमः न्यायामृताख्य नूतन ग्रन्थ निर्माण प्रयासः सफल इति ।

नचानुक्त कथनादित्ययुक्तं, पूर्वाचार्यैः प्राचीनप्रबन्धेषु कथनीयस्य सर्वस्याप्यर्थस्य कथनात् । अन्यथा तत्र तेषामज्ञानप्रतिपादनं पर्यवसितं स्यादिति वाच्यम् । ज्ञानिनामप्युक्ति वैमुख्यदर्शनात् । तदभावेऽपि ज्ञातस्य सर्वस्योक्ति-नियमाभावाच्च । अस्मदादिष्वपि ज्ञातसर्वार्थानुक्तेरनुभवसिद्धत्वाच्च । अन्यथा तस्य तदज्ञातप्रतिपादनपरत्वे अज्ञातकथनात् क्वापीत्येव ब्रूयात् । तस्माद्यत्किञ्चिदेवैतत् ॥ ८ ॥

**ವಿಕ್ಷಿಪ್ತಸಂಗ್ರಹಾತ್ ಕ್ವಾಪಿ ಕ್ವಾಪ್ಯುಕ್ತಸ್ಯೋಪಪಾದನಾತ್ ।**
**ಅನುಕ್ತಕಥನಾತ್ ಕ್ವಾಪಿ ಸಫಲೋಽಯಂ ಶ್ರಮೋ ಮಮ ॥ 8 ॥**

ಶ್ರೀಮಧ್ವಶಾಸ್ತ್ರವೆಂಬ ಕ್ಷೀರಸಾಗರವನ್ನು ತಮ್ಮ ಬುದ್ಧಿಮಂದರದಿಂದ ಚೆನ್ನಾಗಿ ಮಥನಮಾಡಿ ಅದರ ಅಮೃತವನ್ನು ಹಿಂದಿನವರು ಕೊಟ್ಟೇ ಇದ್ದಾರೆ. ಆದರೂ ಅವರು ಅದನ್ನು ವಿಕ್ಷಿಪ್ತವಾಗಿ ಅಲ್ಲಲ್ಲಿ

ಹೇಳಿದ್ದಾರೆ. ನಾನು ಅದೆಲ್ಲವನ್ನೂ ಒಂದೆಡೆ ಸೇರಿಸಿ ಈ ಗ್ರಂಥದಲ್ಲಿ ಹೇಳುತ್ತಿದ್ದೇನೆ. ಕೆಲವೆಡೆ ಅವರು ಹೇಳಿದ್ದಕ್ಕೇ ಸಮರ್ಥನೆಯನ್ನು ನಾನು ನೀಡುತ್ತಿದ್ದೇನೆ. ಕೆಲವೆಡ ಅವರು ಹೇಳದೆ ಬಿಟ್ಟಿದ್ದನ್ನೂ ಹೇಳುತ್ತೇನೆ. ಓೀಗೆಂದ ಮಾತ್ರಕ್ಕೆ ಅವರು ತಿಳಿಯದಿದ್ದುದನ್ನು ನಾನು ತಿಳಿದೆನೆಂದರ್ಥವಲ್ಲ. ಅವರಿಗೆ ತಿಳಿದೇ ಇದೆ. ಆದರೆ ಹೇಳುವ ಇಚ್ಛೆ ಅವರಿಗೆ ಇಲ್ಲದಿರುತ್ತನೆ. ಇಚ್ಛೆ ಇದ್ದರೂ ಎಲ್ಲವನ್ನೂ ಹೇಳುವ ನಿಯಮಪಿರುವುದಿಲ್ಲ.

ನಾವೂ ಹಾಗೇ ಎಲ್ಲವನ್ನೂ ಹೇಳುವುದಿಲ್ಲ. ಅವರು ತಿಳಿದೂ ಕೂಡ ಹೇಳದೆ ಬಿಟ್ಟಿದ್ದನ್ನು ನಾನು ಹೇಳುತ್ತಿದ್ದೇನೆ. ಅವರಿಗೆ ತಿಳಿದೇ ಇಲ್ಲ ಅದನ್ನು ನಾನು ಹೇಳುತ್ತಿದ್ದೇನೆ ಎಂಬ ಅಭಿಪ್ರಾಯವೇ ಇರುತ್ತಿದ್ದರೆ 'ಕ್ವಾಪಿಅಜ್ಞಾತ ಕಥನಾತ್' 'ಕೆಲವೆಡೆ ಅವರಿಗೆ ತಿಳಿಯದಿದ್ದುದನ್ನು ನಾನು ಹೇಳುತ್ತೇನೆ!' ಎನ್ನಬೇಕಾಗಿತ್ತು . 'ಅನುಕ್ತಕಥನಾತ್' ಅವರು 'ಹೇಳದೆ ಬಿಟ್ಟಿದ್ದನ್ನು ಹೇಳುತ್ತಿದ್ದೇನೆ' ಎಂದಲ್ಲ. ಹೀಗಾಗಿ ಇದೊಂದು ದೊಡ್ಡ ಸಮಸ್ಯೆಯೆ ಅಲ್ಲ. ಆದರಿಂದ ನನ್ನ ಈ ಶ್ರಮ ಸಾರ್ಥಕವೆನಿಸುತ್ತದೆ ವ್ಯರ್ಥವಾಗುವುದಿಲ್ಲ.

❖❖❖

# 03. विप्रतिपत्तिविचारः

**न्यायामृतम्—ननु मिथ्यैव विश्वम् ।**

**आमोदः—**प्रसङ्गादशेषविश्वस्य सत्यत्वं स्थापयितुं तद्विरोध्यर्थमुपक्षिपति— **ननु मिथ्यैव विश्वमिति** ।। आक्षेपिक्येवात्र संगतिरित्यप्याहुः ।

❖❖❖

## ವಿಪ್ರತಿಪತ್ತಿವಿಚಾರ

**ನ್ಯಾಯಾಮೃತ—** ನನು ಮಿಥ್ಯೈವ ವಿಶ್ವಂ ।

**ಆಮೋದ—** 'ವಿಘ್ನೌಘ ವಾರಣಂ ಸತ್ಯಾಶೇಷ ವಿಶ್ವಸ್ಯ ಕಾರಣಂ' 'ಸತ್ಯವಾದ ಸಮಸ್ತ ವಿಶ್ವಕ್ಕೆ ಕಾರಣನು ಶ್ರೀಹರಿ' ಎಂಬ ಎರಡನೆ ಮಂಗಳಾಚರಣ ಶ್ಲೋಕದಲ್ಲಿ ವಿಶ್ವಸತ್ಯತ್ವವನ್ನು ಹೇಳುವಾಗ ಅದ್ವೈತಿಗಳು ಹೇಳುವ ವಿಶ್ವಮಿಥ್ಯಾತ್ವವು ಸ್ಮೃತವಾಯಿತು. ಆದರಿಂದ ಸ್ಮೃತಸ್ಯ ಉಪೇಕ್ಷಾನರ್ಹತ್ವ ರೂಪ ಪ್ರಸಂಗ ಸಂಗತಿಯಿಂದ ವಿಶ್ವಮಿಥ್ಯಾತ್ವಪೂರ್ವಪಕ್ಷವನ್ನು ಉಪಸ್ಥಾಪನ ಮಾಡುತ್ತಿದ್ದಾರೆ. ಅದು ವಿಶ್ವಸತ್ಯತ್ವ ಸ್ಥಾಪನ ಮಾಡುವುದಕ್ಕಾಗಿ.

ಕೆಲವರು ಇಲ್ಲಿ 'ಸತ್ಯವಾದ ಸಮಸ್ತವಿಶ್ವಕ್ಕೆ ಕಾರಣನು ಶ್ರೀಹರಿ' ಎಂದು ಹೇಳಿದ್ದರ ಮೇಲೆ 'ವಿಶ್ವವು ಸತ್ಯವಲ್ಲ, ಮಿಥ್ಯೆಯೆ' ಎಂದು ಆಕ್ಷೇಪ ಬರುವುದರಿಂದ ಆಕ್ಷೇಪಿಕೀ ಸಂಗತಿಯಿಂದಲೇ ವಿಶ್ವಮಿಥ್ಯಾತ್ವ ಪೂರ್ವಪಕ್ಷ ಉಪಸ್ಥಾಪನ ಮಾಡುತ್ತಾರೆ ಎಂದು ಹೇಳುತ್ತಾರೆ.

(ಕೆಲವರು ಹೀಗೆ ಹೇಳುವುದು ಯದ್ಯಪಿ ತಪ್ಪಲ್ಲ. ಗ್ರಂಥವು ತತ್ವನಿರ್ಣಯದ ಉದ್ದೇಶದಿಂದ ವಾದಪ್ರಕ್ರಿಯಾನುಸಾರ ಹೊರಟಿದೆ. ಗುರುಶಿಷ್ಯರ ನಡುವಿನ ಈ ವಾದದಲ್ಲಿ ಶಿಷ್ಯನು ಅದ್ವೈತಮತವನ್ನು ಮನಸಿನಲ್ಲಿಟ್ಟುಕೊಂಡು ಆಕ್ಷೇಪ ಮಾಡಬಹುದು.

ಆದರೆ, ಗುರುವು 'ಸಮಸ್ತ ವಿಶ್ವವು ಸತ್ಯ' ಎಂದೊಡನೆ, ಶಿಷ್ಯನು 'ಹೌದು, ವಿಶ್ವವು ವ್ಯಾವಹಾರಿಕಸತ್ಯ'ವೆಂದು ಮನಸಿನಲ್ಲಿ ಮಾಡಿ ಕೊಂಡವನು, ಆಕ್ಷೇಪ ಮಾಡಲು ಅವಕಾಶವಿಲ್ಲ. ವಿಶ್ವವು ಪಾರಮಾರ್ಥಿಕಸತ್ಯವೆಂದು ಗುರು ಸ್ಪಷ್ಟ ಹೇಳಿದ್ದರೆ ಆಗ ಆಕ್ಷೇಪಕ್ಕೆ ಅವಕಾಶವಿತ್ತು. ಅದ್ವೈತ ಸಿದ್ಧಿಕಾರನು ಕೂಡ 'ಅದ್ವೈತಸಿದ್ಧಿಯು ದ್ವೈತಮಿಥ್ಯಾತ್ವಸಿದ್ಧಿಪೂರ್ವಕ' ಎಂದಿದ್ದಾನೆ ಹೊರತು 'ದ್ವೈತಿಗಳು ವಿಶ್ವಸತ್ಯತ್ವವನ್ನು ಹೇಳುತ್ತಾರೆ, ಅದು ಸರಿಯಲ್ಲ' ಎಂದು ಆಕ್ಷೇಪ ಮಾಡಿಲ್ಲ. ಈ ಅಸ್ವಾರಸ್ಯವನ್ನು ಆಮೋದದಲ್ಲಿ 'ಇತ್ಯಪ್ಯಾಹುಃ' ಎಂದು ಸೂಚಿಸಿದ್ದಾರೆ.)

❖❖❖

अत्र विशेषणसंगतैवकारेण विशेष्ये विशेषणायोगव्यवच्छेदव्युत्पन्नेन विश्वस्मिन् दैशिक कालिक मिथ्यात्वायोगो व्यवच्छिद्यते । तेन विश्वं मिथ्यैव, नतु किञ्चिदपि क्वचिदपि सत्यमपीत्यर्थः ।

ಪ್ರಪಂಚವು 'ಮಿಥ್ಯೈವ' ಮಿಥ್ಯೆಯೇ ಎಂದು ಪೂರ್ವಪಕ್ಷ.

ಇಲ್ಲಿ 'ಮಿಥ್ಯೈವ' ಮಿಥ್ಯೆಯೇ, ಎಂದು ಏವಕಾರವು ಮಿಥ್ಯಾತ್ವರೂಪ ವಿಶೇಷಣ ಸಂಗತ ವಾದ್ದರಿಂದ ವಿಶೇಷ್ಯದಲ್ಲಿ ವಿಶೇಷಣದ ದೈಶಿಕ ಕಾಲಿಕ ಮಿಥ್ಯಾತ್ವ ಅಯೋಗ ವ್ಯವಚ್ಛೇದ ಮಾಡುತ್ತದೆ; ಯಾವುದೇ ವಸ್ತುವಿನಲ್ಲಿ ಯಾವುದೇ ಕಾಲದಲ್ಲಿ ಮಿಥ್ಯಾತ್ವದ ಅಯೋಗವಿಲ್ಲ, ಸತ್ಯತ್ವವಿಲ್ಲ, ಎನ್ನುತ್ತದೆ.

केचित्तु विश्वत्वस्यापेक्षाबुद्धिविशेषविषयत्वरूपस्य द्वित्वादिवद् व्यासज्य वृत्तितया विश्वपदार्थैकदेशभूते घटादिमात्रे पर्याप्त्यभावाद् विश्वं मिथ्येत्येव प्रतिज्ञायामपि न तदेकदेशे तत्र मिथ्यात्वरूपसाध्यसिद्धिमादाय प्रतिज्ञापर्यवसानम्, किन्तु तत्पर्याप्त्यधिकरण एव । तथा चैवकारस्य प्रयोजनान्तरमन्वेषणीयमिति वदन्ति ।

तन्न । तादृशविश्वत्वस्य ब्रह्मण्यपि सत्वेन तदंशे प्रतिज्ञावाक्यस्य बधितार्थत्वप्रसक्तौ तत्परिहाराय तद्व्यतिरिक्तस्यैव विश्वपदार्थस्य पक्षत्वमिति संकोचस्यावश्यकत्वे 'तथैव किं विश्वपदार्थभूते ततोऽन्यत्रापि संकोचः किं वा नेति' शङ्कानिरसायैव एवकारस्यावश्यकत्वात्। अत एव सत्याशेषविश्वस्य कारणमित्यत्र कारणपदसमभिव्याहारेण हरिव्यतिरिक्तविश्वपरत्वेनेव तदन्यपरत्वेनापि विश्वपदस्य संकुचितार्थत्वप्रसक्तौ तत्परिहारायाशेषपदमुपात्तम् । तथाच मिथ्यैवेति विशेषणसंगतैवकारः ब्रह्ममिथ्यात्वस्य प्रमाणबाधितत्वात् प्रकृते विश्वपदं सत्याशेषविश्वस्य कारणमित्यत्रेव तद्व्यतिरिक्तप्रामाणिकपदार्थमात्रपरमिति ज्ञापनायेति न तस्य प्रयोजनान्तरमन्वेषणीयमिति ।

ಕೆಲವರು ಹೇಳುತ್ತಾರೆ— ವಿಶ್ವತ್ವವು ದ್ವಿತ್ವಾದಿಗಳಂತೆ ಅಪೇಕ್ಷಾಬುದ್ಧಿವಿಶೇಷ ವಿಷಯತ್ವ ರೂಪವಾದ್ದರಿಂದ ವ್ಯಾಸಜ್ಯವೃತ್ತಿ. ಆದರಿಂದ ವಿಶ್ವತ್ವವು 'ವಿಶ್ವ' ಶಬ್ದಾರ್ಥದ ಏಕದೇಶವಾದ ಘಟಾದಿಮಾತ್ರದಲ್ಲಿ ಪರ್ಯಾಪ್ತವಲ್ಲವಾದ್ದರಿಂದ 'ವಿಶ್ವವು ಮಿಥ್ಯಾ' ಎಂದು ಪ್ರತಿಜ್ಞೆ ಮಾಡಿದಾಗ ಏಕದೇಶ ಘಟಾದಿ ಮಾತ್ರದಲ್ಲಿ ಮಿಥ್ಯಾತ್ವರೂಪ ಸಾಧ್ಯಸಿದ್ಧಿ ಇಟ್ಟುಕೊಂಡು ಪ್ರತಿಜ್ಞಾ ಪರ್ಯವಸಾನ ಮಾಡಲಾಗುವುದಿಲ್ಲ. ವಿಶ್ವತ್ವ ಪರ್ಯಾಪ್ತ್ಯಧಿಕರಣದಲ್ಲಿಯೇ ಮಿಥ್ಯಾತ್ವವಿಟ್ಟುಕೊಂಡು ಸಾಧ್ಯ-ಪರ್ಯವಸಾನ ಮಾಡಬೇಕಾಗುತ್ತದೆ. ಯಾವುದಾದರೊಂದು ವಸ್ತುವಿನಲ್ಲಿ ಯಾವುದಾದರೊಂದು

ಕಾಲದಲ್ಲಿ ಅಲ್ಲ. ಸಾರ್ವದೇಶಿಕ ಸಾರ್ವಕಾಲಿಕ ಮಿಥ್ಯಾತ್ವವನ್ನು ಅಂದರೆ ವಿಶ್ವತ್ವ ಪರ್ಯಾಪ್ತ್ಯಧಿಕರಣ ವಾದ ಎಲ್ಲ ವಸ್ತುದೇಶಕಾಲಗಳಲ್ಲಿ ಮಿಥ್ಯಾತ್ವವನ್ನು ಹೇಳಬೇಕಾಗುತ್ತದೆ. ಆದರಿಂದ ದೈಶಿಕ ಕಾಲಿಕ ಮಿಥ್ಯಾತ್ವಾಯೋಗಕ್ಕೆ ಪ್ರಸಕ್ತಿ ಇಲ್ಲ. ಅದನ್ನು ವ್ಯವಚ್ಛೇದ ಮಾಡುವುದು ಸರಿಯಲ್ಲ. ಬೇರೆ ಪ್ರಯೋಜನ ಸಿಗುತ್ತಿಲ್ಲ, ಅನ್ವೇಷಣ ಮಾಡಬೇಕಾಗುತ್ತದೆ. ಅದರಿಂದ ಏವಕಾರ ವ್ಯರ್ಥ'–ಎಂದು ಶಂಕೆ.

ಇದು ಸರಿಯಲ್ಲ. ಅಪೇಕ್ಷಾಬುದ್ಧಿ ವಿಶೇಷ ವಿಷಯತ್ವರೂಪ ವಿಶ್ವತ್ವವು ಬ್ರಹ್ಮನಲ್ಲಿಯೂ ಬರುವುದರಿಂದ 'ವಿಶ್ವಂ ಮಿಥ್ಯಾ' ಎಂಬ ಪ್ರತಿಜ್ಞೆಯು ಬ್ರಹ್ಮಾಂಶದಲ್ಲಿ ಪ್ರಮಾಣಬಾಧಿತವಾಗುತ್ತದೆ. ಅದಕ್ಕೆ ಬ್ರಹ್ಮವ್ಯತಿರಿಕ್ತ ಪದಾರ್ಥದಲ್ಲಿ ಸಂಕೋಚ ಮಾಡುವುದು ಆವಶ್ಯಕ. ಆಗ ಬ್ರಹ್ಮವ್ಯತಿರಿಕ್ತ ದಲ್ಲಿ ಸಂಕೋಚ ಮಾಡಿದಂತೆ ಬೇರೆ ಯಾವುದಾದರೊಂದು ವಸ್ತುವ್ಯತಿರಿಕ್ತ ದಲ್ಲಿಯೂ ಸಂಕೋಚ ಮಾಡಬೇಕೆ ಬೇಡವೆ ಎಂದು ಶಂಕೆ ಬರಬಹುದು. ಅದನ್ನು ನಿರಾಸಮಾಡುವುದಕ್ಕಾಗಿ ಬ್ರಹ್ಮನಂತೆ ಬೇರೆ ಯಾವ ವಸ್ತುವಿನಲ್ಲಿಯೂ ಮಿಥ್ಯಾತ್ವದ ಅಯೋಗವಿಲ್ಲ. ಅದರಿಂದ ಅಲ್ಲಿ ಸಂಕೋಚ ಬೇಡವೆಂದು ತಿಳಿಸಲು ಏವಕಾರ ಬೇಕು.

'ಸತ್ಯಾಶೇಷ ವಿಶ್ವಸ್ಯ ಕಾರಣಂ' ಎಂಬಲ್ಲಿ ಕಾರಣಪದ ಸಮಭಿವ್ಯಾಹಾರ ವಿರುವುದರಿಂದ ವಿಶ್ವಪದಕ್ಕೆ ಹರಿವ್ಯತಿರಿಕ್ತವಾದ ಪದಾರ್ಥದಲ್ಲಿ ಸಂಕೋಚ ಮಾಡಿದಂತೆ ಬೇರೆ ಯಾವುದಾದರೊಂದು ಪದಾರ್ಥವ್ಯತಿರಿಕ್ತವಾಗಿಯೂ ಕೂಡ ಸಂಕೋಚಪ್ರಸಕ್ತಿ ಬರುವುದರಿಂದ ಸಂಕೋಚಶಂಕಾ ಪರಿಹಾರಕ್ಕಾಗಿ ವಿಶ್ವಶಬ್ದವು ಬ್ರಹ್ಮವ್ಯತಿರಿಕ್ತ ಸಮಸ್ತ ಪ್ರಾಮಾಣಿಕ ಪದಾರ್ಥ ಪರವೆಂದು ತಿಳಿಸುವುದಕ್ಕಾಗಿಯೂ ಏವಕಾರ ಬೇಕು. ಆದಕ್ಕೆ ಪ್ರಯೋಜನಾಂತರದ ಅನ್ವೇಷಣ ಮಾಡಬೇಕಿಲ್ಲ.

❖❖❖

## तथाहि तत्र विप्रतिपत्तिः ।

## ब्रह्मप्रमान्येन वा सप्रकारेण वा अबाध्यत्वे सति असद्विलक्षणत्वे सति ब्रह्मान्यत् प्रतिपन्नोपाधौ त्रैकालिकनिषेधप्रतियोगि न वा ।

विचाराङ्गभूतां विप्रतिपत्तिं दर्शयति **तत्रेति** ।। विश्वमिथ्यात्व इत्यर्थः ।। **ब्रह्मेति** ।। नचात्र प्रमेति व्यर्थम् । प्रातिभासिकरजतादेर्नेदं रजतमित्यादिना ब्रह्मज्ञानान्येनैव बाध्यतया तस्य पक्षत्वाप्रसक्त्या तदंशे सिद्धसाधनत्वस्यैवाप्राप्तेरिति वाच्यम् । सर्वप्रत्ययवेद्ये च ब्रह्मरूपे व्यवस्थित इति परेण प्रत्यक्षमात्रस्य ब्रह्मज्ञानत्वाभ्युपगमेन नेदं रजतमित्यादि-बाधकज्ञानस्यापि ब्रह्मज्ञानत्वेन शुक्तिरूप्यादेरपि तदन्यदण्डाद्यनिवर्त्यत्वेन प्रसक्तपक्षत्वनिवृत्त्यर्थं प्रमेत्यस्यावश्यकत्वात् ।

ननु तथापि ब्रह्मवृत्तिधर्मप्रकारकं ज्ञानं चेद् ब्रह्मप्रमा तदा बाधस्यापि क्वचित्तथात्वात् प्रातिभासिकविशेषांशे सिद्धसाधनतादवस्थ्यम् । ब्रह्ममात्रवृत्तिधर्मप्रकारकज्ञानं चेद् ब्रह्मप्रमापदेन विवक्षितं तदा ब्रह्ममात्रवृत्तित्वं हि ब्रह्मेतरावृत्तित्वे सति तद्वृत्तित्वमिति स्यात् । तथाच तद्वृत्तित्वमधिकम् ।

न च तदपि विवक्षितं । तथाच ब्रह्मेतरावृत्तिधर्मप्रकारकज्ञानान्य चरमवृत्ति बाध्यत्वस्य पक्षे सत्वेन तदबाध्यत्वस्यासिद्धतयाऽऽश्रयासिद्धेः। निरुक्तपक्षतावच्छेदकशरीरप्रविष्टसप्रकारकाबाध्यत्वस्यैव तदवच्छेदकत्वसमर्थत्वेन पूर्वदलवैयर्थ्याच्च । किञ्चैवमतीत घटादेरपक्षत्वप्रसङ्गः। तस्य ब्रह्मेतरावृत्तिधर्भप्रकारकान्य निष्प्रकारक दण्डादि निवर्त्यत्वादिति चेन्न ।

## ವಿಪ್ರತಿಪತ್ತಿ ಪ್ರದರ್ಶನ

**ತಥಾಹಿ ತತ್ರ ವಿಪ್ರತಿಪತ್ತಿಃ।**

**ಬ್ರಹ್ಮಪ್ರಮಾನ್ಯೇನ ವಾ ಸಪ್ರಕಾರೇಣ ವಾ ಅಬಾಧ್ಯತ್ವೇ ಸತಿ ಅಸದ್‌ವಿಲಕ್ಷಣತ್ವೇ ಸತಿ ಬ್ರಹ್ಮಾನ್ಯತ್, ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧ ಪ್ರತಿಯೋಗಿ, ನ ವಾ ?**

'ತಥಾಹಿ' ವಿಶ್ವಮಿಥ್ಯಾತ್ವಪ್ರತಿಪಾದನ ಕ್ರಮವನ್ನು ಹೇಳುತ್ತೇವೆ.

ವಿಶ್ವಮಿಥ್ಯಾತ್ವವಿಷಯದಲ್ಲಿ ವಿಚಾರಕ್ಕೆ ಅಂಗಭೂತವಾದ ವಿಪ್ರತಿಪತ್ತಿ ಹೀಗೆ—

ಬ್ರಹ್ಮಪ್ರಮಾನ್ಯವಾದ ಜ್ಞಾನದಿಂದ ಅಬಾಧ್ಯವಾಗಿದ್ದು ಅಸದ್ವಿಲಕ್ಷಣವಾದುದು ಮತ್ತು ಬ್ರಹ್ಮವ್ಯತಿರಿಕ್ತವಾದುದು, ಅಥವಾ ಸಪ್ರಕಾರ ಜ್ಞಾನದಿಂದ ಅಬಾಧ್ಯವಾಗಿದ್ದು ಅಸದ್ವಿಲಕ್ಷಣವಾದುದು ಮತ್ತು ಬ್ರಹ್ಮವ್ಯತಿರಿಕ್ತವಾದುದು, ಉಪಾಧಿತ್ವೇನ ಪ್ರತೀತವಾದ ವಸ್ತುವಿನಲ್ಲಿ ಎಲ್ಲ ಕಡೆ ತ್ರೈಕಾಲಿಕ ನಿಷೇಧಕ್ಕೆ ಪ್ರತಿಯೋಗಿಯಾಗುವುದೆ ಇಲ್ಲವೆ?

ಇಲ್ಲಿ ಆಕ್ಷೇಪ— 'ಬ್ರಹ್ಮಪ್ರಮಾನ್ಯದಿಂದ' ಎಂಬಲ್ಲಿ 'ಪ್ರಮಾ' ಶಬ್ದ ವ್ಯರ್ಥ. ಪ್ರಾತಿಭಾಸಿಕವಾದ ಶುಕ್ತಿರಜತವನ್ನು ಪಕ್ಷದಿಂದ ವ್ಯಾವೃತ್ತಿ ಗೊಳಿಸುವುದಕ್ಕೆಂದೇ ಈ ಶಬ್ದವಿದೆ. ಅದನ್ನು ವ್ಯಾವೃತ್ತಿ ಮಾಡದಿದ್ದರೆ, ಅದು ಪಕ್ಷದಲ್ಲಿ ಅಂತರ್ಭಾವ ಹೊಂದಿದ್ದರೆ, ಅದು ಮಿಥ್ಯಾ ಎಂದು ಉಭಯವಾದಿಗಳಿಗೂ ಸಿದ್ಧವಾಗಿರುವುದರಿಂದ ಆ ಅಂಶದಲ್ಲಿ ಸಿದ್ಧಸಾಧನತ್ವ ದೋಷ ಬರುತ್ತದೆ ಎಂದು ತಾನೆ, ಆ ವಿಶೇಷಣವಿದೆ? ಆದರೆ ಪ್ರಾತಿಭಾಸಿಕ ಶುಕ್ತಿರಜತ ವ್ಯಾವೃತ್ತಿಗೆ 'ಬ್ರಹ್ಮಪ್ರಮಾನ್ಯ' ಎನ್ನಬೇಕಿಲ್ಲ. ಬ್ರಹ್ಮಜ್ಞಾನಾನ್ಯ ಎಂದರೆ ಸಾಕು. ಬ್ರಹ್ಮಜ್ಞಾನಾನ್ಯವಾದ 'ನೇದಂ ರಜತಂ' ಎಂಬ ಜ್ಞಾನದಿಂದಲೇ ಶುಕ್ತಿರಜತವು ಬಾಧಿತವಾಗುವುದರಿಂದ ಪಕ್ಷದಲ್ಲಿ ಅದು ಸೇರುವ ಪ್ರಸಕ್ತಿ ಇಲ್ಲ. ತದಂಶದಲ್ಲಿ ಸಿದ್ಧಸಾಧನತ್ವ ದೋಷ ಬರುವುದಿಲ್ಲ' ಎಂದು.

ಈ ಆಕ್ಷೇಪ ಸರಿಯಲ್ಲ. 'ನೇದಂ ರಜತಂ' ಎಂಬ ಜ್ಞಾನವೂ ಬ್ರಹ್ಮಜ್ಞಾನವೆ.

'ಸರ್ವಪ್ರತ್ಯಯ ವೇದ್ಯೇ ಚ ಬ್ರಹ್ಮರೂಪೇ ವ್ಯವಸ್ಥಿತೇ'

ಎಂಬಂತೆ ಎಲ್ಲ ಜ್ಞಾನಗಳಲ್ಲಿ ಧರ್ಮ್ಯಂಶವಾಗಿ ಕಾಣುವುದು ಬ್ರಹ್ಮವೆ ಎಂದು ಅದ್ವೈತ ಮತ. 'ಇದಂ ರಜತಂ ನ' ಎಂದರೆ 'ಇದಮಂಶಾವಚ್ಛಿನ್ನ ಬ್ರಹ್ಮಚೈತನ್ಯವು ರಜತಭಿನ್ನ' ಎಂದರ್ಥ. ಹೀಗಾಗಿ ಈ ಜ್ಞಾನ ಬ್ರಹ್ಮಜ್ಞಾನವೆ. ಬ್ರಹ್ಮಜ್ಞಾನಾನ್ಯವು ದಂಡವೆ. ದಂಡದಿಂದ ಶುಕ್ತಿರಜತ ಬಾಧಿತವಾಗುವುದಿಲ್ಲ. ಅಬಾಧ್ಯವಾದ ಶುಕ್ತಿರಜತವು ಪಕ್ಷದಲ್ಲಿ ಸೇರುತ್ತದೆ. ತದಂಶದಲ್ಲಿ ಅನುಮಾನಕ್ಕೆ ಸಿದ್ಧಸಾಧನತಾದೋಷ. ಅದಕ್ಕೆ 'ಬ್ರಹ್ಮಪ್ರಮಾನ್ಯ' ಎನ್ನಬೇಕು. ಆಗ 'ನೇದಂ ರಜತಂ' ಎಂಬ ಜ್ಞಾನವು ನಿಷ್ಪ್ರಕಾರಕ ಬ್ರಹ್ಮಪ್ರಮಾಕ್ಕಿಂತ ಭಿನ್ನವೇ ಆಗಿದೆ. ಆದರಿಂದ ಬಾಧ್ಯವಾದ ಶುಕ್ತಿರಜತವು ಪಕ್ಷದಲ್ಲಿ ಸೇರುವುದಿಲ್ಲ. ಅಂತೇ ಸಿದ್ಧಸಾಧನದೋಷವಿಲ್ಲ.

ಆದರೆ, ನಿಷ್ಪ್ರಕಾರಕ ಜ್ಞಾನವು ಬ್ರಹ್ಮಪ್ರಮಾನ್ಯವಾಗುತ್ತದೆ. ಏಕೆಂದರೆ 'ಬ್ರಹ್ಮಪ್ರಮಾ' ಎಂದರೇನು? ಬ್ರಹ್ಮವೃತ್ತಿ ಧರ್ಮಪ್ರಕಾರಕ ಜ್ಞಾನ. 'ನೇದಂ ರಜತಂ' ಎಂಬಲ್ಲಿ ಬಾಧಕಜ್ಞಾನದಲ್ಲಿ ಶುಕ್ತಿಯಲ್ಲಿ ಆರೋಪಿತವಾದ ರಜತತ್ವದ ಅಭಾವವು ಕಾಣುತ್ತದೆ. ಅದು ಶುಕ್ತಿಧರ್ಮವಾಗಿರುವಂತೆ ಬ್ರಹ್ಮಧರ್ಮವೂ ಆಗಿದೆ. ಬ್ರಹ್ಮನಲ್ಲಿ ರಜತತ್ವಾಭಾವವಿದೆ. ಹೀಗಾಗಿ ಬ್ರಹ್ಮವೃತ್ತಿ ರಜತತ್ವಾಭಾವ ಪ್ರಕಾರಕವಾದ ಈ ಬಾಧಕಜ್ಞಾನದಿಂದ ಬಾಧ್ಯವಾದ ರಜತತ್ವವು ತದನ್ಯದಿಂದ ಅಬಾಧ್ಯವಾಗಿದ್ದು ಪಕ್ಷದಲ್ಲಿ ಸೇರುವುದರಿಂದ ಸಿದ್ಧಸಾಧನತ್ವವಿದೆ. ಇದನ್ನು ಪರಿಹರಿಸುವುದಕ್ಕೇ 'ಬ್ರಹ್ಮ ಮಾತ್ರವೃತ್ತಿ ಧರ್ಮಪ್ರಕಾರಕ ಜ್ಞಾನಾನ್ಯಾಬಾಧ್ಯ' ಎನ್ನಬೇಕಾಗುತ್ತದೆ. ರಜತತ್ವಾಭಾವವು ಬ್ರಹ್ಮಮಾತ್ರವೃತ್ತಿಯಾದ ಧರ್ಮವಲ್ಲ. ಶುಕ್ತಿವೃತ್ತಿಯೂ ಆಗಿದೆ. ಬ್ರಹ್ಮಮಾತ್ರವೃತ್ತಿ ಧರ್ಮ ಬ್ರಹ್ಮತ್ವ. ತತ್ಪ್ರಕಾರಕ ಜ್ಞಾನವು 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಜ್ಞಾನ. ತದನ್ಯ ಜ್ಞಾನವು 'ನೇದಂ ರಜತಂ' ಎಂಬ ಜ್ಞಾನ. ಆದರಿಂದ ಬಾಧ್ಯವೇ ಆಗಿದೆ ರಜತತ್ವ. ಹೀಗಾಗಿ ಅದು ಪಕ್ಷದಲ್ಲಿ ಸೇರುವುದಿಲ್ಲ. ಸಿದ್ಧಸಾಧನದೋಷವಿಲ್ಲ.

ಆದರೆ 'ಬ್ರಹ್ಮಮಾತ್ರವೃತ್ತಿ' ಎಂಬಲ್ಲಿ 'ಬ್ರಹ್ಮೇತರ ಅವೃತ್ತಿತ್ವ' 'ಬ್ರಹ್ಮವೃತ್ತಿತ್ವ'ಗಳೆಂದು ಎರಡು ಅಂಶಗಳಿವೆ. ಅವುಗಳಲ್ಲಿ ಬ್ರಹ್ಮವೃತ್ತಿತ್ವಾಂಶ ವ್ಯರ್ಥ, ಅಧಿಕ. ಮತ್ತು ಬ್ರಹ್ಮೇತರಾವೃತ್ತಿಧರ್ಮ ಪ್ರಕಾರಕ ಜ್ಞಾನವು ಬ್ರಹ್ಮಪ್ರಮಾ ಎಂದಿಟ್ಟುಕೊಂಡರೆ ಬ್ರಹ್ಮೇತರಾವೃತ್ತಿ ಧರ್ಮಪ್ರಕಾರಕ ಜ್ಞಾನಾನ್ಯವು ನಿಷ್ಪ್ರಕಾರಕವಾದ ಚರಮವೃತ್ತಿ. ತದ್ ಬಾಧ್ಯತ್ವವು ಪಕ್ಷವಾದ ಘಟಾದಿ ಪ್ರಪಂಚದಲ್ಲಿದೆ, ಅಬಾಧ್ಯತ್ವವಿಲ್ಲವೆಂದು ಆಶ್ರಯಾಸಿದ್ಧಿ ದೋಷ.

❖❖❖

ब्रह्मप्रमान्येनाबाध्यत्वे सतीत्यनेन ब्रह्मावृत्त्यप्रकारकान्यनिष्ठविरोधिविषयत्वावच्छिन्ना या कारणता तन्निरूपितकार्यताश्रयनिवृत्त्यप्रतियोगित्वे सतीत्यस्य

विवक्षितत्वात् । अत्र प्रपञ्चस्य विरोधिविषयकचरमवृत्तिबाध्यत्वेनाश्रयासिद्धिवारणाय ब्रह्मावृत्त्यप्रकारकान्यनिष्ठेति । उत्तरज्ञाननिवर्त्यपूर्वज्ञानादीनामीश्वरज्ञाननिवर्त्यघटादीनां च पक्षत्वसिद्धये विरोधिविषयत्वावच्छिन्नेति । शुक्तिरूप्यादिव्यावृत्तये निवृत्त्यप्रतियोगित्वे सतीति ।

ब्रह्मपदनन्द्वयगर्भोक्तावच्छेदके गौरवं मन्वान आह **सप्रकारेण वेति।** विरोधिविषयत्वावच्छिन्न सप्रकारक निष्ठकारणतानिरूपित कार्यताश्रय निवृत्त्य-प्रतियोगित्वे सतीत्यर्थः । अत्रापि विशेषणप्रयोजनं पूर्ववदेव द्रष्टव्यम् । वाशब्दोऽत्र पक्षतावच्छेदकद्वयसूचकः । असति मिथ्यात्वस्याग्रेतननिरुक्त्यनुरोधेनासद्व्यावृत्तत्वा-व्यावृत्तत्वाभ्यामंशतोबाधांशतःसिद्धसाधनयोरन्यतरवारणायासद्विलक्षणत्वे सतीति । ब्रह्मण्येवांशतो बाधवारणाय **ब्रह्मान्यदिति** ।

❖❖❖

ಈ ಆಕ್ಷೇಪಗಳಿಗೆ ಸಮಾಧಾನ— 'ಬ್ರಹ್ಮಪ್ರಮಾನ್ಯೇನ ಅಬಾಧ್ಯ' ಎಂದರೆ ಹೀಗೆ ಅರ್ಥ— 'ಬ್ರಹ್ಮಾವೃತ್ತ್ಯಪ್ರಕಾರಕಾನ್ಯ ನಿಷ್ಠವಾದ ವಿರೋಧಿವಿಷಯಿತ್ವಾವಚ್ಛಿನ್ನಕಾರಣತಾದಿಂದ ನಿರೂಪಿತ ವಾಗುವ ಕಾರ್ಯತಾಶ್ರಯ ನಿವೃತ್ತಿಗೆ ಅಪ್ರತಿಯೋಗಿ' ಎಂದು. ಚರಮವೃತ್ತಿ ನಿಷ್ಠ ವಿಷಯತಾವು ಪ್ರಪಂಚಭ್ರಮಕ್ಕೆ ವಿರೋಧಿಯಾದ್ದರಿಂದ ವಿರೋಧಿವಿಷಯಿತ್ವಾವಚ್ಛಿನ್ನಕಾರಣತಾ ನಿರೂಪಿತ ಕಾರ್ಯತಾ ಉಳ್ಳದ್ದು ಪ್ರಪಂಚ ನಿವೃತ್ತಿ. ತತ್‌ಪ್ರತಿಯೋಗಿಯೇ ಆಗುತ್ತದೆ ಪ್ರಪಂಚ. ಅಪ್ರತಿಯೋಗಿಯಾಗುವುದಿಲ್ಲವೆಂದು ಆಶ್ರಯಾಸಿದ್ಧಿ ಬಂದೀತು. ಅದರ ನಿವಾರಣೆಗಾಗಿ ಬ್ರಹ್ಮಾವೃತ್ತ್ಯಪ್ರಕಾರಕಾನ್ಯನಿಷ್ಠತ್ವವನ್ನು ಕಾರಣತಾದಲ್ಲಿ ಕೊಡಬೇಕು. ಚರಮವೃತ್ತಿ ನಿಷ್ಠಕಾರಕವಾದ್ದರಿಂದ ಬ್ರಹ್ಮಾವೃತ್ತ್ಯಪ್ರಕಾರಕವೆ, ಬ್ರಹ್ಮಾವೃತ್ತ್ಯಪ್ರಕಾರಕಾನ್ಯವಾಗಿಲ್ಲ, ಅನ್ಯವು 'ಇಯಂ ಶುಕ್ತಿಃ' ಎಂಬ ಜ್ಞಾನ. ಬ್ರಹ್ಮಾವೃತ್ತಿ ಶುಕ್ತಿತ್ವ ಪ್ರಕಾರವೇ ಆಗಿದೆ. ಅನ್ಯವಾದ ಶುಕ್ತಿಜ್ಞಾನದಿಂದ ರಜತವು ಬಾಧ್ಯವೇ ಆಗಿದೆ. ಘಟಾದಿ ಮಾತ್ರ ಅಬಾಧ್ಯವಾಗಿದ್ದು ಪಕ್ಷದಲ್ಲಿ ಸೇರುತ್ತದೆ. ರಜತ ಸೇರುವುದಿಲ್ಲವಾದ್ದರಿಂದ ಸಿದ್ಧಸಾಧನತಾಕ್ಕೆ ಅವಕಾಶ ವಿಲ್ಲ.

ಆದರೆ ಬ್ರಹ್ಮಾವೃತ್ತ್ಯಪ್ರಕಾರಕಾನ್ಯವು ಘಟಜ್ಞಾನ. ಏಕೆಂದರೆ ಬ್ರಹ್ಮಾವೃತ್ತ್ಯಪ್ರಕಾರಕವಾದ ಚರಮವೃತ್ತಿಗಿಂತ ಅನ್ಯವಾಗಿದೆ. ತನ್ನಿಷ್ಠಕಾರಣತಾ ನಿರೂಪಿತ ಕಾರ್ಯತಾಶ್ರಯವಾದ ನಿವೃತ್ತಿ ಎಂದರೆ ಉತ್ತರಜ್ಞಾನ ಜನ್ಯವಾದ ಪೂರ್ವಜ್ಞಾನ ನಿವೃತ್ತಿ. ತತ್ಪ್ರತಿಯೋಗಿ ಪೂರ್ವಜ್ಞಾನವಾದ್ದರಿಂದ ಅಪ್ರತಿಯೋಗಿಯಾಗುವುದಿಲ್ಲ, ಪಕ್ಷದಲ್ಲಿ ಸೇರುವುದಿಲ್ಲ. ಸೇರ ಬೇಕು. ಅದರಲ್ಲಿಯೂ ಮಿಥ್ಯಾತ್ವ ಸಿದ್ಧಿಸಬೇಕು. ಹಾಗೇ ಈಶ್ವರಜ್ಞಾನವೂ ಕೂಡ ಬ್ರಹ್ಮಾವೃತ್ತ್ಯಪ್ರಕಾರಕವಾದ ಚರಮವೃತ್ತಿಗಿಂತ ಅನ್ಯ.

ಅದು ಕಾರ್ಯಸಾಮಾನ್ಯಕ್ಕೆ ಸಾಧಾರಣಕಾರಣವಾದ್ದರಿಂದ ತಜ್ಜನ್ಯಘಟನಿವೃತ್ತಿಗೆ ಘಟಾದಿ ಪ್ರತಿಯೋಗಿಯೆ. ಅಪ್ರತಿಯೋಗಿಯಲ್ಲ. ಪಕ್ಷದಲ್ಲಿ ಸೇರುವುದಲ್ಲ. ಮಿಥ್ಯಾ ಎಂದು ಸಿದ್ಧವಾಗುವುದಿಲ್ಲ. ಮಿಥ್ಯಾತ್ವ ಸಿದ್ಧಿಸಬೇಕು. ಹೀಗಾಗಿ ಪೂರ್ವಜ್ಞಾನಕ್ಕೂ ಘಟಾದಿಗೂ ಪಕ್ಷಾಂತರ್ಭಾವ ಸಿದ್ಧಿಸುವುದಕ್ಕಾಗಿ ಕಾರಣತಾದಲ್ಲಿ ವಿರೋಧಿ ವಿಷಯತ್ವಾವಚ್ಛಿನ್ನತ್ವ ವಿಶೇಷಣವನ್ನು ನೀಡಬೇಕು. ಆಗ ಪೂರ್ವಜ್ಞಾನನಿವೃತ್ತಿನಿಷ್ಠಕಾರ್ಯತಾ ನಿರೂಪಿತ ಕಾರಣತಾವು ಉತ್ತರವಿಶೇಷಗುಣತ್ವಾವಚ್ಛಿನ್ನವಾಗಿದೆ, ಹೊರತು ವಿರೋಧಿವಿಷಯತ್ವಾವಚ್ಛಿನ್ನವಾಗಿಲ್ಲ. ಘಟನಿವೃತ್ತಿ ನಿಷ್ಠ ಕಾರ್ಯತಾ ನಿರೂಪಿತ ಕಾರಣತಾವು ಈಶ್ವರಜ್ಞಾನತ್ವಾವಚ್ಛಿನ್ನವೇ ಹೊರತು ವಿರೋಧಿವಿಷಯತ್ವಾವಚ್ಛಿನ್ನವಲ್ಲ. ಹೀಗೆ ಕಾರಣತಾದಲ್ಲಿ ವಿರೋಧಿ ವಿಷಯತ್ವಾವಚ್ಛಿನ್ನತ್ವ ವಿಶೇಷಣ ನೀಡುವುದರಿಂದ ಉತ್ತರಜ್ಞಾನ ಮತ್ತು ಈಶ್ವರಜ್ಞಾನ ನಿಷ್ಠಕಾರಣತಾ ವಾರಣವಾಗುವುದರಿಂದ ಪೂರ್ವಜ್ಞಾನ ಘಟಾದಿಗಳು ಪಕ್ಷದಲ್ಲಿ ಸೇರಲು ಬಾಧಕವಿಲ್ಲದಂತಾಗುತ್ತದೆ.

ಹೀಗೆ ಬ್ರಹ್ಮಪ್ರಮಾನ್ಯೇನ ಅಬಾಧ್ಯತ್ವವು ಪಕ್ಷತಾವಚ್ಛೇದಕ ಕೋಟಿಯಲ್ಲಿ ಸೇರಿದರೆ ಏನೂ ಅನುಪಪತ್ತಿ ಇಲ್ಲದಿದ್ದರೂ ಬ್ರಹ್ಮಪದ ಮತ್ತು ನಞ್‌ದ್ವಯಗಳು ಸೇರಿರುವುದರಿಂದ ಗೌರವದೋಷ ಉಂಟು. ಆದಕ್ಕೆ ಸಪ್ರಕಾರೇಣ ಅಬಾಧ್ಯತ್ವ ವಿಶೇಷಣವನ್ನು ವಿಕಲ್ಪವಾಗಿ ಪಕ್ಷತಾವಚ್ಛೇದಕದಲ್ಲಿ ಸೇರಿಸುತ್ತಾರೆ. ಸಪ್ರಕಾರಕನಿಷ್ಠವಾದ ವಿರೋಧಿ ವಿಷಯತ್ವಾವಚ್ಛಿನ್ನ ಕಾರಣತಾದಿಂದ ನಿರೂಪಿತ ಕಾರ್ಯತಾಶ್ರಯವಾದ ನಿವೃತ್ತಿಗೆ ಅಪ್ರತಿಯೋಗಿಯಾಗಿದ್ದು ಅಸದ್ವಿಲಕ್ಷಣವಾಗಿದ್ದು ಬ್ರಹ್ಮಾನ್ಯ ವಾಗಿರುವುದೇ ಪಕ್ಷ.

ಅಸದ್ವಿಲಕ್ಷಣತ್ವವನ್ನು ಪಕ್ಷವಿಶೇಷಣವಾಗಿ ಸೇರಿಸದಿದ್ದರೆ ಅಸತ್ತೂ ಪಕ್ಷವಾದೀತು. ಆಗ, ಅಸತ್ತು ಮಿಥ್ಯೆಯಲ್ಲ, ಆದರಲ್ಲಿ ಮಿಥ್ಯಾತ್ವಸಾಧನೆ ಮಾಡಿದರೆ ಅಂಶತೋಬಾಧ. ಅಸತ್ತನ್ನು ಮಿಥ್ಯೆ ಎಂದೊಪ್ಪುವುದಾದರೆ ಅದರಲ್ಲಿ ಮಿಥ್ಯಾತ್ವಸಾಧನೆ ಮಾಡಿದಾಗ ಅಂಶತಃ ಸಿದ್ಧಸಾಧನತ್ವ. ಅದರಿಂದ ಅಸತ್ತನ್ನು ಪಕ್ಷದಿಂದ ಹೊರಗೆ ಹಾಗಬೇಕು. ಅಸದ್ವಿಲಕ್ಷಣತ್ವ ವಿಶೇಷಣವನ್ನು ಪಕ್ಷದಲ್ಲಿ ಕೊಡಬೇಕು. ಬ್ರಹ್ಮನು ಪಕ್ಷದಲ್ಲಿದ್ದರೆ ಮಿಥ್ಯಾತ್ವ ಸಾಧನೆಗೆ ಅಂಶತೋಬಾಧ. ಅದಕ್ಕೆ ಬ್ರಹ್ಮಾನ್ಯತ್ ಎಂದೂ ಪಕ್ಷಕ್ಕೆ ವಿಶೇಷಣ ನೀಡಬೇಕು.

❖❖❖

न च पक्षतावच्छेदकनिरुक्तिद्वयेऽपि असद्विलक्षणत्वे सतीति व्यर्थम् । असतः पक्षत्वस्यैवासंभवात् । अन्यथा तस्य सविशेषत्वापातेनासत्त्वव्याघातात् । सति च व्याघाते पक्षत्वशङ्काया एवानुदयात् । व्याघातावधित्वाच्छङ्कायाः । किञ्च ब्रह्मान्यदिति पदेनैवासतः पक्षत्वव्यावृत्तेर्न तस्य पक्षत्वप्रसक्तिः । ब्रह्मान्यत्वस्य तत्प्रतियोगिकान्योन्याभावाधिकरणत्वरूपत्वात् । असतश्च भावाभावाधिकरणत्वानभ्युपगमादिति वाच्यम् ।

असतो ब्रह्मप्रतियोगिकभेदानधिकरणत्वे ब्रह्माभेदप्रसङ्गात् । ब्रह्मान्यत्वस्य ब्रह्मप्रतियोगिकभेदसंबन्धरूपत्वेन तदधिकरण रूपत्वानभ्युपगमाच्च । असच्छशविषाणं ब्रह्मभिन्नमित्यबाधितविशिष्टप्रतीतिबलेनासतस्तत्प्रतियोगिकभेदेन सिद्धे संबन्धे विशिष्टधी-नियामकत्वरूपसंबन्धत्वस्य भेद एव कल्पनाच्च ! अन्यथा ध्वस्तो घटो ज्ञात इत्याद्यबाधितविशिष्टप्रतीतिबलेन ध्वस्तघटस्य ध्वंसज्ञानाभ्यां प्रतियोग्यनुयोगिभाव-विषयविषयिभावसंबन्धयोरस्वीकारप्रसङ्गः । नचेष्टापत्तिः। ध्वस्तघटस्य ध्वंसप्रतियोगित्व-ज्ञानविषयत्वयोरभावप्रसङ्गात् । अबाधितविशिष्टप्रतीत्यापि विशेष्यविशेषणसंबन्धासिद्धौ भूतले घट इत्यादितथाविधप्रतीत्या प्रवृत्तस्य प्रवृत्तिसंवादाभावप्रसङ्गात् । ध्वस्तो घटो ज्ञात इत्यादिप्रतीतिविषयस्य ज्ञानस्य घटादिवद्विषयानुल्लेखित्वरूपनिर्विषयत्वापत्तेश्च ।

ಅಸದ್ವಿಲಕ್ಷಣತ್ವ ವಿಶೇಷಣವನ್ನು ಪಕ್ಷದಲ್ಲಿ ಸೇರಿಸುವುದು ವ್ಯರ್ಥ ವೆಂದು ಶಂಕೆ. ಅಸತ್ತಿಗೆ ಪಕ್ಷತ್ವ ಸಂಭವವೇ ಇಲ್ಲ. ಸಂಭವವಿದ್ದರೆ ತಾನೆ ಅದರ ವ್ಯಾವೃತ್ತಿಗಾಗಿ ವಿಶೇಷಣ ಕೊಡಬೇಕು?

ಅಸತ್ತಿಗೆ ಪಕ್ಷತ್ವ ಸಂಭವವಿದೆ ಎಂದರೆ ಸವಿಶೇಷತ್ವ ಬರುವುದರಿಂದ ಅಸತ್ವವೇ ವ್ಯಾಹತವಾದೀತು. 'ವ್ಯಾಘಾತಾವಧಿರಾಶಂಕಾ' ವ್ಯಾಘಾತ ಪ್ರಸಂಗ ಬಾರದ ತನಕ ಎಷ್ಟು ಬೇಕಾದರೂ ಆಶಂಕೆ ಮಾಡಬಹುದು. ವ್ಯಾಘಾತಪ್ರಸಂಗ ಬರುತ್ತಿದ್ದರೆ ಆಶಂಕೆಯನ್ನೇ ಮಾಡಕೂಡದು. ಪ್ರಕೃತ 'ಬ್ರಹ್ಮಾನ್ಯತ್' ಎಂಬ ವಿಶೇಷಣದಿಂದಲೇ ಅಸತ್ತೂ ವ್ಯಾವೃತ್ತವಾಗಿದೆ. ಏಕೆಂದರೆ ಬ್ರಹ್ಮಾನ್ಯತ್ವವೆಂದರೆ ಬ್ರಹ್ಮಪ್ರತಿಯೋಗಿಕ ಅನ್ಯೋನ್ಯಾಭಾವಾಧಿಕರಣತ್ವ. ಅಸತ್ತಿನಲ್ಲಿ ಭಾವಾಭಾವಾಧಿಕರಣತ್ವಗಳೆರಡೂ ಬರುವುದಿಲ್ಲ.

ಈ ಶಂಕೆ ಸರಿಯಲ್ಲ. ಅಸತ್ತಿಗೆ ಬ್ರಹ್ಮಭೇದಾಧಿಕರಣತ್ವವನ್ನು ಒಪ್ಪದಿದ್ದರೆ ಬ್ರಹ್ಮಾಭೇದವನ್ನು ಒಪ್ಪುವ ಪ್ರಸಂಗವಿದೆ. ಮತ್ತು ಬ್ರಹ್ಮಭೇದಾಧಿಕರಣತ್ವವು ಬ್ರಹ್ಮಭೇದ ಸಂಬಂಧರೂಪವಾದ್ದರಿಂದ ಅದು ಅಸತ್ತಿನಲ್ಲಿರಲು ಬಾಧಕವಿಲ್ಲ. ಅಸತ್ತಿನಲ್ಲಿ ಬ್ರಹ್ಮಭೇದ ಸಂಬಂಧವಿದೆ ಎನ್ನಲು 'ಅಸತ್ತಾದ ಶಶವಿಷಾಣವು ಬ್ರಹ್ಮಭಿನ್ನವಾಗಿದೆ' ಎಂದು ಅಬಾಧಿತ ವಿಶಿಷ್ಟ ಪ್ರತೀತಿ ಸಾಧಕವಾಗಿದೆ. ಈ ಪ್ರತೀತಿ ಬಲದಿಂದ ಅಸತ್ತಿನಲ್ಲಿಯೂ ಬ್ರಹ್ಮಭೇದ ಸಂಬಂಧ ಸಿದ್ಧವಾಗಿದೆ. ಭೇದವಿಶಿಷ್ಟ ಪ್ರತೀತಿ ನಿಯಾಮಕತ್ವರೂಪ ಭೇದಸಂಬಂಧತ್ವವನ್ನು ಅತಿರಿಕ್ತಸಂಬಂಧದಲ್ಲಿ ಒಪ್ಪದೆ ಭೇದಸ್ವರೂಪ ಸಂಬಂಧದಲ್ಲಿ, ಅಂದರೆ ಭೇದದಲ್ಲಿಯೇ ಒಪ್ಪುತ್ತೇವೆ. ಹೀಗೆ ಮಾಡದಿದ್ದರೆ 'ಧ್ವಸ್ತ ಘಟವು ಜ್ಞಾತವಾಯಿತು' ಎಂಬ ಅಬಾಧಿತವಿಶಿಷ್ಟ ಪ್ರತೀತಿ ಬಲದಿಂದ, ಧ್ವಸ್ತವಾಗಿ ಈಗ ಇಲ್ಲದಿರುವ ಘಟಕ್ಕೆ ಧ್ವಂಸದಿಂದ ಪ್ರತಿಯೋಗ್ಯನುಯೋಗಿಭಾವರೂಪ ಸಂಬಂಧವನ್ನೂ ಒಪ್ಪದಿರಬೇಕಾದೀತು. ಜ್ಞಾನದಿಂದ ವಿಷಯ ವಿಷಯಿಭಾವರೂಪ ಸಂಬಂಧವನ್ನೂ ಒಪ್ಪದಿರಬೇಕಾದೀತು. ಇದಕ್ಕೆ ಇಷ್ಟಾಪತ್ತಿ

ಎಂದರೆ 'ಧ್ವಸ್ತಘಟಕ್ಕೆ ಧ್ವಂಸ ಪ್ರತಿಯೋಗಿತ್ವವಿಲ್ಲ, ಜ್ಞಾನವಿಷಯತ್ವವಿಲ್ಲ'ವೆಂದಾದೀತು. ಹೀಗೆ ಅಬಾಧಿತ ವಿಶಿಷ್ಟಪ್ರತೀತಿ ಇದ್ದರೂ ವಿಶೇಷ್ಯ ವಿಶೇಷಣಗಳಿಗೆ ಸಂಬಂಧವಿಲ್ಲ ವೆಂದರೆ, 'ಭೂತಲೇ ಘಟಃ' ಇತ್ಯಾದಿ ವಿಶಿಷ್ಟ ಪ್ರತೀತಿ ಬಲದಿಂದ ಪ್ರವೃತ್ತಿ ಮಾಡಿದಾಗ ಪ್ರವೃತ್ತಿಯು ಸಫಲವಾಗದಿರಬೇಕಾದೀತು. 'ಧ್ವಸ್ತಘಟವು ಜ್ಞಾತವಾಯಿತು' ಎಂಬ ವಿಶಿಷ್ಟ ವಿಷಯಜ್ಞಾನವು ವಿಷಯೋಲ್ಲೇಖ ಮಾಡದಿದ್ದರೆ ಅದು ಘಟದಂತೇ ನಿರ್ವಿಷಯ ಎಂದಾದೀತು.

❖❖❖

एतेनासत: पक्षत्वे सविशेषत्वापातेनासत्वव्याघातात् पक्षत्वशङ्कैव नोदेति, शङ्काया: व्याघातावधित्वादिति निरस्तम् । वन्ध्यासुतो न वक्ता अचेतनत्वात् घटवदित्यनुमाने असतोऽपि वन्ध्यासुतस्य पक्षत्वदर्शनात् । न्यायदीपावल्ल्यामस्यैव सदनुमानत्वस्वीकाराच्च। किञ्च पक्षत्वं सिषाधयिषितसाध्यसन्देहविषयत्वं वा सिषाधयिषाविरहसहकृतसिध्यभावो वा ? उभयथाप्यसत: पक्षत्वानपाय एव । उभयोरपि ध्वंसप्रतियोगित्वप्रागभावप्रति-योगित्वादिवत् धर्मिसत्वनिरपेक्षधर्मत्वात् । धर्मिसत्वे ध्वंसप्रागभावयोरेवायोगात् । धर्म्यसत्त्वे धर्मासत्त्वनियमस्य धर्मिसत्तासापेक्षधर्ममात्रविषयत्वात् ।

'ಮಿಥ್ಯಾತ್ವಾನುಮಾನದಲ್ಲಿ ಅಸತ್ತನ್ನು ಪಕ್ಷಮಾಡಿದರೆ ಪಕ್ಷತ್ವರೂಪ ವಿಶೇಷಣದಿಂದ ಅಸತ್ತು ಸವಿಶೇಷವೆನಿಸುವುದರಿಂದ ಅದಕ್ಕೆ ಅಸತ್ವವನ್ನು ಹೇಳುವುದು ಸ್ವವ್ಯಾಹತವಾಗುವುದು. ಅದರಿಂದ ಅಸತ್ತಿಗೆ ಪಕ್ಷತ್ವಶಂಕೆಯೇ ಉದಿಸುವುದಿಲ್ಲ 'ವ್ಯಾಘಾತಾವಧಿರಾಶಂಕಾ' ತಾನೆ?'— ಎಂಬ ಮೇಲಿನ ಆಕ್ಷೇಪಕ್ಕೆ ಈಗ ಅವಕಾಶವಿಲ್ಲ. ಮತ್ತು 'ವಂಧ್ಯಾಸುತನು ಮಾತನಾಡುವುದಿಲ್ಲ, ಅಚೇತನನಾದ್ದರಿಂದ ಘಟದಂತೆ' ಎಂಬ ಅನುಮಾನದಲ್ಲಿ ಅಸತ್ತಾದ ವಂಧ್ಯಾಸುತನು ಪಕ್ಷವಾಗವುದೂ ಕಂಡಿದೆ. ನ್ಯಾಯದೀಪಾವಲಿಯಲ್ಲಿ ಇದನ್ನು ಸದನುಮಾನವೆಂದು ಸ್ವೀಕರಿಸಿದ್ದಾರೆ.

ಪಕ್ಷತ್ವವು ಪಕ್ಷದಲ್ಲಿ ಸಾಧ್ಯಸಂದೇಹರೂಪವೆ? ಸಿಷಾಧಯಿಷಾ ವಿರಹ ವಿಶಿಷ್ಟ ಸಿದ್ಧ್ಯಭಾವರೂಪವೆ? ಈ ಎರಡೂ ಪಕ್ಷಗಳಲ್ಲಿ ಅಸತ್ತು ಪಕ್ಷ ವಾಗಲು ಅನುಪಪತ್ತಿ ಏನೂ ಇಲ್ಲ. ಸಾಧ್ಯಸಂದೇಹವಾಗಲಿ ಸಿಷಾಧಯಿಷಾವಿರಹವಿಶಿಷ್ಟ ಸಿದ್ಧ್ಯಭಾವವಾಗಲಿ ಎರಡೂ ಧ್ವಂಸ ಪ್ರಾಗಭಾವ ಪ್ರತಿಯೋಗಿತಾಗಳಂತೇ ಧರ್ಮಿಸತ್ತಾ ನಿರಪೇಕ್ಷ ಧರ್ಮಗಳಾಗಿವೆ. ಧರ್ಮಿ ಸತ್ತಾದರೆ ಮಾತ್ರ ಅದರ ಧ್ವಂಸ ಪ್ರಾಗಭಾವಗಳೆಂದಿಲ್ಲ ತಾನೆ? ಧರ್ಮಿಸತ್ತಾದರೆ ಮಾತ್ರ ಅದರಲ್ಲಿ ಧರ್ಮವೆಂಬ ನಿಯಮವು ಧರ್ಮಿಸತ್ತಾಸಾಪೇಕ್ಷಧರ್ಮ ವಿಷಯದಲ್ಲಿ ಮಾತ್ರ ಅನ್ವಯವಾಗುತ್ತದೆ.

❖❖❖

किञ्चासतः पक्षत्वे सविशेषत्वापत्तिरिति कोऽर्थः ? किं तस्य धर्मसम्बन्धः स्यादिति ? किं वा घटादिवत् प्रामाणिकत्वं स्यादिति ? नाद्यः । इष्टापादनात् । नहि सतोरेव सम्बन्ध इति नियमोऽस्ति । अन्यथा ध्वंसादिना घटादेः सम्बन्धाभावप्रसङ्गात् । योगजधर्मस्य सामान्यस्य ज्ञानस्य वा अतीताद्यर्थप्रत्यासत्तित्वाभावापत्तेश्च । नचाविशिष्टधीव्यावृत्त-विशिष्टधीनियामकत्वतद्विषयत्वरूपसंबन्धत्वाश्रयस्य द्विष्टत्वनियमे मानमस्ति । शतशो व्यभिचारात् । चत्वराद्यनेकाधिकरणकैकाभावे घटपटाद्यनेकाभावाधिकरणे एकस्मिन् भूतलादौ सत्त्वाविशेषेऽपि अबाधितविशिष्टप्रतीत्यविशेषेऽपि च लाघवेन तादृशविशिष्टधी-नियामकत्वरूपसम्बन्धत्वस्य तद्विषयत्वरूपसम्बन्धत्वस्य वा एकस्मिन्नभावे एकस्मिन्नधिकरणे कल्पनवत् तथाविधविशिष्टप्रतीतिगोचरयोर्भावाभावयोरेकैकत्वेऽपि लाघवेन भाव एव तस्य कल्पनवच्च सदसतोस्तथाविधविशिष्टप्रतीत्यविशेषे सत्येव तादृशसंबन्धकल्पनं युक्तमित्यङ्गीकर्तव्यत्वाच्च ।

ಅಸತ್ತು ಪಕ್ಷವಾದರೆ ಅಸತ್ತು ಸವಿಶೇಷವೆನಿಸಬೇಕಾದೀತೆಂದರೆ ಏನರ್ಥ? ಅಸತ್ತಿಗೆ ಧರ್ಮ ಸಂಬಂಧವಾದೀತೆಂದೆ? ಅಥವಾ ಘಟಾದಿ ಗಳಂತೆ ಅಸತ್ತು ಪ್ರಾಮಾಣಿಕವಾದೀತೆಂದೆ?

ಧರ್ಮಸಂಬಂಧವಾದೀತೆಂಬ ಮೊದಲನೇ ಪಕ್ಷದಲ್ಲಿ ಇಷ್ಟಾಪತ್ತಿ. ಸತ್ಪದಾರ್ಥಗಳಿಗೆ ಮಾತ್ರ ಸಂಬಂಧ ಎಂಬ ನಿಯಮವಿಲ್ಲ. ನಿಯಮ ಎದೆ ಎಂದರೆ ಧ್ವಂಸಪ್ರಾಗಭಾವಗಳ ಸಂಬಂಧ ಅತೀತಾದಿ ಘಟಗಳಿಗೆ ಇಲ್ಲವೆಂದಾದೀತು. ಯೋಗಜಧರ್ಮ-ಸಾಮಾನ್ಯಲಕ್ಷಣ-ಜ್ಞಾನಲಕ್ಷಣ ಪ್ರತ್ಯಾಸತ್ತಿಗಳೂ ಅತೀತಾದಿಗಳಿಗೆ ಇಲ್ಲವೆಂದಾದೀತು.

ಅವಿಶಿಷ್ಟಧೀವ್ಯಾವೃತ್ತ ವಿಶಿಷ್ಟಧೀನಿಯಾಮಕ ಸಂಬಂಧವಾಗಲಿ ವಿಶಿಷ್ಟಧೀ ವಿಷಯತ್ವ ಸಂಬಂಧವಾಗಲಿ ದ್ವಿಷ್ಠವಾಗಿವೆ ಎಂಬ ನಿಯಮಕ್ಕೂ ಪ್ರಮಾಣವಿಲ್ಲ. ನೂರಾರು ಕಡೆ ಇದಕ್ಕೆ ವ್ಯಭಿಚಾರವಿದೆ. ಅಂಗಳ ಮುಂತಾದ ಅನೇಕ ಅಧಿಕರಣಗಳಲ್ಲಿ ಒಂದು ಘಟಾಭಾವವಿರುತ್ತದೆ, ಒಂದು ಭೂತಲವೆಂಬ ಅಧಿಕರಣದಲ್ಲಿ ಘಟಾದಿ ಅನೇಕವಸ್ತುಗಳ ಅಭಾವಗಳೂ ಇರುತ್ತವೆ. ಅವುಗಳ ಅಸ್ತಿತ್ವದಲ್ಲಾಗಲಿ ಅಬಾಧಿತ ವಿಶಿಷ್ಟಪ್ರತೀತಿಗಳಲ್ಲಾಗಲಿ ಏನೂ ವಿಶೇಷವಿರುವುದಿಲ್ಲ. ಆದರೂ ಲಾಘವದಿಂದ ವಿಶಿಷ್ಟಧೀ ನಿಯಾಮಕ ಸಂಬಂಧತ್ವವನ್ನೂ, ವಿಶಿಷ್ಟಧೀ ವಿಷಯತ್ವ ಸಂಬಂಧವನ್ನೂ ಒಂದು ಅಭಾವದಲ್ಲಿ ಒಂದು ಅಧಿಕರಣದಲ್ಲಿ ಒಪ್ಪುತ್ತೇವೆ. ವಿಶಿಷ್ಟಪ್ರತೀತಿಗೋಚರವಾದ ಭಾವ ಅಭಾವಗಳು ಅನೇಕವಿದ್ದರೂ ಲಾಘವದಿಂದ ಭಾವದಲ್ಲಿಯೇ ಸಂಬಂಧತ್ವವನ್ನು ಒಪ್ಪುತ್ತೇವೆ. ಹಾಗೇ ಸತ್ತು ಅಸತ್ತುಗಳು ವಿಶಿಷ್ಟಪ್ರತೀತಿ ವಿಷಯವಾಗುವಲ್ಲಿ ವಿಶೇಷವಿಲ್ಲ ದಿದ್ದರೂ ಸಂಬಂಧತ್ವವನ್ನು ಸತ್ತಿನಲ್ಲಿಯೇ ಒಪ್ಪುವುದು ಯುಕ್ತವೆನ್ನಬೇಕು.

❖❖❖

न द्वितीयः । असतोऽपि निषेध्यत्वेन ज्ञेयत्वादिना च प्रामाणिकत्वात् । न च सत्वेन प्रामाणिकत्वं तदर्थः । मिथ्यात्वानुमानादौ पक्षत्वेन त्वदभिमतस्य वियदादिप्रपञ्चस्य ब्रह्मवत् सत्त्वरहितत्वेनापक्षत्वप्रसङ्गात् । नच वियदादेरपि व्यावहारिकसत्त्ववत्त्वेन नापक्षत्वप्रसङ्गः । लाघवेन पक्षत्वे व्यावहारिकपारमार्थिकसत्त्वादिसाधारणसत्त्वमात्रस्यैव तन्त्रत्वादिति वाच्यम् । प्रपञ्चः ब्रह्मवत् सन्वा असन्वेति विप्रतिपत्तिदशायां वियदादौ सत्त्वस्यैवासिद्धेः । सत्त्वेन प्रतीतिमात्रस्य विशेषादर्शनदशायां वियदादाविवासच्छशविषाणादावपि सत्त्वेन तस्येव तस्यापि प्रयोजकसत्त्वेन पक्षत्वानपायात् । वन्ध्यासुतो न वक्तेत्यादिपरोदाहृतानुमाने पक्षत्वेनाभिमतस्य वन्ध्यासुतादेरपि सत्त्वेन प्रामाणिकत्वानभ्युपगमाच्च । अत एव न तस्यासत्त्वं व्याहतम् । उक्तसविशेषत्वस्यासत्त्वाविरोधित्वादिति ।

'ಅಸತ್ತು ಪಕ್ಷವಾದರೆ ಸವಿಶೇಷವಾದೀತೆನ್ನುವುದಕ್ಕೆ, ಅಸತ್ತೂ ಕೂಡ ಪ್ರಾಮಾಣಿಕವಾದೀತೆಂದು ಅರ್ಥ' ಎನ್ನುವ ಎರಡನೇ ಪಕ್ಷವೂ ಸರಿಯಲ್ಲ. ಪ್ರಾಮಾಣಿಕವಾದೀತೆಂದರೆ ಏನರ್ಥ? ಅಸತ್ತು ಕೂಡ ನಿಷೇಧ್ಯತ್ವೇನ ಮತ್ತು ಜ್ಞೇಯತ್ವಾದಿನಾ ಪ್ರಮಾಣಗೋಚರವಾಗಿದೆ ತಾನೆ? 'ಸತ್ತ್ವೇನ ಪ್ರಮಾಣ ಗೋಚರವಾದೀತು' ಎಂದು ಆಪಾದನೆ ಮಾಡಲಾಗದು. ಹಾಗೆ ಆಪಾದನೆ ಮಾಡಿದರೆ, ಮಿಥ್ಯಾತ್ವಾನುಮಾನದಲ್ಲಿ ಪಕ್ಷತ್ವೇನ ನಿನಗೆ ಅಭಿಮತವಾದ ವಿಯದಾದಿ ಪ್ರಪಂಚ ಕೂಡ ಬ್ರಹ್ಮನಂತೆ ಸತ್ತ್ವೇನ ಪ್ರಮಾಣ ಗೋಚರ ವಾಗುವುದಿಲ್ಲ, ಅದರಿಂದ ವಿಯದಾದಿಯೂ ಪಕ್ಷವಾಗಬಾರದೆನ್ನುವ ಪ್ರಸಂಗ.

'ವಿಯದಾದಿಗಳಿಗೂ ವ್ಯಾವಹಾರಿಕ ಸತ್ತ್ವವಿರುವುದರಿಂದ, ಅವು ಪಕ್ಷ ವಾಗಬಹುದು. ಲಾಘವದಿಂದ, ಪಕ್ಷತ್ವ ಬರಬೇಕಾದರೆ, ವ್ಯಾವಹಾರಿಕಾದಿ ಸಾಧಾರಣ ಸತ್ತ್ವ ಮಾತ್ರವೇ ಪ್ರಯೋಜಕವೆನ್ನುತ್ತೇನೆ'—ಹೀಗೆ ಹೇಳುವುದೂ ಸರಿಯಲ್ಲ. ಪ್ರಪಂಚವು ಬ್ರಹ್ಮನಂತೆ ಸತ್ಯವೆ ಅಸತ್ಯವೆ ಎಂದು ವಿಪ್ರತಿಪತ್ತಿ ಬಂದಿರುವಾಗ ವಿಯದಾದಿಗಳಲ್ಲಿ ಸತ್ತ್ವವೇ ಸಿದ್ಧವಾಗಿರುವುದಿಲ್ಲ. ಸತ್ತ್ವೇನ ಪ್ರತೀತಿಯೇ ಸಾಕೆಂದರೆ, ವಿಶೇಷದರ್ಶನವಿಲ್ಲದಿರುವಾಗ ವಿಯದಾದಿಗಳಂತೆ ಅಸತ್‌ಶಶವಿಷಾಣಾದಿಗಳಲ್ಲಿಯೂ ಸತ್ತ್ವೇನ ಪ್ರತೀತಿ ಇರುವುದರಿಂದ ಪಕ್ಷತ್ವಪ್ರಯೋಜಕ ಸತ್ತ್ವವಿರುವುದರಿಂದ ಪಕ್ಷತ್ವವನ್ನು ಒಪ್ಪಲೇಬೇಕಾಗುವುದು. 'ವಂಧ್ಯಾಸುತನು ಮಾತನಾಡುವುದಿಲ್ಲ' ಇತ್ಯಾದಿ ಪರೋಕ್ತ ಅನುಮಾನದಲ್ಲಿ ಪಕ್ಷವೆಂದು ಸಮ್ಮತನಾಗಿರುವ ವಂಧ್ಯಾಸುತನು ಸತ್ತ್ವೇನ ಪ್ರಮಾಣಗೋಚರನಾಗಿಲ್ಲ. ಅದರಿಂದಲೇ ವಂಧ್ಯಾಸುತನನ್ನು ಅಸತ್ತೆಂದರೆ ವ್ಯಾಹತಿ ಇಲ್ಲ. ಏಕೆಂದರೆ ಪಕ್ಷತ್ವ ವಿಷಯತ್ವ ಪ್ರತಿಯೋಗಿತ್ವ ಮುಂತಾದ ಧರ್ಮಿಸತ್ತಾನಿರಪೇಕ್ಷ ಧರ್ಮವತ್ತ್ವವು ಅಸತ್ವಕ್ಕೆ ವಿರೋಧಿಯಾಗುವುದಿಲ್ಲ.

❖❖❖

अत्र ब्रह्मप्रमान्येन सप्रकारेण वा अबाध्यत्वे सतीत्यनेन बाधयोग्यता-वच्छेदकावच्छिन्नभिन्नत्वस्य विवक्षितत्वात् असञ्जातबाधभ्रमविषयस्य ब्रह्मज्ञानाव्यवहित-पूर्वकालीनभ्रमविषयस्य च न पक्षत्वप्रसक्तिः। तयोरागन्तुकदोषजन्यत्वरूप-प्रातिभासिकत्वात्मकबाधयोग्यतावच्छेदकावच्छिन्नत्वेन तद्भिन्नत्वाभावात् । अतस्तदंशे न सिद्धसाधनमिति मन्तव्यम्। यद्यप्युभयत्र ब्रह्मासत्प्रातिभासिकान्यस्यैव पक्षत्वमिति पर्यवसितम्। तथापि उक्तरीत्योपाधेरसंकरात् पक्षतावच्छेदकद्वित्वानपाय एव। नह्युपधेयसंकरमात्रेणोपाधिसांकर्यमिति द्रष्टव्यम् ।

ಬ್ರಹ್ಮಪ್ರಮಾನ್ಯೇನ ಸಪ್ರಕಾರೇಣ ವಾ 'ಅಬಾಧ್ಯತ್ವ'ವನ್ನು ಮುಖತಃ ಹೇಳಿದ್ದರೂ ಅದಕ್ಕೆ 'ಬಾಧಯೋಗ್ಯತಾವಚ್ಛೇದಕಾವಚ್ಛಿನ್ನವಾಗಿರಬಾರದ'ನ್ನುವ ಅಭಿಪ್ರಾಯವಿದೆ. ಆದರಿಂದ ಅಸಂಜಾತ ಬಾಧಭ್ರಮದಲ್ಲಿ ಅಂದರೆ, ಕಾರಣಾಂತರದಿಂದ ಬಾಧ ಉಂಟಾಗದಿದ್ದ ಭ್ರಮದಲ್ಲಿ ಗೋಚರವಾಗುವ ರಜತಾದಿಗಳಿಗೂ, ಬ್ರಹ್ಮಜ್ಞಾನಾವ್ಯವಹಿತ ಪೂರ್ವಕಾಲದ ಭ್ರಮದಲ್ಲಿ ಗೋಚರವಾದ ಪದಾರ್ಥಗಳಿಗೂ, ಬ್ರಹ್ಮಪ್ರಮಾನ್ಯ ದಿಂದಾಗಲಿ ಸಪ್ರಕಾರಾನ್ಯದಿಂದಾಗಲಿ ಬಾಧ ಬಂದಿರದಿದ್ದರೂ ಪಕ್ಷತ್ವ ಪ್ರಸಕ್ತಿ ಇಲ್ಲ. ಏಕೆಂದರೆ ಅವುಗಳಲ್ಲಿಯೂ ಆಗಂತುಕ ದೋಷಜನ್ಯತ್ವರೂಪ ಪ್ರತಿಭಾಸಿಕತ್ವವಿದೆ. ಅದು ಬಾಧಯೋಗ್ಯತಾವಚ್ಛೇದಕ. ಆದರಿಂದ ಅವಚ್ಛಿನ್ನವಾದ್ದರಿಂದ, ಆ ಪದಾರ್ಥಗಳಲ್ಲಿ ಅಂಶೇ ಸಿದ್ಧಸಾಧನತ್ವವಿಲ್ಲ.

ಬ್ರಹ್ಮಪ್ರಮಾನ್ಯ ಘಟಿತವಾದ ಮತ್ತು ಸಪ್ರಕಾರಕಾನ್ಯಘಟಿತವಾದ ಎರಡು ಧರ್ಮಗಳೂ ಬೇರೆಬೇರೆ ಪಕ್ಷತಾವಚ್ಛೇದಕಗಳು. ಅವುಗಳಿಗೆ ಬ್ರಹ್ಮ-ಅಸತ್-ಪ್ರಾತಿಭಾಸಿಕಗಳಿಗಿಂತ ಅನ್ಯವು ಒಂದೇ ಪಕ್ಷವು ಪರ್ಯವಸಿತವಾಗಿರುವುದು ನಿಜವೆ.

ಹೀಗೆಂದ ಮಾತ್ರಕ್ಕೆ, ಪಕ್ಷತಾವಚ್ಛೇದಕಗಳು ಎರಡೂ ಒಂದೇ ಎನ್ನುವಂತಿಲ್ಲ. ಉಪಧೇಯವಾದ ಪಕ್ಷವು ಒಂದಾದ ಮಾತ್ರಕ್ಕೆ ಉಪಾಧಿಯಾದ ಪಕ್ಷತಾವಚ್ಛೇದಕ ಒಂದಾಗಬೇಕಿಲ್ಲ. ಅವು ಮಾತ್ರ ಬೇರೆ ಬೇರೆಯೆ. ಬೇರೆ ಬೇರೆಯಾದ ಬ್ರಹ್ಮ ಪ್ರಮಾನ್ಯತ್ವ ಮತ್ತು ಸಪ್ರಕಾರಾನ್ಯತ್ವಗಳು ಬೇರೆಬೇರೆಯಾಗಿಯೇ ಅವುಗಳಲ್ಲಿ ಘಟಕವಾಗಿವೆ.

❖❖❖

यद्यपि सिद्धान्ते शुक्तिरूप्यादेरसत्वात् असद्विलक्षणत्वे सतीति द्वितीयसत्यन्तेनैव प्रथमसत्यन्तप्रयोजनसंपादनात् तस्य वैयर्थ्यम्। तदभावे चोपधेयसंकरवदुपाधिसांकर्यस्या-वर्जनीयतया पक्षतावच्छेदकद्वित्वज्ञापकवाशब्दोऽनर्थकः ।

तथापि सिद्धान्तेऽप्यनुभूयमानारोपस्थले स्मर्यमाणारोपस्थल इवारोप्यस्य रजतादेरसत्त्वाभावेन वैशिष्ट्यमात्रस्यासत्त्वेन च तस्य च ब्रह्मज्ञानान्येनाधिष्ठानान्यप्रकारेण च नेदं रजतमित्यादिज्ञानेन बाध्यतया व्यावर्त्यसत्त्वेन प्रथमसन्यन्तमपि न व्यर्थम् । अन्यथा प्रथमसत्यन्ताभावे तदंशे प्रतिपन्नोपाधौ त्रैकालिकनिषेधप्रतियोगित्वरूपप्रथमसाध्यसत्त्वात् सिद्धसाधनत्वप्रसङ्ग इत्येके ।

वस्तुतस्तु साध्ये सर्वत्रेति प्रतिपन्नोपाधिविशेषणात् सिद्धान्ते अनुभूयमानारोपविषयस्य वैशिष्ट्यस्यैवासत्त्वेन तस्यैवात्यन्ताभावप्रतियोगित्वेन रजताद्यंशे त्रैकालिकनिषेधप्रतियोगित्वस्यैवाभावेन तदंशमादाय न सिद्धसाधनशङ्कावकाशः । किञ्चासद्विलक्षण प्रातिभासिकानिर्वचनीयरजताद्यभ्युपगन्तृमते तदंश एव सिद्धसाधनतावारणाय प्रथमसत्यन्तमिति । एतच्च सिद्धान्ते प्रमेयो घट इतिवदुपरक्तबुद्धेरुद्देश्यत्वादुपरञ्जकमेवेदं विशेषणम् । पक्षे उपरञ्जकस्यापि विशेषणस्य दानात् । परमते तु व्यावर्तकमेव । एकस्य प्रथमसत्यन्तरूपविशेषणप्रयोजनस्याभावेप्युक्तरीत्योभयसिद्धप्रयोजनसत्त्वात्तदवैयर्थ्यमिति द्रष्टव्यम् ।

ಯದ್ಯಪಿ, ನಮ್ಮ ಸಿದ್ಧಾಂತದಲ್ಲಿ ಶುಕ್ತಿರಜತಾದಿಗಳು ಅಸತ್ತು. 'ಅಸದ್‌ವಿಲಕ್ಷಣತ್ವೇ ಸತಿ' ಎಂದು ಎರಡನೇ ಸತ್ಯಂತವೇ ಆ ಅಸತ್ತನ್ನು ವ್ಯಾವೃತ್ತಿ ಮಾಡುತ್ತದೆ. ಹೀಗಾಗಿ ಅದರಿಂದಲೇ ಶುಕ್ತಿರಜತಾದಿ ವ್ಯಾವೃತ್ತಿಯಾಗಿರುವಾಗ, ಅದರ ವ್ಯಾವೃತ್ತಿಗಾಗಿ ಇರುವ 'ಬ್ರಹ್ಮಪ್ರಮಾನ್ಯೇನ ಸಪ್ರಕಾರೇಣ ವಾ ಅಬಾಧ್ಯತ್ವೇ ಸತಿ' ಎಂಬ ಮೊದಲನೇ ಸತ್ಯಂತ ದಳದ ಪ್ರಯೋಜನ ಲಬ್ಧವಾಗಿಬಿಟ್ಟಿದೆ. ಮೊದಲನೇ ಸತ್ಯಂತದಳ ವ್ಯರ್ಥವಾಗಿದೆ. ವ್ಯರ್ಥವೆಂದು ತ್ಯಾಗ ಮಾಡಿದರೆ ಪಕ್ಷತಾವಚ್ಛೇದಕ ಎರಡಿಲ್ಲ, ಒಂದೇ ಎಂದಾಗುತ್ತದೆ. ಅಸದ್ವಿಲಕ್ಷಣ ಬ್ರಹ್ಮಾನ್ಯತ್ವ ಒಂದೇ ಪಕ್ಷತಾವಚ್ಛೇದಕವಾಗುತ್ತದೆ. ಉಪಧೇಯವಾದ ಅಸದ್ವಿಲಕ್ಷಣ ಬ್ರಹ್ಮಾನ್ಯ ರೂಪ ಪಕ್ಷವು ಎರಡೂ ಅನುಮಾನ ಪ್ರಯೋಗಗಳಲ್ಲಿ ಒಂದೇ ಹೇಗೋ ಹಾಗೇ ಉಪಾಧಿಯಾದ ಅಸದ್‌ವಿಲಕ್ಷಣ ಬ್ರಹ್ಮಾನ್ಯತ್ವರೂಪ ಪಕ್ಷತಾವಚ್ಛೇದಕವೂ ಒಂದೇ ಆಗುವುದನ್ನು ತಪ್ಪಿಸಲಾಗದು. ಆಗ 'ಬ್ರಹ್ಮ ಪ್ರಮಾನ್ಯೇನ ವಾ ಸಪ್ರಕಾರೇಣ ವಾ' ಎಂದು ಎರಡು ಪಕ್ಷತಾವಚ್ಛೇದಕಗಳಿಗೆ ಭೇದವನ್ನು ಸೂಚಿಸುವ 'ವಾ'ಕಾರವು ನಿರರ್ಥಕವೆನಿಸುತ್ತದೆ.

ತಥಾಪಿ, ಸಿದ್ಧಾಂತದಲ್ಲಿಯೂ ಅನುಭೂಯಮಾನಾರೋಪಸ್ಥಳದಲ್ಲಿ ಸ್ಮರ್ಯಮಾಣಾರೋಪ ಸ್ಥಳದಂತೆ ರಜತಾದಿಗಳು ಅಸತ್ತಾಗಿರುವುದಿಲ್ಲ. 'ಇದಂ ರಜತಂ' ಎನ್ನುವ ಅನುಭೂಯಮಾನಾರೋಪದಲ್ಲಿ ರಜತದ ವೈಶಿಷ್ಟ್ಯ ಮಾತ್ರ ಅಸತ್ತು. ಅದು ಬ್ರಹ್ಮಜ್ಞಾನಾನ್ಯವಾದ ಮತ್ತು ಅಧಿಷ್ಠಾನಾತಿರಿಕ್ತ ಪ್ರಕಾರಕವಾದ 'ನೇದಂ ರಜತಂ' ಎಂಬ ಜ್ಞಾನದಿಂದ ಬಾಧ್ಯವಾಗುತ್ತದೆ. ಅದನ್ನು

ಪ್ರಥಮ ಸತ್ಯಂತದಳವು ವ್ಯಾವೃತ್ತಿ ಮಾಡುತ್ತದೆ. ಆದರಿಂದ ಅದು ವ್ಯರ್ಥವಲ್ಲ. ವ್ಯರ್ಥವೆಂದು ಅದನ್ನು ತ್ಯಾಗ ಮಾಡಿದರೆ ಪಕ್ಷದಲ್ಲಿ ಸೇರಿರುವ ಈ ರಜತದಲ್ಲಿ 'ಪ್ರತಿಪನ್ನೋಪಾಧೌ' ಇತ್ಯಾದಿ ಪ್ರಥಮಸಾಧ್ಯ ಮೊದಲೇ ಇರುವುದರಿಂದ ಸಿದ್ಧಸಾಧನತ್ವ ಪ್ರಸಂಗ.

—ಹೀಗೆ ಕೆಲವರು ಹೇಳುತ್ತಾರೆ.

ವಸ್ತುತಃ ಸಿದ್ಧಸಾಧನತ್ವಕ್ಕೆ ಅವಕಾಶವಿಲ್ಲ. ಸಾಧ್ಯದಲ್ಲಿ 'ಸರ್ವತ್ರ ಪ್ರತಿಪನ್ನೋಪಾಧೌ' ಎಂದು ವಿಶೇಷಣವಿದೆ. ಅನುಭೂಯಮಾನಾರೋಪ ಸ್ಥಳದಲ್ಲಿ ಕಾಣುವ ರಜತವು ಸರ್ವತ್ರ ಪ್ರತಿಪನ್ನೋಪಾಧಿಯಲ್ಲಿ ನಿಷೇಧ ಪ್ರತಿಯೋಗಿಯಲ್ಲ. ಅಸದ್ವಿಲಕ್ಷಣವಾದ್ದರಿಂದ ಪಕ್ಷದಲ್ಲಿ ಸೇರುವ ಈ ರಜತದಲ್ಲಿ ಸರ್ವತ್ರ ತ್ರೈಕಾಲಿಕನಿಷೇಧಪ್ರತಿಯೋಗಿತ್ವವನ್ನು ಸಾಧನೆ ಮಾಡುವಾಗ ಸಿದ್ಧಸಾಧನತ್ವ ದೋಷವಿಲ್ಲ. ಅಸದ್ವಿಲಕ್ಷಣವಾದ ಪ್ರಾತಿಭಾಸಿಕ ಅನಿರ್ವಚನೀಯ ರಜತಾದಿಗಳನ್ನು ಅಂಗೀಕರಿಸುವ ಪಕ್ಷದಲ್ಲಿ ಅವುಗಳಲ್ಲಿ ಸಿದ್ಧಸಾಧನವಾರಣಕ್ಕಾಗಿ ಪ್ರಥಮಸತ್ಯಂತವು ಸಾರ್ಥಕವೇ ಆಗಿದೆ.

ಪ್ರಥಮ ಸತ್ಯಂತವು ಸಿದ್ಧಾಂತಪಕ್ಷದಲ್ಲಿ ವ್ಯಾವರ್ತಕವಿಶೇಷಣವಲ್ಲ. ಉಪರಂಜಕ ವಿಶೇಷಣವಾಗಿದೆ, 'ಪ್ರಮೇಯಘಟ' ಎಂಬಲ್ಲಿ ಪ್ರಮೇಯತ್ವವಿಶೇಷಣವು ಅವ್ಯಾವರ್ತಕ, ಉಪರಂಜಕ ಹೇಗೋ ಹಾಗೇ. 'ಉಪರಕ್ತ ಬುದ್ಧಿಯು ಅನುಮಾನದಿಂದ ಸಿದ್ಧವಾಗಲಿ' ಎಂದು ಉದ್ದೇಶವಿರುವುದರಿಂದ ಉಪರಂಜಕವಿಶೇಷಣವನ್ನು ಅವ್ಯಾವರ್ತಕ, ವ್ಯರ್ಥವೆಂದು ಬಿಡಲಾಗದು. ಪಕ್ಷದಲ್ಲಿ ಹೀಗೆ ಉದ್ದೇಶಸಿದ್ಧಿಗಾಗಿ ಉಪರಂಜಕ ವಿಶೇಷಣವನ್ನು ಕೊಡುವುದು ಶಾಸ್ತ್ರದಲ್ಲಿ ಕಂಡಿದೆ.

ಅದ್ವೈತಮತದಲ್ಲಿ ಈವಿಶೇಷಣವು ಕೇವಲ ಉಪರಂಜಕವಾಗಿರದೆ ವ್ಯಾವರ್ತಕವೇ ಆಗಿದೆ. ಹೀಗಾಗಿ ಪ್ರಥಮಸತ್ಯಂತಕ್ಕೆ ಉಭಯವಾದಿ ಸಿದ್ಧವಾದ ಒಂದು ಪ್ರಯೋಜನವಿಲ್ಲದಿದ್ದರೂ ಉಭಯವಾದಿಸಿದ್ಧ ಪ್ರಯೋಜನಗಳು ಇರುವುದರಿಂದ ಅವ್ಯರ್ಥವೇ ಆಗಿದೆ.

❖❖❖

ननु तथापि प्रथमसत्यन्तं व्यर्थम् । सिद्धसाधनं हि प्रपञ्चसत्यत्ववादिनोद्भाव्यम् । नहि तन्मतेऽनिर्वचनीयं रजतं प्रसिद्धं येन तदंशे तदुद्भाव्यं स्यात् । नच प्रपञ्चमिथ्यात्ववादिना तदुद्भावनं कर्तुं शक्यम् । सर्वेणापि स्वसिद्धस्यैव विप्रतिपत्तौ परं प्रति साधनादिति चेन्न ।

ग्रन्थस्य तत्त्वनिर्णिनीषुकथात्वेन तत्र गुरुशिष्यकथारूपे यदानिर्वचनीयरजतादौ मिथ्यात्वं निश्चितवन्तं शिष्यं प्रति गुरुणा ब्रह्मप्रमान्येन सप्रकारेण वेत्यादिपक्षविशेषणमदत्वा असद्विलक्षणं ब्रह्मान्यदित्येव पक्षं निर्दिश्य मिथ्यात्वं साध्यते तदा तदंशे शिष्योद्भावनीयसिद्धसाधनवारकत्वेन तस्यावैयर्थ्योपपत्तिरिति संप्रदायः ।

केचित्तु परार्थानुमान इव स्वार्थानुमानेऽपि अंशे सिद्धिरनुमितिप्रतिबन्धिकेति तत्स्थलव्यावृत्तपक्षतावच्छेदकधर्मविशिष्टस्यैव पक्षस्य ज्ञानमनुमित्यङ्गमिति स्फोरणायोभयत्रापि पक्षतावच्छेदके प्रथमसत्यन्तमुपात्तमित्याहुः ।

ಪ್ರಥಮಸತ್ಯಂತ ವ್ಯರ್ಥ ಎಂದು ಆಕ್ಷೇಪ— 'ಸಿದ್ಧಸಾಧನತಾ ಪರಿಹಾರ ಮಾಡುವುದರಿಂದ ವ್ಯರ್ಥವಲ್ಲ' ಎಂದರೆ, ಅದು ಸರಿಯಲ್ಲ. ಸಿದ್ಧಸಾಧನತಾ ದೋಷವನ್ನು ಪ್ರಪಂಚ ಸತ್ಯತ್ವವಾದಿ ಹೇಳಬೇಕು. ಆದರೆ ಅವನ ಮತದಲ್ಲಿ ಅನಿರ್ವಚನೀಯ ರಜತ ಅಪ್ರಸಿದ್ಧ. ಅದನ್ನಿಟ್ಟುಕೊಂಡು ಅವನು ಸಿದ್ಧಸಾಧನತ್ವವನ್ನು ಹೇಗೆ ಹೇಳುತ್ತಾನೆ? 'ಮಿಥ್ಯಾತ್ವವಾದಿ ಹೇಳುತ್ತಾನೆ' ಎಂದರೆ ಅದು ಸರಿಯಲ್ಲ. ಎಲ್ಲ ವಾದಿಗಳೂ ತಮಗೆ ಸಿದ್ಧವಾದುದನ್ನೇ ವಿಪ್ರತಿಪತ್ತಿ ಬಂದಾಗ ಪರನಿಗೆ ಸಾಧನ ಮಾಡುತ್ತಾರೆ. ಅವರಿಗೆ ಸಿದ್ಧಸಾಧನತ್ವ ದೋಷವೆ ಅಲ್ಲ. ಅವರು ಅದನ್ನು ದೋಷವೆಂದು ಹೇಳುವುದು ಅಸಂಗತವಾಗುತ್ತದೆ'.

ಈ ಆಕ್ಷೇಪ ಸರಿಯಲ್ಲ. ಇದು ಗುರುಶಿಷ್ಯರ ನಡುವಿನ ವಾದಕಥೆ. ಇದರಲ್ಲಿ ಶಿಷ್ಯನು ಅದ್ವೈತಿ ರೀತಿಯಿಂದ ಅನಿರ್ವಚನೀಯ ರಜತದಲ್ಲಿ ಮಿಥ್ಯಾತ್ವವನ್ನು ನಿಶ್ಚಯಮಾಡಿಕೊಂಡಿರುತ್ತಾನೆ. ಆದರಿಂದ ಗುರುವು ಪ್ರಥಮಸತ್ಯಂತ ವಿಶೇಷಣ ನೀಡದೆ ಕೇವಲ 'ಅಸದ್‌ವಿಲಕ್ಷಣ ಬ್ರಹ್ಮಾನ್ಯ' ವೆಂದು ಪಕ್ಷನಿರ್ದೇಶಮಾಡಿ ಮಿಥ್ಯಾತ್ವ ಸಾಧನ ಮಾಡಲು ಹೊರಟರೆ, ಶಿಷ್ಯನು ರಜತಾಂಶದಲ್ಲಿ ಸಿದ್ಧಸಾಧನತ್ವವನ್ನು ಹೇಳುತ್ತಾನೆ. ಅದನ್ನು ವಾರಣ ಮಾಡಲು ಪ್ರಥಮ ಸತ್ಯಂತ ದಳ ಬೇಕು. ಅದು ಸಾರ್ಥಕ, ಹೀಗೆ ಸಾರ್ಥಕ್ಯವನ್ನು ಹೇಳುವುದು ಸಂಪ್ರದಾಯ.

ಕೆಲವರು ಹೇಳುತ್ತಾರೆ— 'ಪರಾರ್ಥಾನುಮಾನದಂತೆ ಸ್ವಾರ್ಥಾನುಮಾನದಲ್ಲಿಯೂ ಅಂಶೇ ಸಿದ್ಧಿಯು ಅನುಮಿತಿವಿರೋಧಿಯೆ. ತದ್‌ವ್ಯಾವರ್ತಕದಿಂದ ವ್ಯಾವೃತ್ತವಾದ ಪಕ್ಷತಾವಚ್ಛೇದಕ ಯುಕ್ತ ಪಕ್ಷದ ಜ್ಞಾನವೇ ಅನುಮಿತಿಗೆ ಅಂಗವೆಂದು ತಿಳಿಸಲು ಎರಡು ಪಕ್ಷತಾವಚ್ಛೇದಕಗಳಲ್ಲಿಯೂ ಪ್ರಥಮಸತ್ಯಂತವಿದೆ' ಎಂದು.

❖❖❖

ननु किं पक्षतावच्छेदकसाध्यसामानाधिके रण्यमात्रमनुमिति विषयः, तदवच्छेदका-वच्छिन्नसाध्यसामानाधिकरण्यं वा? आद्ये नांशतः सिद्धसाधनं किन्तु सिद्धसाधनमेव । अंशतः सिद्धेरेव सिद्धित्वात् ।

अंशतो बाधस्यादोषत्वापत्तिश्च । अबाधादेव साध्यसिद्धेरप्रयोजकत्वात् ।

द्वितीये त्वंशतः सिद्धसाधनं दोष एव न । सामान्यधर्मावच्छिन्नसिद्धेरजातत्वात् । तद्धर्मावच्छिन्नसिद्धौ तद्धर्मावच्छिन्नसिद्धिविरहरूपपक्षत्वाविरोधात् । एवमंशतो बाधोऽपि न

दूषणम् । सामान्यधर्मावच्छेदेन साध्याभावानवधारणात् । नच सामान्यधर्मावच्छेदेन जातायामनुमितौ तदंशे भ्रमत्वं स्यादिति वाच्यम् । इष्टापादनात् । प्रपञ्च एव मिथ्यात्व प्रमितेरुद्देश्यत्वात् । नचैवमंशत:सिद्धसाधनांशतोबाधयोरदोषत्व प्रसङ्गः । पक्षतावच्छेदक-नानात्वस्थले तद्दोषत्वसम्भवात् । प्रकृते च तदैक्यादिति चेदुच्यते ।

ಇಲ್ಲಿ ಆಕ್ಷೇಪ ಬರುತ್ತದೆ— ಅನುಮಿತಿಗೆ ವಿಷಯವು ಪಕ್ಷತಾವಚ್ಛೇದಕಕ್ಕೆ ಸಾಧ್ಯದ ಸಾಮಾನಾಧಿಕರಣ್ಯಮಾತ್ರವೆ? ಅಥವಾ ಪಕ್ಷತಾವಚ್ಛೇದಕಕ್ಕೆ ಪಕ್ಷತಾವಚ್ಛೇದಕಾವಚ್ಛಿನ್ನ ಸಾಧ್ಯದ ಸಾಮಾನಾಧಿಕರಣ್ಯವೆ? ಪಕ್ಷತಾವಚ್ಛೇದಕ ಮತ್ತು ಸಾಧ್ಯಗಳಿಗೆ ಸಾಮಾನಾಧಿಕರಣ್ಯ ಮಾತ್ರವೇ ಅನುಮಿತಿಗೆ ವಿಷಯವೆನ್ನುವ ಮೊದಲನೆ ಪಕ್ಷದಲ್ಲಿ 'ಅಂಶೇಸಿದ್ಧಸಾಧನ' ಎನ್ನುವುದೇ ಇಲ್ಲ. ಕೇವಲ ಸಿದ್ಧಸಾಧನವೆ. ಏಕೆಂದರೆ ಅಂಶೇಸಿದ್ಧಿಯೇ ಸಿದ್ಧಿ.

ಈ ಪಕ್ಷದಲ್ಲಿ ಅಂಶೇಬಾಧವೂ ದೋಷವಲ್ಲವೆಂದಾಗುವುದು. ಅಬಾಧದಿಂದಲೆ ಸಾಧ್ಯಸಿದ್ಧಿಯಾಗುವುದರಿಂದ ಅಂಶೇ ಬಾಧವು ಅಪ್ರಯೋಜಕ ವಾಗುವುದು.

ಪಕ್ಷತಾವಚ್ಛೇದಕಕ್ಕೆ ಪಕ್ಷತಾವಚ್ಛೇದಕಾವಚ್ಛಿನ್ನ ಸಾಧ್ಯಸಾಮಾನಾಧಿಕರಣ್ಯವು ಅನುಮಿತಿ ವಿಷಯವೆನ್ನುವ ಎರಡನೇ ಪಕ್ಷದಲ್ಲಿ ಅಂಶತಃ ಸಿದ್ಧಸಾಧನವಿದ್ದರೂ ಅದು ದೋಷವಾಗುವುದಿಲ್ಲ. ಅಂಶತಃ ಸಾಧ್ಯಸಿದ್ಧಿ ಇದ್ದರೂ ಸಾಮಾನ್ಯಧರ್ಮಾವಚ್ಛಿನ್ನ ಸಾಧ್ಯಸಿದ್ಧಿ ಉಂಟಾಗಿಲ್ಲ. ಸಾಮಾನ್ಯಧರ್ಮಾವಚ್ಛಿನ್ನ ಸಾಧ್ಯಸಿದ್ಧಿಗೆ ಸಾಮಾನ್ಯ ಧರ್ಮಾವಚ್ಛಿನ್ನ ಸಾಧ್ಯಸಿದ್ಧಿವಿರಹವೇ ಪಕ್ಷತೆ. ಅದಕ್ಕೆ ಅಂಶತಃ ಸಿದ್ಧಿಯು ವಿರೋಧಿಯಲ್ಲ.

ಹೀಗೇ ಅಂಶತಃ ಬಾಧವೂ ಕೂಡ ದೋಷವಾಗುವುದಿಲ್ಲ. ಅಂಶತಃ ಬಾಧವಿದ್ದರೂ ಸಾಮಾನ್ಯ ಧರ್ಮಾವಚ್ಛಿನ್ನ ಸಾಧ್ಯಾಭಾವನಿಶ್ಚಯವಿರುವುದಿಲ್ಲ.

'ಹಾಗಾದರೆ ಸಾಮಾನ್ಯಧರ್ಮಾವಚ್ಛಿನ್ನ ಸಾಧ್ಯಾನುಮಿತಿ ಬಂದಾಗ ಅದಕ್ಕೆ ಅಂಶೇ ಬಾಧದಿಂದ ಅಂಶೇ ಭ್ರಮತ್ವ ಉಂಟಾದೀತು' ಎಂದರೆ ಇಷ್ಟಾಪತ್ತಿ. ಶಶವಿಷಾಣಾದಿ ಅಂಶದಲ್ಲಿ ಬಿಟ್ಟು ಘಟಾದಿ ಪ್ರಪಂಚದಲ್ಲಿ ಮಿಥ್ಯಾತ್ವ ಪ್ರಮಿತಿ ಬರುವುದು ಉದ್ದೇಶ್ಯವಾಗಿರುತ್ತದೆ. ಶಶವಿಷಾಣಾದಿ ಅಂಶದಲ್ಲಿ ಮಿಥ್ಯಾತ್ವ ಪ್ರಮಿತಿ ಬರಬೇಕೆಂದು ಉದ್ದೇಶವಿರುವುದಿಲ್ಲ.

'ಹಾಗಾದರೆ ಅಂಶತಃ ಸಿದ್ಧಸಾಧನವಾಗಲಿ ಅಂಶತಃ ಬಾಧವಾಗಲಿ ದೋಷವೇ ಅಲ್ಲ ಎಂದಾಯಿತು' ಎಂದರೆ ಹಾಗಾಗುವುದಿಲ್ಲ. ಪಕ್ಷತಾವಚ್ಛೇದಕ ಅನೇಕ ಇರುವ ಕಡೆ ಅವು ದೋಷಗಳಾಗಬಹುದು. ಪ್ರಕೃತದಲ್ಲಿ ಪಕ್ಷತಾವಚ್ಛೇದಕ ಒಂದೇ ಇರುವುದರಿಂದ ಅವು ದೋಷವಾಗುವುದಿಲ್ಲ' — ಹೀಗೆ ಆಕ್ಷೇಪ.

❖❖❖

द्वयी ह्यनुमितिः। एका पक्षतावच्छेदकसाध्य सामानाधिकरण्यगोचरा। अपरा तदवच्छिन्नसाध्यगोचरा। येन रूपेण पक्षे हेतुज्ञानं तेन रूपेण हेतोः पक्षे साध्यसिद्धेः। हेतुज्ञानं च क्वचित् पक्षतावच्छेदक सामानाधिकरण्येन क्वचित्पक्षतावच्छेदकावच्छेदेनेति। तत्रोभयत्राप्यंशतः सिद्धसाधनं दोष एव। अनुमितिविषयीभूतधर्मसमानाधिकरणसाध्यतावच्छेदकावच्छिन्नसाध्यसिद्धिविरहरूपपक्षताविघटकत्वात्। नच पृथिवी इतरभिन्नेत्यत्र घटादौ तत्वेनेतरभेदसिद्धावपि पृथिवीत्वावच्छेदेनोद्देश्यायाः इतरभेदप्रतीतेरसिद्धिवत् प्रातिभासिकस्य तत्वेन मिथ्यात्वप्रतीतेः सिद्धावपि ब्रह्मान्यत्वावच्छेदेनोद्देश्यायाः मिथ्यात्वप्रतीतेस्तदंशेऽप्यभावान्नांशे सिद्धसाधनमिति वाच्यम्। घटादेः (प्रातिभासिकस्य च) निश्चितसाध्यकत्वेन सन्देहसिषाधयिषयोरभावेन ब्रह्मान्यत्वपृथिवीत्वयोरतिप्रसक्ततया पक्षतावच्छेदकत्वायोगेन तद्व्यवच्छेदनार्थं ब्रह्मप्रमान्येनेत्यादि सत्यन्त(दलो) द्वयोपादानात्। न चैवं पृथिवीतरभिन्नेत्यादावपि पृथिवीत्वं न पक्षतावच्छेदकं स्यात्। किन्तु घटाद्यन्यपृथिवीत्वमेव तत् स्यादिति वाच्यम्। इष्टापादनात्। अत एव पक्षतावच्छेदकैक्येऽपि अंशतः सिद्धसाधनं दोष इति हृदि निधाय मणिकृता व्यतिरेकिण्युक्तम् "पृथिवीत्वेन रूपेण(यावानेव) विप्रतिपत्तिविषयः तावत एव पक्षतेति।"

ಇದು ಸರಿಯಲ್ಲ. ಅನುಮಿತಿ ಎರಡು ರೀತಿ. ಒಂದು, ಸಾಧ್ಯದಲ್ಲಿ ಪಕ್ಷತಾವಚ್ಛೇದಕ ಸಾಮಾನಾಧಿಕರಣ್ಯವನ್ನು ಮಾತ್ರ ವಿಷಯೀಕರಿಸುವುದು. ಇನ್ನೊಂದು ಪಕ್ಷತಾವಚ್ಛೇದಕಾವಚ್ಛಿನ್ನ ಸಾಧ್ಯವನ್ನು ವಿಷಯೀಕರಿಸುವುದು. ಯಾವ ರೂಪದಿಂದ ಪಕ್ಷದಲ್ಲಿ ಹೇತುಜ್ಞಾನವೋ ಆ ರೂಪದಿಂದ ಪಕ್ಷದಲ್ಲಿ ಹೇತುವಿನಿಂದ ಸಾಧ್ಯಸಿದ್ಧಿ. ಹೇತುಜ್ಞಾನವು ಕೆಲವುಕಡೆ ಪಕ್ಷತಾವಚ್ಛೇದಕ ಸಾಮಾನಾಧಿಕರಣ್ಯದಿಂದ. ಕೆಲವುಕಡೆ ಪಕ್ಷತಾವಚ್ಛೇದಕಾವಚ್ಛೇದೇನ. ಈ ಎರಡೂಕಡೆ ಅಂಶತಃ ಸಿದ್ಧಸಾಧನವು ದೋಷವೇ ಆಗುವುದು. ಏಕೆಂದರೆ ಅದು ಅನುಮಿತಿವಿಷಯಧರ್ಮ ಸಮಾನಾಧಿಕರಣ ಸಾಧ್ಯತಾವಚ್ಛೇದಕಾವಚ್ಛಿನ್ನ ಸಾಧ್ಯಸಿದ್ಧಿ ವಿರಹರೂಪವಾದ ಪಕ್ಷತಾಕ್ಕೆ ವಿಘಟಕವಾಗುವುದು.

'ಪೃಥಿವೀ ಇತರಭಿನ್ನಾ' ಎಂಬಲ್ಲಿ ಘಟದಲ್ಲಿ ಘಟತ್ವೇನ ಇತರಭೇದ ಸಿದ್ಧವಾಗಿದ್ದರೂ ಪೃಥಿವೀತ್ವಾವಚ್ಛೇದೇನ ಉದ್ದಿಷ್ಟವಾದ ಇತರಭೇದ ಪ್ರತೀತಿಯು ಘಟಾಂಶದಲ್ಲಿಯೂ ಸಿದ್ಧವಾಗಿರುವುದಿಲ್ಲ. ಹಾಗೇ ಪ್ರಾತಿಭಾಸಿಕದಲ್ಲಿ ಪ್ರಾತಿಭಾಸಿಕತ್ವೇನ ಮಿಥ್ಯಾತ್ವ ಪ್ರತೀತಿ ಸಿದ್ಧವಾಗಿದ್ದರೂ ಬ್ರಹ್ಮಾನ್ಯತ್ವಾವಚ್ಛೇದೇನ ಉದ್ದಿಷ್ಟವಾದ ಮಿಥ್ಯಾತ್ವ ಪ್ರತೀತಿಯು ಪ್ರಾತಿಭಾಸಿಕಾಂಶದಲ್ಲಿಯೂ ಸಿದ್ಧವಾಗಿರುವುದಿಲ್ಲ. ಆದರಿಂದ ಅಂಶೇ ಸಿದ್ಧಸಾಧನದೋಷ ಬರುವುದಿಲ್ಲ'— ಹೀಗೆ ಹೇಳುವುದು ಸರಿಯಲ್ಲ.

ಘಟಾದಿಗಳಲ್ಲಿ ಸಾಧ್ಯವಾದ ಇತರಭೇದವೂ ಪ್ರಾತಿಭಾಸಿಕದಲ್ಲಿ ಸಾಧ್ಯವಾದ ಮಿಥ್ಯಾತ್ವವೂ ನಿಶ್ಚಿತವಾಗಿರುವುದರಿಂದ ಸಾಧ್ಯಸಂದೇಹ ವಾಗಲಿ ಸಿಷಾಧಯಿಷೆಯಾಗಲಿ ಬರುವುದಿಲ್ಲ. ಆದರಿಂದ, ಬ್ರಹ್ಮಾನ್ಯತ್ವವು ಪ್ರಾತಿಭಾಸಿಕದಲ್ಲಿ, ಪೃಥಿವೀತ್ವವು ಘಟದಲ್ಲಿ ಅತಿಪ್ರಸಕ್ತವಾದ್ದರಿಂದ ಪಕ್ಷತಾವಚ್ಛೇದಕ ವಾಗುವುದಿಲ್ಲ. ಆದಕ್ಕೆ ಪ್ರಾತಿಭಾಸಿಕ ವ್ಯಾವೃತ್ತಿಗೆ 'ಬ್ರಹ್ಮಪ್ರಮಾನ್ಯೇನ' ಎಂಬ ಸತ್ಯಂತದ್ವಯ ವಿಶಿಷ್ಟವನ್ನು ಪಕ್ಷತಾವಚ್ಛೇದಕ ಮಾಡಬೇಕು.

'ಬ್ರಹ್ಮಾನ್ಯತ್ವಕ್ಕೆ ಸತ್ಯಂತ ದ್ವಯವನ್ನು ವಿಶೇಷಣ ಮಾಡಿದಂತೆ ಪೃಥಿವೀತ್ವಕ್ಕೂ ಘಟಾನ್ಯತ್ವ ವಿಶೇಷಣ ಕೊಡಬೇಕಾದೀತು' — ಎಂದರೆ, ಇಷ್ಟಾಪತ್ತಿ. ಮಣಿಕಾರನಿಗೆ ಇದು ಸಮ್ಮತ. 'ಪಕ್ಷತಾವಚ್ಛೇದಕ ಒಂದೇ ಇದ್ದಾಗಲೂ ಅಂಶತಃ ಸಿದ್ಧಸಾಧನವು ದೋಷವೇ' ಎಂಬುದನ್ನು ಮನಸಿನಲ್ಲಿಟ್ಟುಕೊಂಡು ಮಣಿಕಾರ ಹೇಳುತ್ತಾನೆ— 'ಪೃಥಿವೀತ್ವೇನ ಎಷ್ಟು ಪದಾರ್ಥಗಳು ವಿಪ್ರಪತ್ತಿವಿಷಯವಾಗುವವೋ ಅವು ಮಾತ್ರ ಪಕ್ಷ' ಎಂದು.

❖❖❖

नच घटादौ घटत्वादिना इतरभेदनिश्चयेऽपि पृथिवीत्वेन तत्सन्देहसिषाधयिषे स्यातामिति वाच्यम्। विशेषाकारेण साध्यनिश्चये सति सामान्याकारेण तत्सन्देहस्य तद्विशेषेतरविषयत्वनियमात्। अन्यथैतत्पर्वतत्वेन वह्निमत्तया निश्चितेऽपि पर्वतत्वेन तत्सन्देहापत्त्या तत्र वह्न्यर्थिनो निष्कम्पप्रवृत्तिर्न स्यात्। सिषाधयिषा हि साध्यगोचरनिश्चयेच्छा। नहि तन्निश्चये सति तदिच्छा भवितुमर्हति। सिद्धे इच्छाविरहस्य सर्वानुभवसिद्धत्वात्। नच विशेषाकारेण साध्यनिश्चयेऽपि रूपान्तरेण तन्निश्चयाभावात् सिषाधयिषा युक्तेति वाच्यम्। तथासत्यभेदानुमानस्य चीत्कारेण करित्वानुमानस्य वा प्रसङ्गात्। नहि तत्रानुमितौ रूपान्तरं भासते। नच तत्रानुमितिरेव सिषाधयिषाविषयः, सा च पूर्वमसिद्धैवेति वाच्यम्। निष्कम्पप्रवृत्त्यादिलक्षणव्यवहारस्य प्रात्यक्षिकनिश्चयेनैवोपपत्त्या तदनुमितेरनुद्देश्यत्वात्। नह्यनुमित्यापि स्वसमानविषयकप्रात्यक्षिकनिश्चयादधिकं फलं संपाद्यते। येन तत्कृतविशेषसद्भावेन (तद्विशेषसद्भावेन) तत्रानुमितीच्छारूपसिषाधयिषा स्यात्। उद्देश्यप्रतीतिसिद्ध्यसिद्ध्योरेव सिद्धसाधनतदभावौ प्रति तन्त्रतया तत्र पक्षतावच्छेदकनानात्वस्य वा तदैक्यस्य वा अतन्त्रत्वात्। अन्यथा तदुक्तेः परिभाषामात्रत्वप्रसङ्गात्।

'ಘಟಾದಿಗಳಲ್ಲಿ ಘಟಾದಿತ್ವೇನ ಇತರಭೇದನಿಶ್ಚಯವಿದ್ದರೂ ಪೃಥಿವೀತ್ವೇನ ಇತರ ಭೇದ ಸಂದೇಹ ಸಿಷಾಧಯಿಷೆಗಳು ಉಂಟಾಗಬಹುದು'— ಎಂದರೆ ಇದು ಸರಿಯಲ್ಲ. ವಿಶೇಷಾಕಾರದಿಂದ ಸಾಧ್ಯ ನಿಶ್ಚಯವಿರುವಾಗ ಸಾಮಾನ್ಯಾಕಾರದಿಂದ ಸಾಧ್ಯ ಸಂದೇಹ ಬರುವುದಿಲ್ಲ. ಆ ಸಂದೇಹವನ್ನು ತದ್ವಿಶೇಷೇತರ ಆಕಾರ ವಿಷಯಕವೆಂದೇ ಸ್ವೀಕರಿಸಬೇಕು. ಇಲ್ಲದಿದ್ದರೆ, ಈ ಒಂದು ಪರ್ವತದಲ್ಲಿ ಏತತ್ ಪರ್ವತತ್ವೇನ ವಹ್ನಿಮತ್ತ್ವ ನಿಶ್ಚಯವಿದ್ದರೂ ಪರ್ವತತ್ವೇನ ತತ್ಸಂದೇಹದಿಂದ ಈ ಪರ್ವತದಲ್ಲಿ ವಹ್ನ್ಯರ್ಥಿಗೆ ನಿಷ್ಕಂಪ ಪ್ರವೃತ್ತಿ ಇಲ್ಲವಾದೀತು. 'ಸಿಷಾಧಯಿಷಾ' ಎಂದರೆ ಸಾಧ್ಯನಿಶ್ಚಯದ ಇಚ್ಛೆ. ಸಾಧ್ಯನಿಶ್ಚಯ ಸಿದ್ಧವಿರುವಾಗ ಸಾಧ್ಯನಿಶ್ಚಯೇಚ್ಛೆ ಬರಲಾರದು. ಸಿದ್ಧವಾದ ವಿಷಯದಲ್ಲಿ ಇಚ್ಛೆ ಬಾರದಿರುವುದು ಸರ್ವಾನುಭವಸಿದ್ಧವೇ ಇದೆ.

'ವಿಶೇಷಾಕಾರದಿಂದ ಸಾಧ್ಯನಿಶ್ಚಯವಿದ್ದರೂ ಬೇರೆ ರೂಪದಿಂದ ನಿಶ್ಚಯವಿಲ್ಲದಿರುವುದರಿಂದ ಸಾಧ್ಯನಿಶ್ಚಯೇಚ್ಛೆ ಬರಬಹುದು' ಎಂದರೆ,

'ಈ ಘಟವು ಈ ಘಟದಿಂದ ಅಭಿನ್ನ' ಎಂದು ಪ್ರತ್ಯಕ್ಷ ಕಂಡಾಗ ಅಭೇದರೂಪ ಸಾಧ್ಯ ನಿಶ್ಚಯವಿದ್ದರೂ, ಬೇರೆ ರೂಪದಿಂದ ಸಾಧ್ಯ ನಿಶ್ಚಯವಿಲ್ಲದ್ದರಿಂದ ಸಾಧ್ಯನಿಶ್ಚಯೇಚ್ಛೆ ಬರಬೇಕಾದೀತು, 'ಈ ಘಟವು ಈ ಘಟದಿಂದ ಅಭಿನ್ನ. ಈ ಘಟವಾಗಿರುವುದರಿಂದ' ಎಂದು ಅನುಮಿತಿ ಬರಬೇಕಾದೀತು. ಗಜವನ್ನು ಗಜವೆಂದು ಪ್ರತ್ಯಕ್ಷ ಕಂಡಿದ್ದರೂ 'ಇದು ಗಜ, ಚೀತ್ಕಾರ ಮಾಡುವುದರಿಂದ' ಎಂದು ಅನುಮಿತಿಯೂ ಬರಬೇಕಾದೀತು. ಅಭೇದಾನುಮಾನದಲ್ಲಾಗಲಿ ಗಜತ್ವಾನುಮಾನದಲ್ಲಾಗಲಿ ಪ್ರತ್ಯಕ್ಷಸಿದ್ಧ ವಾದ ರೂಪಕ್ಕಿಂತ ಬೇರೆ ರೂಪವು ಕಾಣುವುದಿಲ್ಲ.

'ಪ್ರತ್ಯಕ್ಷಸಿದ್ಧವಾದ ಅಭೇದವಿಷಯದಲ್ಲಿಯೂ ಗಜತ್ವವಿಷಯ ದಲ್ಲಿಯೂ ಅನುಮಿತಿರೂಪ ಸಾಧ್ಯನಿಶ್ಚಯದಲ್ಲಿ ಇಚ್ಛೆ ಬರುತ್ತದೆ. ಅದು ಪೂರ್ವದಲ್ಲಿ ಇರುವುದಿಲ್ಲ'—ಎಂದರೆ, ಇದೂ ಸರಿಯಲ್ಲ. ನಿಷ್ಕಂಪ ಪ್ರವೃತ್ತ್ಯಾದಿರೂಪ ವ್ಯವಹಾರವು ಪ್ರತ್ಯಕ್ಷನಿಶ್ಚಯದಿಂದಲೇ ಕೂಡುವುದರಿಂದ ಅನುಮಿತಿ ರೂಪವಾದ ನಿಶ್ಚಯದಲ್ಲಿ ಇಚ್ಛೆ ಬರುವುದಿಲ್ಲ. ಅನುಮಿತಿಯು ಸ್ವಸಮಾನವಿಷಯಕ ಪ್ರತ್ಯಕ್ಷ ನಿಶ್ಚಯಕ್ಕಿಂತ ಹೆಚ್ಚೇನೂ ಫಲವನ್ನು ಉಂಟುಮಾಡುವುದಿಲ್ಲ. ಉಂಟುಮಾಡುತ್ತಿದ್ದರೆ ಆ ವಿಶೇಷ ಫಲಕ್ಕಾಗಿ ಅನುಮಿತೀಚ್ಛಾ ಉಂಟಾಗುತ್ತಿತ್ತು.

ಹೀಗಾಗಿ ಸಿದ್ಧಸಾಧನಕ್ಕೆ ಉದ್ದಿಷ್ಟಪ್ರತೀತಿ ಸಿದ್ಧವಾಗಿರುವುದೇ ಪ್ರಯೋಜಕ. ಸಿದ್ಧಸಾಧನಾಭಾವಕ್ಕೆ ಉದ್ದಿಷ್ಟಪ್ರತೀತಿ ಸಿದ್ಧವಾಗದಿರುವುದೇ ಪ್ರಯೋಜಕವೆನ್ನಬೇಕು. ಹೊರತು, 'ಪಕ್ಷತಾವಚ್ಛೇದಕ ನಾನಾತ್ವವು ಸಿದ್ಧಸಾಧನಕ್ಕೆ ಪ್ರಯೋಜಕ, ಪಕ್ಷತಾವಚ್ಛೇದಕೈಕ್ಯವು ಸಿದ್ಧಸಾಧನವಾಗ ದಿರುವುದಕ್ಕೆ ಪ್ರಯೋಜಕ' ಎನ್ನಬಾರದು. 'ಪ್ರಯೋಜಕವೇ' ಎಂದರೆ ಆ ಮಾತು ಅರ್ಥಶೂನ್ಯವಾದ ಕೇವಲ ಪರಿಭಾಷೆಯಾದೀತು.

❖❖❖

किञ्च यथा गौरवेणानुमानातिरिक्तसाधकबाधकमानाभावसहितसिद्धिविरहो न पक्षपदप्रवृत्तिनिमित्तम् तथा सिषाधयिषाविरहविशिष्टसिद्धिविरहो न तत्पदप्रवृत्तिनिमित्तम् । नहि सिद्धिदशायां सिद्ध्यन्तरेच्छया अनुमितिः प्रमाणसिद्धा, येन तद्विरहोऽपि प्रमाणवद्गौरवस्यापि न्याय्यत्वादितिन्यायेन पक्षपदप्रवृत्तिनिमित्तशरीरे प्रवेश्यः स्यात् ।

एतेन विशेषाकारेण साध्यवत्तया निश्चिते सामान्याकारेण तत्साध्यगोचर-संशयस्यानुभवबाधितत्वेन तत्र संशयघटितपक्षताविरहेऽपि सामान्याकारेण तत्साध्य-गोचरसिद्धीच्छासम्भवेन सिषाधयिषाघटितपक्षतायाः अवैकल्यात् अंशतः साध्यसिद्धावपि तया न सिषाधयिषाघटितपक्षताविघटनम् । अत एवायं एतदभिन्नः एतत्त्वादित्य-भेदानुमानस्यप्रवृत्तिः । प्रत्यक्षपरिकलितेऽपि करिणि चीत्कारेण करित्वानुमानस्य च । दृष्टान्तत्वे लाघवेन निश्चितसाध्यकत्वस्यैव तन्त्रत्वेन गौरवेण पक्षभिन्नत्वस्यातन्त्रतया उक्ताभेदानुमाने पक्षस्यैव सपक्षत्वोपपत्तिः । नचैवमंशतः सिद्धसाधनस्यादोषत्वप्रसङ्गः । पक्षतावच्छेदकनानात्वस्थले तस्य दोषत्वोपपत्तेरिति निरस्तम् ।

निश्चिते साध्यसन्देहवत् सिषाधयिषाया अप्ययोगस्योक्तत्वात् । अंशतो बाधस्तु द्वितीयायामेवानुमितौ दूषणम् । साध्याभाववति गृह्यमाणे धर्मे साध्यसामानाधिकरण्या-वच्छेदकत्वाग्रहात् अनतिप्रसक्ततया ज्ञायमान एव तत्रावच्छेदकत्वपरिच्छेदादिति नैयायिकमतरीत्यैवमभिधानादिति ।

'ಪಕ್ಷ' ಶಬ್ದಕ್ಕೆ ಅನುಮಾನಾತಿರಿಕ್ತ ಸಾಧಕಬಾಧಕ ಮಾನಾಭಾವ ಸಹಿತ ಸಿದ್ಧ್ಯಭಾವವು ಪ್ರವೃತ್ತಿನಿಮಿತ್ತವಲ್ಲ, ಗೌರವ ಬರುವುದರಿಂದ. ಇದೇರೀತಿ ಸಿಷಾಧಯಿಷಾವಿರಹವಿಶಿಷ್ಟ ಸಿದ್ಧ್ಯಭಾವವೂ 'ಪಕ್ಷ' ಪದಪ್ರವೃತ್ತಿ ನಿಮಿತ್ತವಲ್ಲ. ಗೌರವ ಬರುವುದರಿಂದ. ಏಕೆಂದರೆ ಸಿದ್ಧಿ ಇರುವಾಗ ಇನ್ನೊಂದು ಸಿದ್ಧಿಯ ಇಚ್ಛೆಯಿಂದ ಅನುಮಿತಿ ಬರುವುದು ಅನುಭವ ಸಿದ್ಧವಲ್ಲ. ಅನುಭವವಿರುತ್ತಿದ್ದರೆ, ಪ್ರಮಾಣ ಬಲದಿಂದ ಇನ್ನೊಂದು ಸಿದ್ಧೀಚ್ಛೆಯ ಅಭಾವವನ್ನು ಪಕ್ಷಪದ ಪ್ರವೃತ್ತಿ ನಿಮಿತ್ತ ಶರೀರದಲ್ಲಿ ಸೇರಿಸುವಂತೆ, ಗೌರವವು ಸಹ್ಯವೆನ್ನುವ ಕಾರಣದಿಂದಲೂ ಇನ್ನೊಂದು ಸಿದ್ಧೀಚ್ಛೆಯ ಅಭಾವವನ್ನು ಅಲ್ಲಿ ಸೇರಿಸಬಹುದಿತ್ತು.

ಕೆಲವರು ಹೀಗೂ ಹೇಳುತ್ತಾರೆ— 'ವಿಶೇಷಾಕಾರದಿಂದ ಸಾಧ್ಯ ನಿಶ್ಚಯವಿರುವಾಗ ಸಾಮಾನ್ಯಾಕಾರದಿಂದ ಸಾಧ್ಯ ಸಂಶಯ ಬರುವುದು ಅನುಭವಬಾಧಿತವಾಗಿರುವುದರಿಂದ ಸಂಶಯ ಘಟಿತ ಪಕ್ಷತಾ ಇಲ್ಲದಿದ್ದರೂ ಸಾಮಾನ್ಯಾಕಾರದಿಂದ ಸಾಧ್ಯಗೋಚರವಾಗುವ ಸಿದ್ಧೀಚ್ಛೆ

ಬರಬಹುದಾದ್ದರಿಂದ ಸಿಷಾಧಯಿಷಾಘಟಿತವಾದ ಪಕ್ಷತಾಕ್ಕೆ ಅಡ್ಡಿ ಇಲ್ಲ. ಆದರಿಂದ ಅಂಶೇ ಸಿದ್ಧಿ ಇದ್ದರೂ ಆದರಿಂದ ಸಿಷಾಧಯಿಷಾ ಘಟಿತ ಪಕ್ಷತಾ ವಿಘಟನವಾಗುವುದಿಲ್ಲ. ಆದರಿಂದಲೆ 'ಈ ಘಟವು ಈ ಘಟಕ್ಕಿಂತ ಅಭಿನ್ನ, ಈ ಘಟವಾದ್ದರಿಂದ' ಎಂಬ ಅಭೇದಾನುಮಾನವೂ ಪ್ರತ್ಯಕ್ಷ ದೃಷ್ಟವಾದ ಗಜವನ್ನು ಚೀತ್ಕಾರದಿಂದ ಗಜವೆಂದು ಅನುಮಾನ ಮಾಡುವುದೂ ಕೂಡುತ್ತದೆ. ದೃಷ್ಟಾಂತತ್ವಕ್ಕೆ ಲಾಘವದಿಂದ ನಿಶ್ಚಿತಸಾಧ್ಯಕತ್ವವೇ ಪ್ರಯೋಜಕ, ಹೊರತು ಪಕ್ಷ ಭಿನ್ನತ್ವವು ಪ್ರಯೋಜಕವಲ್ಲ; ಗೌರವ ಬರುವುದರಿಂದ. ಹೀಗಾಗಿ ಮೇಲೆ ಹೇಳಿದ ಅಭೇದಾನುಮಾನದಲ್ಲಿ ಪಕ್ಷವೇ ಸಪಕ್ಷವಾಗುವುದು ಕೂಡುತ್ತದೆ. 'ಹಾಗಾದರೆ ಅಂಶತಃ ಸಿದ್ಧಸಾಧನಕ್ಕೆ ದೋಷತ್ವ ಎಲ್ಲಿಯೂ ಕೂಡಲಾರದು' ಎಂದರೆ 'ಪಕ್ಷತಾವಚ್ಛೇದಕ ನಾನಾತ್ವ ಸ್ಥಳದಲ್ಲಿ ಅದು ಕೂಡುತ್ತದೆ ಎನ್ನುತ್ತೇವೆ.'

—ಇದೂ ಸರಿಯಲ್ಲ. ಏಕೆಂದರೆ ನಿಶ್ಚಿತ ಸಾಧ್ಯವಿಷಯದಲ್ಲಿ ಸಂದೇಹ ಕೂಡುವುದಿಲ್ಲ. ಹೇಗೋ ಹಾಗೆ, ಸಿಷಾಧಯಿಷಾವೂ ಕೂಡುವುದಿಲ್ಲ ಎಂದು ಹೇಳಿದ್ದೇವೆ. ಅಂಶತೋ ಭಾಧವು ಮಾತ್ರ ಪಕ್ಷತಾವಚ್ಛೇದಕ ನಾನಾತ್ವ ಸ್ಥಳದ ಎರಡನೇ ಅನುಮಾನದಲ್ಲಿ ದೋಷವಾಗುವುದು. ಏಕೆಂದರೆ ವಿಪಕ್ಷ ವೃತ್ತಿತ್ವೇನ ಜ್ಞಾಯಮಾನಧರ್ಮದಲ್ಲಿ ಸಾಧ್ಯ ಸಾಮಾನಾಧಿಕರಣ್ಯಾವಚ್ಛೇದಕತ್ವ ಅಂದರೆ ಸಾಧ್ಯವ್ಯಾಪ್ಯತಾವು ಗ್ರಹಣವಾಗುವುದಿಲ್ಲ. ವಿಪಕ್ಷದಲ್ಲಿ ಅತಿಪ್ರಸಕ್ತವಾಗದ ಧರ್ಮದಲ್ಲಿಯೇ ವ್ಯಾಪ್ಯತಾ ಗ್ರಹಣವಾಗುತ್ತದೆ ಎಂದು ನೈಯಾಯಿಕಮತರೀತಿಯಿಂದ ಹೀಗೆ ಹೇಳುತ್ತೇವೆ.

❖❖❖

**प्रतिपन्नोपाधाविति ।** असद्व्यावर्तनायेदम् । प्रागभावादिप्रतियोगित्वमादायांशत: सिद्धसाधनवारणायाह **त्रैकालिकेति ।**

ननु विवरणे आपणादिस्थपारमार्थिकरजतस्यैव स्वरूपेण शुक्त्यादिरूपप्रतिपन्नोपाधिनिष्ठात्यन्ताभावप्रतियोगित्वस्योक्तत्वात् तद्वदेव प्रपञ्चस्य प्रतिपन्नोपाधिनिष्टत्रैकालिकनिषेधप्रतियोगित्वसाधनस्य सत्यत्वेऽप्युपपत्त्यार्थान्तरम् । संबन्धान्तरेण स्वसमवायिदेशनिष्टत्रैकालिकनिषेधप्रतियोगित्वस्य सत्त्वाच्च सिद्धसाधनमिति चेन्न ।

सर्वत्र प्रतिपन्नोपाधौ प्रतिपत्तिविषयीभूतसकलसंबन्धेन स्वरूपेण त्रैकालिकनिषेधप्रतियोगित्वस्य केवलान्वय्यत्यन्ताभावप्रतियोगित्वस्य वा विवक्षितत्वात् । नचैवं विवक्षणे सिद्धसाधनमर्थान्तरं वा सत्यत्ववादिनोद्भावयितुं शक्यम् । तेन केवलान्वय्यत्यन्ताभावप्रतियोगिन: तदप्रतियोगिनश्च स्वदेशकालयो: प्रतिपत्तिविषयीभूतसकलसंबन्धेन स्वरूपेण असत्वस्यैवाङ्गीकारात् ।

नचैवं प्रतिपन्नोपाधाविति व्यर्थम्, सर्वत्रेत्यनेनैव तल्लाभादिति वाच्यम् । प्रतिपन्नोपाधावित्यनेनैव तथात्वस्य विवक्षितत्वादिति भावः ।

'ಪ್ರತಿಪನ್ನೋಪಾಧೌ' ಎಂದು ಹೇಳದಿದ್ದರೆ ಕೇವಲ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವವು ಅಸತ್ತಿನಲ್ಲಿಯೂ ಬರುತ್ತದೆ. ಅದರ ವ್ಯಾವೃತ್ತಿಗೆ 'ಪ್ರತಿಪನ್ನೋಪಾಧೌ' ಎಂಬ ವಿಶೇಷಣ ಬೇಕು. ಅಸತ್ತಿಗೆ ಉಪಾಧಿತ್ವೇನ, ಆಶ್ರಯತ್ವೇನ, ಪ್ರತಿಪನ್ನವಾದುದು ಇರುವುದಿಲ್ಲ. ಪ್ರಾತಿಭಾಸಿಕಕ್ಕೆ 'ಇದಂ ರಜತಂ' ಎಂಬಲ್ಲಿ ಪುರೋವರ್ತಿ ಶುಕ್ತಿಯು ಪ್ರತಿಪನ್ನೋಪಾಧಿ ಇದೆ. ಆ ಶುಕ್ತಿಯಲ್ಲಿ ರಜತಕ್ಕೆ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವ ಬರುವುದರಿಂದ ಮಿಥ್ಯಾತ್ವ ಕೂಡುತ್ತದೆ.

'ಕಪಾಲೇ ಘಟೋ ನಾಸ್ತಿ' ಎಂದು ಘಟಕ್ಕೆ ಪ್ರತಿಪನ್ನೋಪಾಧಿರೂಪವಾದ ಕಪಾಲದಲ್ಲಿ ಪ್ರಾಗಭಾವ ಧ್ವಂಸ ಪ್ರತಿಯೋಗಿತ್ವ ಬರುವುದರಿಂದ ಅನಿತ್ಯಪದಾರ್ಥಗಳಲ್ಲಿ ಅಂಶತಃ ಸಿದ್ಧಸಾಧನ. ಅದಕ್ಕೆ ತ್ರೈಕಾಲಿಕ ನಿಷೇಧವೆಂದು ವಿಶೇಷಣ.

ವಿವರಣ ಗ್ರಂಥದಲ್ಲಿ 'ಅಂಗಡಿ ಮುಂತಾದೆಡೆ ಇರುವ ಪಾರಮಾರ್ಥಿಕ ರಜತವೇ ಸ್ವರೂಪೇಣ ಶುಕ್ತ್ಯಾದಿ ಪ್ರತಿಪನ್ನೋಪಾಧಿಯಲ್ಲಿ ಅತ್ಯಂತಾಭಾವ ಪ್ರತಿಯೋಗಿಯಾಗುತ್ತದೆ' ಎಂದಿರುವುದರಿಂದ ಅದೇರೀತಿ ಪ್ರಪಂಚಕ್ಕೆ ಪ್ರತಿಪನ್ನೋಪಾಧಿ ನಿಷ್ಠ ತ್ರೈಕಾಲಿಕ ಪ್ರತಿಯೋಗಿತ್ವ ಸಾಧನೆ ಮಾಡಿದರೂ ಅದು ಪ್ರಪಂಚಸತ್ಯತ್ವ ಪಕ್ಷದಲ್ಲಿಯೂ ಕೂಡುವುದರಿಂದ ಅರ್ಥಾಂತರ ದೋಷ ಬರುತ್ತದೆ. ಮತ್ತು ಸ್ವಸಮವಾಯಿ ದೇಶದಲ್ಲಿ ಸಂಬಂಧಾಂತರದಿಂದ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವವು ಘಟಾದಿಗಳಿಗೆ ಇರುವುದರಿಂದ ಅದನ್ನು ಸಾಧನಮಾಡಿದರೆ ಸಿದ್ಧಸಾಧನ, ಎಂದು ಇಲ್ಲಿ ಆಕ್ಷೇಪ ಬರುತ್ತದೆ.

ಇದಕ್ಕೆ ಹೀಗೆ ಸಮಾಧಾನ— 'ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧಪ್ರತಿಯೋಗಿತ್ವ' ಎಂಬುದನ್ನು 'ಎಲ್ಲ ಪ್ರತಿಪನ್ನೋಪಾಧಿಗಳಲ್ಲಿ ಪ್ರತಿಪತ್ತಿ ವಿಷಯೀಭೂತ ಸಕಲ ಸಂಬಂಧದಿಂದ ಸ್ವರೂಪೇಣ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವ' ಎಂದು ಪರಿಷ್ಕರಿಸಬೇಕು. ಅಥವಾ ಕೇವಲಾನ್ವಯ್ಯತ್ಯಂತಾಭಾವ ಪ್ರತಿಯೋಗಿತ್ವಾಭಿಪ್ರಾಯದ್ದೆಂದು ವಿವರಣೆ ನೀಡಬೇಕು. ಈಗ ಸಿದ್ಧಸಾಧನವನ್ನಾಗಲಿ ಅರ್ಥಾಂತರವನ್ನಾಗಲಿ ಪ್ರಪಂಚದ ಸತ್ಯತ್ವವಾದಿಗೆ ಹೇಳಲು ಬರುವುದಿಲ್ಲ. ಏಕೆಂದರೆ ಅವನು ಕೇವಲಾನ್ವಯ್ಯತ್ಯಂತಾಭಾವ ಪ್ರತಿಯೋಗಿಯನ್ನು ಅಸತ್ತೆನ್ನುತ್ತಾನೆ. ಮತ್ತು ಘಟಾದಿಗಳು ಕೇವಲಾನ್ವಯ್ಯತ್ಯಂತಾಭಾವಕ್ಕೆ ಅಪ್ರತಿಯೋಗಿಯಾಗಿದ್ದರೂ, ಸ್ವದೇಶ ಕಾಲಗಳಲ್ಲಿ ಪ್ರತಿಪತ್ತಿ ವಿಷಯೀಭೂತ ಸಕಲ ಸಂಬಂಧೇನ ಸ್ವರೂಪೇಣ ಸತ್ವವನ್ನು ಘಟಾದಿಗಳಿಗೆ ಅವನು ಒಪ್ಪುವುದಿಲ್ಲ. ಅಸತ್ವವನ್ನೇ ಒಪ್ಪುತ್ತಾನೆ.

ಹಾಗಾದರೆ 'ಪ್ರತಿಪನ್ನೋಪಾಧೌ' ಎಂಬ ವಿಶೇಷಣ ವ್ಯರ್ಥ. ಸರ್ವತ್ರನಿಷೇಧ ಪ್ರತಿಯೋಗಿತ್ವ ವನ್ನು ಹೇಳಿದ್ದರಿಂದಲೇ ಅದರ ಪ್ರಯೋಜನ ಲಬ್ಧವಾಗುತ್ತದೆ'— ಎಂದರೆ, ನಿಜ. ಆದರೆ

'ಪ್ರತಿಪನ್ನೋಪಾಧೌ' ಎಂದು ವಿಶೇಷಣಕ್ಕೀ ಹಾಗೆ ಅಭಿಪ್ರಾಯವಿರುವುದರಿಂದ ಅದು ವ್ಯರ್ಥವೆನಿಸುವುದಿಲ್ಲ.

❖❖❖

**पारमार्थिकत्वाकारेण त्रैकालिकनिषेधप्रतियोगि न वा ।**

**अखण्डार्थनिष्ठवेदान्तजन्यनिष्प्रकारकब्रह्मप्रमाबाध्यमपि विश्वं ब्रह्मप्रमान्येन वा सप्रकारेण वा न बाध्यमिति नाश्रयासिद्धिः । एवमुत्तरत्रापि पूर्वोत्तरपक्षानुमानप्रतिज्ञे संकलय्य विप्रतिपत्तिरूह्या ।**

**इदं च विप्रतिपत्तिप्रदर्शनं तार्किकरीत्यैव नतु वस्तुतः । तत्पक्षेऽपि विप्रतिपत्तिवाक्यस्य पक्षपरिग्रहैकफलकत्वात् । तस्य च कथाबाह्येन निग्रहानर्हेण लौकिकरीत्यनुसारिणा संस्कृतरूपेण वा भाषारूपेण वा मया प्रपञ्चमिथ्यात्वं साध्यत इति वादिवाक्येन वा त्वया प्रपञ्चमिथ्यात्वं साध्यमिति मध्यस्थपरिकल्पित विषयस्वीकारेण वा सिद्धौ प्रतिज्ञाव्यतिरिक्तस्य उक्तकुसृष्टियुक्तस्य विप्रतिपत्तिवाक्यस्य वैयर्थ्यात् । न च साध्योपस्थित्यर्थं तत् । प्रतिज्ञयैव तत्सिद्धेः । न च पक्षत्वप्रयोजकसंशयार्थं तत् । वादिप्रतिवादिनोः प्राश्निकानां च निश्चयवत्त्वेन तदयोगात् । आहार्यसंशयस्य चातिप्रसङ्गेन पक्षत्वाप्रयोजकत्वात् । विप्रतिपत्तिवाक्यानपेक्षत्वाच्च । संशयं विनापि सिषाधयिषाविरहसहकृतसाधकप्रमाणाभावरूपस्य पक्षत्वस्य संभवाच्च ।**

ननु स्वरूपेणैवंविधनिषेधप्रतियोगित्वे प्रपञ्चस्यात्यन्तासत्त्वमेव स्यात् । नहि शशविषाणादेरेवंविधनिषेधप्रतियोगित्वादन्यत् निस्स्वरूपत्वरूपमसत्वमन्विष्यमाण-मुपलभ्यत इत्यस्वरसादाह **पारमार्थिकत्वाकारेणेति ।** पारमार्थिकत्वाकारेण प्रतिपत्तिविषयीभूतसकल संबन्धेन सर्वार्थनिष्ठत्रैकालिकनिषेधप्रतियोगि न वेत्यर्थः । अत्र पूर्वत्र च विप्रतिपत्तौ विधिकोटिप्रसिद्धिः शुक्तिरूप्यादौ द्रष्टव्या । तत्रतत्रोत्तरत्र विवक्षित

स्थलेऽपि विप्रतिपत्त्यदर्शनात् ग्रन्थ न्यूनतामाशङ्क्योक्त प्रकारमन्यत्राप्यतिदिशति **एवमिति ।**

अपसिद्धान्तमाशङ्क्याह **इदञ्चेति ।** नतु वस्तुतो विचाराङ्गत्वादित्यर्थः । ननु तार्किकविचाराङ्गत्वेनाङ्गीकृताया विप्रतिपत्ते विचारानङ्गत्वोक्तिरयुक्तेत्याशङ्क्य तत्पक्षेऽपि तत्साध्यप्रयोजनस्य अन्यतोऽपि संभवेन तस्या न विचाराङ्गत्वमित्याह **तत्पक्षेऽपीति ।** ननु वाक्यत्वाविशेषे किं विनिगमकमित्यत आह **निग्रहानर्हेणेति । उक्तकुसृष्टियुक्तस्येति ।** बहुनियमवतोऽनेकविशेषणवन इत्यर्थः । ननु पक्षपरिग्रहैकफलकत्वमसिद्धम् । साध्योपस्थित्यर्थमपि तत्संभवादित्याशङ्क्याह **नचेति । साध्योपस्थित्यर्थमिति ।** पक्षपरिग्रहजनितसाध्योपस्थितेः समयबन्धादिना व्यवहितत्वा-दिति भावः । **पक्षत्वेति ।** संदिग्धसाध्यवत एव पक्षत्वादिति भावः । **अतिप्रसङ्गेनेति ।** विशेषदर्शनानिवर्त्यतयानुमित्यनन्तरमपि पक्षत्वापादकत्वेनेत्यर्थः । ननु सिद्धिविरहसहितः संदेहः पक्षताप्रयोजकोऽस्त्वित्यत आह **विप्रतिपत्तीति** । पूर्वं संशयस्य पक्षत्वप्रयोजकत्वमभ्युपेत्य तस्य विप्रतिपत्तिवाक्य प्रयोज्यत्वं दूषितम् । इदानीं तु संशयस्य पक्षत्वप्रयोजकत्वमेव नेत्याह **संशयं विनापीति ।** एतच्चोपलक्षणम् । समय बन्धादि व्यवहितस्य संशयस्य तदघटकत्वाच्चेत्यपि बोध्यम् । **साधकप्रमाणेति** । अत्र साधकप्रमाणं भावव्युत्पत्त्या सिद्धिरेव । नतु करणव्युत्पत्त्या भावव्युत्पत्तिसहितया सिद्धितत्करणान्यान्ये, गौरवात् । नचानुमानातिरिक्तप्रमाणकालेऽनुमित्यदर्शनात् गौरवं प्रामाणिकम् । तावतानुमितिविरहसहकृतानुमानातिरिक्त प्रमाणाभावस्यापि कारणत्व-प्राप्तेः । नचोभयोः कारणत्वाविशेषात् सिध्यभावस्यैव पक्षतात्वे किं विनिगमकमिति वाच्यम् । लाघवेन सिध्यभावस्यैव पक्षपद प्रवृत्तिनिमित्तत्वादिति भावः ।

❖❖❖

### ಪಾರಮಾರ್ಥಿಕತ್ವಾಕಾರೇಣ ತ್ರೈಕಾಲಿಕ ನಿಷೇಧಪ್ರತಿಯೋಗಿ ನ ವಾ ?

ಸ್ವರೂಪೇಣ ನಿಷೇಧಪ್ರತಿಯೋಗಿತ್ವ ಸಾಧನೆ ಮಾಡಿದರೆ ಪ್ರಪಂಚ ಅತ್ಯಂತಾಸತ್ತ್ವಂದಾದೀತು. ಶಶವಿಷಾಣಾದಿಗಳಿಗೆ ಸ್ವರೂಪೇಣ ನಿಷೇಧಪ್ರತಿಯೋಗಿತ್ವರೂಪ ನಿಸ್ಸ್ವರೂಪತ್ವಕ್ಕಿಂತ ಬೇರೆ ಅಸತ್ತ್ವವಿಲ್ಲ ಎಂದು ಆಸ್ವಾರಸ್ಯದಿಂದ ಹೇಳುತ್ತಾರೆ—

ಪಾರಮಾರ್ಥಿಕತ್ವಾಕಾರೇಣ ತ್ರೈಕಾಲಿಕ ನಿಷೇಧಪ್ರತಿಯೋಗಿ ಯಾಗಿದೆಯೆ ಇಲ್ಲವೆ? ಎಂದು ವಿಪ್ರತಿಪತ್ತಿ. ಪಾರಮಾರ್ಥಿಕತ್ವಾಕಾರದಿಂದ, ಪ್ರತಿಪತ್ತಿ ವಿಷಿಯೀಭೂತವಾದ ಸಕಲ ಸಂಬಂಧದಿಂದ, ಸರ್ವಾರ್ಥ ನಿಷ್ಠ ತ್ರೈಕಾಲಿಕ ನಿಷೇಧಕ್ಕೆ ಪ್ರತಿಯೋಗಿಯಾಗಿದೆಯೆ ಅಥವಾ ಇಲ್ಲವೆ? ಎಂದರ್ಥ.

ಇಲ್ಲಿಯೂ ಹಿಂದೆ ಹೇಳಿದ ವಿಪ್ರತಿಪತ್ತಿಯಲ್ಲಿಯೂ ವಿಧಿಕೋಟಿಯು ಶುಕ್ತಿರಜತಾದಿಗಳಲ್ಲಿ ಪ್ರಸಿದ್ಧವಾಗಿದೆ.

**ಅಖಂಡಾರ್ಥನಿಷ್ಠ ವೇದಾಂತಜನ್ಯ ನಿಷ್ಪ್ರಕಾರಕ ಬ್ರಹ್ಮಪ್ರಮಾ ಬಾಧ್ಯಮಪಿ ವಿಶ್ವಂ ಬ್ರಹ್ಮಪ್ರಮಾನ್ಯೇನ ವಾ ಸಪ್ರಕಾರೇಣ ವಾ ನ ಬಾಧ್ಯಮಿತಿ ನಾಶ್ರಯಾಸಿದ್ಧಿಃ ।**

ಅಖಂಡಾರ್ಥತಾತ್ಪರ್ಯಉಳ್ಳ ವೇದಾಂತ ಜನ್ಯ ನಿಷ್ಪ್ರಕಾರಕ ಬ್ರಹ್ಮ ಪ್ರಮಿತಿಯಿಂದ ವಿಶ್ವವು ಬಾಧ್ಯವಾದರೂ ಬ್ರಹ್ಮಪ್ರಮಿತಿಗಿಂತ ಭಿನ್ನವಾದ ಅಥವಾ ಸಪ್ರಕಾರವಾದ ಜ್ಞಾನದಿಂದ ಬಾಧ್ಯವಲ್ಲವಾದ್ದರಿಂದ ಆಶ್ರಯಾಸಿದ್ಧಿ ಇಲ್ಲ.

**ಏವಂ ಉತ್ತರತ್ರಾಪಿ ಪೂರ್ವೋತ್ತರಪಕ್ಷಾನುಮಾನ ಪ್ರತಿಜ್ಞೇ ಸಂಕಲಯ್ಯ ವಿಪ್ರತಿಪತ್ತಿಃ ಊಹ್ಯಾ ।**

ಹೀಗೇ ಮುಂದೆಯೂ ಕೂಡ ಪೂರ್ವೋತ್ತರಪಕ್ಷಗಳ ಅನುಮಾನ ಪ್ರತಿಜ್ಞೆಗಳನ್ನು ಜೊತೆ ಸೇರಿಸಿ ವಾಕಾರ ಹಾಕಿ ವಿಪ್ರತಿಪತ್ತಿಯ ಆಕಾರವನ್ನು ಊಹಿಸಿಕೊಳ್ಳಬೇಕು. ಅದರಿಂದ ಮುಂದೆ ಅಲ್ಲಲ್ಲಿ ವಿವಕ್ಷಿತ ಸ್ಥಳಗಳಲ್ಲಿ ವಿಪ್ರತಿಪತ್ತಿಗಳನ್ನು ಸ್ಪಷ್ಟ ಹೇಳದಿದ್ದರೂ ಗ್ರಂಥಕ್ಕೆ ನ್ಯೂನತೆ ಎಂದು ತಿಳಿಯಬಾರದು. ಶಿಷ್ಯರು ಅದನ್ನು, ಇಲ್ಲಿ ಹೇಳಿದ ರೀತಿಯಿಂದಲೇ ಪೂರ್ವಪಕ್ಷಸಿದ್ಧಾಂತ ಪ್ರತಿಜ್ಞೆಗಳನ್ನು ಜೊತೆ ಸೇರಿಸಿಕೊಂಡು ಊಹಿಸಿ ತಿಳಿಯಬೇಕು.

## ವಿಪ್ರತಿಪತ್ತಿ ಪ್ರದರ್ಶನ ಆವಶ್ಯಕವಲ್ಲ

**ಇದಂ ಚ ವಿಪ್ರತಿಪತ್ತಿ ಪ್ರದರ್ಶನಂ ತಾರ್ಕಿಕ ರೀತ್ಯೈವ । ನ ತು ವಸ್ತುತಃ । ತತ್ತ್ವೇಽಪಿ ವಿಪ್ರತಿಪತ್ತಿ ವಾಕ್ಯಸ್ಯ ಪಕ್ಷ ಪರಿಗ್ರಹೈಕ ಫಲಕತ್ವಾತ್ । ತಸ್ಯ ಚ ಕಥಾಬಾಹ್ಯೇನ ನಿಗ್ರಹಾನರ್ಹೇಣ ಲೌಕಿಕ ರೀತ್ಯನುಸಾರಿಣಾ ಸಂಸ್ಕೃತ ರೂಪೇಣ ವಾ ಭಾಷಾ ರೂಪೇಣ ವಾ 'ಮಯಾ ಪ್ರಪಂಚ ಮಿಥ್ಯಾತ್ವಂ ಸಾಧ್ಯತೇ' ಇತಿ ವಾದಿವಾಕ್ಯೇನ ವಾ 'ತ್ವಯಾ ಪ್ರಪಂಚಮಿಥ್ಯಾತ್ವಂ ಸಾಧ್ಯಂ' ಇತಿ ಮಧ್ಯಸ್ಥಪರಿಕಲ್ಪಿತ ವಿಷಯ ಸ್ವೀಕಾರೇಣ ವಾ ಸಿದ್ಧೌ, ಪ್ರತಿಜ್ಞಾವ್ಯತಿರಿಕ್ತಸ್ಯ ಉಕ್ತ ಕುಸೃಷ್ಟಿಯುಕ್ತಸ್ಯ ವಿಪ್ರತಿಪತ್ತಿವಾಕ್ಯಸ್ಯ ವೈಯರ್ಥ್ಯಾತ್ ।**

ಹೀಗೆ ವಾದದಲ್ಲಿ ಮೊದಲಿಗೆ ವಿಪ್ರತಿಪತ್ತಿಪ್ರದರ್ಶನ ಮಾಡುವುದು ವಿಚಾರಕ್ಕೆ ಅಂಗವಲ್ಲವಾದ್ದರಿಂದ ಸಿದ್ಧಾಂತ ಸಮ್ಮತವಲ್ಲ. ಹಾಗಿದ್ದರೂ ಪ್ರದರ್ಶನ ಮಾಡುತ್ತಿದ್ದಾರೆ, ಏಕೆ? ಅಪಸಿದ್ಧಾಂತದೋಷ ಬರಲಾರದೆ? ಎಂದು ಆಕ್ಷೇಪಿಸಬಾರದು. ಏಕೆಂದರೆ ತಾರ್ಕಿಕರೀತಿಯಿಂದ ಹೀಗೆ ವಿಪ್ರತಿಪತ್ತಿಪ್ರದರ್ಶನ ಮಾಡಿದ್ದೇವೆ.

'ತಾರ್ಕಿಕರು ಇದನ್ನು ವಿಚಾರಕ್ಕೆ ಅಂಗವೆಂದು ಒಪ್ಪಿರುವಾಗ ನೀವು ವಿಚಾರಾಂಗವಲ್ಲ ಎನ್ನುವುದು ಅಯುಕ್ತ'ಎಂದರೆ, ವಸ್ತುತಃ ಇದು ವಿಚಾರಾಂಗವಲ್ಲ. ಏಕೆಂದರೆ ತಾರ್ಕಿಕ ಪಕ್ಷದಲ್ಲಿಯೂ ವಿಪ್ರತಿಪತ್ತಿ ವಾಕ್ಯವು ವಾದಿಪ್ರತಿವಾದಿಗಳಿಗೆ ತಮ್ಮ ತಮ್ಮ ಪಕ್ಷಗಳನ್ನು ಸ್ವೀಕರಿಸಲು ಸಹಾಯವಾಗುವುದರಿಂದ ಮಾತ್ರ ವಿಚಾರಾಂಗವೆನಿಸುತ್ತದೆ. ಈ ಪಕ್ಷಪರಿಗ್ರಹ ಕಾರ್ಯವು ವಿಪ್ರತಿವಾಕ್ಯದ ಬಲದಿಂದಲೇ ನಡೆಯಬೇಕಿಲ್ಲ. ವಾದಿವಾಕ್ಯದಿಂದಲೇ ಅದು ಸಾಧ್ಯವಿದೆ.

ವಾದಕಥೆಯಲ್ಲಿ ಸೇರದಿರುವುದರಿಂದ ಅಪಶಬ್ದಾದಿ ನಿಗ್ರಹಕ್ಕೆ ಅನರ್ಹವಾದ್ದರಿಂದ, ಲೌಕಿಕರೀತಿಗನುಸಾರವಾಗಿ ಸುಲಭವಾಗಿಯೂ ಇರುವುದರಿಂದ, ಸಂಸ್ಕೃತ ಭಾಷೆಯಿಂದಾಗಲಿ ದೇಶಭಾಷೆಯಿಂದಾಗಲಿ ಹೇಳುವುದು ಶಕ್ಯವಿರುವುದರಿಂದ 'ನಾನು ಪ್ರಪಂಚ ಮಿಥ್ಯಾತ್ವವನ್ನು ಸಾಧಿಸುತ್ತೇನೆ' ಎಂದು ವಾದಿ ನುಡಿದರೆ ಅದರಿಂದ ವಾದಿಪ್ರತಿವಾದಿಗಳು ಪಕ್ಷ ಪರಿಗ್ರಹ ಮಾಡಲು ಶಕ್ಯವಿದೆ. ಅಥವಾ 'ನೀನು ಪ್ರಪಂಚ ಮಿಥ್ಯಾತ್ವವನ್ನು ಸಾಧಿಸಬೇಕು' ಎಂದು ಮುಂತಾಗಿ ಮಧ್ಯಸ್ಥನೇ ಒಂದು ವಿಷಯವನ್ನು ಆಲೋಚಿಸಿ ಪಕ್ಷಗಳನ್ನು ವಾದಿಪ್ರತಿವಾದಿಗಳಿಗೆ ವಹಿಸಿಕೊಡಬಹುದು.

'ಹಾಗಿದ್ದರೂ ವಿಪ್ರತಿಪತ್ತಿವಾಕ್ಯ ಬೇಡ ಏಕೆ?' ಎಂದರೆ ವಿಪ್ರತಿಪತ್ತಿ ವಾಕ್ಯವು ವ್ಯರ್ಥ. ಅದನ್ನು ನೋಡುವಾಗ ಎರಡು ಪ್ರತಿಜ್ಞಾವಾಕ್ಯಗಳು ಜೊತೆಯಾಗಿರುವಂತೆ ಕಂಡರೂ ವಸ್ತುತಃ ಅವು ಪ್ರತಿಜ್ಞಾವಾಕ್ಯರೂಪವಲ್ಲ. ಆದರಿಂದ ಪ್ರತಿಜ್ಞಾವಾಕ್ಯದಂತೆ ಕಥೆಗೆ ಅದು ಆವಶ್ಯಕವೆನಿಸುವುದಿಲ್ಲ. ಮತ್ತು ವಿಪ್ರತಿಪತ್ತಿವಾಕ್ಯವು ಹಿಂದೆ ಹೇಳಿದಂತೆ, 'ಬ್ರಹ್ಮಪ್ರಮಾನ್ಯೇನ ವಾ ಸಪ್ರಕಾರೇಣ ವಾ' ಇತ್ಯಾದಿ ಅನೇಕ ವಿಶೇಷಣಗಳನ್ನು ಹಾಕುವುದು ಅವೆಲ್ಲಕ್ಕೂ ಕೃತ್ಯಗಳನ್ನು ವಿಚಾರ ಮಾಡುವುದು ಮುಂತಾಗಿ ಬಹಳ ಕುಸೃಷ್ಟಿಯುಕ್ತವಾಗಿದೆ. ಲೌಕಿಕ ರೀತಿಯಿಂದ ಸಂಸ್ಕೃತ ಭಾಷೆಯಲ್ಲಾಗಲಿ ದೇಶಭಾಷೆಗಳಲ್ಲಾಗಲಿ ಪಕ್ಷಪರಿಗ್ರಹವನ್ನು ಹೇಳುವಾಗ ಈ ರೀತಿಯ ಕುಸೃಷ್ಟಿಯಿಲ್ಲ, ಬಲು ಸುಲಭವಾಗಿ ತಿಳಿಯುತ್ತದೆ. ಶ್ರಮವಿರುವುದಿಲ್ಲ. ಆದರಿಂದ ವ್ಯರ್ಥವಾಗಿರುವ ವಿಪ್ರತಿವಾಕ್ಯವನ್ನು ವಿಚಾರಾಂಗವಾಗಿ ಅವಶ್ಯ ಹೇಳಬೇಕಾಗಿಲ್ಲ.

**ನಚ ಸಾಧ್ಯೋಪಸ್ಥಿತ್ಯರ್ಥಂ ತತ್ । ಪ್ರತಿಜ್ಞಯೈವ ತತ್ಸಿದ್ಧೇಃ ।**

'ಪಕ್ಷಪರಿಗ್ರಹಮಾತ್ರವೇ ವಿಪ್ರತಿವಾಕ್ಯಫಲವೆನ್ನಲಾಗದು. ಸಾಧ್ಯದ ಉಪಸ್ಥಿತಿಗಾಗಿಯೂ ಅದು ಬೇಕು' ಎನ್ನಬಾರದು. ಪ್ರತಿಜ್ಞೆಯು ವಾದದಲ್ಲಿ ಆವಶ್ಯಕ. ಆವಶ್ಯಕವಾದ ಪ್ರತಿಜ್ಞೆಯಿಂದಲೇ ಸಾಧ್ಯೋಪಸ್ಥಿತಿ ಉಂಟಾಗುತ್ತದೆ. ಹೀಗಿರುವಾಗ ವಿಪ್ರತಿಪತ್ತಿವಾಕ್ಯವು ಸಾಧ್ಯೋಪಸ್ಥಿತಿಗಾಗಿ ಬೇಕು ಎನ್ನಲಾಗದು.

**ನ ಚ ಪಕ್ಷತ್ವ ಪ್ರಯೋಜಕ ಸಂಶಯಾರ್ಥಂ ತತ್ । ವಾದಿ ಪ್ರತಿವಾದಿನೋಃ ಪ್ರಾಶ್ನಿಕಾನಾಂ ಚ ನಿಶ್ಚಯವತ್ತ್ವೇನ ತದಯೋಗಾತ್ । ಆಹಾರ್ಯ ಸಂಶಯಸ್ಯ ಚ ಅತಿಪ್ರಸಂಗೇನ ಪಕ್ಷತಾಪ್ರಯೋಜಕತ್ವಾತ್ । ವಿಪ್ರತಿಪತ್ತಿವಾಕ್ಯಾನಪೇಕ್ಷತ್ವಾಚ್ಚ ।**

'ಸಂದಿಗ್ಧಸಾಧ್ಯವಾನ್ ಪಕ್ಷಃ' ಎಂಬಂತೆ ಪಕ್ಷತ್ವಕ್ಕೆ ಸಾಧ್ಯಸಂದೇಹವು ಪ್ರಯೋಜಕ. ಆ ಸಾಧ್ಯಸಂದೇಹವು ವಿಪ್ರತಿಪತ್ತಿ ವಾಕ್ಯದಿಂದಲೇ ಉಂಟಾಗಬೇಕು. ಆದರಿಂದ ವಿಪ್ರತಿವಾಕ್ಯ ಆವಶ್ಯಕ' ಎಂದರೆ, ಅದು ಸರಿಯಲ್ಲ. ವಾದಿ ಪ್ರತಿವಾದಿಗಳಿಗೂ ಪ್ರಾಶ್ನಿಕರಿಗೂ ನಿಶ್ಚಾಯಕಪ್ರಮಾಣ ರೂಪ ವಿಶೇಷದರ್ಶನವಿರುವುದರಿಂದ ಅವರಿಗೆ ಯಾರಿಗೂ ಸಂಶಯವೇ ಇಲ್ಲ. ನಿಶ್ಚಯವಿರುತ್ತದೆ. ಆದರಿಂದ ಸಾಧ್ಯಸಂದೇಹಕ್ಕಾಗಿ ವಿಪ್ರತಿಪತ್ತಿ ವಾಕ್ಯಬೇಕು ಎನ್ನಲಾಗುವುದಿಲ್ಲ.

ವಿಶೇಷದರ್ಶನವಿದ್ದರೂ ವಾದಿ ಪ್ರತಿವಾದಿ ಪ್ರಾಶ್ನಿಕರಿಗೆ ಆಹಾರ್ಯ ಸಂಶಯ ಯದ್ಯಪಿ ಬರಬಹುದು. ಆದರೆ ಈ ಆಹಾರ್ಯಸಂಶಯವು ವಿಶೇಷದರ್ಶನದಿಂದ ನಿವೃತ್ತಿ ಹೊಂದುವುದಿಲ್ಲ. ಆದರಿಂದ ವಾದಿ ಪ್ರತಿವಾದಿಗಳು ವಾದ ಕಥೆಯಲ್ಲಿ ತಮ್ಮ ಅನುಮಾನಗಳನ್ನು ಪ್ರಯೋಗ ಮಾಡುವಾಗ ಸಾಧ್ಯಾನುಮಿತಿ ಬಂದರೂ ಆಹಾರ್ಯ ಸಾಧ್ಯಸಂಶಯ ಹಾಗೇ ಇರುತ್ತದೆ. ನಿವೃತ್ತಿ ಹೊಂದುವುದಿಲ್ಲ, ಪಕ್ಷತಾಸಂಪಾದಕವಾಗೇ ಇರುತ್ತದೆ ಅನುಮಿತ್ಯಾಪತ್ತಿ ಬರುತ್ತದೆ ಅತಿಪ್ರಸಕ್ತಿ ಬರುತ್ತದೆ.

'ಸಿದ್ಧ್ಯಭಾವ ಸಹಿತವಾದ ಸಾಧ್ಯ ಸಂದೇಹವೇ ಪಕ್ಷತಾಸಂಪಾದಕ ವಾಗುತ್ತದೆ. ಸಾಧ್ಯಾನುಮಿತಿ ಬಂದಾಗ ಸಿದ್ಧ್ಯಭಾವವಿಲ್ಲದಿರುವುದ ರಿಂದಲೇ ಪಕ್ಷತಾ ಇಲ್ಲ ಎನ್ನುತ್ತೇನೆ' ಎಂದರೆ, ಆಹಾರ್ಯವಾದ ಸಾಧ್ಯಸಂಶಯವು ಇಚ್ಛಾಜನ್ಯವಾದ್ದರಿಂದಲೇ ಆದಕ್ಕೆ ವಿಪ್ರತಿಪತ್ತಿವಾಕ್ಯದ ಅಪೇಕ್ಷೆ ಇಲ್ಲ.

**ಸಂಶಯಂ ವಿನಾಪಿ ಸಿಷಾಧಯಿಷಾವಿರಹ ಸಹಕೃತ ಸಾಧಕಪ್ರಮಾಣಾಭಾವ ರೂಪಸ್ಯ ಪಕ್ಷತ್ವಸ್ಯ ಸಂಭವಾಚ್ಚ ।**

ವಿಪ್ರತಿಪತ್ತಿವಾಕ್ಯಜನ್ಯವಾದ ಸಾಧ್ಯ ಸಂಶಯವು ವಿಚಾರಕ್ಕೆ ಪಕ್ಷತಾ ಸಂಪಾದಕವಾಗಿ ಆವಶ್ಯಕ ಎಂದು ಹೇಳವುದೂ ಸರಿಯಲ್ಲ. ಸಾಧ್ಯ ಸಂಶಯವಿಲ್ಲದಿದ್ದರೂ, ಸಿಷಾಧಯಿಷಾವಿರಹಸಹಕೃತ ಸಿದ್ಧ್ಯಭಾವರೂಪ ಪಕ್ಷತಾದಿಂದಲೇ ವಿಚಾರ ನಿರ್ವಾಹವಾಗಬಹುದು. ಮತ್ತು ಸಂಶಯ ಬಂದರೂ ಸಮಯಬಂಧಾದಿ ವ್ಯವಧಾನದಿಂದ ಅದು ನಿವೃತ್ತವಾಗಿರುತ್ತದೆ, ವಿಚಾರಕಾಲದಲ್ಲಿ ಇರುವುದಿಲ್ಲ.

'ಸಾಧಕಪ್ರಮಾಣಾಭಾವ'ವೆಂದರೆ, ಇಲ್ಲಿ ಭಾವೇಲ್ಯುಟ್ ಪ್ರತ್ಯಯದಿಂದ ಸಾಧಕ ಪ್ರಮಿತಿಯನ್ನು ಅಂದರೆ ಸಿದ್ಧಿಯನ್ನಿಟ್ಟುಕೊಳ್ಳಬೇಕು ಹೊರತು ಕರಣವ್ಯುತ್ಪತ್ತಿಯನ್ನೂ ಜೊತೆಗೆ ಇಟ್ಟುಕೊಂಡು ಸಿದ್ಧಿ ತತ್ಕರಣ ಅನ್ಯತರವನ್ನಲ್ಲ. ಗೌರವ ಬರುತ್ತದೆ.

'ಸಿದ್ಧಿಯಂತೆ ಅನುಮಾನಾತಿರಿಕ್ತವಾದ ಸಿದ್ಧಿಕರಣವಿರುವಾಗಲೂ ಅನುಮಿತಿ ಬರುವುದು ಕಂಡಿಲ್ಲವಾದ್ದರಿಂದ ಗೌರವವು ಪ್ರಾಮಾಣಿಕ' ಎನ್ನುವುದು ಸರಿಯಲ್ಲ. ಅನುಮಾನಾತಿರಿಕ್ತವಾದ ಸಿದ್ಧಿಕರಣವಿರುವಾಗಲೂ ಅನುಮಿತಿ ಕಂಡಿಲ್ಲವೆಂದರೆ ಅನುಮಾನಾತಿರಿಕ್ತ ಸಿದ್ಧಿಕರಣಾಭಾವವೂ ಅನುಮಿತಿಗೆ ಕಾರಣವೆಂದು ಮಾತ್ರ ಸಿದ್ಧವಾಗುವುದು. ಅದು ಪಕ್ಷತಾ ಎಂದು ಸಿದ್ಧವಾಗುವುದಿಲ್ಲ.

'ಸಿದ್ಧ್ಯಭಾವ ಸಿದ್ಧಿಕರಣಾಭಾವಗಳೆರಡೂ ಅನುಮಿತಿಗೆ ಕಾರಣವಾಗು ವಾಗ ಸಿದ್ಧ್ಯಭಾವವೇ ಏಕೆ ಪಕ್ಷತಾ ಎನಿಸುತ್ತದೆ? ಅದಕ್ಕೆ ವಿನಿಗಮಕವೇನು?' ಎಂದರೆ, ಲಾಘವವೇ ವಿನಿಗಮಕ. 'ಪಕ್ಷ'ಪದ ಪ್ರವೃತ್ತಿನಿಮಿತ್ತತ್ವವನ್ನು ಲಘುಭೂತವಾದ ಸಿದ್ಧ್ಯಭಾವಕ್ಕೇ ಹೇಳಬೇಕು. ಗುರುಭೂತವಾದ ಅನುಮಾನಾತಿರಿಕ್ತ ಸಿದ್ಧಿಕರಣಾಭಾವಕ್ಕೆ ಅಲ್ಲ. ಸಿದ್ಧ್ಯಭಾವ ತತ್ಕರಣಾಭಾವಾನ್ಯತರಕ್ಕೂ ಅಲ್ಲ.

ಅದ್ವೈತಸಿದ್ಧಿಕಾರನು ವಿಪ್ರತಿಪತ್ತಿಪ್ರದರ್ಶನ ಕಡ್ಡಾಯವೆನ್ನುತ್ತಾನೆ—

(1) ವಾದಿಪ್ರತಿವಾದಿಗಳಿಗೆ ವಿಶೇಷದರ್ಶನವಿರುವುದರಿಂದ ಸಂಶಯವಿಲ್ಲದಿದ್ದರೂ ಮಧ್ಯಸ್ಥನಿಗೂ ಶ್ರೋತೃವರ್ಗಕ್ಕೂ ವಿಶೇಷದರ್ಶನವಿಲ್ಲದಿರುವುದರಿಂದ ವಿಪ್ರತಿಪತ್ತಿಯು ಸಂಶಯಜನಕವಾಗುತ್ತದೆ. ಮಧ್ಯಸ್ಥಾದಿಗಳ ಸಂಶಯವು ವಾದಿಪ್ರತಿವಾದಿಗಳಿಗೆ ಪಕ್ಷತಾ ಪ್ರಯೋಜಕ ವಾಗದಿದ್ದರೂ ವಿಚಾರಕ್ಕೆ ಶ್ರೋತೃಗಳ ಸಂದೇಹ ಪರಿಹಾರದ ಉದ್ದೇಶವಿರುವುದರಿಂದ ಸಂದೇಹವು ವಿಚಾರಾಂಗವಾಗಿರುತ್ತದೆ. ಆದರಿಂದ ಸಂದೇಹಕ್ಕಾಗಿ ವಿಪ್ರತಿಪತ್ತಿ ಪ್ರದರ್ಶನವು ಆವಶ್ಯಕ.

(2) ವಾದಿಪ್ರತಿವಾದಿಗಳಿಗೆ ವಿಶೇಷದರ್ಶನರೂಪ ಪ್ರತಿಬಂಧಕವಿರುವುದರಿಂದ ವಿಪ್ರತಿಪತ್ತಿ ವಾಕ್ಯದಿಂದ ಸಂದೇಹ ಉಂಟಾಗದಿದ್ದರೂ ಸಂದೇಹ ಜನನಸ್ವರೂಪಯೋಗ್ಯತೆ ಅದಕ್ಕೆ ಉಂಟು. ಆದರಿಂದ ವಿಪ್ರಪತ್ತಿ ಪ್ರದರ್ಶನ ಆವಶ್ಯಕ.

(3) ವಾದಿಪ್ರತಿವಾದಿಗಳಿಗೂ ಸಂಶಯವಿರುತ್ತದೆ. 'ನಿಶ್ಚಯ ಉಳ್ಳವರೇ ವಾದ ಮಾಡುತ್ತಾರೆ' ಎಂಬ ಮಾತಿಗೆ 'ಅಹಂಕಾರದಿಂದ ಪರಪಕ್ಷವನ್ನು ಸ್ವೀಕರಿಸಿ ಪರಪಕ್ಷದಲ್ಲಿ ಅಭಿಮಾನಿಕವಾದ ನಿಶ್ಚಯದಿಂದ ವಾದ ಮಾಡುತ್ತಾರೆ' ಎಂದರ್ಥ.

(4) ಸಮಯ ಬಂಧದಂತೆ ವಿಪ್ರತಿಪತ್ತಿಪ್ರದರ್ಶನವೂ ಮಧ್ಯಸ್ಥನಿಗೆ ಕರ್ತವ್ಯವಾಗಿದೆ. ಅದಿಲ್ಲದಿದ್ದರೆ ವಾದಿಪ್ರತಿವಾದಿಗಳು ವಿಷಯಾಂತರಕ್ಕೆ ಹೋಗಿ ವಿಚಾರವನ್ನು ಕೆಡಿಸಬಹುದು. ವಿಪ್ರತಿಪತ್ತಿಪ್ರದರ್ಶನ ಮಾಡಿದರೆ ಉಭಯ ಕೋಟಿಗಳಿಗೆ ಸಂಬಂಧಿಸಿದ ವಿಷಯಗಳನ್ನೇ ವಾದಿಪ್ರತಿವಾದಿಗಳು ವಿಚಾರಕ್ಕೆ ಸ್ವೀಕರಿಸುವಂತಾಗುತ್ತದೆ. ಆದರಿಂದಲೂ ವಿಪ್ರತಿಪತ್ತಿಪ್ರದರ್ಶನ ಆವಶ್ಯಕ ಎಂದು.

ಇದು ಸರಿಯಲ್ಲ.

(1) ಶ್ರೋತೃವರ್ಗಕ್ಕೆ ವಿಪ್ರತಿಪತ್ತಿವಾಕ್ಯದಿಂದ ಸಂಶಯ ಬರುತ್ತದೆ ಎಂದಮಾತ್ರಕ್ಕೆ ಸಂಶಯ ಬರುವುದಕ್ಕಾಗಿ ಸಂಶಯಜನಕ ವಿಪ್ರತಿಪತ್ತಿಪ್ರದರ್ಶನ ಮಾಡಬೇಕೆನ್ನುವುದು ಯುಕ್ತವಾಗುವುದಿಲ್ಲ. ಇಲ್ಲದಿದ್ದರೆ ಸಂದೇಹ ನಿವಾರಣೆಯಂತೆ ಅಜ್ಞಾನ ವಿಪರೀತಜ್ಞಾನ ನಿವಾರಣೆಯ ಉದ್ದೇಶವೂ ವಿಚಾರಕ್ಕೆ ಇದೆ ಎಂದು, ಅಜ್ಞಾನ ವಿಪರೀತಜ್ಞಾನ ಉಂಟುಮಾಡುವುದಕ್ಕಾಗಿ ತಜ್ಜನಕ ವಾಕ್ಯಪ್ರದರ್ಶನವನ್ನು ಮಾಡಬೇಕಾದೀತು.

'ಸಂದಿಗ್ಧಸಾಧ್ಯವಾನ್ ಪಕ್ಷಃ' ಎಂಬಂತೆ ಪಕ್ಷತ್ವಕ್ಕೆ ಸಾಧ್ಯಸಂದೇಹವು ಪ್ರಯೋಜಕ. ಆ ಸಾಧ್ಯಸಂದೇಹವು ವಿಪ್ರತಿಪತ್ತಿ ವಾಕ್ಯದಿಂದಲೇ ಉಂಟಾಗಬೇಕು. ಆದರಿಂದ ವಿಪ್ರತಿವಾಕ್ಯ ಆವಶ್ಯಕ' ಎಂದರೆ, ಅದು ಸರಿಯಲ್ಲ. ವಾದಿ ಪ್ರತಿವಾದಿಗಳಿಗೂ ಪ್ರಾಶ್ನಿಕರಿಗೂ ನಿಶ್ಚಾಯಕಪ್ರಮಾಣ ರೂಪ ವಿಶೇಷದರ್ಶನವಿರುವುದರಿಂದ ಅವರಿಗೆ ಯಾರಿಗೂ ಸಂಶಯವೇ ಇಲ್ಲ. ನಿಶ್ಚಯವಿರುತ್ತದೆ. ಅದರಿಂದ ಸಾಧ್ಯಸಂದೇಹಕ್ಕಾಗಿ ವಿಪ್ರತಿಪತ್ತಿ ವಾಕ್ಯಬೇಕು ಎನ್ನಲಾಗುವುದಿಲ್ಲ.

ವಿಶೇಷದರ್ಶನವಿದ್ದರೂ ವಾದಿ ಪ್ರತಿವಾದಿ ಪ್ರಾಶ್ನಿಕರಿಗೆ ಆಹಾರ್ಯ ಸಂಶಯ ಯದ್ಯಪಿ ಬರಬಹುದು. ಆದರೆ ಈ ಆಹಾರ್ಯಸಂಶಯವು ವಿಶೇಷದರ್ಶನದಿಂದ ನಿವೃತ್ತಿ ಹೊಂದುವುದಿಲ್ಲ. ಅದರಿಂದ ವಾದಿ ಪ್ರತಿವಾದಿಗಳು ವಾದ ಕಥೆಯಲ್ಲಿ ತಮ್ಮ ಅನುಮಾನಗಳನ್ನು ಪ್ರಯೋಗ ಮಾಡುವಾಗ ಸಾಧ್ಯಾನುಮಿತಿ ಬಂದರೂ ಆಹಾರ್ಯ ಸಾಧ್ಯಸಂಶಯ ಹಾಗೇ ಇರುತ್ತದೆ. ನಿವೃತ್ತಿ ಹೊಂದುವುದಿಲ್ಲ. ಪಕ್ಷತಾಸಂಪಾದಕವಾಗೇ ಇರುತ್ತದೆ ಅನುಮಿತ್ಯಾಪತ್ತಿ ಬರುತ್ತದೆ ಅತಿಪ್ರಸಕ್ತಿ ಬರುತ್ತದೆ.

'ಸಿದ್ಧ್ಯಭಾವ ಸಹಿತವಾದ ಸಾಧ್ಯ ಸಂದೇಹವೇ ಪಕ್ಷತಾಸಂಪಾದಕ ವಾಗುತ್ತದೆ. ಸಾಧ್ಯಾನುಮಿತಿ ಬಂದಾಗ ಸಿದ್ಧ್ಯಭಾವವಿಲ್ಲದಿರುವುದ ರಿಂದಲೇ ಪಕ್ಷತಾ ಇಲ್ಲ ಎನ್ನುತ್ತೇನೆ' ಎಂದರೆ, ಆಹಾರ್ಯವಾದ ಸಾಧ್ಯಸಂಶಯವು ಇಚ್ಛಾಜನ್ಯವಾದ್ದರಿಂದಲೇ ಅದಕ್ಕೆ ವಿಪ್ರತಿಪತ್ತಿವಾಕ್ಯದ ಅಪೇಕ್ಷೆ ಇಲ್ಲ.

**ಸಂಶಯಂ ವಿನಾಪಿ ಸಿಷಾಧಯಿಷಾವಿರಹ ಸಹಕೃತ ಸಾಧಕಪ್ರಮಾಣಾಭಾವ ರೂಪಸ್ಯ ಪಕ್ಷತ್ವಸ್ಯ ಸಂಭವಾಚ್ಚ ।**

ವಿಪ್ರತಿಪತ್ತಿವಾಕ್ಯಜನ್ಯವಾದ ಸಾಧ್ಯ ಸಂಶಯವು ವಿಚಾರಕ್ಕೆ ಪಕ್ಷತಾ ಸಂಪಾದಕವಾಗಿ ಆವಶ್ಯಕ ಎಂದು ಹೇಳವುದೂ ಸರಿಯಲ್ಲ. ಸಾಧ್ಯ ಸಂಶಯವಿಲ್ಲದಿದ್ದರೂ, ಸಿಷಾಧಯಿಷಾವಿರಹಸಹಕೃತ ಸಿದ್ಧ್ಯಭಾವರೂಪ ಪಕ್ಷತಾದಿಂದಲೇ ವಿಚಾರ ನಿರ್ವಾಹವಾಗಬಹುದು. ಮತ್ತು ಸಂಶಯ ಬಂದರೂ ಸಮಯಬಂಧಾದಿ ವ್ಯವಧಾನದಿಂದ ಅದು ನಿವೃತ್ತವಾಗಿರುತ್ತದೆ, ವಿಚಾರಕಾಲದಲ್ಲಿ ಇರುವುದಿಲ್ಲ.

'ಸಾಧಕಪ್ರಮಾಣಾಭಾವ'ವೆಂದರೆ, ಇಲ್ಲಿ ಭಾವೇಲ್ಯುಟ್ ಪ್ರತ್ಯಯದಿಂದ ಸಾಧಕ ಪ್ರಮಿತಿಯನ್ನು ಅಂದರೆ ಸಿದ್ಧಿಯನ್ನಿಟ್ಟುಕೊಳ್ಳಬೇಕು ಹೊರತು ಕರಣವ್ಯುತ್ಪತ್ತಿಯನ್ನೂ ಜೊತೆಗೆ ಇಟ್ಟುಕೊಂಡು ಸಿದ್ಧಿ ತತ್ಕರಣ ಅನ್ಯತರವನ್ನಲ್ಲ. ಗೌರವ ಬರುತ್ತದೆ.

'ಸಿದ್ಧಿಯಂತೆ ಅನುಮಾನಾತಿರಿಕ್ತವಾದ ಸಿದ್ಧಿಕರಣವಿರುವಾಗಲೂ ಅನುಮಿತಿ ಬರುವುದು ಕಂಡಿಲ್ಲವಾದ್ದರಿಂದ ಗೌರವವು ಪ್ರಾಮಾಣಿಕ' ಎನ್ನುವುದು ಸರಿಯಲ್ಲ. ಅನುಮಾನಾತಿರಿಕ್ತವಾದ ಸಿದ್ಧಿಕರಣವಿರುವಾಗಲೂ ಅನುಮಿತಿ ಕಂಡಿಲ್ಲವೆಂದರೆ ಅನುಮಾನಾತಿರಿಕ್ತ ಸಿದ್ಧಿಕರಣಾಭಾವವೂ ಅನುಮಿತಿಗೆ ಕಾರಣವೆಂದು ಮಾತ್ರ ಸಿದ್ಧವಾಗುವುದು. ಅದು ಪಕ್ಷತಾ ಎಂದು ಸಿದ್ಧವಾಗುವುದಿಲ್ಲ.

'ಸಿದ್ಧ್ಯಭಾವ ಸಿದ್ಧಿಕರಣಾಭಾವಗಳೆರಡೂ ಅನುಮಿತಿಗೆ ಕಾರಣವಾಗು ವಾಗ ಸಿದ್ಧ್ಯಭಾವವೇ ಏಕೆ ಪಕ್ಷತಾ ಎನಿಸುತ್ತದೆ? ಅದಕ್ಕೆ ವಿನಿಗಮಕವೇನು?' ಎಂದರೆ, ಲಾಘವವೇ ವಿನಿಗಮಕ. 'ಪಕ್ಷ'ಪದ ಪ್ರವೃತ್ತಿನಿಮಿತ್ತತ್ವವನ್ನು ಲಘುಭೂತವಾದ ಸಿದ್ಧ್ಯಭಾವಕ್ಕೇ ಹೇಳಬೇಕು. ಗುರುಭೂತವಾದ ಅನುಮಾನಾತಿರಿಕ್ತ ಸಿದ್ಧಿಕರಣಾಭಾವಕ್ಕೆ ಅಲ್ಲ. ಸಿದ್ಧ್ಯಭಾವ ತತ್ಕರಣಾಭಾವಾನ್ಯತರಕ್ಕೂ ಅಲ್ಲ.

ಅದ್ವೈತಸಿದ್ಧಿಕಾರನು ವಿಪ್ರತಿಪತ್ತಿಪ್ರದರ್ಶನ ಕಡ್ಡಾಯವೆನ್ನುತ್ತಾನೆ—

(1) ವಾದಿಪ್ರತಿವಾದಿಗಳಿಗೆ ವಿಶೇಷದರ್ಶನವಿರುವುದರಿಂದ ಸಂಶಯವಿಲ್ಲದಿದ್ದರೂ ಮಧ್ಯಸ್ಥನಿಗೂ ಶ್ರೋತೃವರ್ಗಕ್ಕೂ ವಿಶೇಷದರ್ಶನವಿಲ್ಲದಿರುವುದರಿಂದ ವಿಪ್ರತಿಪತ್ತಿಯು ಸಂಶಯಜನಕವಾಗುತ್ತದೆ. ಮಧ್ಯಸ್ಥಾದಿಗಳ ಸಂಶಯವು ವಾದಿಪ್ರತಿವಾದಿಗಳಿಗೆ ಪಕ್ಷತಾ ಪ್ರಯೋಜಕ ವಾಗದಿದ್ದರೂ ವಿಚಾರಕ್ಕೆ ಶ್ರೋತೃಗಳ ಸಂದೇಹ ಪರಿಹಾರದ ಉದ್ದೇಶವಿರುವುದರಿಂದ ಸಂದೇಹವು ವಿಚಾರಾಂಗವಾಗಿರುತ್ತದೆ. ಆದರಿಂದ ಸಂದೇಹಕ್ಕಾಗಿ ವಿಪ್ರತಿಪತ್ತಿ ಪ್ರದರ್ಶನವು ಆವಶ್ಯಕ.

(2) ವಾದಿಪ್ರತಿವಾದಿಗಳಿಗೆ ವಿಶೇಷದರ್ಶನರೂಪ ಪ್ರತಿಬಂಧಕವಿರುವುದರಿಂದ ವಿಪ್ರತಿಪತ್ತಿ ವಾಕ್ಯದಿಂದ ಸಂದೇಹ ಉಂಟಾಗದಿದ್ದರೂ ಸಂದೇಹ ಜನನಸ್ವರೂಪಯೋಗ್ಯತೆ ಅದಕ್ಕೆ ಉಂಟು. ಆದರಿಂದ ವಿಪ್ರಪತ್ತಿ ಪ್ರದರ್ಶನ ಆವಶ್ಯಕ.

(3) ವಾದಿಪ್ರತಿವಾದಿಗಳಿಗೂ ಸಂಶಯವಿರುತ್ತದೆ. 'ನಿಶ್ಚಯ ಉಳ್ಳವರೇ ವಾದ ಮಾಡುತ್ತಾರೆ' ಎಂಬ ಮಾತಿಗೆ 'ಅಹಂಕಾರದಿಂದ ಪರಪಕ್ಷವನ್ನು ಸ್ವೀಕರಿಸಿ ಪರಪಕ್ಷದಲ್ಲಿ ಅಭಿಮಾನಿಕವಾದ ನಿಶ್ಚಯದಿಂದ ವಾದ ಮಾಡುತ್ತಾರೆ' ಎಂದರ್ಥ.

(4) ಸಮಯ ಬಂಧದಂತೆ ವಿಪ್ರತಿಪತ್ತಿಪ್ರದರ್ಶನವೂ ಮಧ್ಯಸ್ಥನಿಗೆ ಕರ್ತವ್ಯವಾಗಿದೆ. ಅದಿಲ್ಲದಿದ್ದರೆ ವಾದಿಪ್ರತಿವಾದಿಗಳು ವಿಷಯಾಂತರಕ್ಕೆ ಹೋಗಿ ವಿಚಾರವನ್ನು ಕೆಡಿಸಬಹುದು. ವಿಪ್ರತಿಪತ್ತಿಪ್ರದರ್ಶನ ಮಾಡಿದರೆ ಉಭಯ ಕೋಟಿಗಳಿಗೆ ಸಂಬಂಧಿಸಿದ ವಿಷಯಗಳನ್ನೇ ವಾದಿಪ್ರತಿವಾದಿಗಳು ವಿಚಾರಕ್ಕೆ ಸ್ವೀಕರಿಸುವಂತಾಗುತ್ತದೆ. ಆದರಿಂದಲೂ ವಿಪ್ರತಿಪತ್ತಿಪ್ರದರ್ಶನ ಆವಶ್ಯಕ ಎಂದು.

ಇದು ಸರಿಯಲ್ಲ.

(1) ಶ್ರೋತೃವರ್ಗಕ್ಕೆ ವಿಪ್ರತಿಪತ್ತಿವಾಕ್ಯದಿಂದ ಸಂಶಯ ಬರುತ್ತದೆ ಎಂದಮಾತ್ರಕ್ಕೆ ಸಂಶಯ ಬರುವುದಕ್ಕಾಗಿ ಸಂಶಯಜನಕ ವಿಪ್ರತಿಪತ್ತಿಪ್ರದರ್ಶನ ಮಾಡಬೇಕೆನ್ನುವುದು ಯುಕ್ತವಾಗುವುದಿಲ್ಲ. ಇಲ್ಲದಿದ್ದರೆ ಸಂದೇಹ ನಿವಾರಣೆಯಂತೆ ಅಜ್ಞಾನ ವಿಪರೀತಜ್ಞಾನ ನಿವಾರಣೆಯ ಉದ್ದೇಶವೂ ವಿಚಾರಕ್ಕೆ ಇದೆ ಎಂದು, ಅಜ್ಞಾನ ವಿಪರೀತಜ್ಞಾನ ಉಂಟುಮಾಡುವುದಕ್ಕಾಗಿ ತಜ್ಜನಕ ವಾಕ್ಯಪ್ರದರ್ಶನವನ್ನು ಮಾಡಬೇಕಾದೀತು.

(2) ವಿಪ್ರತಿಪತ್ತಿಗೆ ಸಂಶಯಜನನ ಸ್ವರೂಪಯೋಗ್ಯತೆ ಇದೆ ಎನ್ನುವುದೂ ಸರಿಯಲ್ಲ. ವಾದಿ ಪ್ರತಿವಾದಿ ಮಧ್ಯಸ್ಥರಿಗೆ ಎಲ್ಲರಿಗೂ ವಿಶೇಷ ದರ್ಶನವಿರುವುದರಿಂದ ಯಾರಿಗೂ ಸಂಶಯ ಬರುವುದು ಕಂಡಿಲ್ಲ. ಕಂಡಿದ್ದರೆ ಮಾತ್ರ ಸ್ವರೂಪಯೋಗ್ಯತೆ ಇದೆ ಎಂದು ಒಪ್ಪಬಹುದು. ಮತ್ತು ಸ್ವರೂಪಯೋಗ್ಯತೆ ವಿಪ್ರತಿಪತ್ತಿಯಂತೆ ಸಾಧಾರಣಧರ್ಮಾದಿಗಳಿಗೂ ಇರುವುದರಿಂದ ಅವುಗಳನ್ನೂ ಅವಶ್ಯ ಹೇಳಬೇಕೆಂದಾದೀತು.

(3) 'ನಿಶ್ಚಯ ಉಳ್ಳವರೇ ವಾದ ಮಾಡುತ್ತಾರೆ' ಎಂಬ ನಿಯಮವು ಪರಪಕ್ಷಸ್ವೀಕಾರಮಾಡಿ ವಾದಮಾಡುವ ಸ್ಥಳಕ್ಕೇ ಸಂಬಂಧಿಸಿದ್ದಲ್ಲ. ಆಭಿಮಾನಿಕ ನಿಶ್ಚಯ ಉಳ್ಳವರೇ ವಾದ ಮಾಡುತ್ತಾರೆ ಎಂದು ಅದಕ್ಕೆ ಅರ್ಥವಲ್ಲ. ಸಂಶಯವಿರೋಧಿಯಾದ ನಿಶ್ಚಯಉಳ್ಳವರೇ ವಾದ ಮಾಡುತ್ತಾರೆ. ವಾದಕ್ಕಾಗಿ ಪರಪಕ್ಷಸ್ವೀಕಾರ ಮಾಡಿದಾಗ ಪರಪಕ್ಷದ ವಿಷಯದಲ್ಲಿ 'ಸರಿಯಲ್ಲ' ಎಂಬ ನಿಶ್ಚಯವೇ ಇದೆ. ಸಂದೇಹವಿರುವುದಿಲ್ಲ.

(4) ವಿಷಯಾಂತರಕ್ಕೆ ಹೋಗದಂತೆ ವ್ಯವಸ್ಥಿತವಾಗಿ ವಾದ ನಡೆಯಲು ವಿಪ್ರತಿಪತ್ತಿಪ್ರದರ್ಶನ ಮಾಡಬೇಕಿಲ್ಲ. ಮಧ್ಯಸ್ಥನು ಸಮಯಬಂಧವನ್ನು, 'ಈ ಮತಕ್ಕನುಸಾರವಾಗಿಯೇ ವಾದ ಮಾಡಬೇಕೆಂದು' ನಿರ್ಧಾರ ಮಾಡುವಂತೆ, ಈ ವಿಷಯದಲ್ಲಿಯೇ ವಾದ ಮಾಡಬೇಕೆಂದೂ ನಿರ್ಧಾರ ಮಾಡುವುದರಿಂದ ವಿಚಾರ ವ್ಯವಸ್ಥಿತವಾಗಿಯೇ ನಡೆಯುತ್ತದೆ. ಮಧ್ಯಸ್ಥನಿಗೆ ಕರ್ತವ್ಯಚ್ಯುತಿ ಉಂಟಾಗುವ ಪ್ರಸಂಗವಿಲ್ಲ.

ವಿಪ್ರತಿಪತ್ತಿಪ್ರದರ್ಶನವನ್ನು ಅವಶ್ಯಮಾಡಲೇಬೇಕೆಂದು ತಾರ್ಕಿಕರೂ ಕೂಡ ಹೇಳುವುದಿಲ್ಲ. ಪಂಚಾವಯವ ನಿಯಮದಂತೆ ವಿಪ್ರತಿಪತ್ತಿಪ್ರದರ್ಶನ ನಿಯಮವನ್ನು ಅವರು ಮಾಡಿಲ್ಲ.

ಪಕ್ಷತಾ ಸಂಪತ್ತಿಗಾಗಿ ಸಾಧ್ಯಸಂದೇಹ ಬೇಕೆಂಬ ನಿಯಮವೂ ತಾರ್ಕಿಕರಲ್ಲಿ ಇಲ್ಲ. ಸಾಧ್ಯಸಂದೇಹವಿಲ್ಲದಿದ್ದರೂ ಸಾಧ್ಯಾನುಮಿತೀಚ್ಛಾ ರೂಪವಾದ ಸಿಷಾಧಯಿಷಾದಿಂದಲೇ. ಸಾಧ್ಯಸಿದ್ಧಿ ಇರುವಾಗ ಪಕ್ಷತಾ ಸಂಪತ್ತಿ ಇರುತ್ತದೆ.

'ಪ್ರತ್ಯಕ್ಷ ಪರಿಕಲಿತಮಪ್ಯರ್ಥಂ ಅನುಮಾನೇನ ಬುಭುತ್ಸಂತೇ ತರ್ಕರಸಿಕಾಃ' 'ಕಣ್ಣಾರೆ ಕಂಡರೂ ಪರಾಂಬರಿಸಿ ನೋಡುತ್ತಾರೆ' ಎಂದು ಹೇಳಿದ ವಾಚಸ್ಪತಿಮಿಶ್ರನೇ 'ನಹಿ ದೃಷ್ಟೇ ಕರಿಣಿ ಚೀತ್ಕಾರೇಣ ತಮನುಮಿಮತೇ ಅನುಮಾತಾರಃ' 'ಆನೆ' ಎಂದು ಕಣ್ಣಾರೆ ಕಂಡಮೇಲೂ ಚೀತ್ಕಾರದಿಂದ 'ಇದು ಆನೆ' ಎಂದು ಯಾರೂ ಊಹಿಸುವುದಿಲ್ಲ' ಎಂದೂ ಹೇಳಿದ್ದಾನೆ. ಸಿಷಾಧಯಿಷಾ ಇದ್ದರೆ ಪರಾಂಬರಿಸಿ ನೋಡುತ್ತಾರೆ. ಸಿಷಾಧಯಿಷಾ ಇಲ್ಲದಿದ್ದರೆ ಊಹಿಸುವುದಿಲ್ಲ ಎಂದು ಇಲ್ಲಿ ವಿರೋಧ ಪರಿಹಾರ ಮಾಡಿದ್ದು ಮಣಿಗ್ರಂಥದಲ್ಲಿ ಕಾಣುತ್ತದೆ.

ಅನುಮಿತಿಗೆ ಸಿದ್ಧಿ ಪ್ರತಿಬಂಧಕ. ಸಿಷಾಧಯಿಷಾವು ಉತ್ತೇಜಕ. ಅಂದರೆ ಪ್ರತಿಬಂಧಕ ವಿರುವಾಗ ಕಾರ್ಯೋತ್ಪಾದಕ್ಕೆ ಪ್ರಯೋಜಕ. 'ಮೋಡ ಕವಿದಿದೆ, ಗುಡುಗು ಕೇಳಿಬರುತ್ತಿರುವುದ

ರಿಂದ' ಎಂಬ ಅನುಮಾನದಲ್ಲಿ ಅನುಮಿತಿಪೂರ್ವದಲ್ಲಿ ಸಿದ್ಧಿಯೂ ಇಲ್ಲ, ಸಿಷಾಧಯಿಷಾವೂ ಇಲ್ಲ. ಆದರಿಂದ ಇಲ್ಲಿ ಸಿಷಾಧಯಿಷಾವಿರಹ ವಿಶಿಷ್ಟ ಸಿದ್ಧಿಯ ಅಭಾವರೂಪವಾದ ಪಕ್ಷತಾ ಸಂಪತ್ತಿ ಇದೆ. ಸಿದ್ಧಿ ಸಿಷಾಧಯಿಷಾ ಎರಡೂ ಇರುವಲ್ಲಿ ಸಿದ್ಧಿ ಇದ್ದರೂ ಸಿಷಾಧಯಿಷಾವಿರಹವಿಶಿಷ್ಟಸಿದ್ಧಿ ಇಲ್ಲ, ಸಿಷಾಧಯಿಷಾವಿರಹವಿಶಿಷ್ಟಸಿದ್ಧ್ಯಭಾವರೂಪ ಪಕ್ಷತಾ ಸಂಪತ್ತಿ ಇದೆ. ಸ್ವರೂಪ ಸಮವಾಯ ಉಭಯ ಘಟಿತ ಸಾಮಾನಾಧಿಕರಣ್ಯಸಂಬಂಧದಿಂದ ವೈಶಿಷ್ಟ್ಯವು ವಿವಕ್ಷಿತವಾಗಿದೆ. ಆತ್ಮನಲ್ಲಿ ಅಭಾವೀಯ ದೈಶಿಕವಿಶೇಷಣತಾರೂಪವಾದ ಸ್ವರೂಪಸಂಬಂಧದಿಂದ ಸಿಷಾಧಯಿಷಾವಿರಹ ಇದೆ. ಸಮವಾಯ ಸಂಬಂಧದಿಂದ ಸಿದ್ಧಿ ಇದೆ. ಹೀಗೆ ಸಿಷಾಧಯಿಷಾವಿರಹವಿಶಿಷ್ಟವಾದ ಸಿದ್ಧಿಯ ಸಮವಾಯ ಸಂಬಂಧಾವಚ್ಛಿನ್ನಾಭಾವವು ಅನುಮಿತಿ ಪೂರ್ವದಲ್ಲಿ ಬಂದರೆ ಪಕ್ಷತಾ ಸಂಪತ್ತಿ ಇದೆ ಎಂದಾಗುವುದು.

ಸಾಧ್ಯ ಸಂಶಯವಿರುವಾಗ ಅದು ನೇರವಾಗಿ ವಿಚಾರಾಂಗವಾಗದಿದ್ದರೂ ಜಿಜ್ಞಾಸಿತವಾದ ತತ್ತ್ವವಿಶೇಷದ ವಿಷಯದಲ್ಲಿ ಸಿಷಾಧಯಿಷಾವನ್ನು ಉಂಟುಮಾಡಿಕೊಡುತ್ತದೆ. ಆಗ ಅನುಮಿತಿ ವಿಶೇಷಕ್ಕೆ ಕಾರಣವಾದ ಸಿಷಾಧಯಿಷಾವಿರಹವಿಶಿಷ್ಟಸಿದ್ಧ್ಯಭಾವರೂಪ ಪಕ್ಷತಾ ಸಂಪತ್ತಿ ಉಂಟಾಗುತ್ತದೆ. ಹೀಗೆ ಸಂಶಯವು ಪರಂಪರಯಾ ವಿಚಾರಾಂಗವಾಗುವ ಸಂಭವವಿದೆ ಎಂಬ ಅಭಿಪ್ರಾಯದಿಂದ 'ಸಂಶಯವಿಲ್ಲದಿದ್ದರೂ ಸಿಷಾಧಯಿಷಾವಿರಹ ಸಹಕೃತ ಸಾಧಕಮಾನಾಭಾವ ರೂಪ ಪಕ್ಷತ್ವ ಉಂಟಾಗುವ ಸಂಭವವಿದೆ' 'ಪಕ್ಷತ್ವಸ್ಯ ಸಂಭವಾಚ್ಚ' ಎಂದಿದ್ದಾರೆ.

ವಸ್ತುತಃ ಸಿಷಾಧಯಿಷಾವಿರಹವಿಶಿಷ್ಟಸಿದ್ಧಿ ಇರುವಾಗಲೂ ಧೂಮದರ್ಶನ ಪರಾಮರ್ಶಗಳಿದ್ದರೆ ವಹ್ನ್ಯನುಮಿತಿ ಬರುವುದು ಕಂಡಿದೆ. ಏಕೆಂದರೆ ಅದು ಅನುಮಿತಿಸಾಮಗ್ರಿಯ ಸ್ವಭಾವ. ಅದು ಜಡವಾದ್ದರಿಂದ, 'ತಾನು ಉಂಟುಮಾಡಬೇಕಾಗಿರುವ ವಹ್ನಿಜ್ಞಾನವನ್ನು ಆಪ್ತೋಪದೇಶಾದಿ ಬೇರೆ ಪ್ರಮಾಣವೇ ಮಾಡಿಬಿಟ್ಟಿದೆ. ತಾನೇಕೆ ಅದನ್ನು ಮಾಡಬೇಕು?' ಎಂದು ವಿವೇಚನೆ ಮಾಡಲಾರದು. ಆದರಿಂದ ಅನುಮಿತಿ ವಿಷಯತ್ವಯೋಗ್ಯ ಧರ್ಮವಿಶಿಷ್ಟ ಧರ್ಮಿತ್ವವೇ ಸಿದ್ಧಾಂತದಲ್ಲಿ ಸ್ವೀಕೃತವಾಗಿರುವ ಪಕ್ಷತಾ. 'ಅನುಮಿತಿ ವಿಷಯತ್ವಯೋಗ್ಯ'ವೆಂದರೆ ಅಭಾವ ಬುದ್ಧಿಗೆ ವಿಷಯವಾಗಿಲ್ಲದಿರುವುದೆಂದರ್ಥ. ಇದೇ ಸಾರ್ವತ್ರಿಕ ಪಕ್ಷತಾ. ಸಿಷಾಧಯಿಷಾವಿರಹವಿಶಿಷ್ಟ ಸಿದ್ಧ್ಯಭಾವರೂಪ ಪಕ್ಷತಾ ಕ್ವಾಚಿತ್ಕ. ಈ ಅಭಿಪ್ರಾಯದಿಂದ 'ಪಕ್ಷತ್ವಸ್ಯ ಸಂಭವಾಚ್ಚ' ಎಂದಿದ್ದಾರೆ.

ಸಿದ್ಧಿ–ಸಿಷಾಧಯಿಷಾ–ಲಿಂಗಪರಾಮರ್ಶ–ಅನುಮಿತಿಗಳು ಕ್ರಮವಾಗಿ ಬರುವಾಗ ದ್ವಿಕ್ಷಣಾವಸ್ಥಾಯಿಯಾಗಿರುವ ಸಿದ್ಧಿಯು ತೃತೀಯಕ್ಷಣದಲ್ಲಿ ನಾಶಹೊಂದುವುದರಿಂದ ಸಿದ್ಧಿರೂಪ ಪ್ರತಿಬಂಧಕವಿಲ್ಲದಿರುವುದರಿಂದಲೇ ಅನುಮಿತಿ ಉಂಟಾಗುವುದರಿಂದ ಸಿಷಾಧಯಿಷಾ ಉತ್ತೇಜಕವೆನಿಸುವುದಿಲ್ಲ. 'ಸಿಷಾಧಯಿಷಾವಿರಹವಿಶಿಷ್ಟಸಿದ್ಧಿ' ಎಂದು ಸಿದ್ಧಿಗೆ ವಿಶೇಷಣ ನೀಡುವುದು ವ್ಯರ್ಥವಾಗುವುದು. ಅದಕ್ಕೆ 'ಪರ್ವತೋ ವಹ್ನಿಮಾನ್ ವಹ್ನಿವ್ಯಾಪ್ಯಧೂಮವಾಂಶ್ಚ' ಎಂದು ಸಿದ್ಧ್ಯಾತ್ಮಕ ಪರಾಮರ್ಶವಿಟ್ಟುಕೊಳ್ಳಬೇಕು. ಸಿದ್ಧ್ಯಾತ್ಮಕ ಪರಾಮರ್ಶ–ಸಿಷಾಧಯಿಷಾ–ಅನುಮಿತಿ

ಎಂಬ ಕ್ರಮದಲ್ಲಿ ಪ್ರಥಮಕ್ಷಣದಲ್ಲಿ ಸಿದ್ಧ್ಯಾತ್ಮಕಪರಾಮರ್ಶ, ದ್ವಿತೀಯಕ್ಷಣದಲ್ಲಿ ಸಿಷಾಧಯಿಷಾ ಬಂದರೆ ಆಗ ಸಿದ್ಧಿ ಇದ್ದರೂ ಸಿಷಾಧಯಿಷಾ ಇರುವುದರಿಂದ ಸಿಷಾಧಯಿಷಾ ವಿರಹವಿಶಿಷ್ಟಸಿದ್ಧಿ ಇಲ್ಲದ್ದರಿಂದ ಪಕ್ಷತಾ ಸಂಪತ್ತಿ ಇದೆ. ತೃತೀಯಕ್ಷಣದಲ್ಲಿ ಅನುಮಿತಿ ಬರುತ್ತದೆ. ಅದರಿಂದಲೂ 'ಪಕ್ಷತ್ವ ಸಂಭವಾಚ್ಚ' ಎಂದಿದ್ದಾರೆ.

❖❖❖

## 04. मिथ्यात्वे परोक्तानुमानानि

**प्रमाणं चात्रानुमानम् । ''विमतं मिथ्या दृश्यत्वाज्जडत्वात्-परिच्छिन्नत्वाच्छुक्तिरूप्यवत्'' इत्यानन्दबोधोक्तेः ।**

**''अयं पटः एतत्तन्तुनिष्ठात्यन्ताभावप्रतियोगी पटत्वादंशित्वात्-पटान्तरवत्'' इति तत्वप्रदीपोक्तेः ।**

**विमतमिति** । मिथ्यात्व तदभाव कोटिक संशयविषय इत्यर्थः। यद्यप्युक्तरीत्या तादृश संशय एवासंभवी । तथापि तार्किकरीत्या तादृशसंशयमभिप्रेत्य एवं पक्षनिर्देशः कृत इति द्रष्टव्यम् । केचित्तु ययोर्वादिप्रतिवादिनोः पक्षे स्वसिषाधयिषितसाध्यनिश्चयो नास्ति कथायां कक्ष्याचालन सामर्थ्यमस्ति तयोः स्वारसिकतादृशसंशयो भवतीति तन्मात्रकर्तृककथाविशेषे तथा पक्षनिर्देशोऽत्राभिमतः । पक्षतावच्छेदकत्वयोग्यधर्मा-न्तरसंभवेऽपि विमतिविषयत्वेन पक्षनिर्देशो बाधसिद्धसाधनादि प्रतिज्ञादोषाणा-मुद्भावनानर्हत्वज्ञापनायेत्याहुः । अन्ये तु स्वारसिकसंशयस्योक्तरीत्या असंभवेऽपि आहार्यतादृशसंशयस्य सुलभत्वात् तादृशसंशयत्वस्यैव पक्षतावच्छेदकत्वमभिप्रेत्य तथात्र पक्षनिर्देशः कृत इति वदन्ति ।

परिच्छिन्नत्वादित्यनन्तरं वेति शेषः । तेन नाधिक्यदोषशङ्केति ध्येयम् । इत्यानन्दबोधोक्तेरित्युक्त्या नानुक्तोपालम्भ इति सूचयति । **एतत्तन्तुनिष्ठेति** । प्रतिपत्तिविषयीभूत सकलसंबन्धेनैतत्तन्तुनिष्ठेत्यर्थः । अत्यन्तपदमभावान्तरप्रति-योगित्वमादाय सिद्धसाधनादिवारणाय । **अंशित्वादिति** । द्रव्यारब्धद्रव्यत्वादित्यर्थः ।

❖❖❖

## ಪರೋಕ್ತ ಮಿಥ್ಯಾತ್ವಾನುಮಾನಗಳು

**ಪ್ರಮಾಣಂ ಚಾತ್ರ ಅನುಮಾನಂ । ತಥಾಹಿ ।**

**'ವಿಮತಂ ಮಿಥ್ಯಾ ದೃಶ್ಯತ್ವಾತ್ ಜಡತ್ವಾತ್ ಪರಿಚ್ಛಿನ್ನತ್ವಾತ್ ಶುಕ್ತಿರೂಪ್ಯವತ್ ।' ಇತಿ ಆನಂದಬೋಧೋಕ್ತೇಃ ।**

**'ಅಯಂ ಪಟಃ ಏತತ್ತಂತುನಿಷ್ಠ ಅತ್ಯಂತಾಭಾವಪ್ರತಿಯೋಗೀ । ಪಟತ್ವಾತ್ ಅಂಶಿತ್ವಾತ್ ಪಟಾಂತರ ವತ್' ಇತಿ ತತ್ವಪ್ರದೀಪೋಕ್ತೇಃ ।**

ಈ ಪ್ರಪಂಚ ಮಿಥ್ಯಾತ್ವ ವಿಷಯದಲ್ಲಿ ಪ್ರಮಾಣವು ಅನುಮಾನ. ಅದು ಹೀಗೆ— 'ವಿಪ್ರತಿಪತ್ತಿ ಗೋಚರವಾದುದು ಮಿಥ್ಯಾ. ದೃಶ್ಯತ್ವವಿರುವುದರಿಂದ. ಜಡತ್ವವಿರುವುದರಿಂದ, ಅಥವಾ ಪರಿಚ್ಛಿನ್ನತ್ವ ವಿರುವುದರಿಂದ, ಶುಕ್ತಿರಜತದಂತೆ' ಎಂದು ಆನಂದಬೋಧನು ಹೇಳಿದ್ದರಿಂದ ಅನುಮಾನವು ಪ್ರಮಾಣ. ಮತ್ತು 'ಈ ಪಟವು ಪ್ರತಿಪತ್ತಿವಿಷಯೀಭೂತ ಸಕಲ ಸಂಬಂಧದಿಂದ ಈ ತಂತುನಿಷ್ಠವಾದ ಅತ್ಯಂತಾಭಾವಕ್ಕೆ ಪ್ರತಿಯೋಗಿ. ಪಟತ್ವವಿರುವುದರಿಂದ' ದ್ರವ್ಯಾರಬ್ಧದ್ರವ್ಯತ್ವರೂಪ ಅಂಶಿತ್ವವಿರುವುದ ರಿಂದ, ಪಟಾಂತರದಂತೆ' ಎಂದು ತತ್ವಪ್ರದೀಪದಲ್ಲಿ ಹೇಳಿದ್ದರಿಂದಲೂ ಅನುಮಾನವು ಪ್ರಮಾಣ. ಧ್ವಂಸಾದಿ ಬೇರೆ ಅಭಾವವಿಟ್ಟುಕೊಂಡು ಸಿದ್ಧಸಾಧನತ್ವವನ್ನು ಹೇಳಬಾರದೆಂದು 'ಅತ್ಯಂತಾಭಾವ' ಎಂದಿದ್ದಾರೆ. ಹೀಗೆ ಆನಂದಬೋಧ ಮತ್ತು ತತ್ವಪ್ರದೀಪಕಾರರು ಹೇಳಿರುವುದರಿಂದ ಈ ಅನುಮಾನಗಳನ್ನು ನಾವು ನಿರಾಸಮಾಡಿದರೆ ಅನುಕ್ತೋಪಾಲಂಭವಾಗುವುದಿಲ್ಲ.

ಪರಿಚ್ಛಿನ್ನತ್ವಾತ್ ಎಂಬಲ್ಲಿ 'ವಾ' ಎಂದು ಶೇಷಪೂರಣ ಮಾಡಬೇಕು. ಇಲ್ಲದಿದ್ದರೆ ದೃಶ್ಯತ್ವ ಹೇತುವನ್ನು ಹೇಳಿದಮೇಲೆ ಬೇರೆ ಹೇತುಗಳನ್ನೂ ಹೇಳಿದಾಗ ಆಧಿಕ್ಯದೋಷಕ್ಕೆ ಆಸ್ಪದವಿದೆ.

'ವಾದಿಪ್ರತಿವಾದಿಗಳಿಗೆ ಸಾಧ್ಯವಿಷಯದಲ್ಲಿ ನಿಶ್ಚಯವೆ ಇರುವುದರಿಂದ ಸಂಶಯವಿಲ್ಲ' ಎಂದು ಹಿಂದೆ ಹೇಳಿದಂತೆ ಸಂಶಯ ಅಸಂಭವವಾದರೂ ತಾರ್ಕಿಕರೀತಿಯಿಂದ ಸಂಶಯವಿಟ್ಟುಕೊಂಡು 'ವಿಮತಂ' ಎಂದು ಪಕ್ಷ ನಿರ್ದೇಶ ಮಾಡಿದ್ದಾರೆ.

ಅಥವಾ ಕೆಲವರು ಹೇಳುವಂತೆ ಯಾವ ವಾದಿಪ್ರತಿವಾದಿಗಳಿಗೆ ತಾವು ಸಾಧಿಸಬೇಕಾಗಿರುವ ಸಾಧ್ಯದ ನಿಶ್ಚಯವಿಲ್ಲ. ಆದರೂ ಕೋಟಿಕ್ರಮದಿಂದ ವಾದಕಥೆ ನಡೆಸುವ ಸಾಮರ್ಥ್ಯವಿದೆ, ಸ್ವಾರಸಿಕ ಸಾಧ್ಯಸಂಶಯ ಅವರಿಗೆ ಸರ್ವಥಾ ಇಲ್ಲವೆನ್ನಲಾಗದು. ಅಂಥವರ ವಾದಕಥೆಯಲ್ಲಿ ಹೀಗೆ ಪಕ್ಷನಿರ್ದೇಶ ಮಾಡಬಹುದು. ಪಕ್ಷತಾವಚ್ಛೇದಕ ಮಾಡಲು ಯೋಗ್ಯವಾದ ಬೇರೆ ಧರ್ಮವಿರುವ ಸಾಧ್ಯತೆ ಇದ್ದರೂ 'ವಿಮತಿವಿಷಯ'ವೆಂದು ಪಕ್ಷನಿರ್ದೇಶ ಮಾಡಿದರೆ, ಬಾಧ ಸಿದ್ಧಸಾಧನಾದಿ ಪ್ರತಿಜ್ಞಾದೋಷ ಉದ್ಭಾವನ ಮಾಡಲು ಈ ಅನುಮಾನ ಅನರ್ಹವೆಂದು ತಿಳಿಸಿದಂತಾಗುವುದು.

ಇನ್ನು ಕೆಲವರು ಹೇಳುವಂತೆ ಸ್ವಾರಸಿಕ ಸಂಶಯವಿಲ್ಲದಿದ್ದರೂ ಆಹಾರ್ಯಸಂಶಯವಿದೆ ಎಂದು ವಿಮತತ್ವವನ್ನು ಪಕ್ಷತಾವಚ್ಛೇದಕ ಮಾಡಬಹುದು.

❖❖❖

**यद्यपि विमतिरपि नियतविषयत्वायावच्छेदकांतर सापेक्षा । तथापि सावयवत्वसाधितेन कार्यत्वेन पृथिव्याः सकर्तृकत्वसाधनमिव स्वनियामकनियतया लघ्व्या विप्रतिपत्त्या पक्षतावच्छेदो न विरुद्धः ।**

ननु तादृश विमतेर्ब्रह्मासत्प्रातिभासिक साधारण्येनापि संभवात् तादृशविमतिविषयत्वमतिप्रसक्तं न पक्षतावच्छेदकत्वेन निर्देशार्हम् । किञ्च धर्मितावच्छेदकमगृहीत्वा तादृशविमतिविषयत्वमेव दुर्ग्रहमिति तद्ग्रहणस्यावश्यकत्वे प्रथमोपस्थितत्वेन तदेव सर्वत्र पक्षतावच्छेदकत्वेन निर्देशार्हम् । न विमतिविषयत्वमिति शङ्कते **यद्यपीति । तथापीति** । ननु विषमोऽयं दृष्टान्तः । नहि विमतिविषयत्वग्रहे धर्मितावच्छेदकोपस्थितिवत् कार्यत्वग्रहे सावयवत्वोप-स्थितिर्नियमेनापेक्षिता । निरवयवेऽपि गुणकर्मादौ तदुपस्थितिं विनापि कार्यत्वस्य ग्रहादिति चेन्न । अन्योपस्थित्यधीनोपस्थितिकस्यापि उपयोगोऽस्तीत्येतावन्मात्रे तस्य दृष्टान्तत्वेनोपादानादिति भावः । नन्वतिप्रसक्तस्य विमतिविषयत्वस्य न पक्षतावच्छेदकत्वं युक्तम् । बाधानवतारदशायां कथायां तथाविधानुमानेनानु-मितिसंभवेऽपि तस्या बाधितांशे भ्रमत्वापत्तेः । नहि तत्वनिर्णिनीषुकथारूप ग्रन्थव्युत्पाद्यस्य शिष्यस्य भ्रमापादनमुचितमित्याशङ्कां वारयितुमाह **स्वनियामकनियतयेति ।** धर्मितावच्छेदकतयोपस्थितो यो धर्मः स्वनियामकः तन्नियतया तदुपस्थितिकृतानतिप्रसक्तविषयताकयेत्यर्थः । नन्वेवं विमतेरनति प्रसक्तविषयत्वसंभवेऽपि न तस्याः पक्षतावच्छेदकत्वेनोपादानं युक्तम् । किन्तूपस्थितिलाघवात् आवश्यकत्वाच्च तद्विषयतावच्छेदकं ब्रह्मप्रमान्येनेत्यादिना निरुक्तरूपमेव पक्षतावच्छेदकत्वेन स्वीकर्तुमुचितमित्यत आह **लघ्व्येति ।** जात्यादिवदखण्डत्वेन लघुशरीरयेत्यर्थः । नच उपस्थिति प्रयुक्तलाघवासंभव एव शरीरलाघवमादरणीयम् । तत्संभवे तु तदेवादरणीयमिति वाच्यम् । ब्रह्मप्रमान्येन वा सप्रकारेण वा अबाध्यत्वे सति असद्विलक्षणत्वे सति ब्रह्मान्यत्वस्य, ब्रह्मासत्प्रातिभासिकान्यानीति प्रतीति विशेष्यत्वस्य, ब्रह्मासत्प्रातिभासिकाप्रति-योगिकाभाव प्रतियोगित्वादेश्च समनियतस्यानेकस्यापि सामग्रीविशेषमहिम्ना

युगपदुपस्थितिसंभवात्, तदसंभवेऽपि प्रथममस्यैवोपस्थितिरिति नियमे प्रमाणाभावेन सामग्रीवशादुक्तधर्माणां कदाचित्तत्रैवान्यथाप्युपस्थिति संभवात् विनिगमनाविरहेण एकदोपस्थित धर्माणामस्यैव पक्षतावच्छेदकत्वं नान्यस्येत्यत्र शरीरलाघवादिप्रयोजकस्याभावे वैपरीत्येनापि विशेषणविशेष्यभावसंभवाच्च तादृशस्यानेकस्य पक्षतावच्छेदकत्वाश्रयणे गौरवादुक्तानेकधर्मनियतविषयताकाया उक्तरीत्या लघुशरीराया एकस्या एव विमतेः पक्षतावच्छेदकत्वाश्रयणे लाघवम् । नचैवमुपस्थिति लाघवानादर प्रसङ्गः । यत्रैकस्यैव नियमेन यदुपस्थितिप्रयोजकोपस्थितिविषयत्वं तत्र तदादरसंभवादिति भावः ।

❖❖❖

**ಯದ್ಯಪಿ ವಿಮತಿರಪಿ ನಿಯತವಿಷಯತ್ವಾಯ ಅವಚ್ಛೇದಕಾಂತರ ಸಾಪೇಕ್ಷಾ । ತಥಾಪಿ ಸಾವಯವತ್ವ ಸಾಧಿತೇನ ಕಾರ್ಯತ್ವೇನ ಪೃಥಿವ್ಯಾಃ ಸಕರ್ತೃಕತ್ವಸಾಧನಮಿವ ಸ್ವನಿಯಾಮಕ ನಿಯತಯಾ ಲಬ್ಧ್ಯಾ ವಿಪ್ರತಿಪತ್ಯಾ ಪಕ್ಷತಾವಚ್ಛೇದೋ ನ ವಿರುದ್ಧಃ ।**

ಯದ್ಯಪಿ ವಿಮತಿಯೂ ಕೂಡ ಬ್ರಹ್ಮ ತುಚ್ಛ ಪ್ರಾತಿಭಾಸಿಕಗಳಲ್ಲಿ ಸಾಧಾರಣವಾಗಿ ಬರಬಹುದಾದ್ದರಿಂದ ವಿಮತಿವಿಷಯತ್ವವು ಅತಿಪ್ರಸಕ್ತವಾಗಿದ್ದು ಪಕ್ಷತಾವಚ್ಛೇದಕವಾಗಲು ಅನರ್ಹ. ಅತಿಪ್ರಸಕ್ತವಾದ ವಿಮತತ್ವ ಧರ್ಮವನ್ನು ಪಕ್ಷತಾವಚ್ಛೇದಕ ಮಾಡಿ ಮಿಥ್ಯಾತ್ವಸಾಧನೆ ಮಾಡಿದರೆ ಬ್ರಹ್ಮ ತುಚ್ಛಾದಿಗಳಲ್ಲಿ ಬಾಧ ಬರುತ್ತದೆ. ಬಾಧ ಅನವತಾರ ದಶಾದಲ್ಲಿ ಅನುಮಿತಿ ಬರಬಹುದಾದರೂ ಬಾಧಿತಾಂಶದಲ್ಲಿ ಅನುಮಿತಿ ಭ್ರಮವಾದೀತು. ತತ್ವನಿರ್ಣಯದ ಉದ್ದೇಶದಿಂದ ಹೊರಟ ವಾದ ಕಥಾರೂಪಗ್ರಂಥದಿಂದ ಶಿಷ್ಯನಿಗೆ ಗುರುವು ಹೀಗೆ ಭ್ರಮಾತ್ಮಕ ಅನುಮಿತಿಯನ್ನುಂಟು ಮಾಡುವುದು ಉಚಿತವಲ್ಲ.

ಆದರಿಂದ ವಿಮತಿಯು ನಿಯತ ವಿಷಯಕವಾಗಬೇಕು. ಬ್ರಹ್ಮತುಚ್ಛ ಅವಿಷಯಕವೂ ವಿಯದಾದಿ ಮಾತ್ರ ವಿಷಯಕವೂ ಆಗಬೇಕು.

ಅದಕ್ಕೆ ಬ್ರಹ್ಮಪ್ರಮಾನ್ಯೇನೇತ್ಯಾದಿ ವಿಶೇಷಣ ಗಳನ್ನು ಧರ್ಮಿತಾವಚ್ಛೇದಕವಾಗಿ ವಿಮತಿಯು ಅಪೇಕ್ಷಿಸುತ್ತದೆ. ಹೀಗಾಗಿ ಗೌರವದೋಷವಿದೆ.

ಮತ್ತು ಧರ್ಮಿತಾವಚ್ಛೇದಕವನ್ನು ತಿಳಿಯದೆ ವಿಮತಿಯನ್ನು ತಿಳಿಯಲಾಗದೆಂದಮೇಲೆ ಆವಶ್ಯಕವಾದ ಅದನ್ನೇ ಪಕ್ಷತಾವಚ್ಛೇದಕವಾಗಿ ಮಾಡುವುದು ಯುಕ್ತ. ಅದೇ ಪ್ರಥಮೋಪಸ್ಥಿತ ಹೊರತು ವಿಮತಿಯಲ್ಲ. ಹೀಗಾಗಿ ಉಪಸ್ಥಿತಿಕೃತ ಲಾಘವವಿರುವುದರಿಂದ ವಿಮತಿ ಧರ್ಮಿತಾವಚ್ಛೇದಕವೇ ಪಕ್ಷತಾವಚ್ಛೇದಕವಾಗುವುದು ಉಚಿತ.

ಆದರೂ ಶರೀರಕೃತ ಲಾಘವದಿಂದ ವಿಮತಿಯನ್ನು ಪಕ್ಷತಾವಚ್ಛೇದಕ ಮಾಡಬಹುದು. ವಿಮತಿಯು ಜಾತ್ಯಾದಿಗಳಂತೆ ಲಘುಶರೀರಉಳ್ಳದ್ದು.

ಯದ್ಯಪಿ ಉಪಸ್ಥಿತಿ ಲಾಘವವಿಲ್ಲದಿದ್ದಾಗ ಮಾತ್ರ ಶರೀರಲಾಘವವನ್ನು ಆದರಿಸಬೇಕು. ಪ್ರಕೃತದಲ್ಲಿ ಧರ್ಮಿತಾವಚ್ಛೇದಕದಲ್ಲಿ ಉಪಸ್ಥಿತಿ ಲಾಘವ ಕಾಣುತ್ತಿದೆ. ಆದರೆ ವಸ್ತುತಃ ಉಪಸ್ಥಿತಿ ಗೌರವವೇ ಇದೆ ಏಕೆಂದರೆ, 'ಬ್ರಹ್ಮಪ್ರಮಾನ್ಯೇನ ವಾ ಸಪ್ರಕಾರೇಣ ವಾ ಅಬಾಧ್ಯತ್ವೇ ಸತಿ ಅಸದ್ವಿಲಕ್ಷಣತ್ವೇ ಸತಿ ಬ್ರಹ್ಮಾನ್ಯತ್ವ'ವು ಮಾತ್ರವಲ್ಲದೆ 'ಬ್ರಹ್ಮ ತುಚ್ಛ ಪ್ರಾತಿಭಾಸಿಕಾನ್ಯಾನಿ' ಎಂಬ ಪ್ರತೀತಿ ವಿಷಯತ್ವ, 'ಬ್ರಹ್ಮಾಸತ್‌ಪ್ರಾತಿಭಾಸಿಕಾಪ್ರತಿಯೋಗಿಕ ಭೇದ ಪ್ರತಿಯೋಗಿತ್ವ' ಮುಂತಾದ ಸಮನಿಯತವಾದ ಅನೇಕ ಧರ್ಮಗಳೂ ಕೂಡ ಸಾಮಗ್ರೀವಿಶೇಷ ಬಲದಿಂದ ಒಮ್ಮೆಲೆ ಉಪಸ್ಥಿತವಾಗುವ ಸಂಭವವಿದೆ. ಸಂಭವವಿಲ್ಲದ ಪಕ್ಷದಲ್ಲಿಯೂ ಮೊದಲಿಗೆ ಇದೇ ಧರ್ಮ ಉಪಸ್ಥಿತವಾಗುವುದೆನ್ನಲು ಪ್ರಮಾಣವಿಲ್ಲ. ಸಾಮಗ್ರಿ ಬಲದಿಂದ ಬೇರೆ ಧರ್ಮವೇ ಪ್ರಥಮತಃ ಉಪಸ್ಥಿತವಾಗಲೂಬಹುದು. ಒಮ್ಮೆಲೇ ಉಪಸ್ಥಿತವಾಗುವ ಧರ್ಮಗಳಲ್ಲಿ ಈ ಧರ್ಮವೇ ಪಕ್ಷತಾವಚ್ಛೇದಕ, ಬೇರೆ ಧರ್ಮವಲ್ಲ ಎನ್ನಲು ವಿನಿಗಮಕವಿಲ್ಲ.

ಶರೀರಲಾಘವಾದಿ ಪ್ರಯೋಜಕವಿಲ್ಲದ್ದರಿಂದ ಅನೇಕ ಧರ್ಮಗಳನ್ನು ಪಕ್ಷತಾವಚ್ಛೇದಕವಾಗಿ ಮಾಡುವಾಗ ಅವುಗಳಲ್ಲಿ ವಿಶೇಷಣ ವಿಶೇಷ್ಯಭಾವ ವೈಪರೀತ್ಯವೂ ಸಂಭವವಿರುವುದರಿಂದ ಗೌರವ ಬರುವುದು. ಬ್ರಹ್ಮಪ್ರಮಾನ್ಯೇನೇತ್ಯಾದಿ ಅನೇಕ ಧರ್ಮಗಳಿಂದ ನಿಯತವಿಷಯತಾಕವಾದ ಲಘುಶರೀರಕವಾದ ಒಂದು ವಿಮತಿಯನ್ನು ಪಕ್ಷತಾವಚ್ಛೇದಕ ಮಾಡಿದರೇ ಲಾಘವವಿದೆ. ಇದರಿಂದ ಉಪಸ್ಥಿತಿ ಲಾಘವವನ್ನು ಸರ್ವಥಾ ಅನಾದರಿಸಿದಂತಾಗುವುದಿಲ್ಲ. ಒಂದೇ ಧರ್ಮವು ನಿಯಮೇನ ಇನ್ನೊಂದು ಧರ್ಮದ ಉಪಸ್ಥಿತಿಗೆ ಪ್ರಯೋಜಕವಾದ ಉಪಸ್ಥಿತಿಗೆ ವಿಷಯವಾಗುತ್ತಿದ್ದರೆ ಆ ಧರ್ಮದ ಉಪಸ್ಥಿತಿಲಾಘವಕ್ಕೇ ಆದ್ಯತೆ ನೀಡುವ ಸಂಭವವಿದೆ ತಾನೆ?

ಶರೀರಲಾಘವಕ್ಕೆ ಉದಾಹರಣೆ ಇದು—'ಕಾರ್ಯವು ಸಕರ್ತೃಕವಾಗಿದೆ. ಕಾರ್ಯತ್ವ ವಿರುವುದರಿಂದ' ಎಂಬ ಅನುಮಾನದಲ್ಲಿ ಕಾರ್ಯತ್ವವೆಂಬ ಹೇತುವಿಗೆ ಅಸಿದ್ಧಿ ಎಂದು ಶಂಕೆ ಬಂದಾಗ ಸಾವಯವತ್ವಹೇತುವಿನಿಂದ ಕಾರ್ಯತ್ವ ಸಾಧನೆ ಮಾಡಬೇಕು. ಬಳಿಕ ಕಾರ್ಯತ್ವದಿಂದ ಸಕರ್ತೃಕತ್ವಸಾಧನೆ ಮಾಡಬೇಕು. ಇಲ್ಲಿ ಪ್ರಾಗಭಾವ ಪ್ರತಿಯೋಗಿತ್ವರೂಪ ಕಾರ್ಯತ್ವವು ಅವಯವ ಜನ್ಯತ್ವರೂಪ ಸಾವಯವತ್ವಕ್ಕಿಂತ ಲಘು ಎಂದು ಶರೀರಲಾಘವವನ್ನೇ ಆದರಿಸಿದ್ದಾರೆ ತಾರ್ಕಿಕರು.

ಹಾಗೇ ಪ್ರಕೃತದಲ್ಲಿ ಶರೀರಲಾಘವದೃಷ್ಟಿಯಿಂದ ವಿಮತಿಯನ್ನೇ ಪಕ್ಷತಾವಚ್ಛೇದಕ ಮಾಡಿದ್ದಾರೆ.

ಯದ್ಯಪಿ ದೃಷ್ಟಾಂತದಲ್ಲಿ ವೈಷಮ್ಯ ಕಾಣುತ್ತದೆ. ವಿಮತಿವಿಷಯತ್ವ ಗ್ರಹಣಕ್ಕೆ ಧರ್ಮಿತಾವಚ್ಛೇದಕದ ಉಪಸ್ಥಿತಿ ನಿಯಮೇನ ಅಪೇಕ್ಷಿತವಾಗುವಂತೆ, ಕಾರ್ಯತ್ವಗ್ರಹಣಕ್ಕೆ

ಸಾವಯವತ್ವದ ಉಪಸ್ಥಿತಿ ನಿಯಮೇನ ಬೇಕಾಗುವುದಿಲ್ಲ. ನಿರವಯವವಾದ ಗುಣಕರ್ಮಾದಿಗಳಲ್ಲಿ ಸಾವಯವತ್ವೋಪಸ್ಥಿತಿ ಇಲ್ಲದೆಯೆ ಕಾರ್ಯತ್ವಗ್ರಹಣ ಕಂಡಿದೆ. ಆದರೂ ಅನ್ಯೋಪಸ್ಥಿತಿಗೆ ಅಧೀನವಾಗಿ ಉಪಸ್ಥಿತವಾದುದೂ ಕೂಡ ಉಪಯುಕ್ತವಾಗುತ್ತದೆ ಎನ್ನುವಲ್ಲಿ ದೃಷ್ಟಾಂತ ನೀಡುವ ಅಭಿಪ್ರಾಯ ಇಲ್ಲಿ ಇದೆ. ಸಾವಯವತ್ವೋಪಸ್ಥಿತಿಗೆ ಅಧೀನವಾಗಿ ಸಾವಯವ ಪದಾರ್ಥಗಳಲ್ಲಿ ಕಾರ್ಯತ್ವೋಪಸ್ಥಿತಿ ಹೇಗೋ ಹಾಗೇ ಧರ್ಮಿತಾವಚ್ಛೇದಕೋಪಸ್ಥಿತಿಗೆ ಅಧೀನವಾಗಿ ವಿಮತಿವಿಷಯತ್ವೋಪಸ್ಥಿತಿ ಇರುತ್ತದೆ ಎಂದು.

ಯದ್ಯಪಿ ಕೇವಲ ಧರ್ಮಿತಾವಚ್ಛೇದಕಕ್ಕಿಂತ ಧರ್ಮಿತಾವಚ್ಛೇದಕ ವಿಶಿಷ್ಟ ವಿಮತಿಯಲ್ಲಿ ಶರೀರಕೃತಗೌರವ ಅಧಿಕ. ಆದರೂ ಧರ್ಮಿತಾವಚ್ಛೇದಕಘಟಿತ ವಿಷಯತಾಪ್ರತ್ಯಾಸತ್ತಿಯಿಂದ ವಿಮತಿಯನ್ನು ಪಕ್ಷತಾವಚ್ಛೇದಕ ಮಾಡಿದರೆ ಲಾಘವವಿದ್ದೇ ಇದೆ.

❖❖❖

**यद्वा पृथिवी सत्या मिथ्या वा, जलं सत्यं मिथ्या वेत्यननुगतधर्म्याश्रया अनुगता विप्रतिपत्तिः पक्षतावच्छेदिका ।**

**यद्यपि विमतिस्समयबन्धादिना व्यवहितत्वान्नानुमानकालेऽस्ति । तथापि सैवोपलक्षणतया तज्ज्ञानं वा विशेषणतया(पक्षता) बच्छेदकमस्तु ।**

विप्रतिपत्तिर्द्वैविध्येन व्यवस्थितविकल्पमभिप्रेत्याह **यद्वेति । अनुगतेति ।** यद्यपि विमतित्वेनानुगमेऽतिप्रसङ्गः । मिथ्यात्वतदभावकोटिकविप्रतिपत्तित्वेनानुगमेऽपि विशेषादर्शनदशायां ब्रह्मादावपि तथाविधविप्रतिपत्तिसंभवेनातिप्रसङ्गतादवस्थ्यम् । विशेषदर्शनदशायामपि आहार्यसंदेहमादाय तद्दोषतादवस्थ्यम् । तथापि ब्रह्मासत्प्रातिभासिकविषयकान्य मिथ्यात्वतदभावकोटिक विमतित्वेन स्वरूपसतानुगमो द्रष्टव्यः । विमतेर्विशेषणतयैव पक्षतावच्छेदकत्वमभिप्रेत्य शङ्कते **यद्यपीति ।** प्रसिद्धधूमाद्यनुमाने अनुमितिकाले सत एव धूमवत्पर्वतत्वादेः पक्षतावच्छेदकत्वदर्शनादिति भावः । **सैवेति ।** यद्यप्यनुगतानतिप्रसक्तोपलक्ष्यतावच्छेदकाभावेन तस्या उपलक्षणत्वायोगः । भावे वा तस्यैव पक्षतावच्छेदकत्वमस्तु, आवश्यकत्वात् । तथापि न तस्या उपलक्षणत्वायोगः । तत्रैव ह्युपलक्ष्यतावच्छेदकापेक्षा यत्र प्रत्याय्यव्यावृत्तिन्यूनाधिकवृत्त्युपलक्षणम् । यथा काकवन्तो देवदत्तगृहा इत्यत्र । नचैवं

प्रकृते, उपलक्षणभूताया विमतेर्विषयतासंबन्धेन प्रत्याय्यव्यावृत्तिन्यूनाधिक-देशावृत्तित्वात् । नचातीतत्वात् कथं तयेदानीं व्यावृत्तिधीरिति वाच्यम् । व्यावर्तकधर्मज्ञानस्यैव व्यावृत्तिधीहेतुत्वात् । कुरूणां क्षेत्रं, गुरूणां टीकेत्यत्र तज्ज्ञानस्य व्यावृत्तिधीहेतुत्वदर्शनादिति भावः । तुष्यतु दुर्जन इति न्यायेनाह **तज्ज्ञानं वेति ।** वाशब्दोऽयमनास्थायाम् । नचैवं विमतत्वेन ज्ञातमिति पक्षनिर्देशप्रसङ्गः, अत्रेष्टापादनादिति भावः ।

❖❖❖

**ಯದ್ವಾ ಪೃಥಿವೀ ಸತ್ಯಾ ಮಿಥ್ಯಾ ವಾ, ಜಲಂ ಸತ್ಯಂ ಮಿಥ್ಯಾ ವಾ ಇತಿ ಅನನುಗತಧರ್ಮ್ಯಾಶ್ರಯಾ ಅನುಗತಾ ವಿಪ್ರತಿಪತ್ತಿಃ ಪಕ್ಷತಾವಚ್ಛೇದಿಕಾ ।**

ಅಥವಾ ಪೃಥಿವಿ ಸತ್ಯವೆ, ಮಿಥ್ಯೆಯೆ? ಜಲ ಸತ್ಯವೆ, ಮಿಥ್ಯೆಯೆ? ಎಂದು ಮುಂತಾಗಿ ಪೃಥಿವ್ಯಾದಿ ನಾನಾ ಧರ್ಮಿಗಳಲ್ಲಿ 'ಸತ್ಯವೆ, ಮಿಥ್ಯೆಯೆ?' ಎಂದು ಏಕರೂಪವಾಗಿ ಬರುವ ವಿಪ್ರತಿಪತ್ತಿಯನ್ನು, ಅಂದರೆ, ವಿಪ್ರತಿಪತ್ತಿಜನ್ಯ ವಿಮತಿಯನ್ನು ಪಕ್ಷತಾವಚ್ಛೇದಕ ಮಾಡಬಹುದು. ಆಗಲೂ ಲಾಘವವಿದೆ. ಆತ್ಮತ್ವ ಒಂದನ್ನು ಬಿಟ್ಟು ಪೃಥಿವೀತ್ವಾದಿ ಅಭಾವತ್ವವರೆಗಿನ ಚತುರ್ದಶಧರ್ಮಾವಚ್ಛಿನ್ನ ಅನನುಗತ ವಿಶೇಷ್ಯಕ ಚತುರ್ದಶ ವಿಪ್ರತಿಪತ್ತಿಗಳನ್ನಿಟ್ಟುಕೊಂಡು, ತಜ್ಜನ್ಯವಾದ ಅನುಗತವಾದ ಸಮೂಹಾಲಂಬನಾತ್ಮಕವಾದ ಒಂದು ವಿಮತಿಯನ್ನು ಪಕ್ಷತಾವಚ್ಛೇದಕ ವೆನ್ನಬೇಕು. ಆತ್ಮನು ಸತ್ಯನೆನ್ನುವಲ್ಲಿ ವಾದಿಗಳಿಗೆ ಸಮ್ಮತಿ ಇರುವುದರಿಂದ ಆತ್ಮನು ಸತ್ಯನೆ ಮಿಥ್ಯೆಯೆ ಎಂಬ ವಿಪ್ರತಿಪತ್ತಿ ಜನ್ಯ ವಿಮತಿಯು ಪಕ್ಷತಾವಚ್ಛೇದಕವಾಗುವುದಿಲ್ಲ.

ಈ ಪಕ್ಷದಲ್ಲಿ ಧರ್ಮಿತಾವಚ್ಛೇದಕವೇ ಪಕ್ಷತಾವಚ್ಛೇದಕವಾಗಲಿ ಎಂಬ ಶಂಕೆ ಇಲ್ಲ. ಪೃಥಿವೀತ್ವಾದಿ ಧರ್ಮಿತಾವಚ್ಛೇದಕಗಳು ಬೇರೆ ಬೇರೆಯೇ ಇವೆ. ಅನುಗತವಾದ ಒಂದು ಧರ್ಮವನ್ನೇ ಪಕ್ಷತಾವಚ್ಛೇದಕ ಮಾಡಬೇಕು. ಸಮೂಹಾಲಂಬನವಾದ ಒಂದು ವಿಮತಿಯು ವಿಶೇಷ್ಯತಾ ಪ್ರತ್ಯಾಸತ್ತಿಯಿಂದ ಪೃಥಿವ್ಯಾದಿ ಚತುರ್ದಶ ಧರ್ಮಿಗಳಲ್ಲಿ ಅನುಗತವಾಗಿ ಬರುತ್ತದೆ.

ಯದ್ಯಪಿ ಮಿಥ್ಯಾತ್ವ ತದಭಾವ ಕೋಟಿಕ ವಿಪ್ರತಿಪತ್ತಿತ್ವೇನ ಅನುಗಮ ಮಾಡಿದರೂ ವಿಶೇಷಾದರ್ಶನದಶಾದಲ್ಲಿ ಬ್ರಹ್ಮ-ಅಸತ್-ಪ್ರಾತಿಭಾಸಿಕ ಗಳಲ್ಲಿಯೂ ಈ ವಿಪ್ರತಿಪತ್ತಿ ಬರಬಹುದು. ವಿಶೇಷದರ್ಶನ ದಶಾದಲ್ಲಿಯೂ ಆಹಾರ್ಯ ಸಂದೇಹವಿಟ್ಟುಕೊಂಡು ಅತಿಪ್ರಸಕ್ತಿಗೆ ಅವಕಾಶವಿದೆ. ಆದರೂ 'ಸ್ವರೂಪಸತ್ತಾದ ಬ್ರಹ್ಮ-ಅಸತ್-ಪ್ರಾತಿಭಾಸಿಕ ವಿಷಯಕಾನ್ಯ ಮಿಥ್ಯಾತ್ವ ತದಭಾವ ಕೋಟಿಕ ವಿಮತಿತ್ವೇನ' ಅನುಗಮ ಮಾಡಬೇಕು.

ಯದ್ಯಪಿ ವಿಮತಿಯು ವಿಶೇಷಣವಾಗಿಯೇ ಪಕ್ಷತಾವಚ್ಛೇದಕವಾಗಬೇಕು. ಧೂಮಾದಿ

ಅನುಮಾನದಲ್ಲಿ ಅನುಮಿತಿಕಾಲದಲ್ಲಿ ಇರುವ ಧೂಮವತ್‌ಪರ್ವತತ್ವಾದಿಯೆ ಪಕ್ಷತಾವಚ್ಛೇದಕ ವಾಗುವುದು ಕಂಡಿದೆ. ಆದರೆ ವಿಮತಿ ಬಂದ ಬಳಿಕ ವಾದ ಪ್ರಾರಂಭವಾಗುವುದಕ್ಕೆ ಮುನ್ನ ಸಮಯಬಂಧಾದಿ ಕಾರ್ಯಕಲಾಪಗಳಿವೆ. ಅವು ಮುಗಿದು ವಾದ ಪ್ರಾರಂಭವಾಗುವ ಕಾಲದಲ್ಲಿ ವಿಮತಿ ನಿವೃತ್ತವಾಗಿರುತ್ತದೆ. ಅದಕ್ಕೆ, ವಿಮತಿಯನ್ನು ಉಪಲಕ್ಷಣವಾಗಿಯೇ ಪಕ್ಷತಾವಚ್ಛೇದಕವೆಂದು ಸ್ವೀಕರಿಸಬೇಕು ಎಂದರೆ ಅದೂ ಶಕ್ಯವಿಲ್ಲ. ಅನುಗತವಾದ ಅನತಿಪ್ರಸಕ್ತವಾದ ಉಪಲಕ್ಷ್ಯತಾವಚ್ಛೇದಕ ಒಂದು ಇಲ್ಲದಿರುವುದರಿಂದ ವಿಮತಿಯು ಉಪಲಕ್ಷಣವಾಗಲಾರದು. ಅಂಥ ಉಪಲಕ್ಷ್ಯತಾವ ಚ್ಛೇದಕವಿರುವ ಪಕ್ಷದಲ್ಲಿ ಅದನ್ನೇ ಪಕ್ಷತಾವಚ್ಛೇದಕ ಮಾಡಬಹುದು, ಆವಶ್ಯಕವಾಗಿರುವುದರಿಂದ– ಎಂಬ ಸಮಸ್ಯೆ ಬರುತ್ತದೆ.

ವಸ್ತುತಃ ಉಪಲಕ್ಷಣಕ್ಕೆ ಅನುಗತವಾದ ಉಪಲಕ್ಷ್ಯತಾವಚ್ಛೇದಕವಿರಲೇಬೇಕೆಂದು ನಿಯಮ ವಿಲ್ಲ. ಎಲ್ಲಿ ಉಪಲಕ್ಷಣವು ತಾನು ತಿಳಿಸುವ ವ್ಯಾವೃತ್ತಿಗೆ ಅನ್ಯೂನ ಅನತಿರಿಕ್ತವೃತ್ತಿಯಾಗದೆ ನ್ಯೂನ ಅಧಿಕವೃತ್ತಿಯಾಗುವುದೋ ಅಲ್ಲಿ ಮಾತ್ರ ಉಪಲಕ್ಷ್ಯತಾವಚ್ಛೇದಕದ ಆವಶ್ಯಕತೆ ಇದೆ. ಉದಾ: 'ಕಾಗೆ ಉಳ್ಳವುಗಳು ದೇವದತ್ತನ ಮನೆಗಳು' ಇಲ್ಲಿ ಕಾಗೆಯು ದೇವದತ್ತನ ಮನೆಗಳಲ್ಲಿ ಇತರ ಭೇದವನ್ನು ತಿಳಿಸುತ್ತದೆ. ಇತರ ಭೇದವಿರುವಲ್ಲೆಲ್ಲ ಕಾಗೆ ಇರಬೇಕೆಂದಿಲ್ಲ, ಮತ್ತು ಇತರ ಭೇದವಿಲ್ಲದಿದ್ದಲ್ಲಿಯೂ ಕಾಗೆ ಇರಬಹುದು. ಸ್ವಪ್ರತ್ಯಾಯ್ಯ ವ್ಯಾವೃತ್ತಿಗೆ ನ್ಯೂನ ಅಧಿಕವೃತ್ತಿಯೇ ಆಗಿದೆ ಕಾಗೆ ಎಂಬ ಉಪಲಕ್ಷಣ. ಇಲ್ಲಿ ಉಪಲಕ್ಷಣವನ್ನು ತಿಳಿದುಕೊಳ್ಳಲು ದೇವದತ್ತಗೃಹತ್ವರೂಪ ಉಪಲಕ್ಷ್ಯತಾವ ಚ್ಛೇದಕವೆ ಬೇಕು. ಎಲ್ಲಿ ಈರೀತಿ ಉಪಲಕ್ಷಣವು ಸ್ವಪ್ರತ್ಯಾಯ್ಯ ವ್ಯಾವೃತ್ತಿಗೆ ನ್ಯೂನಾಧಿ ಕವೃತ್ತಿಯಾಗಿರುವುದಿಲ್ಲವೋ ಅಲ್ಲಿ ಉಪಲಕ್ಷ್ಯತಾವಚ್ಛೇದಕದ ಆವಶ್ಯಕತೆ ಇಲ್ಲ. ಉದಾ: ಕುರುಗಳ ಕ್ಷೇತ್ರ, ಗುರುಗಳ ಟೀಕೆ ಇತ್ಯಾದಿ. ಪ್ರಕೃತ ವಿಮತಿರೂಪ ಉಪಲಕ್ಷಣವು ವಿಷಯತಾ ಸಂಬಂಧದಿಂದ ಪ್ರತ್ಯಾಯ್ಯ ವ್ಯಾವೃತ್ತಿಗೆ ನ್ಯೂನ ಅಥವಾ ಅಧಿಕದೇಶ ವೃತ್ತಿಯಾಗಿಲ್ಲ. ಆದರಿಂದ ಉಪಲಕ್ಷ್ಯತಾವಚ್ಛೇದಕವು ಪೃಥಿವೀ ಜಲಾದಿಗಳಲ್ಲಿ ಅನುಗತವಾಗಿ ಒಂದು ಇಲ್ಲದಿದ್ದರೂ ವಿಮತಿ ಉಪಲಕ್ಷಣವಾಗಬಹುದು.

ಸಮಯಬಂಧಾದಿಗಳಿಂದ ವ್ಯವಹಿತವಾಗಿದ್ದು ಅತೀತವಾದ ವಿಮತಿಯು ವ್ಯಾವೃತ್ತಿಧೀ ಜನಕವಾಗುವುದು ಹೇಗೆ ಎಂದರೆ ವ್ಯಾವರ್ತಕಧರ್ಮ ಜ್ಞಾನವೇ ವ್ಯಾವೃತ್ತಿಧೀಜನಕ. ಕುರೂಣಾಂ ಕ್ಷೇತ್ರಂ ಗುರೂಣಾಂ ಟೀಕಾ ಇತ್ಯಾದಿ ಸ್ಥಳದಲ್ಲಿ ಉಪಲಕ್ಷಣರಾದ ಅತೀತರಾದ ಕುರು ಗುರುಗಳ ಜ್ಞಾನದಿಂದಲೇ ವ್ಯಾವೃತ್ತಿಧೀ ಉಂಟಾಗುವುದು ಕಂಡಿದೆ.

ಆದರೂ ತುಷ್ಯತು ದುರ್ಜನ ನ್ಯಾಯದಿಂದ ವಿಮತಿಜ್ಞಾನವನ್ನೇ ವಿಶೇಷಣವಾಗಿ ಉಪಲಕ್ಷಣ ವೆಂದು ಸಮಾಧಾನ ಮಾಡಬಹುದು. ಏಕೆಂದರೆ ಪ್ರಮಾಣವು ವಿಶೇಷಣ ಸತ್ತಾವಗಾಹಿಯಾಗುವುದು ಉತ್ಸರ್ಗ. 'ಶ್ಯಾಮಘಟವು ಪಾಕದಿಂದ ರಕ್ತವಾಗಿದೆ' ಎಂಬಲ್ಲಿ ಶ್ಯಾಮತ್ವೋಪಲಕ್ಷಿತ ಘಟವು ಕಂಡರೂ 'ಗಂಧಪ್ರಾಗಭಾವಾವಚ್ಛಿನ್ನವಾದ ಘಟವು ಗಂಧ ಉಳ್ಳದ್ದು' ಎಂದು ಪ್ರತಿಜ್ಞೆಮಾಡಿದಾಗ

ಗಂಧಪ್ರಾಗಭಾವವು ವಿಶೇಷಣವಾಗಿ ಕಾಣುವುದರಿಂದ ಗಂಧವು ಬಾಧಿತವೆಂದು ದೋಷವನ್ನು ಹೇಳುತ್ತೇವೆ. ಉಪಲಕ್ಷಣವನ್ನು ಗ್ರಹಿಸುವ ಪಕ್ಷದಲ್ಲಿ ಬಾಧಕ್ಕೆ ಅವಕಾಶವಿಲ್ಲ. ಗಂಧಪ್ರಾಗಭಾವವು ವಿಶೇಷಣವಾಗಿರುವ ಕಾಲದಲ್ಲಿ ಗಂಧವು ಬಾಧಿತವಾದರೂ ದ್ವಿತೀಯಕ್ಷಣದಲ್ಲಿ ಅದು ಅತೀತವಾಗಿ ಉಪಲಕ್ಷಣವಾಗಿರುವಾಗ ಗಂಧವು ಆ ಘಟದಲ್ಲಿ ಬಂದಿರುತ್ತದೆ, ಗಂಧ ಪ್ರಾಗಭಾವವಿರುವುದಿಲ್ಲ, ಬಾಧವಿಲ್ಲ. ಉತ್ಸರ್ಗತಃ ಗಂಧಪ್ರಾಗಭಾವವು ವಿಶೇಷಣವಾಗಿ ಕಾಣದೆ ಉಪಲಕ್ಷಣವಾಗಿಯೂ ಕಾಣುವ ಪಕ್ಷದಲ್ಲಿ ಪ್ರಾಗಭಾವವಿಲ್ಲದಿರುವುದರಿಂದ ಬಾಧವನ್ನು ಹೇಳಬಾರದು, ಹೇಳುತ್ತಾರೆ. ಆದರಿಂದ ಶಬ್ದಜನ್ಯವಾದ ಪ್ರತೀತಿಯು ವಿಶೇಷಣ ಸತ್ವಗ್ರಾಹಿ ಎಂಬುದು ಉತ್ಸರ್ಗವೆನ್ನಬೇಕು ಎಂದು ಅಭಿಪ್ರಾಯದಿಂದ 'ವಿಮತಿಜ್ಞಾನ'ವನ್ನು ವಿಶೇಷಣವಾಗಿ ಪಕ್ಷತಾವಚ್ಛೇದಕ ಎನ್ನುತ್ತಾರೆ.

ವಿಮತಿಜ್ಞಾನವೆಂದರೆ ವಿಮತಿಯ ಅನುವ್ಯವಸಾಯ ಅಥವಾ ವಿಮತಿಯ ಸ್ಮರಣೆ ಎಂದಿಟ್ಟುಕೊಂಡರೆ ಅನುವ್ಯವಸಾಯ ಸ್ಮರಣೆಗಳೂ ವಿಮತಿಯಂತೆ ದ್ವಿಕ್ಷಣಾವಸ್ಥಾಯಿಯಾಗಿದ್ದು ಅನುಮಿತಿಪೂರ್ವಕ್ಷಣದಲ್ಲಿರುವುದಿಲ್ಲ ಎಂಬ ಸಮಸ್ಯೆ ಇದ್ದೇ ಇದೆ. ಆಕ್ಷಣದಲ್ಲಿ ಅವು ತಿರುಗಿ ಹುಟ್ಟಬೇಕೆಂದರೆ ಅದಕ್ಕೆ ಸಾಮಗ್ರಿ ನಿಯಮೇನ ಇರುತ್ತವೆ ಎನ್ನಲಾಗದು. ಆದರಿಂದ ಮಾಧುರೀ ವ್ಯಾಖ್ಯಾನದಲ್ಲಿ ಹೇಳುವಂತೆ ನ್ಯಾಯಾಮೃತದ 'ತಜ್ಜ್ಞಾನಂ ವಾ' ಎಂಬ ಮಾತಿಗೆ 'ತದ್‌ಭಾನಂ, ತದ್‌ವಿಷಯತ್ವಂ' ಎಂದು ಅರ್ಥವಿಟ್ಟುಕೊಳ್ಳುವುದು ಉಚಿತ.

ಜ್ಞಾಧಾತುವು ಭಾಧಾತುವಿಗೂ ಸಮಾನಾರ್ಥಕ. ಭಾಧಾತುವಿಗೆ ವಿಷಯತ್ವವು ಅರ್ಥ. ಘಟಜ್ಞಾನದಲ್ಲಿ ಘಟಭಾನವಿದೆ ಎಂದರೆ ಘಟವಿಷಯತ್ವವಿದೆ ಎಂದೇ ಅರ್ಥ. ಘಟಜ್ಞಾನದಲ್ಲಿ ಘಟಜ್ಞಾನವಿರುವುದಿಲ್ಲ. ಶಾಸ್ತ್ರಕಾರರ ಪ್ರಯೋಗವೂ ಇದನ್ನೇ ಸಮರ್ಥಿಸುತ್ತದೆ. ಪ್ರತ್ಯಕ್ಷಮಣಿ ದೀಧಿತಿಯಲ್ಲಿ 'ಭಾನಮಿತಿ' ಎಂದು ಪ್ರತೀಕವನ್ನು ಓಡಿದು 'ವಿಷಯತ್ವವು ಅರ್ಥ' ಎಂದು ವ್ಯಾಖ್ಯಾನಕಾರರು ಹೇಳುತ್ತಾರೆ. 'ಯಾ ಸಾಮಗ್ರೀಪದೇನ ವಿವಕ್ಷಣೀಯಾ' 'ಯಾವ ಸಾಮಗ್ರಿಯು ವಿಷಯವನ್ನು ಗ್ರಹಿಸದೆ ಜ್ಞಾನವನ್ನೂ ವಿಷಯೀಕರಿಸಲಾರದೋ ಅಂಥ ಸಾಮಗ್ರಿಯು ಇಲ್ಲಿ ಸಾಮಗ್ರೀಪದದಿಂದ ವಿವಕ್ಷಿತ' ಎಂದು ಪಕ್ಷಧರನ ವಿವಕ್ಷೆಯಲ್ಲಿ ಸಾಮಗ್ರಿಗೆ 'ಜ್ಞಾನಭಾನ ಪ್ರಯೋಜಕ' ಎಂದು ವಿಶೇಷಣ ನೀಡುವಾಗ ಗದಾಧರ ಮುಂತಾದ ವ್ಯಾಖ್ಯಾನಕಾರರು 'ಭಾನ' ಪದಕ್ಕೆ ವಿಷಯತ್ವಾರ್ಥವನ್ನೇ ಇಟ್ಟುಕೊಂಡಿರುವುದು ಕಂಡಿದೆ. ಪ್ರಕೃತ 'ತಜ್ಜ್ಞಾನಂ ವಾ' ಎಂಬಲ್ಲಿ ಜ್ಞಾನವೆಂದರೆ ಭಾನ, ವಿಷಯತ್ವ ಅರ್ಥ. ವಿಮತಿಯು ನಾಶವಾದರೂ ವಿಮತಿವಿಷಯತ್ವವು ನಾಶವಾಗುವುದಿಲ್ಲ. ಅದು ಪಕ್ಷತಾವಚ್ಛೇದಕವಾಗಬಹುದು. ತತ್ಸಾಮಾನಾಧಿಕರಣ್ಯೇನ ಸಾಧ್ಯವನ್ನು ಅನುಮಿತಿಯು ಗ್ರಹಿಸಬಹುದು.

ವಿಮತಿ ನಾಶವಾದಾಗ ವಿಮತಿವಿಷಯತ್ವ ನಾಶವಾಗದಿದ್ದರೂ ಅದರಲ್ಲಿರುವ ವಿಮತಿನಿರೂಪಿತತ್ವವು ನಾಶವಾಗಬಹುದಲ್ಲವೆ ಎಂದರೆ, ಇಲ್ಲ. ವಿಮತಿ ನಿರೂಪಿತತ್ವವು ನಿರೂಪಿತತ್ವಸಂಬಂಧದಿಂದ ವಿಮತಿವಿಶಿಷ್ಟತ್ವವಲ್ಲ. ವಿಷಯಸ್ವರೂಪಸಂಬಂಧರೂಪವಾಗಿದೆ. ಅದು

ನಾಶವಾಗದಿರುವುದರಿಂದ ವಿಶೇಷಣವಾಗಿಯೇ ಪಕ್ಷತಾವಚ್ಛೇದಕವಾಗಿದೆ. ಹಾಗಾದರೆ 'ವಿಮತತ್ವೇನ ಜ್ಞಾತಂ' ಎಂದು ಪಕ್ಷ ನಿರ್ದೇಶಮಾಡಬೇಕೆಂದಾದೀತೆಂದರೆ ಇಷ್ಟಾಪತ್ತಿ.

❖❖❖

**अत एव विमतमित्येव प्राचां प्रयोगः। नतु वियदादीत्येव पक्षनिर्देशः। अवच्छेदकाभावेऽसंकुचितेनादिशब्देन आत्मादेरपि ग्रहणप्रसङ्गात्।**

**नापि प्रपञ्च इत्येव पक्षनिर्देशः। प्रपञ्चशब्देन वियदाद्यन्यतत्समुदायोक्तौ वियदादिमिथ्यात्वासिद्धेः। बियदादीनामेवोक्तावच्छेदकाभावेनोक्तदोषात्।**

**नापि वियदित्येव पक्षनिर्देशः, घटादिस्तु पक्षतुल्य इति वाच्यम्। पक्षादन्यत्र निश्चितसाध्याभाववति हेतुसन्देह इव निश्चितहेतुमति साध्यसन्देहेऽपि सन्दिग्धानैकान्त्यात्।**

**अत एवेति**। यत एवोक्तरीत्या एवंविधस्थले शरीरलाघवमादरणीयं तत एवेत्यर्थः। एतच्च विमतेरुपलक्षणत्वेन पक्षतावच्छेदकत्वपक्षमभिप्रेत्येति द्रष्टव्यम्। स्वोक्तप्रकारनिर्वाहाय प्रकारान्तरमुपन्यस्य दूषयति **न तु वियदादीति**। **अवच्छेदकाभाव इति**। तत्स्वीकारे त्वस्मदुक्तपक्ष एव प्रवेश इति भावः। **पक्षतुल्य इति**। प्रतिज्ञां प्रत्यविषयत्वे सति व्याप्तिविशिष्टपक्षधर्मताज्ञानजन्यानुमिति विशेष्यत्वयोग्य इत्यर्थः। पक्षतुल्यत्वाभिमते तदज्ञाने हेत्वज्ञानादेव न व्यभिचारज्ञानविषय इति भावः। **पक्षादन्यत्रेति**। तथाच पक्षताघटकान्यव्यभिचारज्ञानविषयत्वेनैव प्रतिबन्धकत्वं लाघवात्। पक्षसमव्यभिचारसंशयश्चेत्तदुक्तरीत्या पक्षताघटकान्य एवेति भावः।

❖❖❖

ಅತ ಏವ ವಿಮತಮಿತ್ಯೇವ ಪ್ರಾಚಾಂ ಪ್ರಯೋಗಃ। ನ ತು ವಿಯದಾದೀತ್ಯೇವ ಪಕ್ಷನಿರ್ದೇಶಃ। ಅವಚ್ಛೇದಕಾಭಾವೇ ಅಸಂಕುಚಿತೇನ ಆದಿಶಬ್ದೇನ ಆತ್ಮಾದೇರಪಿ ಗ್ರಹಣ ಪ್ರಸಂಗಾತ್।

ವಿಮತಿಯಾಗಲಿ ವಿಮತಿ ಜ್ಞಾನವಾಗಲಿ ಪಕ್ಷತಾವಚ್ಛೇದಕವಾಗಬೇಕು. ಪಕ್ಷತಾವಚ್ಛೇದಕ ಶರೀರಲಾಘವವನ್ನು ಆದರಿಸಬೇಕು ಎಂಬ ಅಭಿಪ್ರಾಯವಿರುವುದರಿಂದಲೇ ಪ್ರಾಚೀನರು 'ವಿಮತಂ' ಎಂದೇ ಪ್ರಯೋಗಿಸಿದ್ದಾರೆ. 'ವಿಯದಾದಿ'ಗಳು ಆಕಾಶಾದಿಗಳು ಮಿಥ್ಯಾ' ಎಂದಲ್ಲ. ಏಕೆಂದರೆ ಆದಿಪದದಿಂದ ಏನೆಲ್ಲ ಗ್ರಾಹ್ಯವೆಂದು ನಿರ್ಣಯಿಸಲು ಗ್ರಾಹ್ಯತಾವಚ್ಛೇದಕ ಒಂದಿಲ್ಲದಿದ್ದರೆ ಅಸಂಕುಚಿತವಾದ ಆದಿಶಬ್ದದಿಂದ ಶುಕ್ತಿರಜತವಿಟ್ಟುಕೊಂಡರೆ ಸಿದ್ಧಸಾಧನತ್ವ, ಬ್ರಹ್ಮತುಚ್ಛಗಳನ್ನಿಟ್ಟು ಕೊಂಡರೆ ಬಾಧಪ್ರಸಂಗ ಬಂದೀತು. ಆದಿಪದ ಗ್ರಾಹ್ಯತಾವಚ್ಛೇದಕವಿದೆ ಎಂದರೆ ಅದು ವಿಮತಿವಿಷಯತ್ವವೇ ಆಗಿರುತ್ತದೆ, ಆಗ ನಮ್ಮ ಪಕ್ಷವನ್ನೇ ನೀನೂ ಪ್ರವೇಶಿಸಿದಂತಾಗುವುದು.

**ನಾಪಿ ಪ್ರಪಂಚ ಇತ್ಯೇವ ಪಕ್ಷ ನಿರ್ದೇಶಃ। ಪ್ರಪಂಚಶಬ್ದೇನ ವಿಯದಾದ್ಯನ್ಯ ತತ್ಸಮುದಾಯೋಕ್ತೌ ವಿಯದಾದಿ ಮಿಥ್ಯಾತ್ವಾಸಿದ್ಧೇಃ। ವಿಯದಾದೀನಾಮೇವೋಕ್ತೌ ಅವಚ್ಛೇದಕಾಭಾವೇನ ಉಕ್ತದೋಷಾತ್ ।**

'ಪ್ರಪಂಚವು ಮಿಥ್ಯಾ' ಎಂದು 'ಪ್ರಪಂಚ' ಶಬ್ದದಿಂದಲೇ ಪಕ್ಷನಿರ್ದೇಶವೂ ಸರಿಯಲ್ಲ. 'ಪ್ರಪಂಚ'ವೆಂದರೆ ವಿಯದಾದಿಗಳಿಗಿಂತ ಬೇರೆಯಾದ ಅವುಗಳ ಸಮುದಾಯವೇ ಅರ್ಥ ಎನ್ನುವ ಪಕ್ಷದಲ್ಲಿ ಸಮುದಾಯಕ್ಕೇ ಮಿಥ್ಯಾತ್ವ ಸಿದ್ಧವಾದೀತು. ವಿಯದಾದಿಗಳಿಗೆ ಅಲ್ಲ. ವಿಯದಾದಿಗಳೇ ಅರ್ಥ ಎನ್ನುವ ಪಕ್ಷದಲ್ಲಿ ಆದಿಶಬ್ದದಿಂದ ಶುಕ್ತಿರೂಪ್ಯವಿಟ್ಟುಕೊಂಡು ಸಿದ್ಧಸಾಧನತ್ವ, ಬ್ರಹ್ಮ ತುಚ್ಛಗಳನ್ನಿಟ್ಟುಕೊಂಡು ಬಾಧಪ್ರಸಂಗವೆಂದು ಹಿಂದಿನಂತೆಯೇ ದೋಷ.

**ನಾಪಿ ವಿಯದಿತ್ಯೇವ ಪಕ್ಷನಿರ್ದೇಶಃ, ಘಟಾದಿಸ್ತು ಪಕ್ಷತುಲ್ಯಃ ಇತಿ ವಾಚ್ಯಂ। ಪಕ್ಷಾದನ್ಯತ್ರ ನಿಶ್ಚಿತ ಸಾಧ್ಯಾಭಾವವತಿ ಹೇತುಸಂದೇಹ ಇವ ನಿಶ್ಚಿತ ಹೇತುಮತಿ ಸಾಧ್ಯಸಂದೇಹೇಽಪಿ ಸಂದಿಗ್ಧಾನೈಕಾಂತ್ಯಾತ್ ।**

'ವಿಯತ್ ಮಿಥ್ಯಾ' ಎಂದೇ ಪಕ್ಷ ನಿರ್ದೇಶ ಮಾಡುತ್ತೇನೆ. ಆಗ ಘಟಾದಿಯು ಪ್ರತಿಜ್ಞೆಯಲ್ಲಿ ವಿಷಯವಾಗದಿದ್ದರೂ ಪಕ್ಷದಂತೇ ಅನುಮಿತಿಯಲ್ಲಿ ವಿಶೇಷ್ಯವಾಗುವುದರಿಂದ ಪಕ್ಷಸಮವೆನಿಸುತ್ತದೆ. ಪಕ್ಷದಲ್ಲಿ ಹೇಗೋ ಹಾಗೇ ಪಕ್ಷಸಮದಲ್ಲಿಯೂ ವ್ಯಭಿಚಾರ ಸಂದೇಹವು ಅನುಮಿತಿ ಪ್ರತಿಬಂಧಕವಾಗದು'—ಎಂದರೆ ಅದು ಸರಿಯಲ್ಲ. ವ್ಯಭಿಚಾರ ಶರೀರದಲ್ಲಿ ಹೇತುಸತ್ವ ಸಾಧ್ಯಾಭಾವ ಎಂದು ಎರಡು ಅಂಶಗಳಿವೆ. ಅವುಗಳಲ್ಲಿ ಯಾವುದೇ ಒಂದು ನಿಶ್ಚಿತವಿದ್ದು ಇನ್ನೊಂದು ಸಂದಿಗ್ಧವಾದರೂ ಸಂದಿಗ್ಧ ವ್ಯಭಿಚಾರವೇ. ಅದು ಪಕ್ಷದಲ್ಲಿರಲಿ, ಪಕ್ಷಾದನ್ಯತ್ರ ಇರಲಿ, ದೋಷವೇ. ಪಕ್ಷಸಮದಲ್ಲಿ ವ್ಯಭಿಚಾರ ಹೇಳಬಾರದೆನ್ನುವುದು, ಅನುಕೂಲ ತರ್ಕವಿರುವಲ್ಲಿ ವ್ಯಾಪ್ತಿನಿಶ್ಚಯ ಬರುವುದಾದರೆ ವ್ಯಭಿಚಾರಸಂದೇಹವಿಲ್ಲ ಎಂಬ ಅಭಿಪ್ರಾಯದಿಂದ. ಅನುಕೂಲತರ್ಕವಿಲ್ಲದಿದ್ದರೆ ಪಕ್ಷದಲ್ಲಿ ಕೂಡ ಸಂದಿಗ್ಧವ್ಯಭಿಚಾರವನ್ನು ಹೇಳಬಹುದು. ಏಕೆಂದರೆ ಲಾಘವದಿಂದ ಪಕ್ಷತಾ ಘಟಕಾನ್ಯವಾದ ವ್ಯಭಿಚಾರಜ್ಞಾನವಿಷಯವೆ ಅನುಮಿತಿ ಪ್ರತಿಬಂಧಕ. ಘಟಾದಿಯು

ಪಕ್ಷಾದನ್ಯವೆಂದಮೇಲೆ ಅಲ್ಲಿ ಕಾಣುವ ವ್ಯಭಿಚಾರ ಸಂದೇಹವು ಪಕ್ಷತಾಘಟಕಾನ್ಯವಾಯಿತು. ಅಂಥ ವ್ಯಭಿಚಾರ ಸಂದೇಹವು ಅನುಮಿತಿಪ್ರತಿಬಂಧಕವೆಂದು ಒಪ್ಪಬೇಕು.

❖❖❖

**प्रतिज्ञां प्रत्यविषये घटे स्वार्थानुमानानुगतस्य साधकबाधक-प्रमाणविरहरूपपक्षत्वस्य सत्वेऽपि एवं(विध) पक्षनिर्देशस्य घटादिसाधारणविप्रतिपत्त्यनानुगुण्याच्च ।**

**विप्रतिपत्तौ तु न विमतिर्धर्मितावच्छेदिका, आत्माश्रयात् ।**

ननु पक्षसमस्यापि पक्षत्वमेव पक्षताश्रयत्वात् । प्रतिज्ञां प्रत्यविषयत्वमात्रेण तत्र पक्षसमत्वव्यवहारः । तथाच तत्संशयोपलक्षितघटकत्वादप्रनिबन्धक एवेत्यत आह **प्रतिज्ञां प्रतीति ।** घटादिसाधारणविप्रतिपत्तौ सत्यां तत्साधारणपक्षत्वे च सति विप्रतिपत्त्येकदेशप्रतिज्ञायाः समग्रविप्रतिपत्तिजन्यसंशयनिवर्तकनिश्चयाप्रयोजकत्वे-नायुक्तत्वादित्यर्थः । यद्यप्येतन्मते विप्रतिपत्तिरपि प्रत्येकमेव, साधारणधर्मस्य निर्वक्तुमशक्यत्वादिति वक्तुं शक्यम् । तथापि ब्रह्मासत्प्रातिभासिकव्यावृत्त-विषयकत्वरूपसाधारणधर्मस्य निरुक्तत्वात् प्रत्येकविप्रतिपत्तिकल्पने गौरवमिति भावः ।

ननूक्तरीत्या लघुत्वेन विमतेरेव पक्षतावच्छेदकत्वे आवश्यकत्वात् सैव धर्मितावच्छेदिकास्तु । ननु ब्रह्मप्रमान्येनेत्यादि निरुक्तगुरुधर्मस्तदवच्छेदक इत्यत आह **विप्रतिपत्तौ त्विति ।।** अत्र विमतिशब्देन विप्रतिपत्तिवाक्यस्य ग्रहणे आत्माश्रयः । तज्जन्यसंशयग्रहणे त्वन्योन्याश्रय इति बोध्यम् ।

❖❖❖

**ಪ್ರತಿಜ್ಞಾಂ ಪ್ರತಿ ಅವಿಷಯೇ ಘಟೇ ಸ್ವಾರ್ಥಾನುಮಾನಾನುಗತಸ್ಯ ಸಾಧಕಬಾಧಕ ಪ್ರಮಾಣವಿರಹರೂಪಪಕ್ಷತ್ವಸ್ಯ ಸತ್ವೇಽಪಿ, ಏವಂ ಪಕ್ಷನಿರ್ದೇಶಸ್ಯ ಘಟಾದಿ ಸಾಧಾರಣ ವಿಪ್ರತಿಪತ್ತ್ಯನಾನುಗುಣ್ಯಾಚ್ಚ ।**

ಯದ್ಯಪಿ ಪ್ರತಿಜ್ಞೆಯಲ್ಲಿ ವಿಷಯವಾಗದಿರುವ ಘಟದಲ್ಲಿಯೂ ಸಾಧಕಬಾಧಕ ಪ್ರಮಾಣ ವಿರಹರೂಪವಾದ ಪಕ್ಷತಾವನ್ನು ಹೇಳಬಹುದು. ಆದರಿಂದ ಪಕ್ಷಸಮವೂ ಪಕ್ಷತಾಶ್ರಯ

ವಾಗಿರುವುದರಿಂದ ಪಕ್ಷವೆ. ಅದನ್ನು 'ಪಕ್ಷಸಮ' ಎನ್ನುವುದು, ಅದು ಪಕ್ಷದಂತೆ ಪ್ರತಿಜ್ಞೆಯಲ್ಲಿ ವಿಷಯವಾಗಿಲ್ಲ ಎಂಬ ಕಾರಣಕ್ಕೇ. ಆದರಿಂದ ಪಕ್ಷಸಮದಲ್ಲಿ ಬರುವ ವ್ಯಭಿಚಾರ ಸಂದೇಹವು ಪಕ್ಷತಾ ಘಟಕವಾದ್ದರಿಂದ ಅನುಮಿತಿಗೆ ಅಪ್ರತಿಬಂಧಕ. ಪ್ರತಿಜ್ಞಾವಿಷಯತ್ವವು ಪಕ್ಷಲಕ್ಷಣವಲ್ಲ. ಸ್ವಾರ್ಥಾನುಮಾನದಲ್ಲಿ ಪ್ರತಿಜ್ಞಾರೂಪ ಪರಾರ್ಥಾನುಮಾನಾವಯವ ಪ್ರಯೋಗವಿಲ್ಲ. ಅಲ್ಲಿ ಸಾಧಕಬಾಧಕ ಪ್ರಮಾಣವಿರಹವೇ ಪಕ್ಷತ್ವವೆನ್ನಬೇಕು. ಇಂಥ ಪಕ್ಷತ್ವವುಳ್ಳ ಘಟಾದಿಗಳಲ್ಲಿ ಸಂದಿಗ್ಧವ್ಯಭಿಚಾರದೋಷವನ್ನು ಹೇಳಲಾಗದು.

ಆದರೂ ಕೇವಲ 'ವಿಯತ್' ಎಂದು ಪಕ್ಷ ನಿರ್ದೇಶ ಮಾಡುವುದು, ವಿಪ್ರತಿಪತ್ತಿಗೆ ಅನನುಗುಣವಾಗುವುದು. ವಿಪ್ರತಿಪತ್ತಿಯ ಏಕದೇಶವನ್ನು ಪ್ರತಿಜ್ಞಾ ಮಾಡಿದರೆ ಅದು ಸಮಗ್ರ ವಿಪ್ರತಿಪತ್ತಿ ಜನ್ಯಸಂಶಯಕ್ಕೆ ನಿವರ್ತಕವಾಗಬಲ್ಲ ನಿಶ್ಚಯಕ್ಕೆ ಪ್ರಯೋಜಕವಾಗಲಾರದು.

ಮತ್ತು ವಿಪ್ರತಿಪತ್ತಿಗೆ ಅನುಗುಣವಾಗಿ ಅನುಮಾನಪ್ರಯೋಗ ಮಾಡುವುದೇ ಆಕಾಂಕ್ಷಿತ ವಾಗಿರುತ್ತದೆ. ವಿಪ್ರತಿಪತ್ತಿಯಲ್ಲಿ ಕೇವಲ ವಿಯತ್ತು ಧರ್ಮಿಯಲ್ಲ. ಘಟಾದಿ ಸಾಧಾರಣವಾಗಿ ಧರ್ಮಿನಿರ್ದೇಶವಿರುತ್ತದೆ. ಆದರಿಂದ ಘಟಾದಿಸಾಧಾರಣ ಪಕ್ಷನಿರ್ದೇಶವೇ ಆಕಾಂಕ್ಷಿತವಾಗಿರುವಾಗ ಅದಕ್ಕೆ ವ್ಯತಿರಿಕ್ತವಾಗಿ ವಿಯತ್ತೆಂದೇ ಪಕ್ಷನಿರ್ದೇಶ ಮಾಡಿದರೆ ಅನಾಕಾಂಕ್ಷಿತಾಭಿಧಾನರೂಪ ಅಪ್ರಾಪ್ತಕಾಲತ್ವವೆಂಬ ನಿಗ್ರಹಸ್ಥಾನವೂ ಬರುತ್ತದೆ.

**ವಿಪ್ರತಿಪತ್ತೌ ತು ನ ವಿಮತಿರ್ಧರ್ಮಿತಾವಚ್ಛೇದಿಕಾ । ಆತ್ಮಾಶ್ರಯಾತ್ ।**

'ವಿಮತಿಯು ಲಘುವಾದ್ದರಿಂದ ಅನುಮಾನದಲ್ಲಿ ಪಕ್ಷತಾವಚ್ಛೇದಕ ಅದೇ ಆಗಬೇಕೆಂದ ಮೇಲೆ ಆವಶ್ಯಕವಾಗಿರುವ ಅದೇ, ವಿಪ್ರತಿಪತ್ತಿಯಲ್ಲಿ ಧರ್ಮಿತಾವಚ್ಛೇದಕವಾಗಿರಲಿ. ಹೊರತು ಬ್ರಹ್ಮಪ್ರಮಾನ್ಯೇನೇತ್ಯಾದಿ ಗುರುಧರ್ಮವನ್ನು ಧರ್ಮಿತಾವಚ್ಛೇದಕವಾಗಿ ಮಾಡುವುದು ಸರಿಯಲ್ಲ'—ಎಂದರೆ, 'ವಿಮತಿ' ಎಂದು ವಿಪ್ರಪತ್ತಿವಾಕ್ಯ ವಿವಕ್ಷಿತವಾದರೆ ವಿಪ್ರತಿಪತ್ತಿಯಲ್ಲಿ ವಿಪ್ರತಿಪತ್ತಿಯೆ ಧರ್ಮಿತಾವಚ್ಛೇದಕವಾಗಲಿ ಎಂದಂತಾಗುವುದು. ಧರ್ಮಿತಾವಚ್ಛೇದಕಜ್ಞಾನವು ವಿಪ್ರತಿಪತ್ತಿಜ್ಞಾನಕಾರಣವೆನಿಸುವುದರಿಂದ ತನ್ನ ಜ್ಞಾನಕ್ಕೆ ತಾನೇ ಕಾರಣ ಎಂದಂತಾಗಿ ಆತ್ಮಾಶ್ರಯದೋಷ ಬರುತ್ತದೆ.

ವಿಮತಿ ಎಂದರೆ ವಿಪ್ರತಿಪತ್ತಿಯಲ್ಲ, ವಿಪ್ರತಿಪತ್ತಿಜನ್ಯಸಂಶಯವು ವಿವಕ್ಷಿತ. ಆದರಿಂದ ಆತ್ಮಾಶ್ರಯದೋಷವಿಲ್ಲ ಎಂದರೆ ವಿಪ್ರತಿಪತ್ತಿಯಿಂದ ಸಂಶಯ ಹುಟ್ಟಬೇಕು, ಸಂಶಯ ಹುಟ್ಟಿದರೆ, ಸಂಶಯವನ್ನು ಧರ್ಮಿತಾವಚ್ಛೇದಕವಾಗಿ ಮಾಡಿಕೊಂಡು ವಿಪ್ರತಿಪತ್ತಿ ಹುಟ್ಟುತ್ತದೆ ಎನ್ನಬೇಕು. ಇದು ಅನ್ಯೋನ್ಯಾಶ್ರಯ.

**नवीनास्तु—**

**एतत्पटात्यन्ताभावः एतत्तन्तुनिष्ठः एतत्पटानाद्यभावत्वात् एतत्पटान्योन्याभाववत् । तन्तुनाशजन्यस्य पटनाशस्य तन्त्ववृत्तित्वादनादीति विशेषणम् ।**

**विमतं वा, ब्रह्मप्रमान्येनेत्यादि विप्रतिपत्तिवाक्योक्तविशेषणत्रयवत्त्वे सति अव्याप्यवृत्तित्वानधिकरणं वा, स्वसमानाधिकरणात्यन्ताभावप्रतियोगि, अनात्मत्वात् संयोगवदिति । अत्र च पक्षधर्मताबलान्मिथ्यात्वसिद्धिः ।**

**एतत्पटात्यन्ताभाव** इति । एतत्पटाधिकरणताप्रयोजकसंबन्धावच्छिन्नप्रतियोगिताकात्यन्ताभाव इत्यर्थः । अतो न सम्बन्धान्तरावच्छिन्नात्यन्ताभावमादायांशतः सिद्धसाधनमिति बोध्यम् । एतत्तन्त्ववृत्तिप्रागभावे व्यभिचारवारणायाह **एतत्पटेति** । अंशतः सिद्धसाधनार्थान्तरयोर्वारणायाह **अव्याप्यवृत्तित्वेति** । **स्वसमानाधिकरणेति** । अधिकरणतानियामकसम्बन्धेन स्वसमानाधिकरणात्यन्ताभावप्रतियोगीत्यर्थः । **अनात्मेति** । यद्यप्यवृत्तिगगनादावात्मवदधिकरणाप्रसिद्धेर्व्यभिचार एव । तथाप्यत्रेदानीमाकाश इति प्रतीत्याधिकरणप्रतीतेर्न तथेति बोध्यम् । ननु सत्यत्ववादिनाप्यस्य संयोगादावभ्युपगमान्नैतन्मिथ्यात्वशरीरमित्यत आह **अत्र चेति** । अव्याप्यवृत्तित्वानधिकरणत्वेन ज्ञातेऽन्यत्राविद्यमाने स्वसमानाधिकरणात्यन्ताभावप्रतियोगित्वे सिध्यति सति सैव सर्वावच्छेदकावच्छिन्नात्यन्ताभावप्रतियोगित्वलक्षणमिथ्यात्वसिद्धिरित्यर्थः ।

❖❖❖

## 05. ನವೀನರ ಮಿಥ್ಯಾತ್ವಾನುಮಾನಗಳು

ನವೀನಾಸ್ತು–

ಏತತ್ಪಟಾತ್ಯಂತಾಭಾವಃ ಏತತ್ತಂತುನಿಷ್ಠಃ । ಏತತ್ ಪಟಾನಾದ್ಯಭಾವತ್ವಾತ್ । ಏತತ್ಪಟಾನ್ಯೋಽನ್ಯಾಭಾವವತ್ । ತಂತುನಾಶಜನ್ಯ ಪಟನಾಶಸ್ಯ ತಂತ್ವವೃತ್ತಿತ್ವಾತ್ ಅನಾದೀತಿ ವಿಶೇಷಣಂ ।

ನವೀನರು ಹೇಳುತ್ತಾರೆ—

ಈ ಪಟದ ಅತ್ಯಂತಾಭಾವವು ಏತತ್‌ತಂತು ನಿಷ್ಠವಾಗಿದೆ. ಏತತ್‌ಪಟದ ಅನಾದಿ ಅಭಾವವಾದ್ದರಿಂದ. ಏತತ್‌ಪಟದ ಅನ್ಯೋನ್ಯಾಭಾವದಂತೆ.

'ಏತತ್‌ಪಟದ ಅತ್ಯಂತಾಭಾವ'ವೆಂದರೆ ಸಂಯೋಗಸಂಬಂಧೇನ ಸಮವಾಯಸಂಬಂಧೇನ ಕಾಲಿಕಸಂಬಂಧೇನ ಅತ್ಯಂತಾಭಾವವೆಂದು ಅನೇಕ ಅತ್ಯಂತಾಭಾವಗಳು ಪಕ್ಷಕೋಟಿಯಲ್ಲಿ ಸೇರಬಹುದು. ಏತತ್ತಂತುವಿನಲ್ಲಿ ಸಮವಾಯ ಸಂಬಂಧದಿಂದ ಏತತ್ ಪಟವಿರುವುದರಿಂದ, ಸಮವಾಯ ಸಂಬಂಧದಿಂದ ಅದರ ಅತ್ಯಂತಾಭಾವವಿಲ್ಲದಿದ್ದರೂ ಸಂಯೋಗಾದಿ ಸಂಬಂಧದಿಂದ ಅದರ ಅಭಾವ ಸಿದ್ಧವೇ ಇದೆ, ಅದರಿಂದ ಅಂಶತಃಸಿದ್ಧಸಾಧನ ಬಂದೀತು. ಅದಕ್ಕೆ ಸಮವಾಯಸಂಬಂಧದಿಂದ ಅತ್ಯಂತಾಭಾವವನ್ನೇ ಪಕ್ಷಮಾಡಿ ಏತತ್ತಂತು ನಿಷ್ಠತ್ವವನ್ನು ಸಾಧನೆ ಮಾಡಬೇಕು. ಏತತ್‌ಪಟವು ಸಮವಾಯದಿಂದ ಏತತ್ತಂತು ಮಾತ್ರವೃತ್ತಿಯಾಗಿದ್ದು, ಅನ್ಯತ್ರ ಅದರ ಅಭಾವವೇ ಇದೆ. ಏತತ್ತಂತುವಿನಲ್ಲಿಯೂ ಅದರ ನಿಷೇಧವನ್ನು ಅನುಮಾನದಿಂದ ಸಾಧನೆ ಮಾಡಿದರೆ, ಸರ್ವತ್ರ ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವರೂಪ ಮಿಥ್ಯಾತ್ವ ಸಿದ್ಧಿಸುತ್ತದೆ.

ಹೇತುವಿನಲ್ಲಿ 'ಏತತ್ ಪಟಾನಾದ್ಯಭಾವತ್ವಾತ್' ಎಂದು 'ಏತತ್‌ಪಟ' ಎಂಬ ವಿಶೇಷಣ ವಿಲ್ಲದಿದ್ದರೆ ಏತತ್‌ತಂತ್ವವೃತ್ತಿಯಾದ ಪ್ರಾಗಭಾವದಲ್ಲಿ ಏತತ್ತಂತು ನಿಷ್ಠತ್ವರೂಪಸಾಧ್ಯಾಭಾವವಿದೆ, ಅನಾದ್ಯಭಾವತ್ವ ಹೇತುವಿದೆ ಎಂದು ವ್ಯಭಿಚಾರ ಬಂದೀತು. ಸಮವಾಯಿಕಾರಣವಾದ ಏತತ್ತಂತು ನಾಶವಾದರೆ ಏತತ್‌ಪಟನಾಶ ಹೊಂದುತ್ತದೆ. ಈ ಪಟನಾಶವು, ಏತತ್ತಂತುವೇ ಇಲ್ಲದಿರುವುದರಿಂದ ಏತತ್ತಂತುನಿಷ್ಠವಲ್ಲ, ಏತತ್ತಂತು ನಿಷ್ಠತ್ವರೂಪ ಸಾಧ್ಯವಿಲ್ಲ, ಏತತ್‌ಪಟಾಭಾವತ್ವರೂಪ ಹೇತು ಇದೆ ಎಂದು ವ್ಯಭಿಚಾರ ಬರುತ್ತದೆ. ಅದಕ್ಕೇ ಅಭಾವದಲ್ಲಿ ಅನಾದಿತ್ವವಿಶೇಷಣ. ನಾಶವು ಸಾದಿಯಾದ್ದರಿಂದ, ಅನಾದಿತ್ವವಿಲ್ಲದ್ದರಿಂದ, ಏತತ್ ಪಟಾನಾದ್ಯಭಾವತ್ವಕ್ಕೆ ವ್ಯಭಿಚಾರವಿಲ್ಲ.

ಅಸತ್ತಾದ ಶುಕ್ತಿರಜತದಲ್ಲಿ ಪ್ರತಿಪನ್ನೋಪಾಧೌ ತ್ರೈಕಾಲಿಕನಿಷೇಧ ಪ್ರತಿಯೋಗಿತ್ವರೂಪ ಮಿಥ್ಯಾತ್ವವು ತತ್ವವಾದಿಗೆ ಸಮ್ಮತವಾಗುವುದರಿಂದ ಆ ದೃಷ್ಟಾಂತದಿಂದ ತತ್ವವಾದಿಗೆ ಪ್ರಪಂಚಮಿಥ್ಯಾತ್ವ ಸಾಧನೆ ಮಾಡಬಹುದು. ಆದರೆ ತಾರ್ಕಿಕನಿಗೆ ದೃಷ್ಟಾಂತದಲ್ಲಿ ಸಮ್ಮತಿ ಇಲ್ಲ. ಅನ್ಯಥಾಖ್ಯಾತಿವಾದಿಯಾದ ಅವನು ಅನ್ಯತ್ರ ಸತ್ತಾಗಿರುವುದನ್ನೇ ಅನ್ಯತ್ರ ನಿಷೇಧಮಾಡುವುದರಿಂದ, ಪ್ರತಿಪನ್ನೋಪಾಧಿಯಲ್ಲಿ ನಿಷೇಧದ ಬಲದಿಂದ ಪ್ರಪಂಚ ಮಿಥ್ಯಾತ್ವವನ್ನು ಅವನಿಗೆ ಸಾಧನೆ ಮಾಡಲಾಗುವುದಿಲ್ಲ. ಅದಕ್ಕೆ ತಾರ್ಕಿಕರೀತಿಯಿಂದಲೇ ಈ ಅನುಮಾನದಲ್ಲಿ ಅವನಿಗೆ ಮಿಥ್ಯಾತ್ವ ಸಾಧನೆ ಮಾಡುತ್ತಾರೆ. ಇದು 'ನಿತ್ಯದ್ರವ್ಯಗಳು ಅವೃತ್ತಿಮತ್ ಪದಾರ್ಥಗಳೆಂ'ದು ಇಲ್ಲಿ ಮುಂದೆ ಹೇಳುವುದರಿಂದ ಸಿದ್ಧವಾಗುತ್ತದೆ.

ಈ ಅನುಮಾನದಿಂದ ಅದ್ವೈತಿಯು ಒಂದು ಪಟವನ್ನು ಪಕ್ಷಮಾಡಿ ಅದರಲ್ಲಿ ತಂತ್ವಧಿ

ಕರಣದಲ್ಲಿ ಸ್ವಾಭಾವಸಾಮಾನಾಧಿಕರಣ್ಯವನ್ನು ಸಾಧನೆ ಮಾಡಿದರೂ ಸಮಸ್ತವಿಶ್ವಸತ್ಯತ್ವವನ್ನು ಹೇಳುವ ತಾರ್ಕಿಕನ ಮೇಲೆ ಜಯಸಂಪಾದನೆ ಮಾಡಿದಂತಾಗುತ್ತದೆ. ಏಕೆಂದರೆ ಈ ಸ್ವಾಭಾವ ಸಾಮಾನಾಧಿಕರಣ್ಯವೇ ಸರ್ವಾವಚ್ಛೇದಕಾವಚ್ಛಿನ್ನ ಅತ್ಯಂತಾಭಾವ ಪ್ರತಿಯೋಗಿತ್ವರೂಪ ಮಿಥ್ಯಾತ್ವ.

**ವಿಮತಂ ವಾ, ಬ್ರಹ್ಮಪ್ರಮಾನ್ಯೇನೇತ್ಯಾದಿ ವಿಪ್ರತಿಪತ್ತಿವಾಕ್ಯೋಕ್ತ ವಿಶೇಷಣ ತ್ರಯವತ್ತ್ವೇ ಸತಿ ಅವ್ಯಾಪ್ಯ ವೃತ್ತಿತ್ವಾನಧಿಕರಣಂ ವಾ, ಸ್ವಸಮಾನಾಧಿಕರಣಾತ್ಯಂತಾಭಾವ ಪ್ರತಿಯೋಗಿ । ಅನಾತ್ಮತ್ವಾತ್, ಸಂಯೋಗವತ್ । ಇತಿ । ಅತ್ರ ಚ ಪಕ್ಷಧರ್ಮತಾಬಲಾತ್ ಮಿಥ್ಯಾತ್ವ ಸಿದ್ಧಿಃ ।**

ಸ್ವಸಮಾನಾಧಿಕರಣಾತ್ಯಂತಾಭಾವಪ್ರತಿಯೋಗಿಯೆ, ಅಲ್ಲವೆ? ಎಂದು ವಿವಾದಗ್ರಸ್ತ ವಾದುದು, ಅಥವಾ, ವಿಪ್ರತಿಪತ್ತಿ ವಾಕ್ಯೋಕ್ತವಾದ 'ಬ್ರಹ್ಮಪ್ರಮಾನ್ಯೇನ' ಇತ್ಯಾದಿ ಮೂರು ವಿಶೇಷಣಯುಕ್ತವಾಗಿದ್ದು ಅವ್ಯಾಪ್ಯ ವೃತ್ತಿತ್ವಕ್ಕೆ ಅನಧಿಕರಣವಾದುದು, ಅಧಿಕರಣತಾನಿಯಾಮಕ ಸಂಬಂಧದಿಂದ ಸ್ವಸಮಾನಾಧಿಕರಣ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿದೆ, ಅನಾತ್ಮವಾದ್ದರಿಂದ ಸಂಯೋಗದಂತೆ. ಎಂದು ತಾರ್ಕಿಕರೀತಿಯಿಂದ ಮಿಥ್ಯಾತ್ವಾನುಮಾನಪ್ರಯೋಗ ಮಾಡಬಹುದು.

ಇಲ್ಲಿ ಸಂಯೋಗಾದಿ ಅವ್ಯಾಪ್ಯವೃತ್ತಿ ಧರ್ಮಗಳು ಪಕ್ಷದಲ್ಲಿ ಅಂತರ್ಭಾವ ಹೊಂದುವುದಿಲ್ಲ. 'ವಿಮತಂ' ಶಬ್ದದಿಂದ ಅವು ಪಕ್ಷದಿಂದ ಹೊರಗೆ ಉಳಿದಿರುತ್ತವೆ. ಅವುಗಳನ್ನು ತಾರ್ಕಿಕನು ಅವ್ಯಾಪ್ಯವೃತ್ತಿ ಎಂದೆ ಅಂಗೀಕರಿಸಿರುವುದರಿಂದ ಸ್ವಸಮಾನಾಧಿಕರಣ ಅತ್ಯಂತಾಭಾವಕ್ಕೆ ಪ್ರತಿಯೋಗಿಯೆ ಅಲ್ಲವೆ ಎಂದು ವಿವಾದ ಮಾಡುವುದಿಲ್ಲ. 'ಬ್ರಹ್ಮಪ್ರಮಾನ್ಯೇನ' ಇತ್ಯಾದಿ ಎರಡನೆ ಪಕ್ಷನಿರ್ದೇಶನದಲ್ಲಿ 'ಅವ್ಯಾಪ್ಯ ವೃತ್ತಿತ್ವಾನಧಿಕರಣ' ಎಂಬ ವಿಶೇಷಣದಿಂದಲೆ ಸಂಯೋಗಾದಿಗಳ ವ್ಯಾವೃತ್ತಿಯಾಗಿದೆ. ಹೀಗಾಗಿ 'ಪಕ್ಷಧರ್ಮತಾಬಲದಿಂದ' ಅಂದರೆ, ಅವ್ಯಾಪ್ಯವೃತ್ತಿತ್ವಾನಧಿ ಕರಣತ್ವರೂಪ ವಿಶೇಷಣ ವಿಶಿಷ್ಟ ಘಟಾದಿ ಪ್ರಪಂಚರೂಪ ಪಕ್ಷದಲ್ಲಿ, ಸಂಯೋಗಾದಿಗಳಲ್ಲಿ ಪ್ರಸಿದ್ಧವಾದ ಸ್ವಸಮಾನಾಧಿಕರಣ ಅತ್ಯಂತಾಭಾವಪ್ರತಿಯೋಗಿತ್ವವನ್ನು ಸಾಧನೆ ಮಾಡಿದಾಗ, ಅವ್ಯಾಪ್ಯವೃತ್ತಿತ್ವವಿಟ್ಟುಕೊಂಡು ಸಾಧ್ಯಪರ್ಯವಸಾನ ಮಾಡುವುದು ಶಕ್ಯವಿಲ್ಲದ್ದರಿಂದ ಸರ್ವಾವಚ್ಛೇದಕಾವಚ್ಛಿನ್ನ ಅತ್ಯಂತಾಭಾವಪ್ರತಿಯೋಗಿತ್ವರೂಪವಾದ ಮಿಥ್ಯಾತ್ವವಿಟ್ಟುಕೊಂಡೇ ಸಾಧ್ಯಪರ್ಯವಸಾನ ಮಾಡಬೇಕಾಗುವುದರಿಂದ, ಪಕ್ಷಧರ್ಮತಾಬಲಾತ್ ಮಿಥ್ಯಾತ್ವ ಸಿದ್ಧಿ.

'ಅವೃತ್ತಿಯೆಂದು ತಾರ್ಕಿಕನು ಅಂಗೀಕರಿಸಿರುವ ಗಗನಾದಿಗಳಲ್ಲಿ ಅಧಿಕರಣವೆ ಅಪ್ರಸಿದ್ಧವಾದ್ದರಿಂದ, ಸಂಯೋಗಾದಿಗಳಲ್ಲಿ ಪ್ರಸಿದ್ಧವಾದ ಸ್ವಸಮಾನಾಧಿಕರಣ ಅತ್ಯಂತಾಭಾವ ಪ್ರತಿಯೋಗಿತ್ವರೂಪ ಸಾಧ್ಯವಿಲ್ಲ, ಅನಾತ್ಮತ್ವಹೇತುವಿದೆ, ವ್ಯಭಿಚಾರವಿದೆ' ಎಂದು ಆಕ್ಷೇಪ ಬಂದರೆ, ಹೇಳಬೇಕು—'ಇಲ್ಲಿ ಈಗ ಆಕಾಶವಿದೆ' ಎಂದು ದೇಶಕಾಲಗಳಲ್ಲಿ ಗಗನಾದಿಗಳಿಗೆ ಅಧಿಕರಣ ಪ್ರತೀತಿ ಇರುವುದರಿಂದ ಅಧಿಕರಣ ಅಪ್ರಸಿದ್ಧವೆನ್ನಲಾಗದು' ಎಂದು.

❖❖❖

**विमतं नित्यद्रव्यान्यत् केवलान्वय्यत्यन्ताभावप्रतियोगि, पदार्थत्वात्, नित्यद्रव्यवत् ।**

**तार्किकमते नित्यद्रव्याणामवृत्तित्वेन तदत्यन्ताभावः केवलान्वयीति न दृष्टान्तः साध्यविकलः । अत एव नात्मनि व्यभिचारः । मिथ्यात्वसिद्धिस्तु पक्षधर्मताबलात् ।**

**आत्मत्वावच्छिन्नधर्मिताको भेदो न परमार्थसत्प्रतियोगिकः । अनात्ममात्रप्रतियोगिकत्वात्, शुक्तिरूप्यप्रतियोगिकभेदवदित्याहुः ।**

विमतमित्यस्यानन्तरं स्ववृत्तिनियामकसम्बन्धारोप्यकाभावप्रतियोगीति शेषः । तेन व्यधिकरणसम्बन्धमादाय नार्थान्तरमिति बोध्यम् । अंशतः सिद्धसाधनवारणायाह **नित्यद्रव्यान्यदिति** । नतु दृष्टान्तबहिर्भावाय । दृष्टान्तत्वप्रयोजकनिश्चितसाध्य-साधनवत्त्वेन पक्षस्यापि दृष्टान्तत्वाविरोधात् । अत एवायमेतदभिन्नः एतत्त्वादेतद्वदित्यभेदानुमाने पक्षस्यैव सपक्षत्वमिति बोध्यम् । **केवलान्वयीति** ।। सर्वावच्छेदकावच्छिन्नात्यन्ताभावमात्रप्रतियोगीत्यर्थः । अतो नाव्याप्यवृत्त्यंशे सिद्धसाधनम् ।। **अत एवेति** ।। नित्यद्रव्यत्वेन साध्यसत्त्वादेवेत्यर्थः । ननु परमते सर्वावच्छेदकावच्छिन्नात्यन्ताभावमात्रप्रतियोगित्वं परमार्थसन्नित्यद्रव्येऽपीति नैतावता मिथ्यात्वसिद्धिरत आह **मिथ्यात्वसिद्धिस्त्विति** । वृत्तिमतः तद्वृत्त्यवच्छिन्नात्य-न्ताभावस्य सर्वावच्छेदकावच्छिन्नत्वसिद्धिरेव मिथ्यात्वसिद्धिरित्यर्थः । आत्मधर्मिताको भेद इत्यवोक्ते ब्रह्मप्रतियोगिकजीवनिष्ठभेदस्यापि पक्षत्वेंऽशतोबाधः स्यात् । अत उक्तम् **आत्मत्वावच्छिन्नधर्मिताक** इति । द्रव्यत्वावच्छिन्नात्मप्रतियोगिकभेदे व्यभिचारवारणायाह **मात्रेति** ।

❖❖❖

ವಿಮತಂ ನಿತ್ಯದ್ರವ್ಯಾನ್ಯತ್ ಕೇವಲಾನ್ವಯಿ–ಅತ್ಯಂತಾಭಾವ ಪ್ರತಿಯೋಗಿ, ಪದಾರ್ಥತ್ವಾತ್ ನಿತ್ಯದ್ರವ್ಯವತ್ ।

ತಾರ್ಕಿಕಮತೇ ನಿತ್ಯದ್ರವ್ಯಾಣಾಂ ಅವೃತ್ತಿತ್ವೇನ ತದತ್ಯಂತಾಭಾವಃ ಕೇವಲಾನ್ವಯೀ

**ಇತಿ ನ ದೃಷ್ಟಾಂತಃ ಸಾಧ್ಯವಿಕಲಃ। ಅತಏವ ನಾತ್ಮನಿ ವ್ಯಭಿಚಾರಃ। ಮಿಥ್ಯಾತ್ವಸಿದ್ಧಿಸ್ತು ಪಕ್ಷಧರ್ಮತಾಬಲಾತ್ ।**

'ವಿಮತಂ' ಎಂಬಲ್ಲಿ 'ಸ್ವವೃತ್ತಿನಿಯಾಮಕ ಸಂಬಂಧಾರೋಪ್ಯಕ ಅಭಾವಪ್ರತಿಯೋಗಿ' ಎಂದು ಸೇರಿಸಬೇಕು. ಆಗ ವ್ಯಧಿಕರಣ ಸಂಬಂಧಪಿಟ್ಟುಕೊಂಡು ಕೇವಲಾನ್ವಯಿ ಅತ್ಯಂತಾಭಾವ ಪ್ರತಿಯೋಗಿತ್ವರೂಪ ಸಾಧ್ಯವನ್ನು ಪರ್ಯವಸಾನಮಾಡಿ ಅರ್ಥಾಂತರತ್ವವನ್ನು ಹೇಳಲು ಅವಕಾಶ ವಿರುವುದಿಲ್ಲ. ಸ್ವವೃತ್ತಿನಿಯಾಮಕಸಂಬಂಧಾರೋಪ್ಯಕ ಅಭಾವಪ್ರತಿಯೋಗಿತ್ವರೂಪ ವಿಶೇಷಣವಿಶಿಷ್ಟವಾದ ಪಕ್ಷದಲ್ಲಿ ವ್ಯಧಿಕರಣಸಂಬಂಧಾವಚ್ಛಿನ್ನಾಭಾವಪ್ರತಿಯೋಗಿತ್ವರೂಪ ಸಾಧ್ಯಪರ್ಯವಸಾನ ಮಾಡುವುದು ಅಶಕ್ಯ.

'ಸತ್ಯಂ ಮಿಥ್ಯಾ ವಾ' ಎಂದು ವಿವಾದಗ್ರಸ್ತವಾಗಿದ್ದು ಸ್ವವೃತ್ತಿನಿಯಾಮಕ ಸಂಬಂಧಾರೋಪ್ಯಕ ಅಭಾವಪ್ರತಿಯೋಗಿಯೂ ಆಗಿದ್ದು ನಿತ್ಯದ್ರವ್ಯಾನ್ಯವಾದ ಘಟಾದಿಪ್ರಪಂಚವು, ಕೇವಲಾನ್ವಯಿ ಯಾದ, ಅಂದರೆ ಸರ್ವಾವಚ್ಛೇದಕಾವಚ್ಛಿನ್ನವಾದ ಅತ್ಯಂತಾಭಾವ ಮಾತ್ರಕ್ಕೆ ಪ್ರತಿಯೋಗಿ. ಪದಾರ್ಥವಾದ್ದರಿಂದ, ನಿತ್ಯದ್ರವ್ಯದಂತೆ ಎಂದು ಅನುಮಾನಪ್ರಯೋಗ ಮಾಡುವುದರಿಂದ ಅವ್ಯಾಪ್ಯವೃತ್ತಿಯ ಅಂಶದಲ್ಲಿ ಸಿದ್ಧಸಾಧನತ್ವ ಹೇಳಲು ಅವಕಾಶವಿಲ್ಲ.

'ನಿತ್ಯದ್ರವ್ಯಾನ್ಯ'ವೆಂದು ವಿಶೇಷಣ ಕೊಟ್ಟಿದ್ದು ನಿತ್ಯದ್ರವ್ಯಾಂಶದಲ್ಲಿ ಸಿದ್ಧಸಾಧನವಾರಣಕ್ಕಾಗಿ ಹೊರತು ಪಕ್ಷವನ್ನು ದೃಷ್ಟಾಂತದಿಂದ ಬಹಿರ್ಭಾವಗೊಳಿಸುವುದಕ್ಕಾಗಿ ಅಲ್ಲ. ಏಕೆಂದರೆ ನಿಶ್ಚಿತ ಸಾಧ್ಯಸಾಧನತ್ವವು ದೃಷ್ಟಾಂತತ್ವಕ್ಕೆ ಪ್ರಯೋಜಕ. ಅದು ಪಕ್ಷದಲ್ಲಿರುವುದಾದರೆ ಪಕ್ಷವು ದೃಷ್ಟಾಂತವಾಗುವುದಕ್ಕೆ ಬಾಧಕವೇನಿಲ್ಲ. ಅದರಿಂದಲೇ 'ಇದು ಈ ಪದಾರ್ಥದಿಂದ ಅಭಿನ್ನ, ಈ ಪದಾರ್ಥವಾಗಿರುವುದರಿಂದ ಈಪದಾರ್ಥದಂತೆಯೆ' ಎಂದು ಅಭೇದಾನುಮಾನ ಪ್ರಯೋಗದಲ್ಲಿ ಪಕ್ಷವೇ ದೃಷ್ಟಾಂತವೂ ಆಗಿರುವುದು ಕಂಡಿದೆ.

ತಾರ್ಕಿಕಮತದಲ್ಲಿ ನಿತ್ಯದ್ರವ್ಯವಾಗಿರುವ ಗಗನಾದಿಗಳು ಅವೃತ್ತಿಪದಾರ್ಥಗಳು. ಅವು ಯಾವುದೇ ಅಧಿಕರಣದಲ್ಲಿ ಆಶ್ರಯಿಸಿಕೊಂಡಿರುವುದಿಲ್ಲ. ಕೇವಲ ಸರ್ವಮೂರ್ತದ್ರವ್ಯಗಳೊಂದಿಗೆ ಸಂಯೋಗ ಹೊಂದಿರುತ್ತವೆ. ಹೀಗಾಗಿ ಅವುಗಳ ಅಭಾವವು ಸರ್ವತ್ರ ಇದೆ, ಕೇವಲಾನ್ವಯಿಯಾಗಿದೆ. ದೃಷ್ಟಾಂತವಾದ ಅವುಗಳಲ್ಲಿ ಕೇವಲಾನ್ವಯಿ ಅತ್ಯಂತಾಭಾವ ಪ್ರತಿಯೋಗಿತ್ವವಿರುವುದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವಿಲ್ಲ. ಆತ್ಮನೂ ನಿತ್ಯದ್ರವ್ಯನಾಗಿರುವುದರಿಂದ ಅವೃತ್ತಿಯಾಗಿದ್ದು ಕೇವಲಾನ್ವಯಿ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾದ್ದರಿಂದ, ಸಾಧ್ಯವಿರುವುದರಿಂದ ಪದಾರ್ಥತ್ವ ರೂಪ ಹೇತುವಿಗೆ ಆತ್ಮನಲ್ಲಿ ವ್ಯಭಿಚಾರವಿಲ್ಲ.

ಸತ್ಯವಾದ ನಿತ್ಯದ್ರವ್ಯದಲ್ಲಿ ಹೇಗೋ ಹಾಗೆ ಪಕ್ಷದಲ್ಲಿ ಕೇವಲಾನ್ವಯಿ ಅತ್ಯಂತಾಭಾವ ಪ್ರತಿಯೋಗಿತ್ವ ಸಾಧನೆ ಮಾಡಿದರೆ ಮಿಥ್ಯಾತ್ವಸಿದ್ಧಿಯಾಗುವುದು ಹೇಗೆ ಎಂದರೆ 'ಪಕ್ಷಧರ್ಮತಾ ಬಲಾತ್' ನಿತ್ಯದ್ರವ್ಯಾನ್ಯತ್ವವನ್ನು ಪಕ್ಷಧರ್ಮವಾಗಿ ಹೇಳಿದ್ದರಿಂದ, ನಿತ್ಯದ್ರವ್ಯದಂತೆ ಅವೃತ್ತಿತ್ವೇನ

ಕೇವಲಾನ್ವಯಿ ಅತ್ಯಂತಾಭಾವಪ್ರತಿಯೋಗಿತ್ವರೂಪ ಸಾಧ್ಯವನ್ನು ಪರ್ಯವಸಾನ ಮಾಡಲಾಗುವುದಿಲ್ಲ. ಘಟಾದಿಗಳು ಕಪಾಲಾದಿಗಳಲ್ಲಿ ಸಮವಾಯ ಸಂಬಂಧದಿಂದ ವೃತ್ತಿಮತ್ತೇ ಆಗಿದೆ. ಮಿಥ್ಯಾತ್ವವಿಟ್ಟುಕೊಂಡೇ ಸಾಧ್ಯಪರ್ಯವಸಾನ ಮಾಡಬೇಕಾಗುತ್ತದೆ. ಆದರಿಂದ ಮಿಥ್ಯಾತ್ವಸಿದ್ಧಿ.

**ಆತ್ಮತ್ವಾವಚ್ಛಿನ್ನಧರ್ಮಿತಾಕೋ ಭೇದೋ ನ ಪರಮಾರ್ಥಸತ್-ಪ್ರತಿಯೋಗಿಕಃ, ಅನಾತ್ಮ ಮಾತ್ರ ಪ್ರತಿಯೋಗಿಕತ್ವಾತ್, ಶುಕ್ತಿರೂಪ್ಯ ಪ್ರತಿಯೋಗಿಕ ಭೇದವತ್ ಇತ್ಯಾಹುಃ ।**

'ಆತ್ಮತ್ವಾವಚ್ಛಿನ್ನ ಧರ್ಮಿತಾಕ ಭೇದವು ಪಾರಮಾರ್ಥಿಕ ಸತ್ಯವಾದ ಪ್ರತಿಯೋಗಿ ಉಳ್ಳದ್ದಲ್ಲ, ಅನಾತ್ಮಮಾತ್ರ ಪ್ರತಿಯೋಗಿಕವಾಗಿರುವುದರಿಂದ, ಶುಕ್ತಿರಜತ ಪ್ರತಿಯೋಗಿಕ ಭೇದದಂತೆ' ಎಂದು ನವೀನರು ಮಿಥ್ಯಾತ್ವಾನುಮಾನ ಪ್ರಯೋಗ ಮಾಡುತ್ತಾರೆ. ಆತ್ಮನಲ್ಲಿರುವ ಭೇದಕ್ಕೆ ಪ್ರತಿಯೋಗಿಯಾಗಿರುವ, ಅಂದರೆ ಆತ್ಮವ್ಯತಿರಿಕ್ತವಾಗಿರುವ ಅನಾತ್ಮವು ಯಾವುದೂ ಪಾರಮಾರ್ಥಿಕ ಸತ್ಯವಲ್ಲ, ಅರ್ಥಾತ್ ಮಿಥ್ಯಾ ಎಂದು ಈ ಅನುಮಾನದಿಂದ ಸಿದ್ಧವಾಗುತ್ತದೆ.

ಇಲ್ಲಿ 'ಆತ್ಮಧರ್ಮಿಕ'ವಾದ ಭೇದ ಎಂದಿಷ್ಟೇ ಪಕ್ಷಮಾಡಿದರೆ ಜೀವನಿಷ್ಠವಾದ ಆತ್ಮಪ್ರತಿಯೋಗಿಕ ಭೇದವೂ ಕೂಡ ಆತ್ಮ ಧರ್ಮಿಕವಾಗಿರುತ್ತದೆ, ಪಕ್ಷದಲ್ಲಿ ಸೇರುತ್ತದೆ. ಅದಕ್ಕೆ ಪಾರಮಾರ್ಥಿಕಸತ್ತಾದ ಆತ್ಮನು ಪ್ರತಿಯೋಗಿಯಾದ್ದರಿಂದ ಅದು ಪಾರಮಾರ್ಥಿಕಸತ್ ಪ್ರತಿಯೋಗಿಕವಾಯಿತು. ಪಾರಮಾರ್ಥಿಕಸತ್ ಪ್ರತಿಯೋಗಿಕತ್ವರೂಪ ಸಾಧ್ಯಾಭಾವ ಉಳ್ಳದ್ದಾಯಿತು. ಹೀಗೆ ಅಂಶತೋಬಾಧ ಬರುತ್ತದೆ. ಅದಕ್ಕೆ 'ಆತ್ಮತ್ವಾವಚ್ಛಿನ್ನ ಧರ್ಮಿತಾಕಭೇದ' ಎನ್ನಬೇಕು. ಪ್ರಕೃತ ಜೀವನಿಷ್ಠವಾದ ಭೇದವು ಜೀವತ್ವಾವಚ್ಛಿನ್ನ ಧರ್ಮಿತಾಕವಾಗಿದೆ ಹೊರತು ಶುದ್ಧಆತ್ಮತ್ವಾವಚ್ಛಿನ್ನ ಧರ್ಮಿತಾಕವಾಗಿಲ್ಲ. ಆದರಿಂದ ಪಕ್ಷದಿಂದ ಬಹಿರ್ಭೂತವಾಯಿತು, ಬಾಧವಿಲ್ಲ.

ಆತ್ಮನಿಷ್ಠವಾದ ಶುಕ್ತಿರಜತಪ್ರತಿಯೋಗಿಕ ಭೇದವು ಆತ್ಮತ್ವಾವಚ್ಛಿನ್ನಧರ್ಮಿತಾಕವಾಗಿದ್ದು ಪಕ್ಷಾಂತರ್ಭೂತವಾಗಿದೆ. ಅದು ಮಿಥ್ಯಾಭೂತ ಶುಕ್ತಿರಜತಪ್ರತಿಯೋಗಿಕವಾದ್ದರಿಂದ 'ಪರಮಾರ್ಥಸತ್ ಪ್ರತಿಯೋಗಿಕವಲ್ಲ' ಎಂಬ ಸಾಧ್ಯ ಅದರಲ್ಲಿ ಸರ್ವಸಮ್ಮತವಾಗಿರುವಾಗ ಅದನ್ನು ಸಾಧನೆ ಮಾಡಿದರೆ ಅಂಶೇ ಸಿದ್ಧಸಾಧನವಲ್ಲವೆ? ಎಂದರೆ, ಅಲ್ಲ. ಏಕೆಂದರೆ ಶುಕ್ತಿರಜತಭೇದವು ಆತ್ಮತ್ವಾವಚ್ಛಿನ್ನಧರ್ಮಿತಾಕವಲ್ಲ. ಅದು ಅನಾತ್ಮದಲ್ಲಿಯೂ ಇರುವುದರಿಂದ ಆತ್ಮತ್ವವು ಭೇದಕ್ಕೆ ಧರ್ಮಿತಾವಚ್ಛೇದಕವಾಗುವುದಿಲ್ಲ. ಆದರಿಂದ ಈ ಭೇದವು ಪಕ್ಷದಲ್ಲಿ ಸೇರುವುದಿಲ್ಲವಾದ್ದರಿಂದ ಸಿದ್ಧಸಾಧನದೋಷವಿಲ್ಲ.

'ಅನಾತ್ಮಮಾತ್ರಪ್ರತಿಯೋಗಿಕತ್ವಾತ್' ಎಂದು ಹೇತುವಿನಲ್ಲಿ 'ಮಾತ್ರ' ಪದವಿಲ್ಲದಿದ್ದರೆ 'ಗುಣವು ದ್ರವ್ಯವಾದ ಆತ್ಮಕ್ಕಿಂತ ಭಿನ್ನ' ಎಂಬ ಭೇದದಲ್ಲಿ ವ್ಯಭಿಚಾರ. ಅದರಲ್ಲಿ ಪ್ರತಿಯೋಗಿತಾವಚ್ಛೇದಕವಾದ ದ್ರವ್ಯತ್ವವು ಆತ್ಮನಲ್ಲಿ ಮಾತ್ರವಲ್ಲದೆ ಅನಾತ್ಮವಾದ ಪೃಥಿವ್ಯಾದಿಗಳಲ್ಲಿಯೂ ಇರುವುದರಿಂದ ಅನಾತ್ಮಪ್ರತಿಯೋಗಿಕತ್ವವೆಂಬ ಹೇತು ಬರುತ್ತದೆ. ಪ್ರತಿಯೋಗಿಯಾದ ದ್ರವ್ಯತ್ವಾವಚ್ಛಿನ್ನ ಆತ್ಮವು ಶುದ್ಧ ಆತ್ಮವಲ್ಲದಿರುವುದರಿಂದ ಪರಮಾರ್ಥಸತ್ತಲ್ಲ, ಪರಮಾರ್ಥ

ಸತ್‌ಪ್ರತಿಯೋಗಿಕತ್ವರೂಪ ಸಾಧ್ಯ ಬರುವುದಿಲ್ಲ. ಅನಾತ್ಮಮಾತ್ರ ಪ್ರತಿಯೋಗಿಕತ್ವವನ್ನು ಹೇತು ಮಾಡಿದರೆ, ಈ ಭೇದದಲ್ಲಿ ಅನಾತ್ಮವಾದ ಪೃಥಿವ್ಯಾದಿಗಳಂತೆ ಆತ್ಮನೂ ಪ್ರತಿಯೋಗಿಯಾಗಿರುವುದರಿಂದ ಅನಾತ್ಮಮಾತ್ರಪ್ರತಿಯೋಗಿಕತ್ವರೂಪ ಹೇತು ಬರುವುದಿಲ್ಲವಾದ್ದರಿಂದ ವ್ಯಭಿಚಾರವಿಲ್ಲ.

❖❖❖

## सम्भावित मथ्यात्वनिर्वचनानि

**मिथ्यात्वं च यद्यपि नात्यन्तासत्वं, अपसिद्धान्तात् । नाप्यनिर्वाच्यत्वं, अप्रसिद्धेः । नापि सद्विविक्तत्वं सतोऽपि सदन्तरविविक्तत्वात् । नापि सत्त्वानधिकरणत्वं, निर्धर्मके ब्रह्मण्यपि सत्वात् ।**

**नच निर्धर्मकत्वादेव तत्र सत्त्वानधिकरणत्वमपि नेति वाच्यम् । निर्धर्मकत्वरूपहेतोः सत्त्वानधिकरणत्वाभावरूपसाध्यस्य च भावाभावाभ्यां व्याघातेनाभावरूपधर्मनिषेधायोगात् । अन्यथाऽसत्त्वानधिकरणत्वस्यापि तत्राभावेन तद्व्यावृत्त्यर्थमनिर्वाच्यलक्षणे सत्त्वानधिकरणत्वरूपविशेषणायोगात् ।**

**नच प्रमित्यविषयत्वं मिथ्यात्वम्, ब्रह्म तु वेदान्तजन्यवृत्तिव्याप्यमिति वाच्यम् । शुक्तिरूप्यादेरपि व्यवसायद्वारा अनुव्यवसायं प्रति, साक्षाच्च बाधकज्ञानं प्रति निषेध्यत्वेन विषयत्वात् ।**

**मिथ्यात्वं च यद्यपीति ।** ननु मिथ्यैव विश्वमिति विश्वमिथ्यात्वं प्रतिज्ञाय तदनन्तरं विप्रतिपत्तिवाक्ये द्वेधा विधिकोटिप्रदर्शनात् प्रतिज्ञावाक्ये विमतं मिथ्येति मिथ्यात्वानुमाने च विवक्षितं मिथ्यात्वमुक्तप्रायमिति तज्जिज्ञासाविरहान्मिथ्यात्वं च यद्यपीत्यादिना विवक्षितमिथ्यात्वनिरूपणोद्यमो न संभवतीति चेत् । उच्यते । विप्रतिपत्तिवाक्ये विधिकोटिपर्यवसितमिथ्यात्वनिरुक्तेः मिथ्यात्वान्तरोपलक्षणार्थत्वेन तज्जिज्ञासासंभवात स्वाभिमतमिथ्यात्वान्तराणि वक्तुं स्वानभिमतनिराकरणोद्यमोऽयं

संभवति । अत एव विप्रतिपत्तौ द्वेधा विधिकोटिप्रदर्शनमिति ध्येयम् । **अप्रसिद्धेरिति** परमत इति शेषः । **भावाभावाभ्यामिति** । निर्धर्मकत्वमस्ति न वा ? यद्यस्ति तदा निर्धर्मकत्वमपि धर्म एवेति निर्धर्मकत्वं व्याहतम् । नेतिपक्षे द्वौ निषेधौ प्रस्तुतमर्थं गमयत इति न्यायेन सधर्मकत्वे सति पुनरपि निर्धर्मकत्वं व्याहतम् । एवं साध्येऽप्यूहनीयम् । यद्वा द्वौ निषेधाविति न्यायेन साध्यं सत्त्वाधिकरणत्वं पर्यवसन्नम् । तथाच हेतुभावसाध्यभावाभ्यां साध्याभावहेत्वभावाभ्यां साध्यहेत्वोर्व्याघातेन विरोधेनेत्यर्थः । **अन्यथेति ।** अभावरूपधर्मनिषेध इत्यर्थः । **साक्षाच्चेति ।** व्यवसायविषयत्वेनेत्यर्थः ।

❖❖❖

## 06. ಸಂಭಾವಿತ ಮಿಥ್ಯಾತ್ವ ನಿರ್ವಚನಗಳು

**ಮಿಥ್ಯಾತ್ವಂ ಚ ಯದ್ಯಪಿ ನ ಅತ್ಯಂತಾಸತ್ವಂ । ಅಪಸಿದ್ಧಾಂತಾತ್ ।**

**ನಾಪ್ಯನಿರ್ವಾಚ್ಯತ್ವಂ । ಅಪ್ರಸಿದ್ಧೇಃ ।**

**ನಾಪಿ ಸದ್‌ವಿವಿಕ್ತತ್ವಂ । ಸತೋಽಪಿ ಸದಂತರ ವಿವಿಕ್ತತ್ವಾತ್ ।**

ಯದ್ಯಪಿ ಮುಂದೆ ಹೇಳುವ ಹತ್ತು ಬಗೆಯ ಮಿಥ್ಯಾತ್ವ ನಿರ್ವಚನಗಳಲ್ಲಿ ಯಾವುದೂ ಅದ್ವೈತಿಗಳಿಗೆ ಸಮ್ಮತವಿಲ್ಲ. ತೃಪ್ತಿಕರವಾಗಿಲ್ಲ ಎನ್ನುತ್ತ ಮಿಥ್ಯಾತ್ವನಿರ್ವಚನಗಳ ಯುಕ್ತಾಯುಕ್ತತೆಗಳ ಬಗ್ಗೆ ವಿಚಾರಮಾಡುತ್ತಿದ್ದಾರೆ. ಆದರೆ 'ಮಿಥ್ಯೈವ ವಿಶ್ವಂ' ಎಂದು ಮಿಥ್ಯಾತ್ವ ಪ್ರತಿಜ್ಞೆಮಾಡಿ ವಿಪ್ರತಿಪತ್ತಿವಾಕ್ಯಗಳಲ್ಲಿ 'ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವ' ಮತ್ತು 'ಪಾರಮಾರ್ಥಿಕತ್ವಾಕಾರೇಣ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವ'ಗಳನ್ನು ಎರಡನ್ನು ವಿಧಿಕೋಟಿಯಾಗಿ ಪ್ರದರ್ಶಿಸಿದ್ದಾರೆ. ಆದರಿಂದ ಪ್ರತಿಜ್ಞಾವಾಕ್ಯದಲ್ಲಿಯೂ ಮಿಥ್ಯಾತ್ವಾನುಮಾನದಲ್ಲಿಯೂ ಅವೆರಡೇ ವಿವಕ್ಷಿತವೆಂದು ಹೇಳಿದಂತಾಗಿದೆ. ಪುನಃ ಈಗ ಜಿಜ್ಞಾಸೆ ಏಕೆ ಎಂಬ ಪ್ರಶ್ನೆ ಬರುತ್ತದೆ. ಆದರೂ ಎರಡು ಲಕ್ಷಣಗಳು ಉಪಲಕ್ಷಣವಾದ್ದರಿಂದ ಬೇರೆ ಲಕ್ಷಣಗಳ ಜಿಜ್ಞಾಸೆಯೂ ಸಹಜವೆನ್ನಬೇಕು. ಎರಡು ಲಕ್ಷಣ ಪ್ರದರ್ಶನ ಮಾಡಿದ್ದರಿಂದ ಇದು ಸೂಚಿತವಾಗಿದೆ.

**(1)ಅತ್ಯಂತಾಸತ್ವವು ಮಿಥ್ಯಾತ್ವವಲ್ಲ.** ಘಟಾದಿ ಮಿಥ್ಯಾಭೂತಪ್ರಪಂಚಕ್ಕೆ ಅಸದ್ ವೈಲಕ್ಷಣ್ಯವನ್ನು ಒಪ್ಪುವ ಅದ್ವೈತಿ ತಾನೆ ಅತ್ಯಂತಾಸತ್ವವನ್ನು ಸಾಧಿಸಲು ಹೊರಟರೆ ದ್ವೈತಿಯು ಇದು ಅಪಸಿದ್ಧಾಂತ ನಿನ್ನ ಸಿದ್ಧಾಂತಕ್ಕೇ ವಿರುದ್ಧ ಎಂದು ದೋಷವನ್ನು ಹೇಳುತ್ತಾನೆ.

**(2) ಅನಿರ್ವಾಚ್ಯತ್ವವೂ ಮಿಥ್ಯಾತ್ವವಲ್ಲ.** ದ್ವೈತಿಗೆ ಅನಿರ್ವಾಚ್ಯವೆಂಬುದು ಅಪ್ರಸಿದ್ಧ. ಅಪ್ರಸಿದ್ಧವಿಶೇಷಣತ್ವದೋಷವನ್ನು ಹೇಳುತ್ತಾನೆ.

(3)'ಸದ್‌ವಿವಿಕ್ತತ್ವ' ಅಂದರೆ ಸದ್‌ಭೇದವೂ ಮಿಥ್ಯಾತ್ವವಲ್ಲ. ಸತ್ಯತ್ವ ಪಕ್ಷದಲ್ಲಿ ಒಂದು ಸತ್ತಿಗೆ ಇನ್ನೊಂದು ಸತ್ತಿನಿಂದ ಭೇದವಿರುವುದರಿಂದ ಸಿದ್ಧಸಾಧನತ್ವದೋಷ.

**ನಾಪಿ ಸತ್ತಾನಧಿಕರಣತ್ವಂ। ನಿರ್ಧರ್ಮಕೇ ಬ್ರಹ್ಮಣ್ಯಪಿ ಸತ್ತ್ವಾತ್। ನಚ 'ನಿರ್ಧರ್ಮಕತ್ವಾದೇವ ತತ್ರ ಸತ್ತಾನಧಿಕರಣತ್ವಮಪಿ ನ' ಇತಿ ವಾಚ್ಯಂ। ನಿರ್ಧರ್ಮಕತ್ವ ರೂಪಹೇತೋಃ ಸತ್ತಾನಧಿಕರಣತ್ವಾಭಾವರೂಪ ಸಾಧ್ಯಸ್ಯ ಚ ಭಾವಾಭಾವಾಭ್ಯಾಂ ವ್ಯಾಘಾತೇನ ಅಭಾವರೂಪ ಧರ್ಮ ನಿಷೇಧಾಯೋಗಾತ್।**

(4) ಸತ್ತಾನಧಿಕರಣತ್ವವೂ ಮಿಥ್ಯಾತ್ವವಲ್ಲ. ಬ್ರಹ್ಮನು ನಿರ್ಧರ್ಮಕನಾದ್ದರಿಂದ ಅವನಲ್ಲಿ ಸತ್ತಾಧಿಕರಣತ್ವರೂಪ ಧರ್ಮವೂ ಇಲ್ಲ. ಆದರೂ ಸದ್ರೂಪನಾದ್ದರಿಂದ ಸತ್ಯ ಎನಿಸುತ್ತಾನೆ. ಹಾಗೇ ಪ್ರಪಂಚ ಸತ್ತಾನಧಿಕರಣವಾದರೂ ಸದ್ರೂಪವಾಗಿ ಏಕೆ ಸತ್ಯವೆನಿಸಬಾರದು? ಮಿಥ್ಯಾ ಆಗಬೇಕಿಲ್ಲ ತಾನೆ? ಆದರಿಂದ ಅರ್ಥಾಂತರತ್ವದೋಷ.

'ಬ್ರಹ್ಮನು ನಿರ್ಧರ್ಮಕನಾದ್ದರಿಂದಲೇ ಅವನಲ್ಲಿ ಸತ್ವದಂತೆ ಸತ್ತಾನಧಿಕರಣತ್ವರೂಪ ಧರ್ಮವೂ ಇಲ್ಲ ಎನ್ನುತ್ತೇವೆ. ಆದರಿಂದ ಅರ್ಥಾಂತರತ್ವ ದೋಷಪ್ರಸಕ್ತಿ ಇಲ್ಲ' ಎಂದು ಹೇಳಬಾರದು. 'ಬ್ರಹ್ಮನಲ್ಲಿ ಸತ್ತಾನಧಿಕರಣತ್ವವಿಲ್ಲ, ನಿರ್ಧರ್ಮಕನಾದ್ದರಿಂದ' ಎಂದು ಸಾಧನೆ ಮಾಡಲು ಹೊರಟರೆ ವ್ಯಾಹತಿದೋಷ ಬರುತ್ತದೆ. ಹೇಗೆಂದರೆ– ಬ್ರಹ್ಮನಲ್ಲಿ ನಿರ್ಧಮಕತ್ವರೂಪಹೇತು ಇದೆಯೆ, ಇಲ್ಲವೆ? ಎಂದು ಕೇಳುತ್ತೇವೆ. ಇದೆ ಎಂದರೆ ಆ ನಿರ್ಧಮಕತ್ವವೂ ಒಂದು ಧರ್ಮವೇ ಆಗಿರುವುದರಿಂದ 'ನಿರ್ಧರ್ಮಕತ್ವರೂಪ ಧರ್ಮವಿದೆ. ನಿರ್ಧರ್ಮಕತ್ವ ಹೇತುವೂ ಇದೆ' ಎನ್ನುವುದು ವ್ಯಾಹತವಾಗುತ್ತದೆ. ನಿರ್ಧರ್ಮಕತ್ವ ಹೇತು ಇಲ್ಲವೆಂದರೆ ಎರಡು ನಞ್‌ಗಳು ಸೇರಿದರೆ ಪ್ರಸ್ತುತ ಪದಾರ್ಥ ಅವಶ್ಯ ಇದೆ ಎಂದಾಗುವುದರಿಂದ ಸಧರ್ಮಕತ್ವ ಬರುತ್ತದೆ. ನಿರ್ಧರ್ಮಕತ್ವ ಹೇತುವಿನಿಂದ ವಿರೋಧವೂ ಬರುತ್ತದೆ. ಮತ್ತು ಸತ್ತಾನಧಿಕರಣತ್ವಾಭಾವರೂಪ ಸಾಧ್ಯವು ಇದೆ ಎಂದರೆ, ಸಾಧ್ಯರೂಪವಾದ ಧರ್ಮ ಬಂದಿತೆಂದು ನಿರ್ಧರ್ಮಕತ್ವ ಹೇತುವಿನಿಂದಲೆ ವಿರೋಧ. ಸಾಧ್ಯವು ಬ್ರಹ್ಮನಲ್ಲಿ ಇಲ್ಲವೆಂದರೂ ಸತ್ತಾನಧಿಕರಣತ್ವಾಭಾವವಿಲ್ಲ. ಸತ್ತಾನಧಿಕರಣತ್ವವೇ ಬಂದಿತೆಂದು ಪುನಃ ನಿರ್ಧರ್ಮಕತ್ವ ಹೇತುವಿನಿಂದ ವಿರೋಧವೆ. ಅಥವಾ ಎರಡು ನಿಷೇಧಗಳು ಜತೆಗೂಡಿದರೆ ವಿಧಿಗೆ ದಾರ್ಢ್ಯವೆ ಬರುವುದರಿಂದ 'ಸತ್ವ ಅನಧಿಕರಣತ್ವ ಇಲ್ಲ' ಎಂದರೆ ಸತ್ತಾಧಿಕರಣತ್ವವೇ ಇದೆ ಎಂದು ಸಾಧ್ಯಪರ್ಯವಸಾನವಾಗುತ್ತದೆ. ಆಗ ನಿರ್ಧರ್ಮಕತ್ವ ಹೇತು ಇದ್ದರೆ ಸತ್ತಾಧಿಕರಣತ್ವ ಸಾಧ್ಯವಿಲ್ಲ, ಸಾಧ್ಯವಿದ್ದರೆ ಹೇತು ಇಲ್ಲ ಎಂದು ಸಾಧ್ಯಹೇತುಗಳಿಗೆ ವಿರೋಧ. ಆದರಿಂದ ಬ್ರಹ್ಮನಲ್ಲಿ ಸತ್ತಾನಧಿಕರಣತ್ವವೆಂಬ ಅಭಾವಧರ್ಮವನ್ನು ನಿಷೇಧ ಮಾಡಲಾಗದು. ಹೀಗಾಗಿ ಬ್ರಹ್ಮನಲ್ಲಿ ಸತ್ತಾನಧಿ ಕರಣತ್ವವೆಂಬ ಮಿಥ್ಯಾತ್ವಲಕ್ಷಣಕ್ಕೆ ಅತಿವ್ಯಾಪ್ತಿ.

**ಅನ್ಯಥಾ ಅಸತ್ತಾನಧಿಕರಣತ್ವಸ್ಯಾಪಿ ತತ್ರ ಅಭಾವೇನ ತದ್‌ವ್ಯಾವೃತ್ತ್ಯರ್ಥಂ ಅನಿರ್ವಾಚ್ಯಲಕ್ಷಣೇ ಸತ್ತಾನಧಿಕರಣತ್ವವಿಶೇಷಣಾಯೋಗಾತ್ ।**

'ಅನ್ಯಥಾ' ಅಂದರೆ ಅಭಾವರೂಪಧರ್ಮವನ್ನೂ ಬ್ರಹ್ಮನಲ್ಲಿ ನಿಷೇಧ ಮಾಡುವುದಾದರೆ ಸತ್ತ್ವಾನಧಿಕರಣತ್ವದಂತೆ, ಅಸತ್ತ್ವಾನಧಿಕರಣತ್ವರೂಪ ಅಭಾವಧರ್ಮವನ್ನೂ ನಿಷೇಧಮಾಡಬೇಕು. ಆಗ 'ಅಸತ್ತ್ವಾನಧಿಕರಣತ್ವ ಮಾತ್ರವನ್ನು ಮಿಥ್ಯಾತ್ವಲಕ್ಷಣವೆಂದರೆ ಬ್ರಹ್ಮನಲ್ಲಿ ಅತಿವ್ಯಾಪ್ತಿ, ಅದರ ನಿವಾರಣಕ್ಕೆ ಸತ್ತ್ವಾನಧಿಕರಣತ್ವವನ್ನು ಸೇರಿಸಿ ಸದಸತ್ತ್ವಾನಧಿಕರಣತ್ವವನ್ನೇ ಲಕ್ಷಣವೆನ್ನುತ್ತೇವೆ' ಎನ್ನುತ್ತ ಸತ್ತ್ವಾನಧಿಕರಣತ್ವವಿಶೇಷಣವನ್ನು ನೀನು ನೀಡುವುದು ಯುಕ್ತವಾಗದು. ಏಕೆಂದರೆ ಅಭಾವ ಧರ್ಮವೂ ಬ್ರಹ್ಮನಲ್ಲಿಲ್ಲವೆನ್ನುವ ಪಕ್ಷದಲ್ಲಿ ಅಸತ್ತ್ವಾನಧಿಕರಣತ್ವರೂಪ ಅಭಾವಧರ್ಮವು ಬ್ರಹ್ಮನಲ್ಲಿ ಹೇಗೆ ಅತಿವ್ಯಾಪ್ತವಾಗುತ್ತದೆ?

**ನಚ 'ಪ್ರಮಿತ್ಯವಿಷಯತ್ವಂ ಮಿಥ್ಯಾತ್ವಂ। ಬ್ರಹ್ಮ ತು ವೇದಾಂತಜನ್ಯವೃತ್ತಿವ್ಯಾಪ್ಯಂ' ಇತಿ ವಾಚ್ಯಂ। ಶುಕ್ತಿರೂಪ್ಯಾದೇರಪಿ ವ್ಯವಸಾಯದ್ವಾರಾ ಅನುವ್ಯವಸಾಯಂ ಪ್ರತಿ, ಸಾಕ್ಷಾಚ್ಚ ಬಾಧಕಜ್ಞಾನಂ ಪ್ರತಿ ನಿಷೇಧ್ಯತ್ವೇನ ವಿಷಯತ್ವಾತ್ ।**

**(5) 'ಪ್ರಮಿತಿಗೆ ವಿಷಯವಾಗದಿರುವುದು ಮಿಥ್ಯಾತ್ವವಲ್ಲ.**

ಬ್ರಹ್ಮವು ವೇದಾಂತಜನ್ಯವೃತ್ತಿಗೆ ವಿಷಯವಾಗುವುದರಿಂದ ಪ್ರಮಿತಿವಿಷಯವೆ. ಆದರಿಂದ ಈ ಲಕ್ಷಣಕ್ಕೆ ಅತಿವ್ಯಾಪ್ತಿ ಇಲ್ಲ' ಎನ್ನುವುದೂ ಸರಿಯಲ್ಲ. ಈ ಲಕ್ಷಣವು ಲಕ್ಷ್ಯವಾದ ಶುಕ್ತಿರಜತಾದಿ ಮಿಥ್ಯಾಪದಾರ್ಥಗಳಲ್ಲಿ ಎಲ್ಲಿಯೂ ಬಾರದಿರುವುದರಿಂದ ಅಸಂಭವ ದೋಷಗ್ರಸ್ತವಾಗಿದೆ. ಏಕೆಂದರೆ 'ಶುಕ್ತಿರಜತವನ್ನು ಕಂಡಿದ್ದೇನೆ' ಎಂದು ಅನುವ್ಯವಸಾಯ ದಲ್ಲಿ ವ್ಯವಸಾಯದ್ವಾರಾ ಶುಕ್ತಿರಜತವು ವಿಷಯವೇ ಆಗಿದೆ. ಸಾಕ್ಷಾತ್ ಅವಿಷಯತ್ವವಿವಕ್ಷೆ ಮಾಡಿದರೂ ಶುಕ್ತಿರಜತವು ನಿಷೇಧ್ಯತ್ವೇನ ಸಾಕ್ಷಾತ್ ಪ್ರಮಿತಿವಿಷಯವಾಗುತ್ತದೆ. ಇದು ರಜತವಲ್ಲ ಎಂದು ಪ್ರಮಿತಿ ಇದೆ. ಹೀಗೆ ಶುಕ್ತಿರಜತ ದೃಷ್ಟಾಂತದಲ್ಲಿ ಪ್ರಮಿತ್ಯವಿಷಯತ್ವರೂಪ ಮಿಥ್ಯಾತ್ವ ಬರಲಿಲ್ಲವಾದ್ದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ.

❖❖❖

**सत्त्वप्रकारकप्रमां प्रति साक्षादविषयत्वं चेदावश्यकत्वात् सत्त्वाभाव एव मिथ्यात्वं स्यात् । नापि भ्रान्तिविषयत्वम् । ब्रह्मणोऽप्यधिष्ठानत्वेन तद्विषयत्वात् । भ्रान्तिमात्रविषयत्वस्य चोक्तरीत्या शुक्तिरूप्यादावप्यभावात् । अध्यस्ततया भ्रान्तिविषयत्वं चेद्विशेष्यवैयर्थ्यात् । विशेषणमात्रस्य च निरुच्यमानमिथ्यात्वानतिरेकात् ।**

**नापि बाध्यत्वं, तद्धि न तावदन्यथा विज्ञातस्य सम्यग्विज्ञातत्वम् । मिथ्यात्वक्षणिकत्वादिना विज्ञातस्य प्रपञ्चस्य सत्यत्व स्थायित्वादिना विज्ञातत्वेन सिद्धसाधनात् । नापि बाधकज्ञानविषयत्वं ब्रह्मण्यतिव्याप्तेः ।**

**सत्त्वप्रकारकेति ।** सत्त्वनिष्ठप्रमीय(प्रमा)प्रकारत्वनिरूपितविशेष्यत्वानाश्रयत्वमित्यर्थः । तेन सदिदं रजतं नेति प्रमितौ शुक्तिरूप्यादेरपि विषयत्वेन तत्रोक्तवृत्त्यविषयत्वस्याभाव इति शंका निरस्ता । **आवश्यकत्वादिति ।** सदिदं रजतमिति शुक्तिरजतज्ञानस्य प्रमात्वाभावस्थापनार्थं सत्त्वाभावस्यावश्यकत्वादित्यर्थः ।। इदमुपलक्षणम् । सत्ताजातेर्ब्रह्मण्यभावेन तत्प्रकारकप्रमाया अभावात् तत्रातिप्रसङ्गेन नैतन्मिथ्यात्वमिति द्रष्टव्यम् । **उक्तरीत्येति ।।** अनुव्यवसायादिविषयत्वादिनेत्यर्थः । निरुच्यमानेति बाध्यत्वरूपेत्यर्थः ।। **ब्रह्मणीति ।।** ज्ञानमात्र एव चितः स्फुरणादिति भावः ।

❖❖❖

**ಸತ್ವಪ್ರಕಾರಕಪ್ರಮಾಂ ಪ್ರತಿ ಸಾಕ್ಷಾತ್ ಅವಿಷಯತ್ವಂ ಚೇತ್, ಆವಶ್ಯಕತ್ವಾತ್ ಸತ್ವಾಭಾವ ಏವ ಮಿಥ್ಯಾತ್ವಂ ಸ್ಯಾತ್ ।**

ಯದ್ಯಪಿ 'ಪ್ರಮಿತ್ಯವಿಷಯತ್ವವೆಂದರೆ ಸತ್ವಪ್ರಕಾರಕಪ್ರಮಾಕ್ಕೆ ಸಾಕ್ಷಾತ್ ವಿಷಯವಾಗದಿರುವುದೆಂದು ವಿವಕ್ಷ. ಅಂದರೆ, ಸತ್ವನಿಷ್ಠ ಪ್ರಮಾಪ್ರಕಾರತಾ ನಿರೂಪಿತ ವಿಶೇಷ್ಯತಾನಾಶ್ರಯತ್ವ. ಹೀಗೆ ಹೇಳದಿದ್ದರೆ 'ಸತ್ಯವಾದ ಈ ಪದಾರ್ಥ ರಜತವಲ್ಲ' ಎಂಬ ಪ್ರಮಿತಿಯಲ್ಲಿ ಸತ್ವವು ಪ್ರಕಾರವಾಗಿದೆ, ಶುಕ್ತಿರಜತವೂ ಅದರಲ್ಲಿ ಸಾಕ್ಷಾತ್ ವಿಷಯವಾಗಿರುವುದರಿಂದ ಸತ್ವಪ್ರಕಾರಕಪ್ರಮಿತ್ಯವಿಷಯತ್ವ ಅದರಲ್ಲಿ ಬರಲಿಲ್ಲ, ಅಸಂಭವದೋಷ ಬರುತ್ತಿದೆ' ಎಂಬ ಶಂಕೆಗೆ ಆಸ್ಪದವಿದೆ. 'ಸತ್ವನಿಷ್ಠಪ್ರಕಾರತಾ ನಿರೂಪಿತ ವಿಶೇಷ್ಯತಾನಾಶ್ರಯತ್ವ' ವಿವಕ್ಷೆ ಮಾಡಿದರೆ ಈ ದೋಷವಿಲ್ಲ. ಶುಕ್ತಿರಜತದಲ್ಲಿ ಸತ್ವನಿಷ್ಠಪ್ರಕಾರತಾ ನಿರೂಪಿತ ವಿಶೇಷ್ಯತ್ವರೂಪ ವಿಷಯತ್ವವಿಲ್ಲ. ಅದು ವಿಶೇಷ್ಯವಾದ ಅಭಾವಾಂಶದಲ್ಲಿ ಪ್ರಕಾರವಾಗಿದೆ, ವಿಶೇಷ್ಯವಾಗಿಲ್ಲ.

ಆದರೆ ಹೀಗೆ ಸತ್ವಪ್ರಕಾರಕ ಪ್ರಮಿತ್ಯವಿಷಯತ್ವವನ್ನು 'ಪ್ರಮಿತ್ಯವಿಷಯತ್ವ'ವೆಂದು ವಿವಕ್ಷೆ ಮಾಡಿದರೆ ಆವಶ್ಯಕವಾಗಿರುವ ಸತ್ವಾಭಾವವೇ ಮಿಥ್ಯಾತ್ವ ಎಂದಂತಾಗುವುದು. ಏಕೆಂದರೆ, 'ಘಟಾದಿಗಳು ಸತ್ವಪ್ರಕಾರಕಪ್ರಮಿತಿಗೆ ವಿಷಯವಾಗುತ್ತವೆ. ಶುಕ್ತಿರೂಪ್ಯಾದಿಗಳು ವಿಷಯವಾಗುವು

ದಿಲ್ಲ' ಎನ್ನುವುದಕ್ಕೆ 'ಘಟಾದಿಗಳಲ್ಲಿ ಸತ್ವವಿದೆ, ಶುಕ್ತಿರಜತಾದಿಗಳಲ್ಲಿ ಸತ್ವವಿಲ್ಲ' ಎನ್ನುವುದನ್ನೇ ನಿಯಾಮಕವೆನ್ನಬೇಕು. ಹೀಗಾಗಿ ನಿಯಾಮಕವಾಗಿ ಆವಶ್ಯಕವಾಗಿರುವ ಸತ್ತ್ವಾಭಾವವನ್ನೇ ಮಿಥ್ಯಾತ್ವವೆಂದು ಒಪ್ಪುವುದು ಯುಕ್ತವಾದೀತು. ಆದರಿಂದ ನಿರ್ಧರ್ಮಕನಾದ ಬ್ರಹ್ಮನಲ್ಲಿ ಸತ್ವರೂಪಧರ್ಮವಿಲ್ಲದ್ದರಿಂದ ಸತ್ತ್ವಾಭಾವರೂಪ ಮಿಥ್ಯಾತ್ವಲಕ್ಷಣವು ಬ್ರಹ್ಮನಲ್ಲಿ ಅತಿವ್ಯಾಪಕವಾಯಿತು.

**ನಾಪಿ ಭ್ರಾಂತಿವಿಷಯತ್ವಂ। ಬ್ರಹ್ಮಣೋऽಧಿಷ್ಠಾನತ್ವೇನ ತದ್‌ವಿಷಯತ್ವಾತ್। ಭ್ರಾಂತಿಮಾತ್ರ ವಿಷಯತ್ವಸ್ಯಚ ಉಕ್ತರೀತ್ಯಾ ರೂಪ್ಯಾದಾವಪ್ಯಭಾವಾತ್। ಅಧ್ಯಸ್ತತಯಾ ಭ್ರಾಂತಿವಿಷಯತ್ವಂ ಚೇತ್ ವಿಶೇಷ್ಯ ವೈಯರ್ಥ್ಯಾತ್। ವಿಶೇಷಣಮಾತ್ರಸ್ಯ ನಿರುಚ್ಯಮಾನ ಮಿಥ್ಯಾತ್ವಾನತಿರೇಕಾತ್ ॥**

**(6) ಭ್ರಾಂತಿಗೆ ವಿಷಯವಾಗುವುದೇ ಮಿಥ್ಯಾತ್ವ ಎನ್ನುವುದೂ ಸರಿಯಲ್ಲ.** ಬ್ರಹ್ಮನಲ್ಲಿ ಜಗದಾರೋಪಾಧಿಷ್ಠಾನತ್ವೇನ ಭ್ರಾಂತಿ ವಿಷಯತ್ವವನ್ನು ಅದ್ವೈತಿ ಹೇಳುತ್ತಾನೆ. ಕ್ಷಣಿಕತ್ವಾದಿನಾ ಭ್ರಾಂತಿ ವಿಷಯತ್ವವನ್ನು ದ್ವೈತಿಯೂ ಹೇಳುತ್ತಾನೆ. ಆದರಿಂದ ಈ ಲಕ್ಷಣಕ್ಕೆ ಬ್ರಹ್ಮನಲ್ಲಿ ಅತಿವ್ಯಾಪ್ತಿ.

'ಭ್ರಾಂತಿ ಮಾತ್ರದಲ್ಲಿ ವಿಷಯವಾಗುವುದು ಮಿಥ್ಯಾತ್ವ' ಎಂದರೆ, ಹಿಂದೆ ಹೇಳಿದಂತೆ ವ್ಯವಸಾಯದ್ವಾರಾ ಅನುವ್ಯವಸಾಯಕ್ಕೂ, ಸಾಕ್ಷಾತ್ತಾಗಿ ನಿಷೇಧ್ಯತ್ವೇನ ಬಾಧಕಜ್ಞಾನಕ್ಕೂ ಶುಕ್ತಿರೂಪ್ಯವು ವಿಷಯವೇ ಆಗುವುದರಿಂದ ಭ್ರಾಂತಿಮಾತ್ರ ವಿಷಯತ್ವರೂಪ ಲಕ್ಷಣ ಅಸಂಭವಿ.

ಅಧ್ಯಸ್ತತ್ವೇನ ಭ್ರಾಂತಿ ವಿಷಯತ್ವವು ವಿವಕ್ಷಿತ ಎಂದರೂ ಅಧ್ಯಸ್ತತ್ವರೂಪ ವಿಶೇಷಣವೇ ಸಾಕು. ವಿಶೇಷ್ಯಾಂಶವಾದ ಭ್ರಾಂತಿ ವಿಷಯತ್ವವು ಲಕ್ಷಣದಲ್ಲಿ ವ್ಯರ್ಥ.

ಅಧ್ಯಸ್ತತ್ವವನ್ನೇ ಮಿಥ್ಯಾತ್ವ ಎನ್ನುತ್ತೇನೆ ಎಂದರೆ, ಅಧ್ಯಸ್ತತ್ವ ಬೇರೆ ಅಲ್ಲ, ಮಿಥ್ಯಾತ್ವ ಬೇರೆ ಅಲ್ಲ. ಅಧ್ಯಸ್ತತ್ವದ ನಿರ್ವಚನ ಶಕ್ಯವಾಗುತ್ತಿಲ್ಲ. ಆದರಿಂದ ಮಿಥ್ಯಾತ್ವವೇ ಮಿಥ್ಯಾತ್ವವೆಂದಂತಾಗುವುದು ಮತ್ತು ಅಧ್ಯಾಸವೆಂದರೆ ಭ್ರಾಂತಿ, ಅಧ್ಯಸ್ತವೆಂದರೆ ಭ್ರಾಂತಿ ವಿಷಯ. ಭ್ರಾಂತಿವಿಷಯತ್ವವೇ ಹೇಗೆ ಲಕ್ಷಣವಾಗುವುದೆಂದು ತಿಳಿಯಲು ಶಕ್ಯವಾಗುತ್ತಿಲ್ಲ. ಹೀಗಾಗಿ ಮಿಥ್ಯಾತ್ವವೇ ಮಿಥ್ಯಾತ್ವ, ಅಧ್ಯಸ್ತತ್ವವೇ ಅಧ್ಯಸ್ತತ್ವ ಎಂದಂತಾಗುವುದರಿಂದ ಆತ್ಮಾಶ್ರಯದೋಷ ಬರುತ್ತದೆ.

**ನಾಪಿ ಬಾಧ್ಯತ್ವಂ। ತದ್ಧಿ ನ ತಾವತ್ ಅನ್ಯಥಾ ವಿಜ್ಞಾತಸ್ಯ ಸಮ್ಯಗ್ ವಿಜ್ಞಾತತ್ವಂ। ಮಿಥ್ಯಾತ್ವ ಕ್ಷಣಿಕತ್ವಾದಿನಾ ವಿಜ್ಞಾತಸ್ಯ ಪ್ರಪಂಚಸ್ಯ ಸತ್ಯತ್ವ ಸ್ಥಾಯಿತ್ವಾದಿನಾ ವಿಜ್ಞಾತತ್ವೇನ ಸಿದ್ಧಸಾಧನಾತ್।**

**(7)ಬಾಧ್ಯತ್ವವೇ ಮಿಥ್ಯಾತ್ವ ಎನ್ನುವುದೂ ಸರಿಯಲ್ಲ.** ಏಕೆಂದರೆ ಬಾಧ್ಯತ್ವವೆಂದರೇ ಏನು? ಅನ್ಯಥಾ ತಿಳಿದಿದ್ದನ್ನು ಸರಿಯಾಗಿ ತಿಳಿಯುವುದು ಅಲ್ಲ. ಬೌದ್ಧರು ಹೇಳುವಂತೆ ಅಸತ್ಯ ಕ್ಷಣಿಕ ಎಂದು ಅನ್ಯಥಾ ತಿಳಿದಿದ್ದ ಪ್ರಪಂಚ ಈಗ ಸತ್ಯ, ಸ್ಥಾಯಿ ಎಂದು ಸರಿಯಾಗಿ ತಿಳಿದಿರುವುದರಿಂದ ಈ ಮಿಥ್ಯಾತ್ವವನ್ನು ಸಾಧಿಸಿದರೆ ಸಿದ್ಧಸಾಧನತಾದೋಷ ಬರುತ್ತದೆ.

**ನಾಪಿ ಬಾಧಕಜ್ಞಾನವಿಷಯತ್ವಂ। ಬ್ರಹ್ಮಣಿ ಅತಿವ್ಯಾಪ್ತೇಃ।**

ಬಾಧಕಜ್ಞಾನವಿಷಯತ್ವವೇ ಬಾಧ್ಯತ್ವವು ಅಲ್ಲ. ಹಾಗೆ ಹೇಳಿದರೆ ಬ್ರಹ್ಮನಲ್ಲಿ ಅತಿವ್ಯಾಪ್ತಿ. ಬ್ರಹ್ಮನು ಎಲ್ಲ ಜ್ಞಾನಗಳಲ್ಲಿ ಸ್ಫುರಿಸುತ್ತಾನೆ, 'ಸರ್ವಪ್ರತ್ಯಯವೇದ್ಯ'ನೆನಿಸಿದ್ದಾನೆ.

ಯದ್ಯಪಿ 'ಅನ್ಯಥಾ ಪಿಜ್ಞಾತವಾದುದು ಸಮ್ಯಗ್ಜ್ಞಾತವಾಗುವುದು' ಎಂದರೂ 'ಬಾಧಕ ಜ್ಞಾನ ಪಿಷಯವಾಗುವುದು' ಎಂದರೂ ಒಂದೇ. ಆದರೂ ಸ್ವಲ್ಪ ವೈಲಕ್ಷಣ್ಯವಿದೆ. ಸಮ್ಯಗ್ಜ್ಞಾತ ವಾಗುವುದೆಂದರೆ ಪ್ರಮಾರೂಪ ಬಾಧಕ ಜ್ಞಾನಕ್ಕೆ ಪಿಷಯವಾಗುವುದು ಹಿಂದೆ ಉಕ್ತವಾಗಿದೆ. ಈಗ ಭ್ರಮ ಪ್ರಮಾ ಸಾಧಾರಣವಾದ ಬಾಧಕಜ್ಞಾನಕ್ಕೆ ಪಿಷಯವಾಗುವುದು ಎಂದಿಷ್ಟೇ ಪಿವಕ್ಷಿತವಾಗಿದೆ. ಅಥವಾ ಬ್ರಹ್ಮನಲ್ಲಿ ಅತಿವ್ಯಾಪ್ತಿ ಎಂಬ ದೋಷಾಂತರವನ್ನು ಹೇಳುವುದಕ್ಕಾಗಿ ಹಿಂದೆ ಹೇಳಿದ್ದನ್ನೇ ತಿರುಗಿ ಹೇಳಿದೆ.

❖❖❖

**नापि नास्ति नासीन्न भविष्यतीति बोध्यमानाभावप्रतियोगित्वेन तद्विषयत्वम् । मन्मते ह्यापणस्थरूप्यस्यैव तत्प्रतियोगित्वात् । नापि ज्ञाननिवर्त्यत्वम्, उत्तरज्ञाननिवर्त्यपूर्वज्ञानादाविव सत्त्वेऽप्युपपत्तेः । नापि स्वसमानाधिकरणात्यन्ताभावप्रतियोगित्वं मिथ्यात्वं, अव्याप्यवृत्तिसंयोगादेरिव सत्त्वेऽप्युपपत्तेः ।**

**नाप्यव्याप्यवृत्तित्वानाश्रयस्वसमानाधिकरणात्यन्ताभावप्रतियोगित्वम् । आरोपितस्य संयोगस्यात्यन्ताभावस्तु अनारोपितस्य संयोगस्यात्यन्ताभावादन्य एव व्याप्यवृत्तिरिति वाच्यम् । शुक्तिरूप्यादौ तदभावादित्युक्तत्वात् ।**

अभावप्रतियोगित्वेन बाधकज्ञानविषयत्वं कदाचित् ब्रह्मणोऽपीति अत आह **नास्तिनासीन्नभविष्यतीति ।।** त्रैकालिकसम्बन्धावच्छिन्नात्यन्ताभावप्रतियोगित्वेन तद्विषयत्वमित्यर्थः । नच तादृशाभावप्रतियोगित्वमेव मिथ्यात्वमस्त्विति वाच्यम् । अभावप्रतियोगिकत्वस्य प्रकारकत्वलक्षणसम्बन्धेन ज्ञानविशेषणतया प्रतियोग्यविशेषणत्वात् ज्ञानस्यैव तद्विशेषणत्वाच्च । अभावप्रतियोगित्वतत्प्रकारकज्ञानविषयत्वयोर्घटत्वतत्प्रकारकप्रमाविशेष्यत्वयोरिव भेदान्न यथोक्तविशेषणविशेष्यभाव-

वैयर्थ्यशङ्केति भावः ।। **मन्मत इति** ।। कालत्रयेऽपि न रजतमित्याकारकबाधाभावात्, कालत्रयेऽपि नात्ररजतमित्याकारकबाधस्य चापणस्थरजतप्रतियोगिकत्वावगाहितयोपपत्तेरिति भावः । एवं सति ब्रह्मण्यतिव्याप्तिरपि द्रष्टव्या, तस्यावृत्तित्वादिति । नन्वेवमारोपितसंयोगस्य मिथ्यात्वं न सिध्येदित्यत आह **आरोपितस्येति** । तथाच न तमादाय साध्यपर्यवसानमिति भावः । **उक्तत्वादिति** । मन्मत इत्यादिनेत्यर्थः । एवं च दृष्टान्तः साध्यविकल इति भावः ।

❖❖❖

**ನಾಪಿ ನಾಸ್ತಿ ನಾಸೀತ್ ನ ಭವಿಷ್ಯತಿ ಇತಿ ಬೋಧ್ಯಮಾನ ಅಭಾವ ಪ್ರತಿಯೋಗಿತ್ವೇನ ತದ್ವಿಷಯತ್ವಂ । ಮನ್ಮತೇ ಹಿ ಆಪಣಸ್ಥ ರೂಪ್ಯಸ್ಯೈವ ತತ್‌ಪ್ರತಿಯೋಗಿತ್ವಾತ್ ।**

'ಈಗ ಇಲ್ಲ ಹಿಂದೆ ಇರಲಿಲ್ಲ ಮುಂದೆ ಇರುವುದಿಲ್ಲ' ಎಂದು ಶಬ್ದಬೋಧ್ಯವಾದ ತ್ರೈಕಾಲಿಕ ಸಂಬಂಧಾವಚ್ಛಿನ್ನ ಅತ್ಯಂತಾಭಾವ ಪ್ರತಿಯೋಗಿತ್ವೇನ ಬಾಧಕಜ್ಞಾನವಿಷಯತ್ವವೇ ಬಾಧ್ಯತ್ವ ಎನ್ನುವುದೂ ಸರಿಯಲ್ಲ.

ಯದ್ಯಪಿ 'ಅಭಾವಪ್ರತಿಯೋಗಿತ್ವ'ವೇ ಬಾಧ್ಯತ್ವ ಎನ್ನಬಹುದು, 'ಅಭಾವಪ್ರತಿಯೋಗಿತ್ವ ಪ್ರಕಾರಕ ಜ್ಞಾನವಿಷಯತ್ವ'ವನ್ನು ಬಾಧ್ಯತ್ವವೆಂದೇಕೆ ಹೇಳಬೇಕು? ಎಂಬ ಪ್ರಶ್ನೆ ಬರಬಹುದು. ಆದರೆ 'ಅಭಾವಪ್ರತಿಯೋಗಿತ್ವೇನ' ಎಂಬಲ್ಲಿ ಅಭಾವಪ್ರತಿಯೋಗಿತ್ವವು ಮಿಥ್ಯಾಭೂತವಾದ ಅಭಾವ ಪ್ರತಿಯೋಗಿಯಲ್ಲಿ ವಿಶೇಷಣವಾಗಿ ಕಾಣುತ್ತಿಲ್ಲ. ತತ್ಪ್ರಕಾರಕತ್ವ ಸಂಬಂಧದಿಂದ ಅದು ಜ್ಞಾನದಲ್ಲಿ ವಿಶೇಷಣವಾಗಿದೆ. ಪ್ರತಿಯೋಗಿಯಲ್ಲಿ ವಿಷಯತಾಸಂಬಂಧದಿಂದ ಜ್ಞಾನವೇ ವಿಶೇಷಣವಾಗಿದೆ. ಆದರಿಂದ ವಿಶೇಷಣಾಂಶದಿಂದಲೇ ವಿಶೇಷ್ಯ ಗತಾರ್ಥ ಎನ್ನುವಂತಿಲ್ಲ. ಮತ್ತು ಅಭಾವಪ್ರತಿಯೋಗಿತ್ವ ಬೇರೆ. ತತ್ಪ್ರಕಾರಕಜ್ಞಾನವಿಷಯತ್ವವೇ ಬೇರೆ. ಅವುಗಳಲ್ಲಿ ಒಂದು ಇನ್ನೊಂದರಿಂದ ಗತಾರ್ಥ ವಾಗುವುದಿಲ್ಲ. ಘಟತ್ವ ಮತ್ತು ತತ್ಪ್ರಕಾರಕಪ್ರಮಾವಿಶೇಷ್ಯತ್ವಗಳು ಬೇರೆಬೇರೆಯಾಗಿದ್ದು ಒಂದರಿಂದ ಇನ್ನೊಂದು ಹೇಗೆ ಗತಾರ್ಥವಾಗುವುದಿಲ್ಲವೋ ಹಾಗೆ.

ಆದರಿಂದ ಅಭಾವ ಪ್ರತಿಯೋಗಿತ್ವೇನ ಬಾಧಕಜ್ಞಾನವಿಷಯತ್ವವೇ ಬಾಧ್ಯತ್ವವೆಂದರೆ ಅಸಂಗತವಾಗುವುದಿಲ್ಲ. ಆದರೂ ಅದ್ವೈತಿ ಹೇಳುತ್ತಾನೆ. 'ಇದು ನನ್ನ ಮತಾನುಸಾರಿಯಲ್ಲ. 'ಆಭಾಸಸ್ಯ ಪ್ರಸಕ್ತ್ಯಾ ಅನಾಭಾಸಸ್ಯ ನಿಷೇಧಃ' ಆಭಾಸದ ಪ್ರಸಕ್ತಿಯಿಂದ ಅನಾಭಾಸವನ್ನೇ ಬಾಧಕಜ್ಞಾನವು ನಿಷೇಧಿಸುತ್ತದೆ ಎಂದು ನನ್ನ ಮತ. 'ಕಾಲತ್ರಯದಲ್ಲಿ ಎಲ್ಲಿಯೂ ರಜತವಿಲ್ಲ' ಎನ್ನುವ ಬಾಧವಿರುವುದಿಲ್ಲ. 'ಕಾಲತ್ರಯದಲ್ಲಿಯೂ ಇಲ್ಲಿ ರಜತವಿಲ್ಲ' ಎಂದೇ ಬಾಧ. ಅದು ಅಂಗಡಿಯಲ್ಲಿರುವ ರಜತಪ್ರತಿಯೋಗಿಕತ್ವವನ್ನು ಅಭಾವದಲ್ಲಿ ಬಾಧಕಜ್ಞಾನವು ವಿಷಯೀಕರಿಸಿದರೂ

ಉಪಪನ್ನವಾಗುವುದು. ಆದರಿಂದ ಪ್ರಾತಿಭಾಸಿಕರಜತ ಪ್ರಸಕ್ತಿಯಿಂದ ವ್ಯಾವಹಾರಿಕ ಸತ್ಯವಾದ ರಜತವನ್ನು ಬಾಧಕಜ್ಞಾನವು ನಿಷೇಧಿಸುತ್ತದೆ. ಆದರಿಂದ ಲಕ್ಷಣವು ಅಸಂಭವಿಯಾಗುತ್ತದೆ.

ಮತ್ತು ನಾಸ್ತಿ ನಾಸೀತ್ ನ ಭವಿಷ್ಯತಿ ಎಂದು ತ್ರೈಕಾಲಿಕಸಂಬಂಧಾವಚ್ಛಿನ್ನ ಅತ್ಯಂತಾಭಾವಪ್ರತಿಯೋಗಿತ್ವೇನ ಬಾಧಕಜ್ಞಾನವು ಗ್ರಹಿಸುವುದು ಸತ್ಯವಾದ ಬ್ರಹ್ಮವನ್ನೇ. ಏಕೆಂದರೆ ಅದು ವಿಭುವಾಗಿದ್ದು ಅವೃತ್ತಿಪದಾರ್ಥವಾಗಿದೆ. ಕೇವಲಾನ್ವಯಿ ಅತ್ಯಂತಾಭಾವ ಪ್ರತಿಯೋಗಿಯಾಗಿದೆ. ಆದರಿಂದ ಅತಿವ್ಯಾಪ್ತಿಯೂ ಈ ಲಕ್ಷಣದಲ್ಲಿ ದೋಷ.

ಮತ್ತು ಪ್ರಾತಿಭಾಸಿಕರೂಪ್ಯವು ಭ್ರಮಕಾಲದಲ್ಲಿ ಇರುತ್ತದೆ, ಶುಕ್ತ್ಯವಚ್ಛಿನ್ನಚೈತನ್ಯಾವರಕಾಜ್ಞಾನಪರಿಣಾಮವಾಗಿ ಹುಟ್ಟಿರುತ್ತದೆ. ತ್ರಿಕಾಲದಲ್ಲಿ ಇಲ್ಲವೆಂದು ಅದನ್ನು ನಿಷೇಧ ಮಾಡುವುದು ಶಕ್ಯವೂ ಅಲ್ಲ. ಆದರಿಂದ ಈ ಲಕ್ಷಣವು ದೃಷ್ಟಾಂತವಾದ ಶುಕ್ತಿರೂಪ್ಯದಲ್ಲಿ ಇಲ್ಲದ್ದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದೋಷವೂ ಇದೆ.

**ನಾಪಿ ಜ್ಞಾನನಿವರ್ತ್ಯತ್ವಂ। ಉತ್ತರಜ್ಞಾನ ನಿವರ್ತ್ಯ ಪೂರ್ವಜ್ಞಾನಾದೌ ಇವ ಸತ್ವೇಽಪಿ ಉಪಪತ್ತೇಃ।**

ಜ್ಞಾನನಿವರ್ತ್ಯತ್ವವೂ ಬಾಧ್ಯತ್ವವಲ್ಲ. ಆತ್ಮವಿಶೇಷಗುಣಗಳಾದ ಜ್ಞಾನಾದಿಗಳು ಸ್ವೋತ್ತರೋತ್ಪನ್ನ ಆತ್ಮವಿಶೇಷಗುಣಗಳಿಂದ ನಾಶ್ಯವಾಗಿರುವುದರಿಂದ, ಸತ್ಯತ್ವಪಕ್ಷದಲ್ಲಿ ಇದು ಕೂಡುವುದರಿಂದ ಅರ್ಥಾಂತರತ್ವದೋಷ ಬರುತ್ತದೆ.

**ನಾಪಿ ಸ್ವಸಮಾನಾಧಿಕರಣ ಅತ್ಯಂತಾಭಾವ ಪ್ರತಿಯೋಗಿತ್ವಂ ಮಿಥ್ಯಾತ್ವಂ। ಅವ್ಯಾಪ್ಯವೃತ್ತಿಸಂಯೋಗಾದೇಃ ಇವ ಸತ್ವೇಽಪಿ ಉಪಪತ್ತೇಃ।**

**(8)ಸ್ವಸಮಾನಾಧಿಕರಣ ಅತ್ಯಂತಭಾವಕ್ಕೆ ಪ್ರತಿಯೋಗಿಯಾಗುವುದು ಮಿಥ್ಯಾತ್ವವಲ್ಲ.** 'ತಾನಿರುವಲ್ಲಿಯೆ ತನ್ನ ಅಭಾವವೂ ಇರುವುದೇ ಮಿಥ್ಯಾತ್ವ'–ಎಂದರೆ, ಇಂಥ ಮಿಥ್ಯಾತ್ವವು ಸತ್ಯವಾದ ಅವ್ಯಾಪ್ತವೃತ್ತಿ ಸಂಯೋಗಾದಿಗಳಲ್ಲಿಯೂ ಇದೆ. ಕಪಿ ಇರುವ ಮರದಲ್ಲಿಯೆ ಅದರ ಅಭಾವವೂ ಇದೆ. ಮೇಲೆ ಕಪಿ ಇದ್ದರೂ ಕೆಳಗೆ ಅದರ ಅಭಾವವಿದೆ. ಸತ್ಯವಾದ ಕಪಿಸಂಯೋಗದಲ್ಲಿ ಈ ಮಿಥ್ಯಾತ್ವ ಕೂಡುವುದರಿಂದ ಅರ್ಥಾಂತರತ್ವದೋಷ.

**ನಾಪಿ 'ಅವ್ಯಾಪ್ಯವೃತ್ತಿತ್ವಾನಾಶ್ರಯ ಸ್ವಸಮಾನಾಧಿಕರಣ ಅತ್ಯಾಂತಾಭಾವ ಪ್ರತಿಯೋಗಿತ್ವಂ। ಆರೋಪಿತಸ್ಯ ಸಂಯೋಗಸ್ಯ ಅತ್ಯಂತಾಭಾವಸ್ತು ಅನಾರೋಪಿತಸ್ಯ ಸಂಯೋಗಸ್ಯ ಅತ್ಯಂತಾಭಾವಾತ್ ಅನ್ಯ ಏವ ವ್ಯಾಪ್ಯವೃತ್ತಿಃ।' ಇತಿ ವಾಚ್ಯಂ। ಶುಕ್ತಿರೂಪ್ಯಾದೌ ತದಭಾವಾದ್ ಇತ್ಯುಕ್ತತ್ವಾತ್ ॥**

**(9)'ಅವ್ಯಾಪ್ಯವೃತ್ತಿತ್ವಾನಾಶ್ರಯವಾದ ಸ್ವಸಮಾನಾಧಿಕರಣವಾದ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗುವುದು, ಮಿಥ್ಯಾತ್ವವಲ್ಲ.** ಹೀಗೆ ಹೇಳಿದರೆ ಆರೋಪಿತ ಸಂಯೋಗಕ್ಕೆ ಮಿಥ್ಯಾತ್ವ

ಸಿದ್ಧಿಸದೆ ಹೋದೀತು ಎಂದರೆ, ಆರೋಪಿತ ಸಂಯೋಗದ ಅತ್ಯಂತಾಭಾವವು ಅನಾರೋಪಿತ ಸಂಯೋಗದ ಅಭಾವಕ್ಕಿಂತ ಬೇರೆಯಾಗಿದ್ದು ವ್ಯಾಪ್ಯವೃತ್ತಿಯೆ ಆಗಿದೆ. ಹೀಗೆ ಅವ್ಯಾಪ್ಯವೃತ್ತಿತ್ವಾ-ನಾಶ್ರಯವಾಗಿದ್ದು ಸ್ವಸಮಾನಾಧಿಕರಣವಾದ ಅತ್ಯಂತಾಭಾವಕ್ಕೆ ಆರೋಪಿತ ಸಂಯೋಗವು ಪ್ರತಿಯೋಗಿಯೇ ಆಗಿರುವುದರಿಂದ ಆರೋಪಿತ ಸಂಯೋಗಪಿಟ್ಟುಕೊಂಡಾಗ ಸಾಧ್ಯದ ಅಪರ್ಯವಸಾನ ಪ್ರಸಕ್ತಿ ಇಲ್ಲ. ಮಿಥ್ಯಾತ್ವ ಸಿದ್ಧಿಸುತ್ತದೆ' ಎಂದು ಅದ್ವೈತಿ ಹೇಳಬಹುದು. ಆದರೆ ಹೀಗೆ ಹೇಳುವುದು ಸರಿಯಲ್ಲ.

ಶುಕ್ತಿರೂಪ್ಯವು ಶುಕ್ತಿಯಲ್ಲಿ ತನಗೆ ಸಮಾನಾಧಿಕರಣವಾದ ಅಭಾವಕ್ಕೆ ತಾನು ಪ್ರತಿಯೋಗಿಯಾಗುವುದಿಲ್ಲ. 'ಆಭಾಸ ಪ್ರಸಕ್ತಿಯಿಂದ ಅನಾಭಾಸ ನಿಷೇಧ' ಎನ್ನುವ ನನ್ನ ಮತದಲ್ಲಿ ಆಪಣಸ್ಥ ಸತ್ಯರೂಪ್ಯವೇ ಶುಕ್ತಿಯಲ್ಲಿ ಅಭಾವಪ್ರತಿಯೋಗಿ ಎಂದು ಹಿಂದೆ ಹೇಳಿದ್ದೇನೆ. ಆದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವಿದೆ.

'ವ್ಯಾಪ್ಯವೃತ್ತಿತ್ವಾಶ್ರಯ'ವೆಂದು ನೇರವಾಗಿ ಹೇಳದೆ 'ಅವ್ಯಾಪ್ಯವೃತ್ತಿತ್ವಾನಾಶ್ರಯ' ಎಂದು ಎರಡು ನಞ್ ಸೇರಿಸಿ ಹೇಳಿದ್ದೇಕೆ? ಎಂದರೆ, ಅವ್ಯಾಪ್ಯವೃತ್ತಿ ಕಪಿಸಂಯೋಗಾಭಾವವು ಕೂಡ ಗುಣಕರ್ಮಾದಿಗಳಲ್ಲಿ ವ್ಯಾಪ್ಯವೃತ್ತಿಯೆ. ಹೀಗಾಗಿ 'ವ್ಯಾಪ್ಯವೃತ್ತಿತ್ವಾಶ್ರಯ' ಎಂದರೆ ಅನಾರೋಪಿತ ಸಂಯೋಗಾಭಾವವನ್ನು ಇಟ್ಟುಕೊಂಡು ಅರ್ಥಾಂತರತ್ವವನ್ನು ಹೇಳಬಹುದು. ಈಗ ಆರೋಪಿತ ಸಂಯೋಗಾತ್ಯಂತಾಭಾವವನ್ನೇ ಇಟ್ಟುಕೊಂಡು ಸಾಧ್ಯಪರ್ಯವಸಾನ ಮಾಡಬೇಕಾಗುವುದರಿಂದ ಅರ್ಥಾಂತರತ್ವಕ್ಕೆ ಅವಕಾಶವಿಲ್ಲ.

❖❖❖

**नाप्यविद्यातत्कार्ययोरन्यतरत्वं, अनादौ जीवब्रह्मविभागादा-वव्याप्तेः । परमतेऽज्ञानस्य तत्कार्यभ्रान्त्यादेश्च सत्यत्वेनार्थान्त-रत्वाच्च । शुक्तिरूप्यादावनिर्वाच्याविद्याकार्यत्वस्य प्रतिवाद्यसंमतेश्च ।**

नन्वविद्यापदं ध्वंसप्रतियोग्यनादिपरं विवक्षितमतो नोक्तदोष इत्यत आह **परमत इति** । नन्वनिर्वचनीयाविद्याकार्यशुक्तिरूप्यादिदृष्टान्तेनेदमनुमानं मिथ्यात्वे पर्यवस्यतीत्यत आह **शुक्तिरूप्यादाविति** । तथाच दृष्टान्तासिद्धिरिति भावः ।

❖❖❖

ನಾಪಿ ಅವಿದ್ಯಾ ತತ್ಕಾರ್ಯಯೋಃ ಅನ್ಯತರತ್ವಂ । ಅನಾದೌ ಜೀವಬ್ರಹ್ಮವಿಭಾಗಾದೌ ಅವ್ಯಾಪ್ತೇಃ । ಪರಮತೇ ಅಜ್ಞಾನಸ್ಯ ತತ್ಕಾರ್ಯ ಭ್ರಾಂತ್ಯಾದೇಶ್ಚ ಸತ್ಯತ್ವೇನ

ಅರ್ಥಾಂತರತ್ವಾಚ್ಚ । ಶುಕ್ತಿರೂಪ್ಯಾದೌ ಅನಿರ್ವಾಚ್ಯಾವಿದ್ಯಾಕಾರ್ಯತ್ವಸ್ಯ ಪ್ರತಿವಾದ್ಯ-ಸಮ್ಮತೇಶ್ಚ ।

(10)'ಅವಿದ್ಯೆ ಮತ್ತು ತತ್ಕಾರ್ಯ ಇವೆರಡರಲ್ಲಿ ಒಂದಾಗಿರುವುದು ಮಿಥ್ಯಾತ್ವವಲ್ಲ'. ಹೀಗೆ ಹೇಳಿದರೂ ಅನಾದಿಯಾದ ಜೀವ-ಬ್ರಹ್ಮ ವಿಭಾಗಾದಿಗಳಲ್ಲಿ ಲಕ್ಷಣಕ್ಕೆ ಅವ್ಯಾಪ್ತಿ ಇದೆ.

ಜೀವ ಈಶೋ ವಿಶುದ್ಧಾ ಚಿತ್ ಭೇದಸ್ತಸ್ಯಾಸ್ತಯೋರ್ದ್ವಯೋಃ ।
ಅವಿದ್ಯಾ ತಚ್ಚಿತೋರ್ಯೋಗಃ ಷಡಸ್ಮಾಕಂ ಅನಾದಯಃ ॥

ಎಂದು ವಾರ್ತಿಕವು ಹೇಳುವಂತೆ ಜೀವ, ಈಶ್ವರ, ಶುದ್ಧಚೈತನ್ಯ, ಶುದ್ಧಚೈತನ್ಯಕ್ಕೆ ಜೀವೇಶ್ವರ ರಿಂದ ಭೇದ, ಅವಿದ್ಯಾ, ಅವಿದ್ಯಾ ಮತ್ತು ಚೈತನ್ಯಗಳ ಸಂಬಂಧ-ಹೀಗೆ ಆರು ಅದ್ವೈತಮತದಲ್ಲಿ ಅನಾದಿಪದಾರ್ಥಗಳಾಗಿವೆ. ಇವುಗಳಲ್ಲಿ ಅವಿದ್ಯಾತತ್ಕಾರ್ಯ ಅನ್ಯತರತ್ವವನ್ನು ಸಾಧಿಸುವುದಾದರೆ ಅಂಶತೋ ಬಾಧವಿದೆ.

ಆದರೂ ಇಲ್ಲಿ 'ಅವಿದ್ಯೆ' ಎಂದರೆ 'ಧ್ವಂಸಪ್ರತಿಯೋಗಿಯಾದ ಅನಾದಿ ಪದಾರ್ಥ' ಎಂದು ವಿವಕ್ಷೆ ಮಾಡಬಹುದು. ಆಗ ಜೀವ ಮುಂತಾದ ಪದಾರ್ಥಗಳು ಅನಾದಿಯಾಗಿದ್ದು ಚರಮವೃತ್ತಿಯಿಂದ ಧ್ವಂಸ ಪ್ರತಿಯೋಗಿಯಾಗಿವೆ. ಧ್ವಂಸಪ್ರತಿಯೋಗಿ ಅನಾದಿ ಮತ್ತು ತತ್ಕಾರ್ಯ ಇವುಗಳ ಅನ್ಯತರತ್ವವನ್ನು ಅವುಗಳಲ್ಲಿ ಸಾಧನೆಮಾಡುವಾಗ ಅಂಶತೋಬಾಧವು ಬಾಧಕವಾಗುವುದಿಲ್ಲ. ಆದರಿಂದ ಬೇರೆ ದೋಷವನ್ನು ಹೇಳಬೇಕು. ಅದು ಹೀಗೆ-ಪರಮತದಲ್ಲಿ ಅಂದರೆ ದ್ವೈತಮತದಲ್ಲಿ ಅಜ್ಞಾನವು ಭ್ರಮದ ಪ್ರಾಗಭಾವ ರೂಪವಾಗಿದೆ. ಸತ್ಯವಾಗಿದೆ. ಅದರ ಕಾರ್ಯಗಳಾದ ಭ್ರಮ ಇಚ್ಛಾ ಪ್ರವೃತ್ತಿಗಳು 'ಇಷ್ಟರವರೆಗೆ ನನ್ನಲ್ಲಿ ಇದ್ದು'ವೆಂದು ಸತ್ಯತ್ವೇನ ಅನುಭವಸಿದ್ಧವಾಗಿವೆ. ಹೀಗಾಗಿ ಅಜ್ಞಾನ ತತ್ಕಾರ್ಯ ಅನ್ಯತರತ್ವವನ್ನು ಸಾಧನೆ ಮಾಡಿದರೆ ಅರ್ಥಾಂತರತ್ವ.

'ಅನಿರ್ವಚನೀಯ ಅವಿದ್ಯಾತತ್ಕಾರ್ಯರೂಪ ರೂಪ್ಯಾದಿ ದೃಷ್ಟಾಂತಬಲದಿಂದ ಈ ಅನುಮಾನವು ಮಿಥ್ಯಾತ್ವದಲ್ಲಿ ಪರ್ಯವಸಾನ ಹೊಂದುತ್ತದೆ. ಆದರಿಂದ ಅರ್ಥಾಂತರತ್ವವಿಲ್ಲ'— ಎಂದರೆ ಇನ್ನೊಂದು ದೋಷವನ್ನು ಹೇಳಬಹುದು. 'ದೃಷ್ಟಾಂತವಾದ ಶುಕ್ತಿರೂಪ್ಯಾದಿಯು ಅನಿರ್ವಾಚ್ಯಾವಿದ್ಯಾಕಾರ್ಯ ವೆಂದು ಪ್ರತಿವಾದಿಯಾದ ದ್ವೈತಿಯ ಮತದಲ್ಲಿ ಒಪ್ಪಿಲ್ಲವಾದ್ದರಿಂದ ಅಸತ್ತೆಂದೇ ಅವನು ಒಪ್ಪಿರುವುದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದೋಷ ಬರುತ್ತದೆ' ಎಂದು.

❖❖❖

तथापि मिथ्याशब्दोऽनिर्वाच्यवचन इति पञ्चपादिकारीत्या सदसत्त्वानधिकरणत्वरूपानिर्वाच्यत्वं मिथ्यात्वम् ।

**तत्प्रसिद्धिश्च ख्यातिवादे वक्ष्यते ।।**

नन्वनिर्वचनीयत्वमप्रसिद्धमित्युक्तमित्यत आह **तत्प्रसिद्धिश्चेति ।**

## 07. ಪಂಚಮಿಥ್ಯಾತ್ವನಿರುಕ್ತಿಗಳು – ಪ್ರಥಮ ಮಿಥ್ಯಾತ್ವನಿರುಕ್ತಿ

**ತಥಾಪಿ 'ಮಿಥ್ಯಾಶಬ್ದೋಽನಿರ್ವಾಚ್ಯ ವಚನಃ' ಇತಿ ಪಂಚಪಾದಿಕಾ ರೀತ್ಯಾ ಸದಸತ್ತ್ವಾನಧಿಕರಣತ್ವರೂಪ ಅನಿರ್ವಾಚ್ಯತ್ವಂ ಮಿಥ್ಯಾತ್ವಂ।**

**ತತ್ಪ್ರಸಿದ್ಧಿಶ್ಚ ಖ್ಯಾತಿವಾದೇ ವಕ್ಷ್ಯತೇ ।**

'ಮಿಥ್ಯಾತ್ವಂ ಚ ಯದ್ಯಪಿ ನಾತ್ಯಂತಾಸತ್ತ್ವಂ' ಎಂದು 'ಯದ್ಯಪಿ' ಶಬ್ದದಿಂದ ಪ್ರಾರಂಭಿಸಿದ ಆಶಂಕೆಗೆ ಈಗ 'ತಥಾಪಿ' ಎಂದು ಮುಂತಾಗಿ ಸಮಾಧಾನ.

ಯದ್ಯಪಿ ಹಿಂದೆ ಮಿಥ್ಯಾತ್ವಕ್ಕೆ ನೀಡಿದ ನಿರ್ವಚನ ಯಾವುದೂ ತೃಪ್ತಿಕರವಾಗಿಲ್ಲ. ಆದರೂ ಇದೀಗ ಐದು ಬಗೆಯಿಂದ ಬೇರೆ ತೃಪ್ತಿಕರವಾದ ನಿರ್ವಚನಗಳನ್ನು ನೀಡುತ್ತೇವೆ.

ಅವುಗಳಲ್ಲಿ ಮೊದಲನೆ ನಿರ್ವಚನ– 'ಮಿಥ್ಯಾ'ಶಬ್ದವು ಅನಿರ್ವಚನೀಯವನ್ನು ಹೇಳುತ್ತದೆ' ಎಂದು 'ಪಂಚಪಾದಿಕಾ' ಎಂಬ ಬ್ರಹ್ಮಸೂತ್ರಶಾಂಕರಭಾಷ್ಯಟೀಕೆಯಲ್ಲಿ ಹೇಳಿದೆ. ಆ ರೀತಿಯಿಂದ ನಿರ್ವಚನ ಮಾಡುವುದಾದರೆ **'ಸದಸತ್ತ್ವ ಅನಧಿಕರಣತ್ವರೂಪವಾದ ಅನಿರ್ವಾಚ್ಯತ್ವವು ಮಿಥ್ಯಾತ್ವ'** ಎನ್ನುತ್ತೇವೆ.

ಯದ್ಯಪಿ 'ನಾಪಿ ಅನಿರ್ವಾಚ್ಯತ್ವಂ, ಅಪ್ರಸಿದ್ಧೇಃ।' 'ಅನಿರ್ವಾಚ್ಯತ್ವವೆಂದು ಮಿಥ್ಯಾತ್ವ ನಿರ್ವಚನವೂ ಯುಕ್ತವಲ್ಲ, ಮಿಥ್ಯಾತ್ವಕ್ಕೆ ದೃಷ್ಟಾಂತವಾದ ಶುಕ್ತಿರಜತದಲ್ಲಿಯೇ ಈ ಮಿಥ್ಯಾತ್ವ ಲಕ್ಷಣ ಬರುವುದಿಲ್ಲ. ಶುಕ್ತಿರಜತವು ತಾರ್ಕಿಕರೀತಿಯಿಂದ ಸತ್ಯವೆ. ತತ್ವವಾದಿರೀತಿಯಿಂದ ಅಸತ್ತೇ. ಹೀಗಾಗಿ ಸದಸದ್ ವಿಲಕ್ಷಣವೆಂಬ ಅನಿರ್ವಾಚ್ಯ ಪದಾರ್ಥ ಯಾರ ಮತದಲ್ಲಿಯೂ ಇಲ್ಲ, ಅದರಿಂದ ಅಪ್ರಸಿದ್ಧ' ಎಂದು ಹಿಂದೆ ನಾವೇ ಹೇಳಿದ್ದೇವೆ. ಆದರೂ ಅದಕ್ಕೆ ಸಮಾಧಾನವನ್ನು ಮುಂದೆ ಖ್ಯಾತಿವಾದದಲ್ಲಿ ನಾವೇ ಹೇಳುತ್ತೇವೆ— 'ಸತ್ತ್ವಂ ಅಸತ್ತ್ವಾತ್ಯಂತಾಭಾವ ಸಮಾನಾಧಿಕರಣ ಅತ್ಯಂತಾಭಾವಪ್ರತಿಯೋಗಿ, ವ್ಯತಿರೇಕಿ ಧರ್ಮತ್ವಾತ್, ಗೋತ್ವವತ್' ಎಂದು ಮುಂತಾಗಿ ಸತ್ತ್ವಾನಧಿಕರಣತ್ವ ಅಸತ್ತ್ವಾನಧಿಕರಣತ್ವದ್ವಯ ರೂಪ ಅನಿರ್ವಾಚ್ಯತ್ವವನ್ನು ಸಾಮಾನ್ಯತಃ ಪ್ರಸಿದ್ಧ ಎಂದು ಸಾಧನೆ ಮಾಡುತ್ತೇವೆ.

'ಸದಸತ್ತ್ವಾನಧಿಕರಣತ್ವಂ' ಎಂಬಲ್ಲಿ 'ಸತ್' ಶಬ್ದ 'ಸತ್ತ್ವ' ಪರ. 'ಸತ್ತ್ವವಿಶಿಷ್ಟಂ ಅಸತ್ತ್ವಂ' ಸತ್ತ್ವಾಸತ್ತ್ವಂ ಎಂದು ಮಧ್ಯಮ ಪದಲೋಪಿ ಕರ್ಮಧಾರಯ. 'ಸದಸತ್ತ್ವಸ್ಯ ಅನಧಿಕರಣಂ ತಸ್ಯಭಾವಃ' ಎಂದು 'ಸದಸತ್ತ್ವಾನಧಿಕರಣತ್ವಂ' ಎಂಬ ಶಬ್ದವ್ಯುತ್ಪತ್ತಿಯಿಂದ ಮೊದಲನೆ ಅನಿರ್ವಾಚ್ಯತ್ವ ನಿರ್ವಚನ ಲಭ್ಯವಾಗುವುದು. 'ಸತ್ತ್ವವಿಶಿಷ್ಟವಾದ ಅಸತ್ತ್ವಕ್ಕೆ ಅನಧಿಕರಣವು ಪ್ರಪಂಚ' ಎಂದು ಹೇಳಿದಂತಾಗುವುದು.

ತತ್ತ್ವವಾದಿಯು ಸತ್ತ್ವವಿಶಿಷ್ಟವಾದ ಅಸತ್ತ್ವವನ್ನು ಎಲ್ಲಿಯೂ ಒಪ್ಪದಿರುವುದರಿಂದ, ಅದರ ಅಭಾವ ಅವನಿಗೆ ಸಿದ್ಧವಾಗಿರುವುದರಿಂದ, ಸಿದ್ಧಸಾಧನತ್ವದೋಷ ಇಲ್ಲಿ ಸ್ಪಷ್ಟವೆ ಇದೆ. ಅದಕ್ಕೆ 'ಸಚ್ಚ ಅಸಚ್ಚ ಸದಸತೀ ತಯೋರ್ಭಾವಃ ಸದಸತ್ತ್ವಂ। ತಸ್ಯ ಅನಧಿಕರಣಂ ಸದಸತ್ತ್ವಾನಧಿಕರಣಂ' ಎಂದು ವಿಗ್ರಹ ಮಾಡಬೇಕು. ದ್ವಂದ್ವಾಂತದಲ್ಲಿ ಬರುವ ತ್ವ ಪ್ರತ್ಯಯ ಮತ್ತು ಅನಧಿಕರಣ ಶಬ್ದಗಳು ಪ್ರತ್ಯೇಕವಾಗಿ ಸತ್ ಅಸತ್ ಶಬ್ದಗಳೊಂದಿಗೆ ಕೂಡುವುದರಿಂದ ಸತ್ತ್ವಾನಧಿಕರಣತ್ವ ಅಸತ್ತ್ವಾನಧಿಕರಣತ್ವಗಳು, ಅಂದರೆ ಸತ್ತ್ವಾಭಾವ ಅಸತ್ತ್ವಾಭಾವಗಳು ಎರಡು ಲಭ್ಯವಾಗುವುವು. ಇವು ಪ್ರತ್ಯೇಕವಾಗಿ ಮಿಥ್ಯಾತ್ವವೆನಿಸುವುವು ಎಂದು ಎರಡನೆ ಪಕ್ಷದ ಅಭಿಪ್ರಾಯ. ಮೂರನೆಪಕ್ಷದಲ್ಲಿ ಅವು ವಿಶೇಷಣ ವಿಶೇಷ್ಯಭಾವದಿಂದ ಸೇರಿ ಒಂದಾಗಿ ಮಿಥ್ಯಾತ್ವವೆನಿಸುವುದು.

'ವ್ಯಾಪ್ತಿವಿಶಿಷ್ಟಪಕ್ಷಧರ್ಮತಾ' ಎಂಬಲ್ಲಿ 'ವ್ಯಾಪ್ತಿವಿಶಿಷ್ಟಃ ಪಕ್ಷಧರ್ಮಃ ತಸ್ಯಭಾವಃ' ಎನ್ನುವಂತೆ 'ಸಚ್ಚ ತತ್ ಅಸಚ್ಚ ತಸ್ಯಭಾವಃ' ಎಂದು ಕರ್ಮಧಾರಯೋತ್ತರಭಾವ ಪ್ರತ್ಯಯದಿಂದ ಪದಾರ್ಥತಾವಚ್ಛೇದಕಗಳಾದ ಸತ್ತ್ವ ಅಸತ್ತ್ವಗಳ ಸಾಮಾನಾಧಿಕರಣ್ಯ ಲಬ್ಧವಾಗುವುದು ಎಂದೂ ಮೊದಲನೆ ಪಕ್ಷದಲ್ಲಿ ವ್ಯುತ್ಪತ್ತಿ ಎನ್ನಬಹುದು. ಮೂರನೆ ಪಕ್ಷದಲ್ಲಿ ದ್ವಂದ್ವ ಸಮಾಸದಿಂದ ಲಭ್ಯವಾಗುವ ಸತ್ತ್ವಾನಧಿಕರಣತ್ವ ಅಸತ್ತ್ವಾನಧಿಕರಣತ್ವಗಳು ಏಕಪದೋಪಾತ್ತವಾದ್ದರಿಂದ ವ್ಯುತ್ಪತ್ತಿವೈಚಿತ್ರ್ಯದಿಂದ ಮಾಧುರೀವ್ಯಾಖ್ಯಾನ ಹೇಳುವಂತೆ ವಿಶೇಷಣ ವಿಶೇಷ್ಯಭಾವದಿಂದ ಮಿಲಿತವಾಗಿ ಮಿಥ್ಯಾತ್ವವೆನಿಸುವುವು. ಅಥವಾ ತರಂಗಿಣಿ ವ್ಯಾಖ್ಯಾನದಲ್ಲಿ ಹೇಳುವಂತೆ 'ಸತ್' ಎಂದರೆ ಸತ್ತ್ವ. 'ಸತ್ತ್ವಾನಧಿಕರಣತ್ವ ವಿಶಿಷ್ಟಂ ಅಸತ್ತ್ವಾನಧಿಕರಣತ್ವಂ' ಎಂದು ಮಧ್ಯಮಪದಲೋಪಿ ಕರ್ಮಧಾರಯ ಸಮಾಸವನ್ನೇ ಮಾಡಿದರೆ 'ಸತ್ತ್ವಾನಧಿಕರಣತ್ವ ವಿಶಿಷ್ಟಾಸತ್ತ್ವಾನಧಿಕರಣತ್ವ'ರೂಪ ಮಿಥ್ಯಾತ್ವವು ಲಭಿಸುವುದು. ಪ್ರತ್ಯೇಕತ್ವಪಕ್ಷದಲ್ಲಿ ತತ್ತ್ವವಾದಿಯು ಪ್ರಪಂಚದಲ್ಲಿ ಅಸತ್ತ್ವಾಭಾವವನ್ನು ಅಂಗೀಕರಿಸಿರುವುದರಿಂದ ಅಂಶೇ ಸಿದ್ಧಸಾಧನತ್ವ ದೋಷ. ವಿಶಿಷ್ಟತ್ವಪಕ್ಷದಲ್ಲಿ ಸತ್ತ್ವಾಸತ್ತ್ವ ಅನಧಿಕರಣತ್ವಗಳು ಪರಸ್ಪರ ವಿರುದ್ಧವಾದ್ದರಿಂದ ಅವುಗಳ ಅನಧಿಕರಣತ್ವಗಳನ್ನು ಏಕತ್ರ ವಿಶಿಷ್ಟರೂಪದಿಂದ ಸಾಧನೆ ಮಾಡಿದರೆ ವ್ಯಾಹತಿ ಬರುವುದರಿಂದ ವಿಶಿಷ್ಟವು ಅಪ್ರಸಿದ್ಧ. ಇದಕ್ಕೆ ಸಮಾಧಾನವನ್ನು ಖ್ಯಾತಿವಾದದಲ್ಲಿ ಹೇಳುತ್ತೇವೆ.

❖❖❖

**यद्वा बाध्यत्वमनिर्वाच्यत्वम् । तच्च शुक्तिरूप्यादिरेव पारमार्थिकत्वाकारेण त्रैकालिकनिषेधप्रतियोगीति मते प्रतिपन्नोपाधौ त्रैकालिकनिषेधप्रतियोगित्वम् ।**

**उक्तं हि विवरणे प्रतिपन्नोपाधावभावप्रतियोगित्वलक्षणस्य मिथ्यात्वस्येति ।**

**उक्तं च वार्तिके—**

**तत्त्वमस्यादिवाक्यार्थसम्यग्धीजन्ममात्रतः ।**

**अविद्या सह कार्येण नासीदस्ति भविष्यतीति ।**

**प्रतिपन्नत्वं च न प्रमितत्वं येन विरोधः । नापि भ्रान्तिप्रतिपन्नत्वम् । येन सिद्धसाधनम् । किन्तु प्रतीतत्वमात्रम् । सर्वस्मिंश्च प्रतिपन्नोपाधौ त्रैकालिकनिषेधप्रतियोगित्वं विवक्षितम् । सत्त्वपक्षे रजतत्वं प्रतिपन्नोपाधौ शुक्तौ निषिध्यमानमपि रजते न निषिध्यत इति न सिद्धसाधनम् ।**

आपणस्थरूप्यस्यैव तत्प्रतियोगित्वादित्येतदुद्धरति **शुक्तिरूप्यादिरेवेति** । त्रैकालिकत्वांशे संवादमाह **उक्तं चेति** । विरोधः प्रतिज्ञाविरोधः । **येनेति** । तदभावाभाववति तदभावसाधनादित्यर्थः । **सर्वस्मिंश्चेति** । यथा चैतत्तथोक्तं विप्रतिपत्तौ ।

❖❖❖

## ದ್ವಿತೀಯ ಮಿಥ್ಯಾತ್ವನಿರುಕ್ತಿ

**ಯದ್ವಾ ಬಾಧ್ಯತ್ವಂ ಅನಿರ್ವಾಚ್ಯತ್ವಂ। ತಚ್ಚ 'ಶುಕ್ತಿರೂಪ್ಯಾದಿರೇವ ಪಾರಮಾರ್ಥಿಕತ್ವಾಕಾರೇಣ ತ್ರೈಕಾಲಿಕ ನಿಷೇಧ ಪ್ರತಿಯೋಗೀ' ಇತಿ ಮತೇ ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವಂ ।**

ಅಥವಾ ಬಾಧ್ಯತ್ವವೇ ಅನಿರ್ವಾಚ್ಯತ್ವ. ಆಭಾಸಸ್ಯ ಪ್ರಸಕ್ತ್ಯಾ ಅನಾಭಾಸ ಪ್ರತಿಷೇಧವೆನ್ನುವ ಮತದಲ್ಲಿ 'ನೇದಂ ರಜತಂ' ಎಂಬಲ್ಲಿ ಪ್ರಾತಿಭಾಸಿಕ ರೂಪ್ಯ ಪ್ರಸಕ್ತಿಯಿಂದ ಆಪಣಸ್ಥ ಸತ್ಯರೂಪ್ಯವೇ ನಿಷೇಧ್ಯವಾಗಿರುವುದರಿಂದ ಶುಕ್ತಿರೂಪ್ಯದಲ್ಲಿ ಮಿಥ್ಯಾತ್ವ ಲಕ್ಷಣ ಬರುವುದಿಲ್ಲವೆಂದು ಅಸಂಭವದೋಷ ಹಿಂದೆ ಉಕ್ತವಾಗಿದೆ. ಇದೀಗ ಶುಕ್ತಿರೂಪ್ಯದಲ್ಲಿ ಅಸದ್ ವಿಲಕ್ಷಣಸ್ವರೂಪವನ್ನು ಹಾಗೇ ಉಳಿಸಿಕೊಂಡು ಪಾರಮಾರ್ಥಿಕತ್ವೇನ ತ್ರೈಕಾಲಿಕ ನಿಷೇಧವನ್ನೇ ಬಾಧಕಜ್ಞಾನವು ಮಾಡುತ್ತದೆ ಎಂದು ಮತವಿದೆ. ಆದರಿಂದ ಅಸಂಭವದೋಷವಿಲ್ಲ.

**ಈ ಮತದಲ್ಲಿ ಪ್ರತಿಪನ್ನವಾದ ಉಪಾಧಿಯಲ್ಲಿ ತ್ರೈಕಾಲಿಕ ನಿಷೇಧಕ್ಕೆ ಪ್ರತಿಯೋಗಿ ಯಾಗುವುದೇ ಬಾಧ್ಯತ್ವ.** ಅದುವೇ ಅನಿರ್ವಾಚ್ಯತ್ವ. ಅಂದರೆ, ತಾರ್ಕಿಕರು ನಿತ್ಯಸಂಬಂಧವನ್ನು 'ಸಮವಾಯ' ಎಂಬ

ಪಾರಿಭಾಷಿಕ ಶಬ್ದದಿಂದ ಕರೆಯುವಂತೆ ಅದ್ವೈತಿಗಳು ಬಾಧ್ಯತ್ವವನ್ನು 'ಅನಿರ್ವಾಚ್ಯತ್ವ' ಎಂಬ ಪಾರಿಭಾಷಿಕ ಶಬ್ದದಿಂದ ಕರೆಯುತ್ತಾರೆ.

ಯದ್ಯಪಿ 'ನೇದಂ ರಜತಂ' ಎಂಬ ಬಾಧಕ ಪ್ರತ್ಯಕ್ಷವು ಪ್ರತಿಪನ್ನೋಪಾಧಿಯಲ್ಲಿ ಸಂಯೋಗ ತದಭಾವಗಳಂತೆ ರಜತ ತದಭಾವಗಳನ್ನು ತಿಳಿಸುತ್ತದೆ ಹೊರತು ರಜತ ಮಿಥ್ಯಾತ್ವವನ್ನು ಅದು ತಿಳಿಸುತ್ತಿಲ್ಲ. ತಿಳಿಸುತ್ತದೆ ಎಂದರೆ ಸಂಯೋಗ ಮಿಥ್ಯಾತ್ವವನ್ನು ಸಂಯೋಗಾಭಾವಪ್ರತ್ಯಕ್ಷವು ತಿಳಿಸುತ್ತದೆ ಎನ್ನಬೇಕಾದೀತು. ಸಂಯೋಗಾದಿಗಳಲ್ಲಿ ಅತಿವ್ಯಾಪ್ತಿ ಬಂದೀತು. ಆದರೆ ನೇದಂ ರಜತಂ ಎಂಬ ಬಾಧಕ ಪ್ರತ್ಯಕ್ಷವು ಪ್ರತಿಪನ್ನೋಪಾಧೌ ಅಭಾವಪ್ರತಿಯೋಗಿತ್ವವನ್ನು ತಿಳಿಸುತ್ತದೆ ಎಂದು ಒಪ್ಪಬೇಕು. ಇದುವೆ ಮಿಥ್ಯಾತ್ವ. ಆದರಿಂದಲೇ 'ನೇದಂ ರಜತಂ' ಎಂಬ ಬಾಧ ಬಂದಾಗ 'ಮಿಥ್ಯೈವ ರಜತಂ ಪ್ರತ್ಯಭಾತ್' 'ಮಿಥ್ಯಾರಜತವೇ ನನಗೆ ಕಾಣಿಸಿಕೊಂಡಿತು' ಎಂದು ಮಿಥ್ಯಾಶಬ್ದದಿಂದ ಪರಾಮರ್ಶ ಮಾಡುವುದು ಕಂಡಿದೆ.

ಇದು ಪಂಚಪಾದಿಕಾ ವ್ಯಾಖ್ಯಾನವಾದ ವಿವರಣಗ್ರಂಥದಲ್ಲಿ ಉಕ್ತವಾಗಿದೆ—

**ಉಕ್ತಂ ಹಿ ವಿವರಣೇ—**

**'ಪ್ರತಿಪನ್ನೋಪಾಧೌ ಅಭಾವ ಪ್ರತಿಯೋಗಿತ್ವಲಕ್ಷಣಸ್ಯ ಮಿಥ್ಯಾತ್ವಸ್ಯ' ಇತಿ ।**

ಪಂಚಪಾದಿಕಾ ವಿವರಣದಲ್ಲಿ ಹೇಳಿದೆ— 'ಪ್ರತಿಯೋಗ್ಯಾಧಾರತ್ವೇನ ಪ್ರತಿಪನ್ನವಾದ ಅಧಿಕರಣದಲ್ಲಿ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವರೂಪವಾದ ಮಿಥ್ಯಾತ್ವವು ಶುಕ್ತಿರೂಪ್ಯದಲ್ಲಿರುವುದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವಿಲ್ಲ' ಎಂದು.

**ಉಕ್ತಂ ಚ ವಾರ್ತಿಕೇ— ತತ್ವಮಸ್ಯಾದಿ ವಾಕ್ಯಾರ್ಥ ಸಮ್ಯಗ್‌ಧೀ ಜನ್ಮ ಮಾತ್ರತಃ ।**
**ಅವಿದ್ಯಾ ಸಹ ಕಾರ್ಯೇಣ ನಾಸೀದ್ ಅಸ್ತಿ ಭವಿಷ್ಯತಿ ॥ ಇತಿ ॥**

ತ್ರೈಕಾಲಿಕ ನಿಷೇಧಕ್ಕೆ ಪ್ರತಿಯೋಗಿಯಾಗುವುದೇ ಮಿಥ್ಯಾತ್ವವೆನ್ನುವಲ್ಲಿ ಸುರೇಶ್ವರ ವಾರ್ತಿಕದ ಸಮ್ಮತಿ ಇದೆ— 'ತತ್ವಮಸಿ' ಮುಂತಾದ ವಾಕ್ಯಾರ್ಥದ ಯಥಾರ್ಥಜ್ಞಾನ ಮಾತ್ರದಿಂದಲೆ ಅವಿದ್ಯೆಯು ತನ್ನ ಕಾರ್ಯಗಳಿಂದ ಸಮೇತವಾಗಿ ತ್ರೈಕಾಲಿಕ ನಿಷೇಧಕ್ಕೆ ಪ್ರತಿಯೋಗಿಯಾಗುವುದು' ಎಂದು. ಇಲ್ಲಿ ಯಥಾರ್ಥಜ್ಞಾನ 'ಮಾತ್ರ'ದಿಂದ ಎಂದರೆ ಜ್ಞಾನವು ಅಜ್ಞಾನ ನಿವೃತ್ತಿಮಾಡುವಲ್ಲಿ ಅದಕ್ಕೆ ಬೇರೆ ಯಾವುದರ ಸಹಕಾರವೂ ಬೇಕಿಲ್ಲ. ಸ್ವತಃ ಆ ಕೆಲಸವನ್ನು ಮಾಡಿಬಿಡುತ್ತದೆ ಎಂದರ್ಥ.

'ನಾಸೀತ್' ಎಂಬಲ್ಲಿ 'ನ' ಎಂಬುದು ನಿವೃತ್ತಿಪರವಲ್ಲ. ಮುಂದೆ ಹೇಳುವ ಮತಾಂತರದಲ್ಲಿ ನಿವೃತ್ತಿಪರ. ಪ್ರಕೃತದಲ್ಲಿ ಅದು ಸಂಸರ್ಗಾಭಾವ ಮಾತ್ರ ಪರ. ಸಂಸರ್ಗಾಭಾವವು ತ್ರೈಕಾಲಿಕವೆಂದು ವಿವಕ್ಷಿತವಾಗಿದೆ. ವಾರ್ತಿಕದಲ್ಲಿ 'ಆಸೀತ್' ಶಬ್ದವು ಸಂಸರ್ಗಾಭಾವಕ್ಕೆ ಭೂತಕಾಲ ಸಂಬಂಧವನ್ನೂ 'ಅಸ್ತಿ' ಶಬ್ದವು ವರ್ತಮಾನಕಾಲ ಸಂಬಂಧವನ್ನೂ 'ಭವಿಷ್ಯತಿ' ಶಬ್ದವು ಭವಿಷ್ಯಕಾಲ ಸಂಬಂಧವನ್ನೂ

ತಿಳಿಸುತ್ತದೆ. ಆದರಿಂದ ತ್ರೈಕಾಲಿಕ ನಿಷೇಧಸಿದ್ಧಿ. ಅದರಿಂದ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವರೂಪ ಮಿಥ್ಯಾತ್ವಕ್ಕೆ ಸಮ್ಮತಿತ್ವೇನ ವಾರ್ತಿಕ ವಚನವನ್ನು ಉದಾಹರಿಸಿದ್ದಾರೆ.

**ಪ್ರತಿಪನ್ನತ್ವಂ ಚ ನ ಪ್ರಮಿತತ್ವಂ, ಯೇನ ವಿರೋಧಃ । ನಾಪಿ ಭ್ರಾಂತಿ ಪ್ರತಿಪನ್ನತ್ವಂ, ಯೇನ ಸಿದ್ಧ ಸಾಧನಂ । ಕಿಂತು ಪ್ರತೀತತ್ವಮಾತ್ರಂ ।**

ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವಂ ಎಂಬ ಮಿಥ್ಯಾತ್ವ ಲಕ್ಷಣದಲ್ಲಿ 'ಪ್ರತಿಪನ್ನೋಪಾಧಿ' ಎಂದರೆ ಪ್ರತಿಯೋಗ್ಯಾಧಾರತ್ವೇನ ಪ್ರತಿಪನ್ನವಾದ ಅಧಿಕರಣ. ರಜತಾಭಾವ ಪ್ರತಿಯೋಗಿಯಾದ ರಜತಕ್ಕೆ 'ಇದಂ ರಜತಂ' ಎಂಬ ಭ್ರಮದಲ್ಲಿ ಶುಕ್ತಿಯು ಆಧಾರತ್ವೇನ ಪ್ರತಿಪನ್ನವಾಗಿದೆ, ಜ್ಞಾತವಾಗಿದೆ. ಆ ಅಧಿಕರಣದಲ್ಲಿಯೇ 'ನೇದಂ ರಜತಂ' ಎಂಬ ಬಾಧಕ ಪ್ರತ್ಯಕ್ಷದಿಂದ ರಜತಾಭಾವ ಸಿದ್ಧವಾಗುತ್ತದೆ.

ಇಲ್ಲಿ ಪ್ರತಿಪನ್ನತ್ವವೆಂದರೆ ಜ್ಞಾತತ್ವ ಸಾಮಾನ್ಯವು ವಿವಕ್ಷಿತ. ವಿಶೇಷವಾಗಿ ಪ್ರಮಿತಿ ಪ್ರತಿಪನ್ನತ್ವವಾಗಲಿ, ಭ್ರಾಂತಿ ಪ್ರತಿಪನ್ನತ್ವವಾಗಲಿ ವಿವಕ್ಷಿತವಲ್ಲ. ಏಕೆಂದರೆ ಪ್ರಮಿತಿ ಪ್ರತಿಪನ್ನತ್ವವಿಟ್ಟುಕೊಂಡರೆ ಪ್ರತಿಯೋಗ್ಯಾಧಾರತ್ವೇನ ಪ್ರಮಿತವಾದ ಅಧಿಕರಣದಲ್ಲಿ ಅಭಾವವಿದೆ ಎಂದರೆ ಪ್ರತಿಜ್ಞಾ ವಿರೋಧ ಬರುತ್ತದೆ. ಪ್ರತಿಯೋಗಿ ಅಭಾವಗಳು ಒಂದು ಅಧಿಕರಣದಲ್ಲಿ ವಿರುದ್ಧ. ಆದರಿಂದ ತದಭಾವಾಭಾವವಿರುವಲ್ಲಿ ತದಭಾವ ಸಾಧನೆ ಮಾಡುವಾಗ ಬಾಧ ದೋಷವಿರುತ್ತದೆ.

ಭ್ರಾಂತಿಪ್ರತಿಪನ್ನತ್ವವಿಟ್ಟುಕೊಂಡರೆ ಸತ್ಯವಾದ ಘಟಾದಿಗಳಿಗೆ ಭ್ರಾಂತಿಪ್ರತಿಪನ್ನವಾದ ಪರ್ವತರೂಪ ಅಧಿಕರಣದಲ್ಲಿ ಅಭಾವ ಸಿದ್ಧವೇ ಇರುವುದರಿಂದ ಇಂಥ ಮಿಥ್ಯಾತ್ವಸಾಧನೆ ಮಾಡಲು ಹೊರಟರೆ ಅದು ಸಿದ್ಧಸಾಧನವಾಗುವುದು.

ಸಾಮಾನ್ಯತಃ ಅಧಿಕರಣತ್ವೇನ ಪ್ರತಿಪನ್ನತ್ವ ಜ್ಞಾತತ್ವವಿವಕ್ಷೆ ಮಾಡಿದಾಗ ಮಿಥ್ಯಾತ್ವಾನುಮಾನಕ್ಕೆ ಬಾಧವೂ ಇಲ್ಲ ಸಿದ್ಧಸಾಧನತ್ವವೂ ಇಲ್ಲ.

**ಸರ್ವಸ್ಮಿಂಶ್ಚ ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವಂ ವಿವಕ್ಷಿತಂ । ಸತ್ವಪಕ್ಷೇ ರಜತತ್ವಂ ಪ್ರತಿಪನ್ನೋಪಾಧೌ ಶುಕ್ತೌ ನಿಷಿಧ್ಯಮಾನಮಪಿ ರಜತೇ ನ ನಿಷಿಧ್ಯತೇ ಇತಿ ನ ಸಿದ್ಧಸಾಧನಂ ।**

ಭ್ರಾಂತಿಯಿಂದಾಗಲಿ ಪ್ರಮಿತಿಯಿಂದಾಗಲೀ ಪ್ರತಿಯೋಗ್ಯಾಧಾರತ್ವೇನ ಪ್ರತಿಪನ್ನವಾದ ಎಲ್ಲ ಅಧಿಕರಣಗಳಲ್ಲಿಯೂ ತ್ರೈಕಾಲಿಕ ನಿಷೇಧಕ್ಕೆ ಪ್ರತಿಯೋಗಿಯಾಗಬೇಕು. ಅದುವೇ ಮಿಥ್ಯಾತ್ವಲಕ್ಷಣ ವೆಂದು ವಿವಕ್ಷಿತವಾಗಿದೆ. ಆರೋಪ್ಯವಾದ ರಜತತ್ವಾದಿಗಳು ಅನ್ಯತ್ರ ಸತ್ಯವೇ ಎನ್ನುವ ಪಕ್ಷದಲ್ಲಿ ರಜತತ್ವವನ್ನು ಪ್ರತಿಪನ್ನೋಪಾಧಿಯಾದ ಶುಕ್ತಿಯಲ್ಲಿ ನಿಷೇಧಮಾಡುವುದು ಸಮ್ಮತವೇ ಆದರೂ ಸತ್ಯರಜತವೂ ಕೂಡ ಪ್ರತಿಪನ್ನೋಪಾಧಿಯಾಗಿದೆ, ಆದರಲ್ಲಿ ರಜತತ್ವ ನಿಷೇಧ ಮಾಡುವುದು ಸತ್ಯತ್ವಪಕ್ಷದಲ್ಲಿ ಸಮ್ಮತವಲ್ಲ. ಅದನ್ನು ನಾವು ಸಾಧನೆ ಮಾಡುವುದರಿಂದ ಸಿದ್ಧಸಾಧನತ್ವ ದೋಷವಿಲ್ಲ.

❖❖❖

**मतान्तरे तु बाध्यत्वं ज्ञानत्वेन ज्ञाननिवर्त्यत्वम् । उक्तं हि विवरणे । अज्ञानस्य स्वकार्येण वर्तमानेन प्रविलीनेन वा सह ज्ञानेन निवृत्तिर्बाध इति । अनुमितिं प्रति मनसो मनस्त्वेन हेतुत्वेऽपीन्द्रियत्वेनाहेतुत्ववत् पूर्वज्ञानादिकं प्रति उत्तरस्य ज्ञानेच्छादेरुत्तरात्मविशेषगुणत्वेन निवर्तकत्वेऽपि ज्ञानत्वेनानिवर्तकत्वात् ।।**

नन्वेकत्र धर्मिणि भावाभावौ विरुद्धावत आह **अनुमितिं प्रतीति** । तथा चावच्छेदकभेदेनाविरुद्धौ तावित्यर्थः । उत्तरेति । योग्योत्तरेत्यर्थः ।

❖❖❖

## ತೃತೀಯ ಮಿಥ್ಯಾತ್ವ ನಿರುಕ್ತಿ

**ಮತಾಂತರೇ ತು ಬಾಧ್ಯತ್ವಂ ಜ್ಞಾನತ್ವೇನ ಜ್ಞಾನನಿವರ್ತ್ಯತ್ವಂ ।**

**ಉಕ್ತಂ ಹಿ ವಿವರಣೇ— ಅಜ್ಞಾನಸ್ಯ ಸ್ವಕಾರ್ಯೇಣ ವರ್ತಮಾನೇನ ಪ್ರವಿಲೀನೇನ ವಾ ಸಹ ಜ್ಞಾನೇನ ನಿವೃತ್ತಿರ್ಬಾಧ ಇತಿ ।**

ಹಿಂದೆ ಹೇಳಿದ್ದು 'ನಾಸೀದಸ್ತಿ ಭವಿಷ್ಯತಿ' ಎಂಬಲ್ಲಿ ನಕಾರವು ಸಂಸರ್ಗಾಭಾವಪರ. ಬಾಧ್ಯತ್ವವು ತ್ರೈಕಾಲಿಕನಿಷೇಧಪ್ರತಿಯೋಗಿತ್ವರೂಪವಾಗಿದೆ ಎಂದು. ಇದೀಗ **ಬಾಧ್ಯತ್ವವು ಜ್ಞಾನತ್ವೇನ ಜ್ಞಾನಿವರ್ತ್ಯತ್ವರೂಪವಾಗಿದೆ** ಎನ್ನುವ ಮತಾಂತರ. ಇದೂ ವಿವರಣ ಗ್ರಂಥಕ್ಕೆ ಸಮ್ಮತವೆ. ಅಲ್ಲಿ ಹೇಳಿದೆ— ಅಜ್ಞಾನವು ವರ್ತಮಾನವಾದ ಅಥವಾ ನಷ್ಟವಾದ ಸ್ವಕಾರ್ಯದೊಂದಿಗೇ ಜ್ಞಾನದಿಂದ ನಿವೃತ್ತಿ ಹೊಂದುವುದು ಬಾಧ' ಎಂದು. ಇದು ತೃತೀಯ ಮಿಥ್ಯಾತ್ವ ಪರಿಷ್ಕಾರ.

ದ್ವಿತೀಯ ಮಿಥ್ಯಾತ್ವನಿರುಕ್ತಿ ಪ್ರಕಾರ ಪ್ರತಿಪನ್ನೋಪಾಧಿಯಲ್ಲಿ ತ್ರೈಕಾಲಿಕ ನಿಷೇಧವನ್ನು ತಾತ್ತ್ವಿಕವೆಂದರೆ ಅದ್ವೈತಹಾನಿ. ಸೋಪಾಧಿಕವಾದ ನಿಷೇಧವು ನಿರುಪಾಧಿಕ ಬ್ರಹ್ಮನಿಂದ ಅಭಿನ್ನವಾಗಲಾರದು. ನಿಷೇಧ ವ್ಯಾವಹಾರಿಕ ಎಂದರೆ ಅದಕ್ಕೆ ಪ್ರತಿಯೋಗಿಯಾದ ಪ್ರಪಂಚವು ಪಾರಮಾರ್ಥಿಕವಾಗಬೇಕಾದೀತು. ನಿಷೇಧವನ್ನು ಪ್ರಾತಿಭಾಸಿಕವೆಂದಿಟ್ಟುಕೊಂಡರೆ ಅಂಥ ನಿಷೇಧವು ಸತ್ಯತ್ವವಾದಿಗೆ ಇಷ್ಟವೇ ಆಗಿರುವುದರಿಂದ ಸಿದ್ಧಸಾಧನತ್ವದೋಷ. ಆಭಾಸಪ್ರಸಕ್ತಿಯಿಂದ ಅನಾಭಾಸ ನಿಷೇಧಮತದಲ್ಲಿ 'ನೇದಂ ರಜತಂ' ಎಂದು ಶುಕ್ತಿಯಲ್ಲಿ ಅಜ್ಞಾನದಿಂದ ಉತ್ಪನ್ನವಾದ ಪ್ರಾತಿಭಾಸಿಕರಜತವು ನಿಷಿದ್ಧವಾಗುವುದಿಲ್ಲ. ಅದರಲ್ಲಿ ನಿಷೇಧಪ್ರತಿಯೋಗಿತ್ವವೆಂಬ ಮಿಥ್ಯಾತ್ವ ಲಕ್ಷಣ ಬರುವುದಿಲ್ಲ. ಹೀಗಾಗಿ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯದೋಷ. ಆದಕ್ಕೆ ಈಗ ಮತಾಂತರದಲ್ಲಿ ಅಜ್ಞಾನಕ್ಕೆ ಮತ್ತು ಅದರ ಕಾರ್ಯಕ್ಕೆ ಅಧಿಷ್ಠಾನ ತತ್ತ್ವಜ್ಞಾನದಿಂದ ನಿವೃತ್ತಿಯಾಗುವುದೇ ಬಾಧ ಎನ್ನುತ್ತಾರೆ.

ಇಲ್ಲಿ ಅಜ್ಞಾನದ ಕಾರ್ಯವಾದ ಶುಕ್ತಿ ರಜತಾದಿಯು ವರ್ತಮಾನವಾಗಿದ್ದರೆ ಜ್ಞಾನದಿಂದ ನಿವೃತ್ತಿಯಾಗಬಹುದು. ನಾಶಹೊಂದಿದ್ದರೆ ಅದಕ್ಕೆ ಪುನಃ ನಿವೃತ್ತಿ ಹೇಗೆ ಸಾಧ್ಯ? ಎಂಬ ಪ್ರಶ್ನೆ ಬರುವುದು ಸಹಜ. 'ಪ್ರವಿಲೀನ'ವಾದ ಅಂದರೆ ನಾಶ ಹೊಂದಿರುವ ಅಜ್ಞಾನಕಾರ್ಯಕ್ಕೂ ಜ್ಞಾನದಿಂದ ನಿವೃತ್ತಿಯನ್ನು ಹೇಳುತ್ತಿದ್ದಾರೆ! ಇದು ಹೇಗೆ?' ಎಂದರೆ ಅದರ ಅಭಿಪ್ರಾಯ ಹೀಗೆ— ಘಟವು ದಂಡದಿಂದ ನಾಶಹೊಂದಿದರೂ ಅದರ ಉಪಾದಾನವಾದ ಮಣ್ಣು ಉಳಿಯುತ್ತದೆ, ನಾಶವಾಗುವುದಿಲ್ಲ. ಸತ್ಕಾರ್ಯವಾದದಲ್ಲಿ ಮಣ್ಣೇ ಘಟ. ಘಟ ನಾಶವಾದಾಗ ಮಣ್ಣು ಘಟರೂಪದಿಂದ ಇಲ್ಲದಿದ್ದರೂ ಮಣ್ಣಿನ ರೂಪದಿಂದ ಇದ್ದೇ ಇದೆ. ಮಣ್ಣು ಅಜ್ಞಾನ ಕಾರ್ಯವಾಗಿದ್ದು ಜ್ಞಾನದಿಂದ ನಾಶಹೊಂದುತ್ತದೆ. ದಂಡ ಪ್ರಹಾರವಾದಾಗ ಘಟರೂಪದಿಂದ ನಾಶಹೊಂದಿದ ಮಣ್ಣೇ ಜ್ಞಾನಬಂದಾಗ ಮಣ್ಣಿನರೂಪದಿಂದ ಪುನಃ ನಾಶಹೊಂದುತ್ತದೆ. ವಿರೋಧವಿಲ್ಲ. ಅದರಿಂದ 'ಪ್ರವಿಲೀನ'ವಾದ ಅಂದರೆ, ದಂಡಾದಿಕಾರಣದಿಂದ ಘಟಾದಿರೂಪ ವಿಲೀನವಾದಾಗ, ಮಣ್ಣಿನ ರೂಪದಲ್ಲಿರುವ ಆ ಅಜ್ಞಾನಕಾರ್ಯದೊಂದಿಗೆ ಅಜ್ಞಾನಕ್ಕೆ ಜ್ಞಾನದಿಂದ ನಿವೃತ್ತಿಯನ್ನು ಹೇಳುತ್ತಿದ್ದಾರೆ. ಅಜ್ಞಾನದ ವರ್ತಮಾನ ಕಾರ್ಯ ಮಣ್ಣು, ವಿಲೀನವಾದ ಕಾರ್ಯ ಘಟ. ಇವೆರಡೂ ಒಂದೇ ಆದ್ದರಿಂದ 'ಸಹ' ಯುಗಪತ್ ಜೊತೆಗೆ ಅದರೊಂದಿಗೇ ಒಮ್ಮೆಲೆ ಜ್ಞಾನದಿಂದ ಅಜ್ಞಾನಕ್ಕೆ ನಾಶವೇ ಬಾಧ.

**ಅನುಮಿತಿಂ ಪ್ರತಿ ಮನಸೋ ಮನಸ್ತ್ವೇನ ಹೇತುತ್ವೇಽಪಿ ಇಂದ್ರಿಯತ್ವೇನ ಅಹೇತುತ್ವವತ್, ಪೂರ್ವ ಜ್ಞಾನಾದಿಕಂ ಪ್ರತಿ ಉತ್ತರಸ್ಯ ಜ್ಞಾನೇಚ್ಛಾದೇಃ ಉತ್ತರಾತ್ಮವಿಶೇಷಗುಣತ್ವೇನ ನಿವರ್ತಕತ್ವೇಽಪಿ ಜ್ಞಾನತ್ವೇನ ಅನಿವರ್ತಕತ್ವಾತ್ ।**

ರಜತಜ್ಞಾನಕ್ಕೆ, ಶುಕ್ತಿಜ್ಞಾನದಿಂದ ನಿವೃತ್ತಿಯು ಬಾಧ. ಇಂಥ ಬಾಧವನ್ನು ಪ್ರಪಂಚದಲ್ಲಿ ಸಾಧನೆ ಮಾಡಿದರೆ ಪೂರ್ವಜ್ಞಾನೇಚ್ಛಾದಿಗಳಿಗೆ ಉತ್ತರಜ್ಞಾನೇಚ್ಛಾದಿಗಳಿಂದ ನಿವೃತ್ತಿ ಸ್ವಾಭಾವಿಕ ವೆಂದು ತಾರ್ಕಿಕರು ಹೇಳುವುದರಿಂದ ಜ್ಞಾನೇಚ್ಛಾದ್ಯಂಶದಲ್ಲಿ ಮಿಥ್ಯಾತ್ವಾನುಮಾನಕ್ಕೆ ಸಿದ್ಧಸಾಧನತಾ ದೋಷವಿದೆ. ಅದರ ಪರಿಹಾರಕ್ಕಾಗಿ 'ಜ್ಞಾನತ್ವೇನ ಜ್ಞಾನನಿವರ್ತ್ಯತ್ವ'ವೆಂದು ನಿವರ್ತಕತಾವಚ್ಛೇದಕ ವಾಗಿ ಜ್ಞಾನತ್ವವನ್ನು ಮಿಥ್ಯಾತ್ವ ಲಕ್ಷಣದಲ್ಲಿ ಸೇರಿಸಿದ್ದಾರೆ.

ಜ್ಞಾನೇಚ್ಛಾದಿಗಳಿಗೆ ಜ್ಞಾನೇಚ್ಛಾದಿಗಳು ನಿವರ್ತಕವಾಗುವುದು ಜ್ಞಾನತ್ವೇನ ಅಲ್ಲ, ಯೋಗ್ಯ ಉತ್ತರ ಆತ್ಮವಿಶೇಷಗುಣತ್ವೇನ ಅವು ನಿವರ್ತಕವಾಗುವುವು. ನಿವರ್ತಕತಾವಚ್ಛೇದಕವು ಯೋಗ್ಯ ಉತ್ತರ ಆತ್ಮವಿಶೇಷಗುಣತ್ವ. ಹೊರತು ಜ್ಞಾನತ್ವವಲ್ಲ. ಜ್ಞಾನತ್ವವು ನಿವರ್ತಕತಾಕ್ಕೆ ಅನ್ಯೂನ ಅನತಿರಿಕ್ತವಲ್ಲ. ನ್ಯೂನ ಅತಿರಿಕ್ತ ವೃತ್ತಿಯೇ ಆಗಿದೆ. ನಿವರ್ತಕವಾದ ಇಚ್ಛಾದಿಗಳಲ್ಲಿಲ್ಲವಾದ್ದರಿಂದ ನ್ಯೂನವೃತ್ತಿ. ಅನಿವರ್ತಕವಾದ ಪೂರ್ವಜ್ಞಾನದಲ್ಲಿ ಇದೆ, ಅದರಿಂದ ಅತಿರಿಕ್ತವೃತ್ತಿಯೂ ಆಯಿತು. ಯೋಗ್ಯ ಉತ್ತರ ಆತ್ಮವಿಶೇಷ ಗುಣತ್ವವು ಅನ್ಯೂನ ಅನತಿರಿಕ್ತ ವೃತ್ತಿಯಾಗಿದ್ದು ನಿವರ್ತಕತ್ವಕ್ಕೆ ಅವಚ್ಛೇದಕವಾಗಿದೆ.

ಆದರಿಂದ ಯೋಗ್ಯೋತ್ತರಾತ್ಮವಿಶೇಷ ಗುಣತ್ವೇನ ಉತ್ತರ ಜ್ಞಾನಕ್ಕೆ ಪೂರ್ವಜ್ಞಾನ ನಿವರ್ತಕತ್ವವಿದ್ದರೂ ಜ್ಞಾನತ್ವೇನ ಅದಕ್ಕೆ ಪೂರ್ವಜ್ಞಾನ ನಿವರ್ತಕತ್ವವಿಲ್ಲ.

ನಿವರ್ತಕತ್ವ ಅನಿವರ್ತಕತ್ವರೂಪ ಭಾವಾಭಾವಗಳಿಗೆ ಒಂದು ಅಧಿಕರಣದಲ್ಲಿ ಅವಚ್ಛೇದಕ ಭೇದದಿಂದ ವಿರೋಧ ಪರಿಹಾರ ಶಕ್ಯವಿದೆ. ಇದಕ್ಕೆ ಉದಾಹರಣೆ—ಅನುಮಿತಿಗೆ ಮನಸ್ಸು ಮನಸ್ತ್ವೇನ ಕಾರಣ. ಇಂದ್ರಿಯತ್ವೇನ ಕಾರಣವಾಗುವುದಿಲ್ಲ. ಇಂದ್ರಿಯತ್ವೇನ ಮನಇಂದ್ರಿಯದಿಂದ ಜನ್ಯವಾಗುವ ಜ್ಞಾನವು ಮಾನಸ ಪ್ರತ್ಯಕ್ಷವೆನಿಸುತ್ತದೆ. ಮನಸ್ತ್ವೇನ ಮನೋಜನ್ಯವಾದ ಜ್ಞಾನವು ಮಾತ್ರ ಅನುಮಿತಿ ಎನಿಸುವುದು ಎಂದು ತಾರ್ಕಿಕರ ಮಣಿಗ್ರಂಥ ಹೇಳುತ್ತದೆ. ಇಲ್ಲಿ ಮನಸಿಗೆ ಅನುಮಿತಿ ಕಾರಣತ್ವ ಅಕಾರಣತ್ವರೂಪ ಭಾವಾಭಾವಗಳು ಮನಸ್ತ್ವ ಇಂದ್ರಿಯತ್ವರೂಪ ಅವಚ್ಛೇದಕ ಭೇದದಿಂದ, ಏಕಾಧಿಕರಣದಲ್ಲಿ ಅವಿರುದ್ಧವಾಗಿವೆ. ಹಾಗೇ ಪ್ರಕೃತದಲ್ಲಿ ಉತ್ತರಜ್ಞಾನೇಚ್ಛಾದಿಗಳಿಗೆ ಪೂರ್ವಜ್ಞಾನ ನಿವರ್ತಕತ್ವ ಅನಿವರ್ತಕತ್ವಗಳು ಯೋಗ್ಯೋತ್ತರಾತ್ಮ ವಿಶೇಷಗುಣತ್ವ–ಜ್ಞಾನತ್ವರೂಪ ಅವಚ್ಛೇದಕಭೇದದಿಂದ ಏಕತ್ರ ಅವಿರುದ್ಧವಾಗಿವೆ. ಹೀಗಾಗಿ ಲಕ್ಷಣದಲ್ಲಿ 'ಜ್ಞಾನತ್ವೇನ' ಎಂದು ಸೇರಿಸದಿದ್ದರೆ ಪೂರ್ವಜ್ಞಾನದಲ್ಲಿ ಮಿಥ್ಯಾತ್ವಲಕ್ಷಣಕ್ಕೆ ಅತಿವ್ಯಾಪ್ತಿ. ಅನುಮಾನಕ್ಕೆ ಅಂಶೇಸಿದ್ಧಸಾಧನತ್ವ ಮತ್ತು ಅರ್ಥಾಂತರತ್ವ ದೋಷಗಳಿವೆ.

❖❖❖

अथवा चित्सुखरीत्या स्वसमानाधिकरणात्यन्ताभावप्रतियोगित्वं मिथ्यात्वम् । संयोगतदत्यन्ताभावयोरवच्छेदकभेदेन भिन्नाश्रितत्वस्यैवानुभवेन सत्त्वपक्षे सामानाधिकरण्याभावात् । शुक्तिरूप्यादेरपि पारमार्थिकत्वाकारेण स्वसमानाधिकरणात्यन्ताभावप्रतियोगित्वाच्च । नचाधिकरणशब्देन तात्त्विकाधिकरणोक्तौ समवायिनि संयोगिनि वा तत्त्वतस्तदधिकरणे तदत्यन्ताभावायोगेनासम्भवः । अधिकरणत्वेन प्रतीतत्व मात्रोक्तौ चान्यथाख्यातिपक्षे रजतत्वादेः स्वाधिकरणत्वेन प्रतीतशुक्त्यादावत्यन्ताभावस्य सत्त्वात्सिद्धसाधनमिति वाच्यम् । स्वात्यन्ताभावाधिकरण एव प्रतीयमानत्वस्य विवक्षितत्वात् । तत्पक्षे च रजतत्वादिकं स्वात्यन्ताभावानधिकरणे रजतेऽपि भाति ।।

यद्वाऽऽनन्दबोधोक्तरीत्या सद्विविक्तत्वं मिथ्यात्वम् । तच्च सद्रूपत्वाभावः । ब्रह्म च सत्तारहितमपि सामान्यमिव सद्रूपम् ।

नन्वेवमप्यव्याप्यवृत्तावंशतः सिद्धसाधनमत आह **संयोगेति**। अभावाधिकरणे प्रतियोगिनो विरुद्धत्वेन बाधादहं स्वर्गी स्यामित्यत्रेव मूले वृक्षः कपिसंयोगाभाववान् इति प्रतीतेर्मूलमात्रविषयकत्वमिति भावः। दृष्टान्तासिद्धिमुद्धरति **शुक्तिरूप्यादेरपीति**। **स्वात्यन्ताभावेति**। नचैवकारव्यावर्त्यस्वात्यन्ताभावानधिकरणाप्रसिद्धिरिति वाच्यम्। स्वाधिकरणत्वेन प्रतीयमानयावन्निष्टप्रतीतिविषयसंबन्धावच्छिन्नात्यन्ताभावप्रतीतिविषयत्वस्य विवक्षितत्वादिति भावः। सतोऽपीत्यनेनोक्तं दूषणं परिहरति **तच्चेति**। ननु सत्तात्यंताभावः। निर्धर्मकत्वेन ब्रह्मण्यपि तत्सत्त्वादिति।

❖❖❖

## ಚತುರ್ಥಮಿಥ್ಯಾತ್ವ ನಿರುಕ್ತಿ

**ಅಥವಾ ಚಿತ್ಸುಖ ರೀತ್ಯಾ ಸ್ವಸಮಾನಾಧಿಕರಣ ಅತ್ಯಂತಾಭಾವ ಪ್ರತಿಯೋಗಿತ್ವಂ ಮಿಥ್ಯಾತ್ವಂ। ಸಂಯೋಗ ತದತ್ಯಂತಾಭಾವಯೋಃ ಅವಚ್ಛೇದಕಭೇದೇನ ಭಿನ್ನಾಶ್ರಿತತ್ವಸ್ಯೈವ ಅನುಭವೇನ ಸತ್ವಪಕ್ಷೇ ಸಾಮಾನಾಧಿಕರಣ್ಯಾಭಾವಾತ್। ಶುಕ್ತಿರೂಪ್ಯಾದೇರಪಿ ಪಾರಮಾರ್ಥಿಕತ್ವಾಕಾರೇಣ ಸ್ವಸಮಾನಾಧಿಕರಣ ಅತ್ಯಂತಾವ ಪ್ರತಿಯೋಗಿತ್ವಾಚ್ಚ।**

ಶುಕ್ತಿರೂಪ್ಯವು ಅದ್ವೈತಮತದಲ್ಲಿ ಪ್ರಾತಿಭಾಸಿಕ, ಪ್ರತಿಭಾಸ ಸ್ವರೂಪ. ಶುಕ್ತಿಜ್ಞಾನದಿಂದ ರೂಪ್ಯಭ್ರಮವು ನಿವೃತ್ತವಾಗುವುದೆಂದು ಎಲ್ಲರೂ ಒಪ್ಪುತ್ತಾರೆ. ರೂಪ್ಯವೂ ಕೂಡ ರೂಪ್ಯ ಭ್ರಮಸ್ವರೂಪವಾದ್ದರಿಂದ ಶುಕ್ತಿಜ್ಞಾನದಿಂದ ನಿವೃತ್ತವಾಗುತ್ತದೆ ಎಂದು ಅದ್ವೈತಿಗಳು ಹೇಳುತ್ತಾರೆ. ಆದರೆ ಶುಕ್ತಿಜ್ಞಾನದಿಂದ ರೂಪ್ಯವು ನಾಶವಾಯಿತೆಂದು ಅನುಭವವಿಲ್ಲದಿರುವುದರಿಂದ ಜ್ಞಾನನಿವರ್ತ್ಯತ್ವವು ದೃಷ್ಟಾಂತದಲ್ಲಿಲ್ಲವಾದ್ದರಿಂದ ಸಾಧ್ಯವೈಕಲ್ಯವೆಂದು ದ್ವೈತಿ ಹೇಳುತ್ತಾನೆ. ಅದಕ್ಕೆ ಚಿತ್ಸುಖರೀತಿಯಿಂದ **ಸ್ವಸಮಾನಾಧಿಕರಣ ಅತ್ಯಂತಾಭಾವ ಪ್ರತಿಯೋಗಿತ್ವವು** ಮಿಥ್ಯಾತ್ವವೆಂದು ನಿರ್ವಚನ ಮಾಡುತ್ತಾರೆ.

ಪ್ರಪಂಚ ಸತ್ಯತ್ವಪಕ್ಷದಲ್ಲಿ ಸಂಯೋಗಾದಿಗಳಲ್ಲಿ ಈ ಮಿಥ್ಯಾತ್ವಲಕ್ಷಣ ಬರುವುದಿಲ್ಲ. ಅತಿವ್ಯಾಪ್ತಿಇಲ್ಲ. ಏಕೆಂದರೆ ಸಂಯೋಗ ಸಂಯೋಗಾಭಾವಗಳಿಗೆ ಅವ್ಯಾಪ್ಯ ವೃತ್ತಿತ್ವವನ್ನು ಒಪ್ಪಿ ಅವುಗಳಿಗೆ ಸ್ವಸಮಾನಾಧಿಕರಣ ಅತ್ಯಂತಾಭಾವ ಪ್ರತಿಯೋಗಿತ್ವವನ್ನು ತಾರ್ಕಿಕರು ಹೇಳಿದರೂ ಅದು ಅನುಭವವಿರುದ್ಧವಾದ್ದರಿಂದ ಒಪ್ಪಲಾಗದು. ಅವುಗಳಿಗೆ ಅವ್ಯಾಪ್ಯವೃತ್ತಿತ್ವವು ಅಪ್ರಾಮಾಣಿಕ.

ಸಂಯೋಗವು ಯಾವ ಅಧಿಕರಣದಲ್ಲಿರುವುದೋ ಅದೇ ಅಧಿಕರಣದಲ್ಲಿ ಸಂಯೋಗಾಭಾವವು ಇರುವುದಿಲ್ಲ. ಭಾವಾಭಾವಗಳಿಗೆ ಏಕಾಧಿಕರಣದಲ್ಲಿ ವಿರೋಧವೇ ಇದೆ.

ಸಂಯೋಗಿಭೇದವನ್ನು ವ್ಯಾಪ್ಯವೃತ್ತಿಯೆಂದು ತಾರ್ಕಿಕರೂ ಒಪ್ಪುತ್ತಾರೆ. ಆದರಿಂದ 'ಮೂಲೇ ವೃಕ್ಷಃ ಕಪಿಸಂಯೋಗಾಭಾವವಾನ್, ನಾಗ್ರೇ' ಎಂಬಲ್ಲಿ 'ನಾಗ್ರೇ' ಎಂದು ಕಪಿಸಂಯೋಗಿಭೇದವನ್ನು ಅಗ್ರಾವಚ್ಛೇದೇನ ಇರುವಂಥದ್ದೆಂದು, ಅವ್ಯಾಪ್ಯವೃತ್ತಿ ಎಂದು ಇವರು ಹೇಳುವುದಿಲ್ಲ. 'ಮೂಲೇ ವೃಕ್ಷೇ ಕಪಿಸಂಯೋಗಾಭಾವಃ, ನಾಗ್ರೇ' ಎಂದೂ ಪ್ರತೀತಿ ಇರುವುದರಿಂದ ಕಪಿಸಂಯೋಗಾಭಾವಪರವಾಗಿ ವ್ಯಾಖ್ಯಾನ ಮಾಡುತ್ತಾರೆ. 'ವೃಕ್ಷದಲ್ಲಿ ಕಪಿಸಂಯೋಗಾಭಾವವು ಮೂಲಾವಚ್ಛೇದೇನ ಇದೆ ಹೊರತು ಅಗ್ರಾವಚ್ಛೇದೇನ ಅಲ್ಲ' ಎಂದು ಹೇಳಬೇಕು ಎನ್ನುತ್ತಾರೆ. ಹಾಗೇ ಅಭಾವಾಧಿಕರಣದಲ್ಲಿ ಪ್ರತಿಯೋಗಿ ಇರುವುದು ವಿರುದ್ಧವಾದ್ದರಿಂದ ಸಂಯೋಗಾಭಾವವನ್ನು ವ್ಯಾಪ್ಯವೃತ್ತಿ ಎಂದು ಒಪ್ಪುವವರು ನಾವು 'ವೃಕ್ಷದ ಮೂಲದಲ್ಲಿ ಕಪಿಸಂಯೋಗಾಭಾವವಿರುತ್ತದೆ ಹೊರತು ಅಗ್ರದಲ್ಲಿ ಅಲ್ಲ' ಎಂದೂ ಪ್ರತೀತಿ ಇರುವುದರಿಂದ ಕಪಿಸಂಯೋಗಕ್ಕೆ ಮತ್ತು ತದಭಾವಗಳಿಗೆ ಅಗ್ರ-ಮೂಲ ಅವಯವವೃತ್ತಿತ್ವಪರವಾಗಿ ವ್ಯಾಖ್ಯಾನ ಮಾಡುತ್ತೇವೆ. ಅಗ್ರ ಮೂಲಾವಚ್ಛೇದೇನ ವೃತ್ತಿತ್ವ ಪರವಾಗಿ ಅಲ್ಲ. ಅಗ್ರಮೂಲ ಅವಚ್ಛೇದಕಗಳು ಅಲ್ಲಿ ಕಾಣಿಸುವುದಿಲ್ಲ. ಅಗ್ರಮೂಲ ಅಧಿಕರಣಗಳೇ ಕಾಣಿಸುತ್ತಿವೆ. ಏಕೆಂದರೆ ಸಪ್ತಮೀ ವಿಭಕ್ತಿಯು ಅಧಿಕರಣಾರ್ಥದಲ್ಲಿದೆ. ಅವಚ್ಛೇದಕತ್ವಾರ್ಥದಲ್ಲಿ ಅಲ್ಲ.

ಅಕೃಶಂ ಕುಚಯೋಃ ಕೃಶಂ ವಲಗ್ನೇ ವಿಪುಲಂ ಚಕ್ಷುಷಿ ವಿಸ್ತೃತಂ ನಿತಂಬೇ ।
ಅಧರೇಽರುಣಂ ಆವಿರಸ್ತು ಚಿತ್ತೇ ಕರುಣಾಶಾಲಿ ಕಪಾಲಿಭಾಗಧೇಯಂ ॥

ಎನ್ನುವ ದೇವೀಸ್ತೋತ್ರದಲ್ಲಿ ಸಪ್ತಮಿಗೆ ಅವಚ್ಛೇದಕತ್ವಾರ್ಥವಿಟ್ಟುಕೊಂಡರೆ, 'ಕುಚಗಳಲ್ಲಿ ದೇವಿಪುಷ್ಟಳಾಗಿದ್ದಾಳೆ, ನಡುವಿನಲ್ಲಿ ತೆಳುವಾಗಿದ್ದಾಳೆ. ಕಣ್ಣಲ್ಲಿ ಉದ್ದವಾಗಿದ್ದಾಳೆ, ನಿತಂಬದಲ್ಲಿ ವಿಸ್ತೃತಳಾಗಿದ್ದಾಳೆ ಮತ್ತು ತುಟಿಯಲ್ಲಿ ಕೆಂಪಾಗಿದ್ದಾಳೆ' ಎನ್ನುವುದು ಅಪಾರ್ಥವಾಗುವುದು. ದಪ್ಪ ಕುಚದವಳು. ತೆಳು ನಡುವಿನವಳು, ಉದ್ದಕಣ್ಣಿನವಳು, ವಿಸ್ತೃತ ನಿತಂಬದವಳು, ಕೆಂಪು ತುಟಿಯವಳೆಂದು ಕುಚಾದಿಗಳಲ್ಲಿ ಪುಷ್ಟತ್ವಾದ್ಯಧಿಕರಣತ್ವವು ಉಕ್ತವಾಗಬೇಕು. ತದವಚ್ಛೇದಕತ್ವವಲ್ಲ. ಅವಯವಗಳಲ್ಲಿ ಪುಷ್ಟತ್ವಾದ್ಯಧಿಕರಣತ್ವ ಕಂಡರೆ ಮಾತ್ರ 'ಮಂದಿರೇ ಮಣಿಮಾಲಾ' ಎಂಬಂತೆ ಪರಂಪರಾ ಸಂಬಂಧದಿಂದ ಶರೀರದಲ್ಲಿ ಪುಷ್ಟತ್ವಾದಿಗಳು ಕಾಣಬಹುದು. ಆದರಿಂದ ಪುಷ್ಟ ಕುಚದವಳು ಉದ್ದ ಕಣ್ಣಿನವಳು ಎಂದು ಮುಂತಾಗಿ ಹೇಳಬಹುದು. ಹೀಗಾಗಿ ಸಂಯೋಗ ತದಭಾವಗಳಿಗೆ ಅವ್ಯಾಪ್ಯವೃತ್ತಿತ್ವವು ಅನುಭವ ವ್ಯವಹಾರಗಳಿಗೆ ಅನನುಗುಣವಾದ್ದರಿಂದ ಒಪ್ಪಬಾರದು. ಆದರಿಂದ ಸಂಯೋಗಾಭಾವಕ್ಕೆ ಸ್ವಸಮಾನಾಧಿಕರಣ ಅತ್ಯಂತಾಭಾವ ಪ್ರತಿಯೋಗಿತ್ವವಿಲ್ಲ.

**ಶುಕ್ತಿರೂಪ್ಯಾದೇರಪಿ ಪಾರಮಾರ್ಥಿಕತ್ವಾಕಾರೇಣ ಸ್ವಸಮಾನಾಧಿಕರಣ ಅತ್ಯಂತಾ-ಭಾವ ಪ್ರತಿಯೋಗಿತ್ವಾಚ್ಚ ।**

ಶುಕ್ತಿಯಲ್ಲಿ ಆಪಣಸ್ಥರೂಪ್ಯವೇ ಪ್ರತಿಷಿದ್ಧವಾಗುವುದರಿಂದ ಶುಕ್ತಿರೂಪ್ಯದಲ್ಲಿ ಸ್ವಸಮಾನಾಧಿಕರಣ ಅತ್ಯಂತಾಭಾವ ಪ್ರತಿಯೋಗಿತ್ವರೂಪ ಮಿಥ್ಯಾತ್ವವಿಲ್ಲ. ಹೀಗಾಗಿ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ.

ಇಲ್ಲಿ ಯದ್ಯಪಿ ಶುಕ್ತಿಯಲ್ಲಿ ಪ್ರಾತಿಭಾಸಿಕರೂಪ್ಯ ಪ್ರಸಕ್ತಿಯಿಂದ ಆಪಣದಲ್ಲಿರುವ ವ್ಯಾವಹಾರಿಕ ರೂಪ್ಯದ ನಿಷೇಧವೆಂದರೆ, ಶುಕ್ತಿಯಲ್ಲಿ ಭ್ರಮ, ಆಪಣದಲ್ಲಿ ಬಾಧ ಎಂದು ಭ್ರಮಬಾಧಗಳಿಗೆ ವೈಯಧಿಕರಣ್ಯ ಮತ್ತು ಅಪ್ರಸಕ್ತವಾದ ಆಪಣಸ್ಥರೂಪ್ಯದ ನಿಷೇಧ, ಇವು ಎರಡೂ ಅನುಚಿತವಾಗುವುವು ಎಂಬ ಆಕ್ಷೇಪಕ್ಕೆ ಎಡೆ ಇದೆ. ಆದರೆ, ಶುಕ್ತಿಯಲ್ಲಿ ಪ್ರಾತಿಭಾಸಿಕರೂಪ್ಯವು ಶುಕ್ತಿತಾದಾತ್ಮ್ಯದಿಂದ ಕಾಣುವಂತೆ ವ್ಯಾವಹಾರಿಕ ರೂಪ್ಯ ತಾದಾತ್ಮ್ಯದಿಂದಲೂ ಕಾಣುವುದರಿಂದ ವ್ಯಾವಹಾರಿಕ ರೂಪ್ಯ ನಿಷೇಧವು ಅಪ್ರಸಕ್ತನಿಷೇಧವಾಗುವುದಿಲ್ಲ. ಬಾಧದಿಂದ ಭ್ರಮಾಧಿಷ್ಠಾನಶುಕ್ತ್ಯಜ್ಞಾನ ನಾಶವಾಗುವಾಗ ತದುಪಾದಾನಕವಾದ ಪ್ರಾತಿಭಾಸಿಕರೂಪ್ಯವೂ ನಾಶವಾಗುತ್ತದೆ. ಪುನಃ ಬಾಧೋತ್ತರದಲ್ಲಿ ಅದು ಕಾಣುವ ಭಯವಿಲ್ಲ. ಭ್ರಮಬಾಧಗಳಿಗೆ ವೈಯಧಿಕರಣ್ಯವೂ ಇಲ್ಲ.

**ನಚ ಅಧಿಕರಣ ಶಬ್ದೇನ ತಾತ್ವಿಕಾಧಿಕರಣೋಕ್ತೌ ಸಮವಾಯಿನಿ ಸಂಯೋಗಿನಿ ವಾ ತತ್ವತಃ ತದಧಿಕರಣೇ ತದತ್ಯಂತಾಭಾವಾಯೋಗೇನ ಅಸಂಭವಃ। ಅಧಿಕರಣತ್ವೇನ ಪ್ರತೀತತ್ವಮಾತ್ರೋಕ್ತೌ ಚ ಅನ್ಯಥಾಖ್ಯಾತಿ ಪಕ್ಷೇ ರಜತತ್ವಾದೇಃ ಸ್ವಾಧಿಕರಣತ್ವೇನ ಪ್ರತೀತ ಶುಕ್ತ್ಯಾದೌ ಅತ್ಯಂತಾಭಾವಸ್ಯ ಸತ್ವಾತ್, ಸಿದ್ಧಸಾಧನಮಿತಿ ವಾಚ್ಯಂ। ಸ್ವಾತ್ಯಂತಾಭಾವಾಧಿಕರಣ ಏವ ಪ್ರತೀಯಮಾನತ್ವಸ್ಯ ವಿವಕ್ಷಿತತ್ವಾತ್। ತತ್ಪಕ್ಷೇ ಚ ರಜತತ್ವಾದಿಕಂ ಸ್ವಾತ್ಯಂತಾಭಾವಾನಧಿಕರಣೇ ರಜತೇಽಪಿ ಭಾತಿ।**

'ಸ್ವಸಮಾನಾಧಿಕರಣ ಅತ್ಯಂತಾಭಾವ ಪ್ರತಿಯೋಗಿತ್ವಲಕ್ಷಣದಲ್ಲಿ 'ಅಧಿಕರಣ' ಶಬ್ದದಿಂದ ತಾತ್ವಿಕವಾದ ಅಧಿಕರಣವನ್ನು ಇಟ್ಟುಕೊಳ್ಳುವ ಪಕ್ಷದಲ್ಲಿ ಸಮವಾಯ ಸಂಬಂಧದಿಂದ ಅಥವಾ ಸಂಯೋಗಸಂಬಂಧದಿಂದ ತಾತ್ವಿಕವಾಗಿ ತದಧಿಕರಣವಾಗಿರುವ ಅಧಿಕರಣದಲ್ಲಿ ತದತ್ಯಂತಾಭಾವ ಕೂಡುವುದಿಲ್ಲ. ಲಕ್ಷಣವು ಅಸಂಭವಿಯಾಗುವುದು. ಅಧಿಕರಣವಾಗಿ ಪ್ರತೀತಮಾತ್ರವಾಗಿರುವ ಅಧಿಕರಣವಿಟ್ಟುಕೊಂಡರೆ ಅನ್ಯಥಾಖ್ಯಾತಿಪಕ್ಷದಲ್ಲಿ ರಜತತ್ವಾದಿಗಳಿಗೆ ತದಧಿಕರಣತ್ವೇನ ಪ್ರತೀತವಾದ ಶುಕ್ತ್ಯಾದಿ ಅಧಿಕರಣಗಳಲ್ಲಿ ತದಭಾವವಿರುವುದರಿಂದ ಅದನ್ನು ಸಾಧನ ಮಾಡುವಾಗ ಸಿದ್ಧ ಸಾಧನತ್ವ ದೋಷ'—ಹೀಗೆ ಹೇಳಬಾರದು.

ಸ್ವಸಮಾನಾಧಿಕರಣ ಅತ್ಯಂತಾಭಾವಪ್ರತಿಯೋಗಿತ್ವಂ ಎಂಬುದಕ್ಕೆ ಯಥಾಶ್ರುತವೆ ಅರ್ಥವಲ್ಲ. ಯಥಾಶ್ರುತಾರ್ಥವಿಟ್ಟುಕೊಂಡರೆ 'ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧಪ್ರತಿಯೋಗಿತ್ವಂ ಮಿಥ್ಯಾತ್ವಂ' ಎಂಬ ದ್ವಿತೀಯಮಿಥ್ಯಾತ್ವ ನಿರುಕ್ತಿಗೂ ಈ ಚತುರ್ಥ ಮಿಥ್ಯಾತ್ವನಿರುಕ್ತಿಗೂ ವ್ಯತ್ಯಾಸವಿಲ್ಲದಂತಾದೀತು. ಅಲ್ಲಿ 'ಉಪಾಧಿ', ಇಲ್ಲಿ 'ಅಧಿಕರಣ' ಎರಡೂ ಒಂದೇ. ಎರಡರಲ್ಲಿಯೂ ಅನುಪಪತ್ತಿ ಒಂದೇ. ಆದರಿಂದ '**ಪಾರಮಾರ್ಥಿಕತ್ವಾಕಾರೇಣ ಸ್ವಾತ್ಯಂತಾಭಾವಾಧಿಕರಣದಲ್ಲಿಯೇ ಪ್ರತೀಯಮಾನವಾಗುವುದು ಮಿಥ್ಯಾತ್ವ**' ಎಂದು ಹೇಳುವ ಅಭಿಪ್ರಾಯವನ್ನು ಇಲ್ಲಿ ಇಟ್ಟುಕೊಳ್ಳ

ಬೇಕು. ಆಗ ಅನ್ಯಥಾಖ್ಯಾತಿ ವಾದಿಗಳ ಸತ್ಯತ್ವಪಕ್ಷದಲ್ಲಿ ರಜತತ್ವಾದಿಗಳು ಸ್ವಾತ್ಯಂತಾಭಾವಾನಧಿಕರಣವಾದ ಸತ್ಯರಜತದಲ್ಲಿಯೂ ಪ್ರತೀಯಮಾನವಾಗಿವೆ. ಸ್ವಾತ್ಯಂತಾಭಾವಾಧಿಕರಣದಲ್ಲಿಯೇ ಪ್ರತೀಯಮಾನವಾಗಿಲ್ಲ. ಸಿದ್ಧಸಾಧನತ್ವವಿಲ್ಲ.

ಯದ್ಯಪಿ ಅದ್ವೈತಮತದಲ್ಲಿ ಎಲ್ಲವೂ ಮಿಥ್ಯಾ. ಆದ್ದರಿಂದ ಸ್ವಾತ್ಯಂತಾಭಾವಾಧಿಕರಣವೆ ಆಗಿವೆ, ಎಲ್ಲ ಅಧಿಕರಣಗಳು. ಅನಧಿಕರಣವೆ ಅಪ್ರಸಿದ್ಧ. 'ಸ್ವಾತ್ಯಂತಾಭಾವಾಧಿಕರಣೇ ಏವ' ಎಂದು ಏವಕಾರದಿಂದ ಅನಧಿಕರಣವನ್ನು ವ್ಯಾವೃತ್ತಿಮಾಡಬೇಕು, ಹೇಗೆ? ಅದಕ್ಕೆ ಹೀಗೆ ಪರಿಷ್ಕಾರ ಮಾಡಬೇಕು—'ಸ್ವಾಧಿಕರಣವಾಗಿ ಪ್ರತೀಯಮಾನವಾದವುಗಳಲ್ಲಿ ಎಲ್ಲ ಕಡೆ ಕಾಣುವ ಎಲ್ಲ ಸಂಬಂಧದಿಂದ ಸ್ವಾತ್ಯಂತಾಭಾವವಿದ್ದೇ ಇರುವುದು ಪ್ರತೀತಿ ಗೋಚರವಾಗುವುದೇ ಮಿಥ್ಯಾತ್ವ' ಎಂದು.

## ಪಂಚಮ ಮಿಥ್ಯಾತ್ವ ನಿರುಕ್ತಿ

**ಯದ್ವಾ ಆನಂದಬೋಧೋಕ್ತ ರೀತ್ಯಾ ಸದ್‌ವಿವಿಕ್ತತ್ವಂ ಮಿಥ್ಯಾತ್ವಂ। ತಚ್ಚ ಸದ್ರೂಪತ್ವಾಭಾವಃ। ಬ್ರಹ್ಮ ಚ ಸತ್ತಾರಹಿತಮಪಿ ಸಾಮಾನ್ಯಮಿವ ಸದ್ರೂಪಂ।**

'ಪ್ರಪಂಚವು ಮಿಥ್ಯಾ, ಏಕೆಂದರೆ ಅದು ಸ್ವಾತ್ಯಂತಾಭಾವಾಧಿಕರಣದಲ್ಲಿಯೇ ಪ್ರತೀಯಮಾನವಾಗಿದೆ'–ಹೀಗೆ ಹೇಳಿದರೆ ಪ್ರಪಂಚ ಅಸತ್ತೆಂದಾಗುವುದು. 'ಶಶವಿಷಾಣ' ಎಂಬ ಶಬ್ದಾಭಾಸದಿಂದ ಸ್ವಾತ್ಯಂತಾಭಾವಾಧಿಕರಣದಲ್ಲಿಯೇ ಅಸತ್‌ಪ್ರತೀತಿ ಕಂಡಿದೆ' ಎಂದು ಚತುರ್ಥಮಿಥ್ಯಾತ್ವನಿರುಕ್ತಿಯ ಮೇಲೆ ಆಕ್ಷೇಪ ಬಂದರೆ ಪಂಚಮಮಿಥ್ಯಾತ್ವನಿರುಕ್ತಿ—

'ಅಥವಾ ಆನಂದಬೋಧೋಕ್ತರೀತಿಯಿಂದ 'ಸದ್ವಿವಿಕ್ತತ್ವ' ಎಂಬ ಪಾರಿಭಾಷಿಕ ಶಬ್ದದಿಂದ ಉಕ್ತವಾಗುವುದೇ ಮಿಥ್ಯಾತ್ವ. ಯಥಾಶ್ರುತವಾಗಿ 'ಸದ್ವಿವಿಕ್ತತ್ವ' ಶಬ್ದವು ಹೇಳುವ ಸದ್‌ಭೇದವು ಮಿಥ್ಯಾತ್ವಲಕ್ಷಣವಲ್ಲ. ಒಂದು ಸತ್ತಿಗೆ ಇನ್ನೊಂದು ಸತ್ತಿನಿಂದ ಭೇದವಿರುವುದರಿಂದ ಅದನ್ನು ಸಾಧನ ಮಾಡುವುದಾದರೆ ಸಿದ್ಧಸಾಧನತ್ವ ದೋಷ ಬರುತ್ತದೆ. ಆದರಿಂದ ಸದ್ರೂಪತ್ವಾಭಾವವನ್ನು ಆ ಶಬ್ದದ ವಿವಕ್ಷಿತಾರ್ಥವೆಂದು ತಿಳಿಯಬೇಕು.

ಸದ್ರೂಪತ್ವಾಭಾವವೂ ಕೂಡ ಸತ್ತಾಜಾತಿಶೂನ್ಯತ್ವವಲ್ಲ. ಆ ಅರ್ಥವಿಟ್ಟುಕೊಂಡರೆ ಬ್ರಹ್ಮವೂ ಕೂಡ ಸತ್ತಾಜಾತಿ ಶೂನ್ಯವಾಗಿರುವುದರಿಂದ ಮಿಥ್ಯಾ ಆಗಬೇಕಾದೀತು. ಆದರಿಂದ ಸತ್ತಾಜಾತಿ ಶೂನ್ಯವಾದ ಸಾಮಾನ್ಯಾದಿಗಳು ಸ್ವರೂಪಸತ್ವದಿಂದಲೇ ಸತ್ ಎನಿಸುವಂತೆ ಬ್ರಹ್ಮವೂ ಕೂಡ ಸ್ವರೂಪಸತ್ವದಿಂದಲೇ ಸತ್ ಎನಿಸುತ್ತದೆ, ಸದ್ರೂಪವಾಗಿದೆ. ಇಂಥ ಸದ್ರೂಪತ್ವದ ಅಭಾವವೇ ಮಿಥ್ಯಾತ್ವ. ಇದನ್ನು ಪ್ರಪಂಚದಲ್ಲಿ ಸಾಧನೆ ಮಾಡಿದರೆ ಪ್ರಪಂಚ ಅಸತ್ ಎನಿಸುವುದೂ ಇಲ್ಲ, ಸಿದ್ಧಸಾಧನತ್ವ ದೋಷವೂ ಇಲ್ಲ.

❖❖❖

## 08. दृश्यत्वस्वरूपम्

**दृश्यत्वं च न्यायदीपावलीरीत्या दृग्विषयत्वम् । ननु यन्न मिथ्या न तद् दृश्यमिति व्यतिरेकस्याग्रहे सन्दिग्धानैकान्त्यम् । तद्ग्रहश्च न तावदसति । तत्र सद्विविक्तत्वरूपमिथ्यात्वस्य व्यतिरेकाभावात् । मिथ्यात्वान्तरव्यतिरेकसद्भावेऽपि तत्र साध्यव्यतिरेकग्रहार्थं तस्यापि ज्ञातव्यत्वेन व्यभिचारात् । ब्रह्मणि मिथ्यात्वव्यतिरेकग्रहे च ब्रह्मापि दृश्यमिति चेन्न । आकाशस्य स्वरूपेणापरिच्छेदेऽपि घटावच्छिन्नस्य परिच्छेदवद् ब्रह्मणः स्वरूपेणादृश्यत्वेऽपि व्यतिरेकावच्छिन्नस्य दृश्यत्वात् ॥**

केवलान्वयित्वाभावात् व्यतिरेकोपासनं दृश्यत्वहेतोरावश्यकमित्यभिप्रेत्य शङ्कते **नन्विति । संदिग्धेति ।।** यद्यपि व्यतिरेकव्याप्त्यग्रहे अज्ञानरूपासिद्धिरेवायाति । नतु संदिग्धानैकान्त्यम् । तस्य सन्देहप्रयुक्तत्वात् । तथापि मिथ्यात्वाभावरूपव्याप्य-संदेहवति विपक्षे दृश्यत्वाभावरूपव्यापकाभावरूपदृश्यत्वनिश्चयात् संदिग्धानैकान्त्यं द्रष्टव्यम् । नचैवं व्यतिरेकिविलयापत्तिः । तावता अगृहीतव्यतिरेकव्याप्तिकत्वेन हेतोर्विशेषणीयत्वात् । अत एवाह **व्यतिरेकस्याग्रह इति ।**

❖❖❖

### ದೃಶ್ಯತ್ವಸ್ವರೂಪ

ದೃಶ್ಯತ್ವಂ ಚ ನ್ಯಾಯದೀಪಾವಲೀ ರೀತ್ಯಾ ದೃಗ್‌ವಿಷಯತ್ವಂ ।

'ನನು 'ಯನ್ನ ಮಿಥ್ಯಾ ನ ತತ್ ದೃಶ್ಯಂ' ಇತಿ ವ್ಯತಿರೇಕಸ್ಯ ಅಗ್ರಹೇ ಸಂದಿಗ್ಧಾನೈಕಾಂತ್ಯಂ। ತದ್‌ಗ್ರಹಶ್ಚ ನ ತಾವತ್ ಅಸತಿ। ತತ್ರ ಸದ್‌ವಿವಿಕ್ತತ್ವರೂಪ ಮಿಥ್ಯಾತ್ವಸ್ಯ ವ್ಯತಿರೇಕಾಭಾವಾತ್। ಮಿಥ್ಯಾತ್ವಾಂತರ ವ್ಯತಿರೇಕಸದ್ಭಾವೇಽಪಿ ತತ್ರ ಸಾಧ್ಯವ್ಯತಿರೇಕ ಗ್ರಹಾರ್ಥಂ ತಸ್ಯಾಪಿ ಜ್ಞಾತವ್ಯತ್ವೇನ ವ್ಯಭಿಚಾರಾತ್। ಬ್ರಹ್ಮಣಿ ವ್ಯತಿರೇಕಗ್ರಹೇ ಚ ಬ್ರಹ್ಮಾಪಿ ದೃಶ್ಯಂ' ಇತಿ ಚೇನ್ನ।

ಆಕಾಶಸ್ಯ ಸ್ವರೂಪೇಣ ಅಪರಿಚ್ಛೇದೇಽಪಿ ಘಟಾವಚ್ಛಿನ್ನಸ್ಯ ಪರಿಚ್ಛೇದವತ್ ಬ್ರಹ್ಮಣ ಸ್ವರೂಪೇಣ ಅದೃಶ್ಯತ್ವೇಽಪಿ ವ್ಯತಿರೇಕಾವಚ್ಛಿನ್ನಸ್ಯ ದೃಶ್ಯತ್ವಾತ್ ॥

ದೃಶ್ಯತ್ವವೆಂದರೆ ನ್ಯಾಯದೀಪಾವಳೀ ರೀತಿಯಿಂದ ಜ್ಞಾನವಿಷಯತ್ವ. 'ಆತ್ಮನು ಫಲವ್ಯಾಪ್ಯನೂ ಅಲ್ಲ, ವೃತ್ತಿವ್ಯಾಪ್ಯನೂ ಅಲ್ಲ, ಜ್ಞಾನವಿಷಯನೇ ಅಲ್ಲ' ಎನ್ನುವ ಮತಾನುಸಾರ ಜ್ಞಾನವಿಷಯತ್ವವು ಮಿಥ್ಯಾತ್ವ. 'ಯದ್ವಾ' ಎಂದು ಮುಂದಿನ ಎರಡನೇ ಪಕ್ಷವು ಪ್ರಮಾಣಮಾಲಾ ರೀತಿಯಿಂದ ಆತ್ಮನಿಗೆ ವೃತ್ತಿವ್ಯಾಪ್ಯತ್ವವನ್ನು ಒಪ್ಪುವ ಮತಾನುಸಾರವಾಗಿದೆ—'ಆತ್ಮನೋ ಜ್ಞಾನವಿಷಯತ್ವೇऽಪಿ ನೋಕ್ತ ರೂಪಂ ದೃಶ್ಯತ್ವಂ' ಎಂದು.

ಮೊದಲನೇ ಪಕ್ಷದಲ್ಲಿ ಬರುವ ಅನುಪಪತ್ತಿ ಹೀಗೆ—'ಮಿಥ್ಯಾತ್ವರೂಪ ಸಾಧ್ಯವಿಲ್ಲದಿದ್ದಲ್ಲಿ ಎಲ್ಲಿಯೂ ದೃಶ್ಯತ್ವರೂಪ ಹೇತುವೂ ಇಲ್ಲ. ಎಂದು ವ್ಯತಿರೇಕಗ್ರಹ ಆವಶ್ಯಕ. ಈ ವ್ಯತಿರೇಕವ್ಯಾಪ್ತಿಯನ್ನು ಎಲ್ಲಿಯೂ ಗ್ರಹಿಸಲಾಗದಿದ್ದರೆ ವ್ಯತಿರೇಕವ್ಯಾಪ್ತಿಗ್ರಹಣವಾಗದಿದ್ದರೆ ಕೇವಲ ಅಜ್ಞಾನಾಸಿದ್ಧಿ ಮಾತ್ರವೇ ದೋಷವೆನ್ನುವಂತಿಲ್ಲ. ಸಂದೇಹವಿದೆ. ಮಿಥ್ಯಾತ್ವಾಭಾವರೂಪ ವ್ಯಾಪ್ಯಸಂದೇಹವುಳ್ಳ ವಿಪಕ್ಷದಲ್ಲಿ ದೃಶ್ಯತ್ವಾಭಾವರೂಪ ವ್ಯಾಪಕದ ಅಭಾವರೂಪವಾದ ದೃಶ್ಯತ್ವ ನಿಶ್ಚಯವಿರುವುದರಿಂದ ಸಂದಿಗ್ಧಾನೈಕಾಂತ್ಯವಿದೆ. ಅಥವಾ ಮಿಥ್ಯಾತ್ವವು ವ್ಯತಿರೇಕಿ ಧರ್ಮವಾಗಿರುವುದರಿಂದ ಎಲ್ಲಾದರೊಂದು ಕಡೆ ಅದರ ಅಭಾವವಿರಲೇಬೇಕೆಂದು ಸಾಧ್ಯಾಭಾವ ನಿಶ್ಚಯವಾಗುತ್ತದೆ. ಅಲ್ಲಿ ಹೇತುವಿರಬಹುದೆಂದು ಸಂದೇಹದಿಂದ ಸಂದಿಗ್ಧಾನೈಕಾಂತ್ಯವಿದೆ. ಅದರಿಂದ ವ್ಯತಿರೇಕಸಹಚಾರವನ್ನು ಒಂದೆಡೆ ತಿಳಿಯಲೇಬೇಕು. ಎಲ್ಲಿ? ಅಸತ್ತಿನಲ್ಲಿಯೆ? ಅಸತ್ತಿನಲ್ಲಿ ಸದ್‌ವಿವಿಕ್ತತ್ವರೂಪ ಮಿಥ್ಯಾತ್ವವೇ ಇದೆ. ಮಿಥ್ಯಾತ್ವರೂಪಸಾಧ್ಯದ ವ್ಯತಿರೇಕ ಅಸತ್ತಿನಲ್ಲಿ ಇಲ್ಲ. ಬೇರೆ ಜ್ಞಾನನಿವರ್ತ್ಯತ್ವಾದಿರೂಪ ಮಿಥ್ಯಾತ್ವದ ವ್ಯತಿರೇಕ ಅಸತ್ತಿನಲ್ಲಿ ಇದ್ದರೂ, ಅಸತ್ತಿನಲ್ಲಿ ಸಾಧ್ಯಾಭಾವವನ್ನು ತಿಳಿಯಬೇಕಾದರೆ ಅಸತ್ತನ್ನು ಮೊದಲು ತಿಳಿಯಬೇಕಾಗುತ್ತದೆ. ಅಭಾವಜ್ಞಾನಕ್ಕೆ ಅಧಿಕರಣಜ್ಞಾನವು ಆವಶ್ಯಕ. ಅದು ಕಾರಣವಾಗಿದೆ. ಅದರಿಂದ ಅಸತ್ತಿನಲ್ಲಿ ದೃಶ್ಯತ್ವವನ್ನು ಒಪ್ಪಿದರೆ ವ್ಯಭಿಚಾರ. ಮಿಥ್ಯಾತ್ವವಿಲ್ಲದಿದ್ದಲ್ಲಿ ದೃಶ್ಯತ್ವವೂ ಇಲ್ಲ ಎಂಬ ವ್ಯತಿರೇಕ ವ್ಯಾಪ್ತಿಗೆ 'ಅಸತ್ತಿನಲ್ಲಿ ಸಾಧ್ಯಾಭಾವವಿದ್ದರೂ ಹೇತ್ವಭಾವವಿಲ್ಲ, ದೃಶ್ಯತ್ವರೂಪ ಹೇತುವೆ ಇದೆ. ಎಂದು ವ್ಯಭಿಚಾರ. ಬ್ರಹ್ಮನಲ್ಲಿ ಸಾಧ್ಯಾಭಾವ ಹೇತ್ವಭಾವಗಳಿಗೆ ಸಹಚಾರವನ್ನು ತಿಳಿಯುವುದಾದರೆ ಬ್ರಹ್ಮವು ದೃಶ್ಯವೆಂದಾಗುವುದು' ಎಂದು.

ಈ ಅನುಪಪತ್ತಿಗೆ ಪರಿಹಾರ ಹೀಗೆ—ಆಕಾಶವು ಸ್ವರೂಪೇಣ ಅಪರಿಚ್ಛಿನ್ನವಾದರೂ ಘಟಾದಿ ಅವಚ್ಛೇದೇನ ಪರಿಚ್ಛಿನ್ನವಾಗುವುದು. ಈ ಪರಿಚಿನ್ನತ್ವ ಅಪರಿಚ್ಛಿನ್ನತ್ವಗಳಲ್ಲಿ ಒಂದು ಸ್ವಾಭಾವಿಕ, ಇನ್ನೊಂದು ಔಪಾಧಿಕವಾಗಿದ್ದು ಅಸ್ವಾಭಾವಿಕವಾಗಿರುವುದರಿಂದ ಒಂದೇ ಧರ್ಮಿಯಲ್ಲಿ ಎರಡಕ್ಕೆ ಪರಸ್ಪರ ವಿರೋಧವಿಲ್ಲ. ಹಾಗೇ ಬ್ರಹ್ಮನಲ್ಲಿ ಸ್ವರೂಪೇಣ ಮಿಥ್ಯಾತ್ವಾಭಾವ ಮತ್ತು ದೃಶ್ಯತ್ವಾಭಾವರೂಪ ಸಾಧ್ಯಾಭಾವ ಹೇತ್ವಭಾವಗಳಿಗೆ ಸಾಹಚರ್ಯವಿದೆ. ಸ್ವರೂಪೇಣ ಸ್ವಾಭಾವಿಕವಾಗಿ ದೃಶ್ಯತ್ವಾಭಾವವಿದ್ದರೂ ದೃಶ್ಯತ್ವಾಭಾವರೂಪ ಅವಚ್ಛೇದೇನ ಅಸ್ವಾಭಾವಿಕವಾಗಿ ದೃಶ್ಯತ್ವವೂ ಇರುವುದರಿಂದ ಸಾಹಚರ್ಯ ಗ್ರಹಣವೂ ಶಕ್ಯವಿದೆ. ಅಸ್ವಾಭಾವಿಕವಾಗಿರುವ ದೃಶ್ಯತ್ವದೊಂದಿಗೆ

ಅಸ್ವಾಭಾವಿಕವಾಗಿ ಮಿಥ್ಯಾತ್ವವೂ ಇರುವುದರಿಂದ ಹೇತು ಸಾಧ್ಯಗಳ ಸಾಹಚರ್ಯವನ್ನೂ ಬ್ರಹ್ಮನಲ್ಲಿ ತಿಳಿಯಲು ಶಕ್ಯವಿದೆ.

❖❖❖

**यद्वा प्रमाणमालारीत्या स्वव्यवहारे स्वातिरेकिसंविदपेक्षा नियतिर्दृश्यत्वम् । तथाचात्मनो ज्ञानविषयत्वेऽपि नोक्तरूपं दृश्यत्वम् । अस्वप्रकाशत्वं वा दृश्यत्वम् । स्वप्रकाशत्वं च फलाव्याप्यत्वे सत्यपरोक्षव्यवहारयोग्यत्वम् । फलं च वृत्तिप्रतिफलित चैतन्यम् । स्वप्रकाशत्वाभावश्च घटादौ विशेषणाभावेन धर्मादौ विशेष्याभावेनेति विशिष्टाभावोऽनुगतः । अस्मिंश्च पक्षे जडत्वमसंविद्रूपत्वमित्यसङ्करः ।।**

ननु केनापि रूपेणोपस्थितौ दृश्यत्वमेव ब्रह्मणः । नोचेदिदानीमनुपस्थितिरेवेति नोभयथापि व्याप्तिग्रहः । आकाशे तु शब्दाश्रयत्वरूपधर्माश्रय एव घटाद्यवच्छिन्नत्वं तदभावश्चेत्यत आह **यद्वेति । नोक्तरूपमिति ।** नियमाभावादिति भावः । योगार्थत्यागे परिभाषाया अनियमादाह **अस्वप्रकाशत्वं वेति ।** विषयविषयिभाव-स्वीकारे वृत्तिविरोधोऽपसिद्धान्तश्चेत्यत आह **स्वप्रकाशत्वं चेति । असङ्कर इति ।** न हेत्वोरभेद इत्यर्थः ।

❖❖❖

**ಯದ್ವಾ ಪ್ರಮಾಣಮಾಲಾ ರೀತ್ಯಾ ಸ್ವವ್ಯವಹಾರೇ ಸ್ವಾತಿರೇಕಿ ಸಂವಿದಪೇಕ್ಷಾ ನಿಯತಿಃ ದೃಶ್ಯತ್ವಂ । ತಥಾ ಚ ಆತ್ಮನೋ ಜ್ಞಾನವಿಷಯತ್ವೇಽಪಿ ನೋಕ್ತರೂಪಂ ದೃಶ್ಯತ್ವಂ ॥**

'ಆತ್ಮ ಉಪಸ್ಥಿತನಾದರೆ ದೃಶ್ಯತ್ವ ಬಂತು, ವ್ಯಭಿಚಾರದಿಂದ ವ್ಯಾಪ್ತಿಗ್ರಹಣವಿಲ್ಲ. ಉಪಸ್ಥಿತನಾಗದಿದ್ದರೆ ವ್ಯಾಪ್ತಿಗ್ರಹಣ ಸಾಧ್ಯವಿಲ್ಲ' ಎಂದರೆ ಹೇಳುತ್ತಾರೆ— 'ಅಥವಾ ಪ್ರಮಾಣಮಾಲಾಗ್ರಂಥ ರೀತಿಯಿಂದ ಸ್ವವ್ಯವಹಾರದಲ್ಲಿ ತನಗೆ ತನಗಿಂತ ಬೇರೆಯಾದ ಜ್ಞಾನದ ಅಪೇಕ್ಷೆ ನಿಯಮೇನ ಇರುವುದು ದೃಶ್ಯತ್ವ. ಆತ್ಮನಿಗೆ ವೃತ್ತಿವ್ಯಾಪ್ಯತ್ವರೂಪ ದೃಶ್ಯತ್ವವು ಹಿಂದೆ ಹೇಳಿದಂತೆ ಇದ್ದರೂ 'ಸ್ವವ್ಯವಹಾರೇ' ಎಂದು ಮುಂತಾಗಿ ಈಗ ಹೇಳಿದ ದೃಶ್ಯತ್ವವಿಲ್ಲ. ಸ್ಫುರಣರೂಪವಾದ ನಿತ್ಯಸಿದ್ಧ ಆತ್ಮಸ್ವರೂಪ ವ್ಯವಹಾರಕ್ಕೆ ಸ್ವರೂಪಜ್ಞಾನದ ಅಪೇಕ್ಷೆ ನಿಯಮೇನ ಆತ್ಮನಿಗೆ ಇದ್ದರೂ 'ಸ್ವಾತಿರೇಕಿಯಾದ' ಸ್ವರೂಪಕ್ಕಿಂತ ಬೇರೆಯಾದ ವೃತ್ತಿಜ್ಞಾನದ ಅಪೇಕ್ಷೆ ನಿಯಮೇನ ಇರುವುದಿಲ್ಲ.

'ಕದಾಚಿತ್' ಕೆಲವೊಮ್ಮೆ ಅಂದರೆ 'ಅದ್ವಿತೀಯಂ ಬ್ರಹ್ಮ' ಎಂದು ಅದ್ವಿತೀಯತ್ವಾದಿ ವಿಶಿಷ್ಟ ವ್ಯವಹಾರ ಮಾಡುವಾಗ ಮಾತ್ರ ಅದ್ವಿತೀಯತ್ವಾದಿ ಧರ್ಮಗಳಿಗೆ ಉಪನಾಯಕವಾದ ವೇದಾಂತ ಜನ್ಯ ವೃತ್ತಿಜ್ಞಾನದ ಅಪೇಕ್ಷೆ ಆತ್ಮನಿಗೆ ಇದೆ. ಹೀಗಾಗಿ ಸ್ವವ್ಯವಹಾರಕ್ಕೆ ಸ್ವಾತಿರೇಕಿ ಸಂವಿದಪೇಕ್ಷಾನಿಯತಿರೂಪ ದೃಶ್ಯತ್ವವೇ ಮಿಥ್ಯಾತ್ವಕ್ಕೆ ಹೇತು. ಅದು ಆತ್ಮನಲ್ಲಿ ಇಲ್ಲ. ಅದರಿಂದ ದೃಶ್ಯಾತ್ವಾಭಾವ-ಮಿಥ್ಯಾತ್ವಾಭಾವರೂಪ ಹೇತ್ವಭಾವ-ಸಾಧ್ಯಾಭಾವಗಳ ಸಹಚಾರವನ್ನು ಆತ್ಮನಲ್ಲಿ ವೃತ್ತಿವ್ಯಾಪ್ಯತ್ವರೂಪ ದೃಶ್ಯತ್ವದ ಬಲದಿಂದ ತಿಳಿಯಲು ಶಕ್ಯವಿದೆ.

**ಅಸ್ವಪ್ರಕಾಶತ್ವಂ ವಾ ದೃಶ್ಯತ್ವಂ। ಸ್ವಪ್ರಕಾಶತ್ವಂ ಚ ಫಲಾವ್ಯಾಪ್ಯತ್ವೇ ಸತಿ ಅಪರೋಕ್ಷವ್ಯವಹಾರ ಯೋಗ್ಯತ್ವಂ। ಫಲಂ ಚ ವೃತ್ತಿ ಪ್ರತಿಫಲಿತ ಚೈತನ್ಯಂ। ಸ್ವಪ್ರಕಾಶತ್ವಾಭಾವಶ್ಚ ಘಟಾದೌ ವಿಶೇಷಣಾಭಾವೇನ, ಧರ್ಮಾದೌ ವಿಶೇಷ್ಯಾಭಾವೇನ ಇತಿ ವಿಶಿಷ್ಟಾಭಾವಃ ಅನುಗತಃ। ಅಸ್ಮಿಂಶ್ಚ ಪಕ್ಷೇ ಜಡತ್ವಂ ಅಸಂವಿದ್ರೂಪತ್ವಂ ಇತಿ ಅಸಂಕರಃ।**

ಆತ್ಮನಿಗೆ ಸ್ವಪ್ರಕಾಶತ್ವವನ್ನು ಅಂದರೆ ಜ್ಞಾನವಿಷಯತ್ವವನ್ನು ಒಪ್ಪಿ 'ಸ್ವವ್ಯವಹಾರೇ ಸ್ವಾತಿರೇಕಿ ಸಂವಿದಪೇಕ್ಷಾನಿಯತಿ'ರೂಪ ದೃಶ್ಯತ್ವವಿಲ್ಲವೆನ್ನುವುದು ಸರಿಯಲ್ಲ. ತನಗೆ ತಾನೇ ವಿಷಯನಾಗುವ ನೆಂದರೆ ಆತ್ಮಾಶ್ರಯ ಮತ್ತು ಅಪಸಿದ್ಧಾಂತ ದೋಷವೂ ಬರುವುದು. ಅದರಿಂದ ಹೇಳುತ್ತಾರೆ— ಅಥವಾ ದೃಶ್ಯತ್ವವೆಂದರೆ ಅಸ್ವಪ್ರಕಾಶತ್ವ. ಸ್ವಪ್ರಕಾಶತ್ವವೆಂದರೆ ಫಲಾವ್ಯಾಪ್ಯವಾಗಿದ್ದು ಅಪರೋಕ್ಷವ್ಯವಹಾರ ವಿಷಯತ್ವಕ್ಕೆ ಯೋಗ್ಯವಾಗಿರುವುದು. 'ಫಲ'ವೆಂದರೆ ಅಂತಃಕರಣವೃತ್ತಿ ಪ್ರತಿಫಲಿತ ಚೈತನ್ಯ. ಘಟಾದಿಗಳಲ್ಲಿ ಸ್ವಪ್ರಕಾಶತ್ವಾಭಾವರೂಪ ದೃಶ್ಯತ್ವವು ವಿಶೇಷಣಾಭಾವಪ್ರಯುಕ್ತ. ಫಲಾವ್ಯಾಪ್ಯತ್ವವಿಶಿಷ್ಟ ಅಪರೋಕ್ಷ ವ್ಯವಹಾರವಿಷಯತ್ವ ಯೋಗ್ಯತ್ವರೂಪವಿಶಿಷ್ಟದಲ್ಲಿ ವಿಶೇಷಣಾಂಶವು ಫಲಾವ್ಯಾಪ್ಯತ್ವ. ಅದು ಘಟಾದಿಗಳಲ್ಲಿ ಇಲ್ಲ. ಫಲವ್ಯಾಪ್ಯತ್ವವೇ ಇದೆ. ಅಂತಃಕರಣವೃತ್ತಿಪ್ರತಿಫಲಿತ ಚೈತನ್ಯವಿಷಯತ್ವವೆ ಇದೆ. ಅದರಿಂದ ವಿಶಿಷ್ಟಾಭಾವವು ಘಟಾದಿಗಳಲ್ಲಿ ಬರುತ್ತದೆ. ಧರ್ಮಾದಿಗಳಲ್ಲಿ ಫಲಾವ್ಯಾಪ್ಯತ್ವವಿದ್ದರೂ ಅಪರೋಕ್ಷವ್ಯವಹಾರ ವಿಷಯತ್ವಯೋಗ್ಯತ್ವರೂಪ ವಿಶೇಷ್ಯಾಂಶವಿಲ್ಲ. ಅದರಿಂದ ವಿಶಿಷ್ಟಾಭಾವ ಬರುತ್ತದೆ. ಹೀಗೆ ಘಟಾದಿ ಮತ್ತು ಧರ್ಮಾದಿಗಳಲ್ಲಿ ವಿಶಿಷ್ಟಾಭಾವವು ಅನುಗತವಾಗಿ ಬರುತ್ತದೆ.

'ದೃಶ್ಯತ್ವದಂತೆ ಜಡತ್ವವೂ ಅಸ್ವಪ್ರಕಾಶತ್ವರೂಪವಾಗಿರುವುದರಿಂದ ಅವುಗಳಿಗೆ ಭೇದವಿಲ್ಲ ವಾಯಿತು' ಎಂದರೆ ಅಸ್ವಪ್ರಕಾಶತ್ವವೆ ದೃಶ್ಯತ್ವ ಎನ್ನುವ ಈ ಪಕ್ಷದಲ್ಲಿ ಜಡತ್ವವು ಅಸಂವಿದ್ರೂಪತ್ವ ಅಂದರೆ ಅಚಿದ್‌ರೂಪತ್ವವೆಂದಿಟ್ಟುಕೊಳ್ಳುತ್ತೇವೆ. ಹೀಗಾಗಿ 'ಸಾಂಕರ್ಯ'ವಿಲ್ಲ, ಅಭೇದವಿಲ್ಲ. ಪಕ್ಷೈಕದೇಶವಾದ ವೃತ್ತಿಜ್ಞಾನದಲ್ಲಿಯೂ ಅಸಂವಿದ್ರೂಪತ್ವವಿರುವುದರಿಂದ ಭಾಗಾಸಿದ್ಧಿ ಇಲ್ಲ.

❖❖❖

## 09. मिथ्यात्वे परोक्तश्रुतिः

श्रुतिश्चात्र प्रमाणम् । ''एकमेवाद्वितीय''मित्यादौ अद्वितीय-मित्यादिशब्दैर्द्वितीयमात्रनिषेधात् । नच प्रत्यक्षबाधादनुमानममानं श्रुतिश्चामुख्यार्थेति युक्तम् । प्रत्यक्षेण व्यावहारिकसत्त्वग्रहात् । अनुमानादिभिश्च पारमार्थिकसत्त्वनिषेधात् । नहि वर्तमानमात्रग्राहि प्रत्यक्षं त्रिकालाबाध्यत्वग्राहि । वह्निरनुष्ण इत्यत्र तु उष्णत्वस्य प्रत्यक्षसिद्धव्यावहारिकसत्त्वप्रतिषेधाद्बाधः । दृश्यते च नभोनैल्यचन्द्र-प्रादेशत्वग्राहिप्रत्यक्षयोरनुमानागमाभ्यां बाध इति ।

ननु यावद्विशेषाभावग्रहे यत्किञ्चिद्विशेषग्राहिप्रत्यक्षं भवत्येव विरोधीत्यत आह दृश्यते चेति । प्रत्यक्षस्य दुर्बलत्वेन न तत् श्रुत्यनुमानबाधकमिति भावः ।

❖❖❖

## ಮಿಥ್ಯಾತ್ವ ವಿಷಯದಲ್ಲಿ ಪರೋಕ್ತಶ್ರುತಿ

ಶ್ರುತಿಶ್ಚಾತ್ರ ಪ್ರಮಾಣಂ– 'ಏಕಮೇವಾದ್ವಿತೀಯಂ' ಇತ್ಯಾದೌ 'ಅದ್ವಿತೀಯಂ' ಇತ್ಯಾದಿ ಶಬ್ದೈಃ ದ್ವಿತೀಯ ಮಾತ್ರ ನಿಷೇಧಾತ್ । ನ ಚ ಪ್ರತ್ಯಕ್ಷ ಬಾಧಾತ್ ಅನುಮಾನಂ ಅಮಾನಂ, ಶ್ರುತಿಶ್ಚ ಅಮುಖ್ಯಾರ್ಥಾ ಇತಿ ಯುಕ್ತಂ । ಪ್ರತ್ಯಕ್ಷೇಣ ವ್ಯಾವಹಾರಿಕ ಸತ್ವಗ್ರಹಾತ್ । ಅನುಮಾನಾದಿಭಿಶ್ಚ ಪಾರಮಾರ್ಥಿಕ ಸತ್ವನಿಷೇಧಾತ್ । ನಹಿ ವರ್ತಮಾನ ಮಾತ್ರ ಗ್ರಾಹಿ ಪ್ರತ್ಯಕ್ಷಂ ತ್ರಿಕಾಲಾಬಾಧ್ಯತ್ವಗ್ರಾಹಿ । 'ವಹ್ನಿಃ ಅನುಷ್ಣಃ' ಇತ್ಯತ್ರತು ಉಷ್ಣತ್ವಸ್ಯ ಪ್ರತ್ಯಕ್ಷಸಿದ್ಧ ವ್ಯಾವಹಾರಿಕ ಸತ್ವ ಪ್ರತಿಷೇಧಾತ್ ಬಾಧಃ । ದೃಶ್ಯತೇ ಚ ನಭೋನೈಲ್ಯ ಚಂದ್ರಪ್ರಾದೇಶತ್ವಗ್ರಾಹಿ ಪ್ರತ್ಯಕ್ಷಯೋಃ ಅನುಮಾನಾಗಮಾಭ್ಯಾಂ ಬಾಧಃ ಇತಿ ॥

ಈ ವಿಷಯದಲ್ಲಿ ಶ್ರುತಿಯು ಪ್ರಮಾಣವಾಗಿದೆ— 'ಏಕಮೇವಾದ್ವಿತೀಯಂ' 'ನೇಹ ನಾನಾಸ್ತಿ ಕಿಂಚನ' ಇತ್ಯಾದಿ ಶ್ರುತಿಗಳು ವಿಶ್ವಮಿಥ್ಯಾತ್ವವನ್ನು ಹೇಳುತ್ತವೆ. 'ಅದ್ವಿತೀಯ' ಮುಂತಾದ ಶಬ್ದವು ಬ್ರಹ್ಮೇತರ ದ್ವಿತೀಯ ಸಾಮಾನ್ಯವನ್ನು ನಿಷೇಧ ಮಾಡುವುದರಿಂದ ದ್ವಿತೀಯ ಸಾಮಾನ್ಯಕ್ಕೆ ಅತ್ಯಂತಾಭಾವ ಪ್ರತಿಯೋಗಿತ್ವರೂಪ ಮಿಥ್ಯಾತ್ವವು ಶ್ರುತಿಯಿಂದ ಸಿದ್ಧವಾಗುವುದು. 'ವಹ್ನಿ ಅನುಷ್ಣವಾಗಿದೆ ಕೃತಕತ್ವವಿರುವುದರಿಂದ' ಎಂಬ ಅನುಮಾನವು ಬೆಂಕಿ ತಣ್ಣಗಿದೆ ಎಂದು ಸಾಧಿಸಲಾರದು, ಬೆಂಕಿ ಬಿಸಿ ಎಂದು ಪ್ರತ್ಯಕ್ಷವಿರುವುದರಿಂದ. ಹಾಗೇ ಮಿಥ್ಯಾತ್ವಾನುಮಾನವೂ 'ಪ್ರಪಂಚವು ಮಿಥ್ಯೆ'

ಎಂದು ಸಾಧಿಸಲಾರದು. 'ಘಟಃ ಸನ್, ಪಟಃ ಸನ್' ಎಂದು ಮುಂತಾಗಿ ಪ್ರಪಂಚ ಸತ್ಯತ್ವವು ಪ್ರತ್ಯಕ್ಷ ಸಿದ್ಧವಾಗಿರುವುದರಿಂದ. ಆದರಿಂದ ಮಿಥ್ಯಾತ್ವವಿಷಯದಲ್ಲಿ ಅನುಮಾನವು ಪ್ರಮಾಣವಾಗುವುದಿಲ್ಲ. 'ಯಜಮಾನಃ ಪ್ರಸ್ತರಃ' 'ಯಜಮಾನನು ಪ್ರಸ್ತರಾಭಿನ್ನ' ಎಂದು ಶ್ರುತಿ ಹೇಳಿದರೂ ಪ್ರತ್ಯಕ್ಷ ವಿರೋಧವಿರುವುದರಿಂದ 'ಪ್ರಸ್ತರ' ದರ್ಭೆಯು ಯಜಮಾನನ ಕಾರ್ಯಕಾರಿ ಎಂದು ಅಮುಖ್ಯಾರ್ಥ ಪರವಾಗುವಂತೆ, ಪ್ರತ್ಯಕ್ಷ ಬಾಧವಿರುವುದರಿಂದ ಮಿಥ್ಯಾತ್ವ ಶ್ರುತಿಯೂ ಅಮುಖ್ಯಾರ್ಥ ಪರವೇ ಆಗುವುದು'—ಎಂದು ಹೇಳುವುದು ಸರಿಯಲ್ಲ.

ಏಕೆಂದರೆ ಪ್ರತ್ಯಕ್ಷವು ಕೇವಲ ವ್ಯಾವಹಾರಿಕ ಸತ್ಯತ್ವಗ್ರಾಹಿ. ಮಿಥ್ಯಾತ್ವಾನುಮಾನ-ಶ್ರುತಿಗಳು ತ್ರೈಕಾಲಿಕವಾದ ಪಾರಮಾರ್ಥಿಕ ಸತ್ಯತ್ವವನ್ನು ಪ್ರಪಂಚದಲ್ಲಿ ನಿಷೇಧಿಸುತ್ತವೆ. ಅತೀತಾದಿಗಳ ಸನ್ನಿಕರ್ಷವು ಇಂದ್ರಿಯಗಳಿಗೆ ಇಲ್ಲದ್ದರಿಂದ ಅವು ತ್ರಿಕಾಲಾಬಾಧ್ಯತ್ವರೂಪ ಸತ್ಯತ್ವವನ್ನು ಎಲ್ಲಿಯೂ ಗ್ರಹಿಸಲಾರವು. ಅವು ಕೇವಲ ವರ್ತಮಾನ ಮಾತ್ರಗ್ರಾಹಿ. ಹೀಗಾಗಿ ವ್ಯಾವಹಾರಿಕ ಪಾರಮಾರ್ಥಿಕ ಗಳೆಂಬ ಎರಡು ಭಿನ್ನಸತ್ತಾಕ ಅರ್ಥಗಳಿಗೆ ಪರಸ್ಪರ ವಿರೋಧವಿಲ್ಲದ್ದರಿಂದ, ಪ್ರತ್ಯಕ್ಷವಿರೋಧದಿಂದ ಶ್ರುತಿಗೆ ಅಮುಖ್ಯಾರ್ಥ ಪರತ್ವವನ್ನು ಹೇಳುವ ಆವಶ್ಯಕತೆ ಬರುವುದಿಲ್ಲ.

'ವಹ್ನಿಃ ಅನುಷ್ಣಃ' ಎಂಬ ಅನುಮಾನಕ್ಕೆ ಪ್ರತ್ಯಕ್ಷದಿಂದ ಬಾಧವು ಹೇಗೆ ಯುಕ್ತವೆಂದರೆ ಪ್ರತ್ಯಕ್ಷಸಿದ್ಧವಾಗಿರುವ ವ್ಯಾವಹಾರಿಕ ಉಷ್ಣತ್ವವನ್ನೇ ಈ ಅನುಮಾನ ಅಪಲಾಪ ಮಾಡಲು ಹೊರಟಿದೆ. ವ್ಯಾವಹಾರಿಕವಾದ ಉಷ್ಣತ್ವದ ಅಭಾವವನ್ನೇ ತಿಳಿಸಲು ಹೊರಟಿದೆ. ಸಮಾನ ಸತ್ತಾಕವಾದ ಉಷ್ಣತ್ವ ತದಭಾವಗಳಿಗೆ ವಿರೋಧವಿರುವುದರಿಂದ ಅನುಮಾನಕ್ಕೆ ಪ್ರತ್ಯಕ್ಷದಿಂದ ಬಾಧ ಬರುತ್ತದೆ.

ವಸ್ತುತಃ ಪ್ರತ್ಯಕ್ಷಗೋಚರವಾದ ವ್ಯಾವಹಾರಿಕ ಸತ್ಯತ್ವಕ್ಕೆ ಮಿಥ್ಯಾತ್ವ ಸಿದ್ಧವಾಗಬೇಕಾದರೆ, ಶ್ರುತಿಗೂ ಅಪ್ರಸಕ್ತ ನಿಷೇಧತ್ವರೂಪ ದೋಷ ಬಾರದಿರಬೇಕಾದರೆ ಶ್ರುತಿಯು ಪ್ರತ್ಯಕ್ಷವನ್ನು ಬಾಧಿಸಲೇಬೇಕು. ಆದರಿಂದ ಮಿಥ್ಯಾತ್ವ ಶ್ರುತಿಯೇ ಸತ್ಯತ್ವಪ್ರತ್ಯಕ್ಷವನ್ನು ಬಾಧಿಸುತ್ತದೆ ಎನ್ನುತ್ತೇವೆ.

ಯದ್ಯಪಿ ಮಿಥ್ಯಾತ್ವಾನುಮಾನವೂ ಶ್ರುತಿಯೂ ಅತೀಂದ್ರಿಯ ಇಂದ್ರಿಯವೆಂದು ಭೇದವಿಲ್ಲದೆ ಸರ್ವಪ್ರಪಂಚದಲ್ಲಿ ಮಿಥ್ಯಾತ್ವವನ್ನು ಹೇಳುತ್ತಿರುವಾಗ, ಇಂದ್ರಿಯರೂಪ ಯತ್ಕಿಂಚಿತ್ ಪ್ರಪಂಚಕ್ಕೆ ಸತ್ವವನ್ನು ಹೇಳುವ ಪ್ರತ್ಯಕ್ಷವು ಬಾಧಕವಾಗಬೇಕು. ಆದರೆ ಪ್ರತ್ಯಕ್ಷವು ಶುಕ್ತಿರೂಪ್ಯಾದಿ ಇಂದ್ರಿಯ ಸ್ಥಳದಲ್ಲಿಯೇ ದೋಷದುಷ್ಟವಾಗಿದ್ದು ಅಸಾಧಕವೆನಿಸುವುದು ಕಂಡಿದೆ. ಆದರಿಂದ ಘಟಾದಿಸ್ಥಳದಲ್ಲಿಯೂ ದೋಷವು ಸಂಭಾವಿತ. ಆದರಿಂದ ಅದು ದುರ್ಬಲ. ಶ್ರುತಿಯು ಅಪೌರುಷೇಯವಾದ್ದರಿಂದ ಅದರಲ್ಲಿ ದೋಷ ಅಸಂಭಾವಿತ. ಹೀಗಾಗಿ ಅದು ಪ್ರಬಲ. ಅನುಮಾನವೂ ವ್ಯಾಪ್ತಿಪಕ್ಷಧರ್ಮತಾಗಳಿರುವುರಿಂದ ನಿರ್ದುಷ್ಟವಾಗಿದ್ದು ಪ್ರಬಲವಾಗಿರುತ್ತದೆ.

'ಆಕಾಶವು ನೀಲವಾಗಿದೆ' ಎನ್ನುವ ಪ್ರಬಲ ಪ್ರತ್ಯಕ್ಷವೂ ಕೂಡ 'ಆಕಾಶವು ರೂಪರಹಿತವಾಗಿದೆ ವಿಭುದ್ರವ್ಯವಾದ್ದರಿಂದ' ಎಂಬ ಅನುಮಾನದಿಂದ ಬಾಧಿತವಾಗುವುದು ಕಂಡಿದೆ. 'ಪ್ರಾದೇಶ ಪರಿಮಿತ' 'ಚೋಟನಷ್ಟು ಗ್ರಾತದವನು' ಚಂದ್ರ ಎನ್ನುವ ಪ್ರಬಲ ಪ್ರತ್ಯಕ್ಷವೂ ಕೂಡ,

'ಅಷ್ಟಾಶೀತಿ ಸಹಸ್ರಾಣಿ ವಿಸ್ತೀರ್ಣೋ ಯೋಜನಾನಿ ತು
ಪ್ರಮಾಣಂ ತತ್ರವಿಜ್ಞೇಯಂ ಕಲಾಃ ಪಂಚದಶೈವ ತು ॥'

'ಎಂಬತ್ತೆಂಟುಸಾವಿರ ಯೋಜನ ವಿಸ್ತಾರ ಉಳ್ಳವನು ಹದಿನೈದು ಕಲೆಗಳುಳ್ಳವನು ಚಂದ್ರ' ಎನ್ನುವ ಆಗಮದಿಂದ ಬಾಧಿತವಾಗುವುದು ಕಂಡಿದೆ. ಅದರಿಂದ ಘಟಾದಿ ಪ್ರಪಂಚದಲ್ಲಿ ಸತ್ಯತ್ವಗ್ರಾಹಿಯಾದ ಪ್ರತ್ಯಕ್ಷವು ಮಿಥ್ಯಾತ್ವಾನುಮಾನ ಶ್ರುತಿಗಳಿಂದ ಬಾಧ್ಯವೆನ್ನುವುದೇ ಸೂಕ್ತ.

❖❖❖

# 10. प्रथममिथ्यात्वनिरुक्तिभङ्गः

**उच्यते । मिथ्यात्वं हि त्वयैव पक्षान्तरनिषेधेन पञ्चधा निरुक्तम् । तत्राद्ये किं सत्त्वे सत्यसत्त्वरूपविशिष्टस्याभावोऽभिप्रेतः ? किंवा सत्त्वात्यन्ताभावासत्त्वात्यन्ताभावरूपधर्मद्वयम् ? यद्वा सत्त्वात्यन्ताभाववत्त्वे सति असत्त्वात्यन्ताभाववत्त्वरूपं विशिष्टम् ? नाद्यः । मन्मते सदेकस्वभावे जगति तस्य सिद्धत्वात् । न द्वितीयः । व्याहतेः । निर्धर्मकब्रह्मवत्सत्त्वराहित्येऽपि सद्रूपत्वेनामिथ्यात्वोपपत्त्यार्थान्तराच्च ।**

अग्रेतनदूषणन्यूनताशङ्कामादौ परिहरन्नाह **मिथ्यात्वमिति । सदेकेति ।** विशेष्याभाव प्रयुक्त विशिष्टाभाव सत्वादिति भावः । उपलक्षणमेतत् । सत्त्वे सत्यसत्त्वरूपविशिष्टस्य प्रतियोगिनोऽप्रसिध्या साध्याप्रसिद्धिरित्यपि बोध्यम् । **व्याहतेरिति ।** सत्त्वासत्त्वयोर्नित्यत्वानित्यत्वयोरिव परस्परविरहरूपत्वादित्यर्थः । ननु सत्त्वासत्त्वयोः परस्परविरहरूपत्वेऽपि प्रपञ्चे न तदुभयाभावसिद्धिविरोधः । घटात्यन्ताभावस्य घटतदत्यन्ताभावानधिकरणत्वदर्शनादिति चेन्न । घटात्यन्ताभावे घटो नास्तीत्यबाधितप्रतीत्या घटात्यन्ताभावस्य स्वाधिकरणत्वेन दृष्टान्तासम्मतेः । नचैवमात्माश्रयदोषः । दृश्यत्वमिथ्यात्वयोर्दृश्यत्वमिथ्यात्वाधारत्ववत् सिद्धविषयत्वेनादोषत्वादिति भावः । सत्त्वासत्त्वयोरुभयोरपि भावरूपत्वमभ्युपेत्याह **निर्धर्मकब्रह्मवदिति ।**

❖❖❖

# ಪ್ರಥಮ ಮಿಥ್ಯಾತ್ವ ನಿರುಕ್ತಿಭಂಗ

**ಉಚ್ಯತೇ। ಮಿಥ್ಯಾತ್ವಂ ಹಿ ತ್ವಯೈವ ಪಕ್ಷಾಂತರನಿಷೇಧೇನ ಪಂಚಧಾ ನಿರುಕ್ತಂ। ತತ್ರ ಆದ್ಯೇ ಕಿಂ 'ಸತ್ವೇ ಸತಿ ಅಸತ್ವ' ರೂಪ ವಿಶಿಷ್ಟಸ್ಯ ಅಭಾವಃ ಅಭಿಪ್ರೇತಃ? ಕಿಂ ವಾ ಸತ್ವಾತ್ಯಂತಾಭಾವ–ಅಸತ್ವಾತ್ಯಂತಾಭಾವ ರೂಪ ಧರ್ಮ ದ್ವಯಂ? ಯದ್ವಾ ಸತ್ವಾತ್ಯಂತಾಭಾವವತ್ವೇ ಸತಿ ಅಸತ್ವಾತ್ಯಂತಾಭಾವ ವತ್ತ್ವರೂಪಂ ವಿಶಿಷ್ಟಂ? ನಾದ್ಯಃ। ಮನ್ಮತೇ ಸದೇಕ ಸ್ವಭಾವೇ ಜಗತಿ ತಸ್ಯ ಸಿದ್ಧತ್ವಾತ್ ।**

ಅದ್ವೈತಿಗಳು ನೀಡಿರುವ ಐದು ಬಗೆಯ ಮಿಥ್ಯಾತ್ವ ನಿರುಕ್ತಿ ಎಲ್ಲವೂ ಹೇಗೆ ಅಯುಕ್ತವೆಂಬುದನ್ನು ನಾವು ಹೇಳುತ್ತೇವೆ—ಬೇರೆ ಎಲ್ಲ ಪಕ್ಷಗಳನ್ನೂ ನೀನೇ ನಿರಾಕರಣ ಮಾಡಿ ಐದು ಬಗೆಯಿಂದ ನಿನಗೆ ಸಮ್ಮತವಾದ ನಿರುಕ್ತಿಯನ್ನು ನೀನು ನೀಡಿರುವೆ. ಅವುಗಳಲ್ಲಿ ಮೊದಲನೆ ನಿರ್ವಚನಪ್ರಕಾರ ಮಿಥ್ಯಾತ್ವವೆಂದರೆ 'ಸದಸತ್ವಾನಧಿಕರಣತ್ವ'. ಇದು ಸತ್‌ಶಬ್ದವನ್ನು ಸತ್ವಪರವಿಟ್ಟುಕೊಂಡು ಸತ್ವವಿಶಿಷ್ಟ ಸತ್ವದ ಒಂದು ಅನಧಿಕರಣತ್ವವಿರಬಹುದು. ಸತ್ವಾಸತ್ವಗಳ ಎರಡು ಅನಧಿಕರಣತ್ವಗಳಿರಬಹುದು ಅಥವಾ ಸತ್ವಾಸತ್ವಗಳಲ್ಲೊಂದರ ಅನಧಿಕರಣತ್ವದಿಂದ ವಿಶಿಷ್ಟವಾದ ಇನ್ನೊಂದರ ಅನಧಿಕರಣತ್ವವೂ ಇರಬಹುದು.

ಈ ಮೂರು ಪಕ್ಷಗಳಲ್ಲಿ ಪ್ರಥಮ ನಿರ್ವಚನವು ಅಸಮಂಜಸವೆ. ಮೊದಲಿಗೆ 'ಸದಸತ್ವ'ದ ಅಂದರೆ ಸತ್ವವಿಶಿಷ್ಟ ಅಸತ್ವದ ಒಂದು ಅನಧಿಕರಣತ್ವವು ನನಗೆ ಇಷ್ಟವೆ. ಪ್ರಪಂಚದಲ್ಲಿ ಯಾವುದೂ ಸತ್ವವಿಶಿಷ್ಟ ಅಸತ್ವಕ್ಕೆ ಅಧಿಕರಣವಾಗುವುದಿಲ್ಲ. ಸ್ವಭಾವತಃ ಸತ್ವಕ್ಕೇ ಅಧಿಕರಣವಾಗಬಹುದು ಅಥವಾ ಅಸತ್ವಕ್ಕೇ ಅಧಿಕರಣವಾಗಬಹುದು. ಸತ್ತೂ ಅಸತ್ತೂ ಆಗಬಲ್ಲ ಒಂದು ಪದಾರ್ಥ ಪ್ರಪಂಚದಲ್ಲಿ ಇಲ್ಲ. ಆದರಿಂದ ಸದೇಕಸ್ವಭಾವವಾದ ಪ್ರಪಂಚದಲ್ಲಿ ನನ್ನ ಮತಪ್ರಕಾರ ಸತ್ವ ವಿಶಿಷ್ಟ ಅಸತ್ವದ ಅಧಿಕರಣತ್ವಾಭಾವ ಸಿದ್ಧವೇ ಆಗಿರುವುದರಿಂದ ಸಿದ್ಧಸಾಧನತ್ವ. ಸತ್ವವಿಶಿಷ್ಟ ಅಸತ್ವವೆಂಬ ಒಂದು ವಿಶಿಷ್ಟಪದಾರ್ಥ ಅಪ್ರಸಿದ್ಧವಾದ್ದರಿಂದ ತಾರ್ಕಿಕ ಮತಪ್ರಕಾರ ಪ್ರತಿಯೋಗಿ ಅಪ್ರಸಿದ್ಧಿಯಿಂದ ಅವರ ಅಭಾವರೂಪ ಸಾಧ್ಯವೂ ಅಪ್ರಸಿದ್ಧ. ಅಪ್ರಸಿದ್ಧ ವಿಶೇಷಣತಾ ದೋಷವೂ ಬಂದಿದೆ.

**ನ ದ್ವಿತೀಯಃ, ವ್ಯಾಹತೇಃ ।**

ಮೊದಲನೆ ಪಕ್ಷದಲ್ಲಿ 'ಸಚ್ಚ ತತ್ ಅಸಚ್ಚ ಸದಸತ್, ಸದಸತೋಃ ಭಾವಃ ಸದಸತ್ವಂ, ಅರ್ಥಾತ್ ಸತ್ವವಿಶಿಷ್ಟಸತ್ವಂ। ತಸ್ಯ ಅನಧಿಕರಣತ್ವಂ ಸದಸತ್ವಾನಧಿಕರಣತ್ವಂ' ಎಂದು ವಿಗ್ರಹ. ಈ ಎರಡನೆ ಪಕ್ಷದಲ್ಲಿ ಸಚ್ಚ ಅಸಚ್ಚ ಎಂದು ದ್ವಂದ್ವ. 'ಸದಸತೋಃ ಭಾವೌ ಸದಸತ್ವೇ, ಅರ್ಥಾತ್ ಸತ್ವಾಸತ್ವೇ। ತಯೋಃ ಅನಧಿಕರಣತ್ವಂ ಎಂದು ವಿಗ್ರಹ. ಸತ್ವಾಧಿಕರಣತ್ವ ಅಸತ್ವಾಧಿಕರಣತ್ವಗಳ ಅಭಾವಗಳು ಸತ್ವಾನಧಿಕರಣತ್ವ ಮತ್ತು ಅಸತ್ವಾನಧಿಕರಣತ್ವಗಳು ಮಿಲಿತವಾಗಿ ಸತ್ವಾಸತ್ವಾನಧಿಕರಣತ್ವವೆನಿಸುತ್ತವೆ.

'ಅಷ್ಟಾಶೀತಿ ಸಹಸ್ರಾಣಿ ವಿಸ್ತೀರ್ಣೋ ಯೋಜನಾನಿ ತು
ಪ್ರಮಾಣಂ ತತ್ರವಿಜ್ಞೇಯಂ ಕಲಾಃ ಪಂಚದಶೈವ ತು ॥'

'ಎಂಬತ್ತೆಂಟುಸಾವಿರ ಯೋಜನ ವಿಸ್ತಾರ ಉಳ್ಳವನು ಹದಿನೈದು ಕಲೆಗಳುಳ್ಳವನು ಚಂದ್ರ' ಎನ್ನುವ ಆಗಮದಿಂದ ಬಾಧಿತವಾಗುವುದು ಕಂಡಿದೆ. ಆದರಿಂದ ಘಟಾದಿ ಪ್ರಪಂಚದಲ್ಲಿ ಸತ್ತ್ವಗ್ರಾಹಿಯಾದ ಪ್ರತ್ಯಕ್ಷವು ಮಿಥ್ಯಾತ್ವಾನುಮಾನ ಶ್ರುತಿಗಳಿಂದ ಬಾಧ್ಯವೆನ್ನುವುದೇ ಸೂಕ್ತ.

❖❖❖

# 10. प्रथममिथ्यात्वनिरुक्तिभङ्गः

**उच्यते । मिथ्यात्वं हि त्वयैव पक्षान्तरनिषेधेन पञ्चधा निरुक्तम् । तत्राद्ये किं सत्त्वे सत्यसत्त्वरूपविशिष्टस्याभावोऽभिप्रेतः ? किंवा सत्त्वात्यन्ताभावासत्त्वात्यन्ताभावरूपधर्मद्वयम् ? यद्वा सत्त्वात्यन्ताभाववत्त्वे सति असत्त्वात्यन्ताभाववत्त्वरूपं विशिष्टम् ? नाद्यः । मन्मते सदेकस्वभावे जगति तस्य सिद्धत्वात् । न द्वितीयः । व्याहतेः । निर्धर्मकब्रह्मवत्सत्त्वराहित्येऽपि सद्रूपत्वेनामिथ्यात्वोपपत्त्यार्थान्तराच्च ।**

अग्रेतनदूषणन्यूनताशङ्कामादौ परिहरन्नाह **मिथ्यात्वमिति । सदेकेति ।** विशेष्याभाव प्रयुक्त विशिष्टाभाव सत्वादिति भावः । उपलक्षणमेतत् । सत्त्वे सत्यसत्त्वरूपविशिष्टस्य प्रतियोगिनोऽप्रसिध्या साध्याप्रसिद्धिरित्यपि बोध्यम् । **व्याहतेरिति ।** सत्त्वासत्त्वयोर्नित्यत्वानित्यत्वयोरिव परस्परविरहरूपत्वादित्यर्थः । ननु सत्त्वासत्त्वयोः परस्परविरहरूपत्वेऽपि प्रपञ्चे न तदुभयाभावसिद्धिविरोधः । घटात्यन्ताभावस्य घटतदत्यन्ताभावानधिकरणत्वदर्शनादिति चेन्न । घटात्यन्ताभावे घटो नास्तीत्यबाधितप्रतीत्या घटात्यन्ताभावस्य स्वाधिकरणत्वेन दृष्टान्तासम्मतेः । नचैवमात्माश्रयदोषः । दृश्यत्वमिथ्यात्वयोर्दृश्यत्वमिथ्यात्वाधारत्ववत् सिद्धविषयत्वेनादोषत्वादिति भावः । सत्त्वासत्त्वयोरुभयोरपि भावरूपत्वमभ्युपेत्याह **निर्धर्मकब्रह्मवदिति ।**

❖❖❖

# ಪ್ರಥಮ ಮಿಥ್ಯಾತ್ವ ನಿರುಕ್ತಿಭಂಗ

**ಉಚ್ಯತೇ। ಮಿಥ್ಯಾತ್ವಂ ಹಿ ತ್ವಯ್ಯೈವ ಪಕ್ಷಾಂತರನಿಷೇಧೇನ ಪಂಚಧಾ ನಿರುಕ್ತಂ। ತತ್ರ ಆದ್ಯೇ ಕಿಂ 'ಸತ್ತ್ವೇ ಸತಿ ಅಸತ್ತ್ವ' ರೂಪ ವಿಶಿಷ್ಟಸ್ಯ ಅಭಾವಃ ಅಭಿಪ್ರೇತಃ? ಕಿಂ ವಾ ಸತ್ತ್ವಾತ್ಯಂತಾಭಾವ–ಅಸತ್ತ್ವಾತ್ಯಂತಾಭಾವ ರೂಪ ಧರ್ಮ ದ್ವಯಂ? ಯದ್ವಾ ಸತ್ತ್ವಾತ್ಯಂತಾಭಾವವತ್ತ್ವೇ ಸತಿ ಅಸತ್ತ್ವಾತ್ಯಂತಾಭಾವ ವತ್ತ್ವ ರೂಪಂ ವಿಶಿಷ್ಟಂ? ನಾದ್ಯಃ। ಮನ್ಮತೇ ಸದೇಕ ಸ್ವಭಾವೇ ಜಗತಿ ತಸ್ಯ ಸಿದ್ಧತ್ವಾತ್।**

ಅದ್ವೈತಿಗಳು ನೀಡಿರುವ ಐದು ಬಗೆಯ ಮಿಥ್ಯಾತ್ವ ನಿರುಕ್ತಿ ಎಲ್ಲವೂ ಹೇಗೆ ಅಯುಕ್ತವೆಂಬುದನ್ನು ನಾವು ಹೇಳುತ್ತೇವೆ—ಬೇರೆ ಎಲ್ಲ ಪಕ್ಷಗಳನ್ನೂ ನೀನೇ ನಿರಾಕರಣ ಮಾಡಿ ಐದು ಬಗೆಯಿಂದ ನಿನಗೆ ಸಮ್ಮತವಾದ ನಿರುಕ್ತಿಯನ್ನು ನೀನು ನೀಡಿರುವೆ. ಅವುಗಳಲ್ಲಿ ಮೊದಲನೆ ನಿರ್ವಚನಪ್ರಕಾರ ಮಿಥ್ಯಾತ್ವವೆಂದರೆ 'ಸದಸತ್ತ್ವಾನಧಿಕರಣತ್ವ'. ಇದು ಸತ್‌ಶಬ್ದವನ್ನು ಸತ್ತ್ವಪರವಿಟ್ಟುಕೊಂಡು ಸತ್ತ್ವವಿಶಿಷ್ಟ ಸತ್ತ್ವದ ಒಂದು ಅನಧಿಕರಣತ್ವವಿರಬಹುದು. ಸತ್ತ್ವಾಸತ್ತ್ವಗಳ ಎರಡು ಅನಧಿಕರಣತ್ವಗಳಿರಬಹುದು ಅಥವಾ ಸತ್ತ್ವಾಸತ್ತ್ವಗಳಲ್ಲೊಂದರ ಅನಧಿಕರಣತ್ವದಿಂದ ವಿಶಿಷ್ಟವಾದ ಇನ್ನೊಂದರ ಅನಧಿಕರಣತ್ವವೂ ಇರಬಹುದು.

ಈ ಮೂರು ಪಕ್ಷಗಳಲ್ಲಿ ಪ್ರಥಮ ನಿರ್ವಚನವು ಅಸಮಂಜಸವೆ. ಮೊದಲಿಗೆ 'ಸದಸತ್ತ್ವ'ದ ಅಂದರೆ ಸತ್ತ್ವವಿಶಿಷ್ಟ ಅಸತ್ತ್ವದ ಒಂದು ಅನಧಿಕರಣತ್ವವು ನನಗೆ ಇಷ್ಟವೆ. ಪ್ರಪಂಚದಲ್ಲಿ ಯಾವುದೂ ಸತ್ತ್ವವಿಶಿಷ್ಟ ಅಸತ್ತ್ವಕ್ಕೆ ಅಧಿಕರಣವಾಗುವುದಿಲ್ಲ. ಸ್ವಭಾವತಃ ಸತ್ತ್ವಕ್ಕೇ ಅಧಿಕರಣವಾಗಬಹುದು ಅಥವಾ ಅಸತ್ತ್ವಕ್ಕೇ ಅಧಿಕರಣವಾಗಬಹುದು. ಸತ್ತೂ ಅಸತ್ತೂ ಆಗಬಲ್ಲ ಒಂದು ಪದಾರ್ಥ ಪ್ರಪಂಚದಲ್ಲಿ ಇಲ್ಲ. ಆದರಿಂದ ಸದೇಕಸ್ವಭಾವವಾದ ಪ್ರಪಂಚದಲ್ಲಿ ನನ್ನ ಮತಪ್ರಕಾರ ಸತ್ತ್ವ ವಿಶಿಷ್ಟ ಅಸತ್ತ್ವದ ಅಧಿಕರಣತ್ವಾಭಾವ ಸಿದ್ಧವೇ ಆಗಿರುವುದರಿಂದ ಸಿದ್ಧಸಾಧನತ್ವ. ಸತ್ತ್ವವಿಶಿಷ್ಟ ಅಸತ್ತ್ವವೆಂಬ ಒಂದು ವಿಶಿಷ್ಟಪದಾರ್ಥ ಅಪ್ರಸಿದ್ಧವಾದ್ದರಿಂದ ತಾರ್ಕಿಕ ಮತಪ್ರಕಾರ ಪ್ರತಿಯೋಗಿ ಅಪ್ರಸಿದ್ಧಿಯಿಂದ ಅದರ ಅಭಾವರೂಪ ಸಾಧ್ಯವೂ ಅಪ್ರಸಿದ್ಧ. ಅಪ್ರಸಿದ್ಧ ವಿಶೇಷಣತಾ ದೋಷವೂ ಬಂದಿದೆ.

**ನ ದ್ವಿತೀಯಃ, ವ್ಯಾಹತೇಃ।**

ಮೊದಲನೆ ಪಕ್ಷದಲ್ಲಿ 'ಸಚ್ಚ ತತ್ ಅಸಚ್ಚ ಸದಸತ್, ಸದಸತೋಃ ಭಾವಃ ಸದಸತ್ತ್ವಂ, ಅರ್ಥಾತ್ ಸತ್ತ್ವವಿಶಿಷ್ಟಸತ್ತ್ವಂ। ತಸ್ಯ ಅನಧಿಕರಣತ್ವಂ ಸದಸತ್ತ್ವಾನಧಿಕರಣತ್ವಂ' ಎಂದು ವಿಗ್ರಹ. ಈ ಎರಡನೆ ಪಕ್ಷದಲ್ಲಿ ಸಚ್ಚ ಅಸಚ್ಚ ಎಂದು ದ್ವಂದ್ವ. 'ಸದಸತೋಃ ಭಾವೌ ಸದಸತ್ತ್ವೇ, ಅರ್ಥಾತ್ ಸತ್ತ್ವಾಸತ್ತ್ವೇ। ತಯೋಃ ಅನಧಿಕರಣತ್ವಂ ಎಂದು ವಿಗ್ರಹ. ಸತ್ತ್ವಾಧಿಕರಣತ್ವ ಅಸತ್ತ್ವಾಧಿಕರಣತ್ವಗಳ ಅಭಾವಗಳು ಸತ್ತ್ವಾನಧಿಕರಣತ್ವ ಮತ್ತು ಅಸತ್ತ್ವಾನಧಿಕರಣತ್ವಗಳು ಮಿಲಿತವಾಗಿ ಸತ್ತ್ವಾಸತ್ತ್ವಾನಧಿಕರಣತ್ವವೆನಿಸುತ್ತವೆ.

ಎರಡು ಅನಧಿಕರಣತ್ವಗಳು ಒಂದೆಡೆ ವಿರುದ್ಧವಾದ್ದರಿಂದ ಸಮುಚ್ಚಿತವಾಗಿ ಮಿಲಿತವಾಗಿ ಅವು ಬರಲಾರವು. ಸತ್ತಾನಧಿಕರಣತ್ವವನ್ನು ಸಾಧನೆ ಮಾಡಿದರೆ ಸತ್ವವಿರೋಧಿಯಾದ ಅಸತ್ವದ ಅಧಿಕರಣತ್ವವೇ ಪ್ರಾಪ್ತವಾಗುತ್ತದೆ. ಆದರಿಂದ ಪುನಃ ಅಸತ್ತಾನಧಿಕರಣತ್ವವನ್ನು ಸಾಧನೆ ಮಾಡಲು ಹೊರಟರೆ ವ್ಯಾಹತಿ ದೋಷ ಬರುತ್ತದೆ.

ನಿತ್ಯತ್ವಾನಿತ್ಯತ್ವಗಳಂತೆ ಸತ್ವಾಸತ್ವಗಳು ಪರಸ್ಪರ ವಿರಹರೂಪವಾಗಿರುವುದರಿಂದ ವಿರೋಧವಿದೆ. ಪರಸ್ಪರ ವಿರಹರೂಪವಾಗಿರುವ ಎರಡು ವಸ್ತುಗಳಲ್ಲಿ ಒಂದಿದ್ದರೆ ಇನ್ನೊಂದು ಇರುವುದಿಲ್ಲ. ಒಂದಿಲ್ಲದಿದ್ದರೆ ಇನ್ನೊಂದು ಇದ್ದೇ ಇರುತ್ತದೆ. ಆ ಇನ್ನೊಂದನ್ನೂ ಇಲ್ಲವೆನ್ನುವುದು 'ನನ್ನ ತಾಯಿ ಬಂಜೆ' ಎನ್ನುವಂತೆ ಸ್ವವ್ಯಾಹತವಾಗುತ್ತದೆ. ಆದರಿಂದ 'ಎರಡೂ ಇಲ್ಲ' ಎನ್ನಬಾರದು.

ಯದ್ಯಪಿ 'ಪರಸ್ಪರ ವಿರಹರೂಪವಾದ ಘಟ ಮತ್ತು ಘಟಾತ್ಯಂತಾಭಾವಗಳು ಎರಡೂ ಘಟಾತ್ಯಂತಾಭಾವದಲ್ಲಿ ಇಲ್ಲದಿರುವುದು ಕಂಡಿದೆ. ಹಾಗೇ ಸತ್ವಾಭಾವ ಅಸತ್ವಾಭಾವಗಳು ಎರಡೂ ಘಟಾದಿಗಳಲ್ಲಿ ಇರಬಹುದು' ಎಂಬ ಶಂಕೆ ಬರಬಹುದು. ಆದರೆ ಘಟಾತ್ಯಂತಾಭಾವದಲ್ಲಿ ಘಟವಿಲ್ಲದಿರುವುದರಿಂದ ಘಟಾತ್ಯಂತಾಭಾವವಿರುವುದು ಅನುಭವದಲ್ಲಿ ಕಂಡಿದೆ. 'ಘಟಾತ್ಯಂತಾಭಾವೇ ಘಟೋ ನಾಸ್ತಿ' ಎಂಬ ಅನುಭವದಂತೆ 'ಘಟಾತ್ಯಂತಾಭಾವದಲ್ಲಿ ಘಟಾತ್ಯಂತಾಭಾವವಿದೆ' ಎಂದೂ ಅನುಭವವಿದೆ. ಆತ್ಮಾಶ್ರಯ ದೋಷವಿದೆ ಎಂದು ಈ ಅನುಭವವನ್ನು ಅಸಾಧಕವೆಂದು ತಳ್ಳಿಹಾಕಲಾಗದು. ದೃಶ್ಯತ್ವದಲ್ಲಿ ದೃಶ್ಯತ್ವ ಮಿಥ್ಯಾತ್ವದಲ್ಲಿ ಮಿಥ್ಯಾತ್ವವಿರುವಂತೆ ಘಟಾತ್ಯಂತಾಭಾವದಲ್ಲಿ ಘಟಾತ್ಯಂತಾಭಾವವಿರಬಹುದು. ಸಿದ್ಧವಿಷಯಕವಾದ್ದರಿಂದ ಆತ್ಮಾಶ್ರಯವು ಇಲ್ಲಿ ದೋಷವಾಗುವುದಿಲ್ಲ.

ಇಲ್ಲಿ ಸಿದ್ಧಿಕಾರನು ಹೇಳುತ್ತಾನೆ— 'ಅಸತ್ವವು ತ್ರಿಕಾಲಾಬಾಧ್ಯತ್ವರೂಪ ಸತ್ವದ ಅಭಾವರೂಪವೆಂದು ನಾನು ಒಪ್ಪುವುದಿಲ್ಲ. ಅದು ಬೇರೆಯೆ. 'ಕ್ವಚಿದಪ್ಯುಪಾಧೌ ಸತ್ವೇನ ಅಪ್ರತೀಯಮಾನತ್ವ'ವೇ ಅಸತ್ವ ಎನ್ನುತ್ತೇನೆ. ಆದರಿಂದ ಸತ್ವಾಸತ್ವಗಳಿಗೆ ಪರಸ್ಪರ ವಿರಹರೂಪತ್ವೇನ ವಿರೋಧ ನಮ್ಮ ಮತದಲ್ಲಿ ಇಲ್ಲ, ವ್ಯಾಹತಿಗೆ ಅವಕಾಶವಿಲ್ಲ' ಎಂದು.

ವಸ್ತುತಃ ಅಸತ್ವವು 'ಸತ್ವೇನ ಅಪ್ರತೀಯಮಾನತ್ವ' ರೂಪವಲ್ಲ. ಅದು ಬೇರೆಯೆ, ಸತ್ವೇನ ಅಪ್ರತೀಯಮಾನತ್ವಕ್ಕೆ ಪ್ರಯೋಜಕವಾಗಿ ಸಿದ್ಧವಾಗುವ ಬೇರೆಯೆ ಒಂದು ಧರ್ಮ. 'ಅಸಚ್ಚೇತ್ ನ ಪ್ರತೀಯೇತ' 'ಅಸತ್ವವಿದ್ದರೆ ಪ್ರತೀಯಮಾನತ್ವವಿರಲಾರದು, ಅಪ್ರತೀಯಮಾನತ್ವವಿರಬೇಕು' ಎಂದು ಅದ್ವೈತ ಮತ. 'ಅಪ್ರತೀಯಮಾನತ್ವಕ್ಕೆ ಅಪ್ರತೀಯಮಾನತ್ವರೂಪವಾದ ಅಸತ್ವವು ಪ್ರಯೋಜಕ'ವೆಂದು ಸಿದ್ಧಿಕಾರ ಹೇಳಿದರೆ, ಆತ್ಮಾಶ್ರಯದೋಷ, ಅಪಸಿದ್ಧಾಂತ. ಸ್ವವ್ಯಾಹತ.

ಯದ್ಯಪಿ ನಮ್ಮ ಸಿದ್ಧಾಂತದಲ್ಲಿ ಅತ್ಯಂತಾಭಾವಕ್ಕೆ ಪ್ರತಿಯೋಗಿಯು ಅಪ್ರಾಮಾಣಿಕ, ಶಶವಿಷಾಣದಂತೆ ಎಲ್ಲಿಯೂ ಇಲ್ಲದುದು. ಅಸತ್ತು. ಆದರಿಂದ ಸತ್ವದ ಅಭಾವವು ಅಸತ್ವವಾದರೆ

ಸತ್ತ್ವವು ಅಸತ್, ಅಪ್ರಾಮಾಣಿಕ. ಅಪ್ರಾಮಾಣಿಕವಾದ ಈ ಸತ್ತ್ವಕ್ಕೂ ಪ್ರಾಮಾಣಿಕವಾದ ಸತ್ತ್ವಾಭಾವಕ್ಕೂ ವಿರೋಧವಿರಲು ಹೇಗೆ ಸಾಧ್ಯ? ಎಂಬ ಸಮಸ್ಯೆ ಬರಬಹುದು. ಆದರೆ ನಾವು ಅತ್ಯಂತಾಭಾವಕ್ಕೆ ಪ್ರತಿಯೋಗಿಯ ವಿರೋಧವನ್ನು ಹೇಳುತ್ತಿಲ್ಲ. ಪ್ರತಿಯೋಗ್ಯಾರೋಪಜನಕ ಸ್ಮೃತಿವಿಷಯವು ಪ್ರಧಾನ. ಶುಕ್ತಿಯಲ್ಲಿ ಅಸತ್ತಾದ ರಜತದ ಆರೋಪಕ್ಕೆ 'ಆಪಣದಲ್ಲಿ ರಜತವನ್ನು ಕಂಡಿದ್ದೇನೆ' ಎನ್ನುವ ಸ್ಮೃತಿಯು ಕಾರಣ. ಸ್ಮೃತಿ ವಿಷಯವಾದ ಆಪಣಸ್ಥರಜತವು ಶುಕ್ತಿಯಲ್ಲಿ ಇಲ್ಲ. ಅದರಿಂದ ರಜತಾತ್ಯಂತಾಭಾವವು ಶುಕ್ತಿಯಲ್ಲಿ ಇರಲು ಸಾಧ್ಯವಾಯಿತು. ಆಪಣದಲ್ಲಿ ರಜತವಿರುವುದರಿಂದ ಅಲ್ಲಿ ರಜತಾತ್ಯಂತಾಭಾವವಿಲ್ಲ. ಹೀಗಾಗಿ ಅತ್ಯಂತಾಭಾವಕ್ಕೆ ಪ್ರಧಾನದಿಂದ ವಿರೋಧವಿದೆ. ಸತ್ತ್ವಾಸತ್ತ್ವಸ್ಥಳದಲ್ಲಿ ಪ್ರಧಾನವಾದ ಸತ್ತ್ವಕ್ಕೂ ಸತ್ತ್ವಾಭಾವಕ್ಕೂ ವಿರೋಧವನ್ನು ಹೇಳುತ್ತೇವೆ. ಪರಸ್ಪರ ಪ್ರತಿಯೋಗಿಕ ವಿರಹರೂಪತ್ವದಿಂದ ವಿರೋಧವಲ್ಲ, ಪರಸ್ಪರ ಪ್ರಧಾನಕ ವಿರಹರೂಪತ್ವವು ವಿರೋಧಕ್ಕೆ ಪ್ರಯೋಜಕ.

ಅಥವಾ ಅತ್ಯಂತಾಭಾವ ಪ್ರತಿಯೋಗಿಯು ಶಶವಿಷಾಣಾದ್ಯಭಾವಸ್ಥಳದಲ್ಲಿ ಅಪ್ರಾಮಾಣಿಕ ವಾದರೂ ಘಟಾದ್ಯಭಾವ ಸ್ಥಳದಲ್ಲಿ ಪ್ರಾಮಾಣಿಕವೆ. ಪ್ರಾಮಾಣಿಕವಾದುದನ್ನು ಹೇಗೆ ನಿಷೇಧ ಮಾಡಲಾದೀತು ಎಂದರೆ ಅದನ್ನು ನಿಷೇಧ ಮಾಡುವುದಿಲ್ಲ, ಅದರ ಸಂಸರ್ಗ ಅಪ್ರಾಮಾಣಿಕ, ಅದನ್ನು ನಿಷೇಧ ಮಾಡುತ್ತೇವೆ. 'ಭೂತಲೇ ಘಟೋ ನಾಸ್ತಿ' ಎಂಬಲ್ಲಿ ಘಟವು ಅಭಾವ ಪ್ರತಿಯೋಗಿಯಾಗಿ ಕಂಡರೂ ಅದು ಘಟದ ನಿಷೇಧವಲ್ಲ. ಘಟಭೂತಲಗಳ ಸಂಸರ್ಗ ನಿಷೇಧವಾಗಿದೆ. 'ಘಟಃ ಪಟೋ ನ' ಎಂಬಲ್ಲಿ ಘಟದಲ್ಲಿರುವ ಪಟಾನ್ಯೋನ್ಯಾಭಾವಕ್ಕೆ ಪಟವು ಪ್ರತಿಯೋಗಿಯಾಗಿ ಕಂಡರೂ ಅಲ್ಲಿ ಪಟವನ್ನು ನಿಷೇಧ ಮಾಡುವುದಿಲ್ಲ. ಪಟದ ಸಂಸರ್ಗವಾದ ತಾದಾತ್ಮ್ಯವನ್ನು ಮಾತ್ರ ನಿಷೇಧಮಾಡುತ್ತೇವೆ. ಹಾಗೇ ಇದು.

**ನಿರ್ಧರ್ಮಕ ಬ್ರಹ್ಮವತ್ ಸತ್ತ್ವರಾಹಿತ್ಯೇऽಪಿ ಸದ್ರೂಪತ್ವೇನ ಅಮಿಥ್ಯಾತ್ವೋಪಪತ್ತ್ಯಾ ಅರ್ಥಾಂತರಾಚ್ಚ ।**

ಸತ್ತ್ವಾಸತ್ತ್ವಗಳು ಪರಸ್ಪರ ವಿರಹರೂಪವೆಂದು ಒಪ್ಪಿದರೆ ವ್ಯಾಹತಿ ನಿಜ. ಆದರೆ ಎರಡೂ ಭಾವರೂಪ ವೆನ್ನುತ್ತೇನೆ. ಅದರಿಂದ ವ್ಯಾಹತಿ ಇಲ್ಲವೆಂದು ಅದ್ವೈತಿ ಹೇಳಿದರೆ ಅಭ್ಯುಪಗಮ ವಾದದಿಂದ ಹೇಳುತ್ತೇವೆ— ನಿರ್ಧರ್ಮಕ ಬ್ರಹ್ಮನಲ್ಲಿ ಸತ್ತ್ವವಿಲ್ಲವೆಂದ ಮಾತ್ರಕ್ಕೆ ಬ್ರಹ್ಮ ಮಿಥ್ಯೆಯಾಗುವುದಿಲ್ಲ. ಏಕೆಂದರೆ ಬ್ರಹ್ಮವು ಸದ್ರೂಪವಾದುದರಿಂದ ಸತ್ತೇ ಆಗಿದೆ, ಮಿಥ್ಯೆಯಲ್ಲ ಎಂದು ಅದ್ವೈತಿ ಹೇಳುತ್ತಾನೆ. ಪ್ರಪಂಚದಲ್ಲಿ ಸತ್ತ್ವವಿಲ್ಲವೆಂದು ಅನುಮಾನದಿಂದ ಅವನು ಸಾಧನೆ ಮಾಡಿದರೂ ಬ್ರಹ್ಮನಂತೆ ಸದ್ರೂಪವಾಗಿಯೆ ಪ್ರಪಂಚವು ಸತ್ಯವೆನಿಸಬಹುದೆಂದು ನಾವೂ ಹೇಳಬಲ್ಲೆವು. ಅದರಿಂದ ಅರ್ಥಾಂತರತ್ವ ದೋಷ.

ಇಲ್ಲಿ ಅದ್ವೈತಸಿದ್ಧಿಕಾರ ಹೇಳುತ್ತಾನೆ— 'ಘಟಃ ಸನ್ ಪಟಃ ಸನ್' ಎಂದು ಮುಂತಾಗಿ ಪ್ರಪಂಚದಲ್ಲಿ ಎಲ್ಲಕಡೆ ಕಂಡುಬರುವ ಸತ್ತ್ವಪ್ರತೀತಿಯು ಎಲ್ಲಕಡೆ ಅನುಗತವಾಗಿ ಒಂದು ಸತ್ಯ

ಬ್ರಹ್ಮವನ್ನು ಒಪ್ಪುವುದರಿಂದಲೇ ಕೂಡುವಾಗ ಅನನುಗತವಾಗಿ ಅನಂತ ಪದಾರ್ಥಗಳಲ್ಲಿ ಅನಂತ ಸದ್ರೂಪತ್ವವನ್ನು ಏಕೆ ಕಲ್ಪಿಸಬೇಕು? ಗೌರವದೋಷ ಬರುತ್ತದೆ. ಆದರಿಂದ ಘಟಾದಿಗಳಲ್ಲಿ ಸತ್ತ್ವಾಭಾವವನ್ನು ಒಪ್ಪಿ ಸದ್ರೂಪತ್ವದಿಂದ ಸತ್ವಪ್ರತೀತಿಯನ್ನು ಕೂಡಿಸುವುದು ಸರಿಯಲ್ಲ. ಮತ್ತು ನಾವು ಸತ್ತ್ವಾಭಾವ ಮತ್ತು ಅಸತ್ತ್ವಾಭಾವಗಳನ್ನು ಅನುಮಾನದಿಂದ ಸಾಧನ ಮಾಡುವುದಿಲ್ಲ. ಸದ್‌ಭೇದ ಅಸದ್‌ಭೇದಗಳನ್ನು ಸಾಧನೆ ಮಾಡುತ್ತೇವೆ. 'ಸದ್ ಭೇದ'ವನ್ನು ನೀವು ಒಪ್ಪಿಕೊಂಡರೆ 'ಸದ್ರೂಪತ್ವ' ಬಲದಿಂದ ಸತ್ವಪ್ರತೀತಿಯನ್ನು ಕೂಡಿಸುವುದು ನಿಮಗೆ ಸ್ವವ್ಯಾಹತವಾಗುವುದು'— ಎಂದು.

ಇದು ಸರಿಯಲ್ಲ. ಬ್ರಹ್ಮನಲ್ಲಿ ಹೇಗೋ ಹಾಗೇ ಪ್ರಪಂಚದಲ್ಲಿಯೂ ಸದ್ರೂಪತ್ವವು ಪ್ರಮಾಣಸಿದ್ಧವೇ ಇದೆ. ಹೊಸದಾಗಿ ಅನುಮಾನದಿಂದ ನಾವು ಕಲ್ಪಿಸುತ್ತಿಲ್ಲ. ಹೊಸದಾಗಿ ಕಲ್ಪಿಸುವ ಪಕ್ಷದಲ್ಲಿ ಗೌರವದೋಷಕ್ಕೆ ಆಸ್ಪದವಿದೆ. ಪ್ರಪಂಚದಲ್ಲಿ ಸದ್ರೂಪತ್ವ ಸಾಧಕವಾದ ಪ್ರಮಾಣವನ್ನು ನೀವು ಆದರಿಸುವುದಿಲ್ಲವಾದರೆ ಬ್ರಹ್ಮನಲ್ಲಿ ಸದ್ರೂಪತ್ವಸಾಧಕವಾದ ಪ್ರಮಾಣವನ್ನು ನಾವು ಆದರಿಸುವುದಿಲ್ಲ. ಶುಕ್ತಿಯಲ್ಲಿ ರಜತವಿಲ್ಲದಿದ್ದರೂ ಭ್ರಮದಿಂದ ರಜತವ್ಯವಹಾರ ಬರುವಂತೆ ಬ್ರಹ್ಮನಲ್ಲಿ ಸದ್ರೂಪತ್ವವಿಲ್ಲದಿದ್ದರೂ ಭ್ರಮದಿಂದ ಸತ್ವವ್ಯವಹಾರ ಎನ್ನುತ್ತೇವೆ. 'ಸನ್‌ಘಟಃ' ಎಂದು ಪ್ರಪಂಚದಲ್ಲಿ ಸತ್ವವ್ಯವಹಾರವು ಅವಿದ್ಯಾದೋಷಪ್ರಯುಕ್ತ ಎನ್ನುವುದು ಅದು ಭ್ರಮವೆಂದು ಸಿದ್ಧವಾದಾಗ ಮಾತ್ರ ಹೇಳಬಹುದಾದ ಮಾತು.

'ಅನೇಕ ಸತ್‌ಕಲ್ಪನೆ ಗೌರವದೋಷ ಗ್ರಸ್ತವೆಂದು ಬಾಧಕತರ್ಕ ಸಹಕೃತವಾದ ಸತ್ತ್ವಾಭಾವಾನುಮಾನದಿಂದ ಪ್ರಪಂಚದಲ್ಲಿ ಸದ್ರೂಪತ್ವಾಭಾವವು ಸಿದ್ಧವಾಗುವುದರಿಂದ ಸದ್ರೂಪತ್ವ ಬಿಟ್ಟುಕೊಂಡು ಅರ್ಥಾಂತರತ್ವವನ್ನು ಹೇಳಲಾಗದು' ಎಂದೂ ಅದ್ವೈತಿ ಹೇಳುತ್ತಾನೆ. ಆದರೆ ಪ್ರಮಾಣಪ್ರಮಿತವಾದ ಸದ್ರೂಪತ್ವವನ್ನು ತರ್ಕವು ಬಾಧಿಸದು. ಬಾಧಿಸುವುದಾದರೆ ಪ್ರಪಂಚದಲ್ಲಿ ಸತ್ವಪ್ರತೀತಿಗೆ ಕೇವಲ ಪ್ರಾತಿಭಾಸಿಕ ಸತ್ವವನ್ನು ಒಪ್ಪಿದರೂ ಗೌರವವೆ ಬರುವುದರಿಂದ ಬೌದ್ಧನಂತೆ ಅಸತ್ವವನ್ನೇ ಒಪ್ಪಬೇಕಾದೀತು. ಜಗತ್ತು ಶೂನ್ಯವೆನಿಸೀತು.

❖❖❖

**पृथिवी इतरभिन्ना पृथिवीत्वादित्यत्र त्रयोदशान्योन्याभावानामिवात्रापि सत्त्वासत्त्वात्यन्ताभावयोः प्रत्येकं प्रसिद्धत्वेन कथंचिदप्रसिद्धविशेषणत्वाभावेऽपि असत्त्वात्यन्ताभावांशे सिद्धसाधनाच्च । नहि सिद्धमसिद्धेन सहोच्चरितमसिद्धं भवति । पृथिवीतरभिन्नेत्यत्र तु जलाद्येकैकान्योन्याभावोऽपि न पृथिवीत्वोपहिते सिद्धः ।**

ननु सत्त्वानधिकरणत्वमित्यस्य सद्रूपानधिकरणत्वमित्येवार्थः। एवं च नार्थान्तरमित्यत आह **पृथिवीति**।

❖❖❖

**ಪೃಥಿವೀ ಇತರಭಿನ್ನಾ ಪೃಥಿವೀತ್ವಾತ್ ಇತ್ಯತ್ರ ತ್ರಯೋದಶಾನ್ಯೋನ್ಯಾಭಾವಾನಾಮಿವ ಅತ್ರಾಪಿ ಸತ್ತ್ವಾಸತ್ತ್ವಾತ್ಯಂತಾಭಾವಯೋಃ ಪ್ರತ್ಯೇಕಂ ಪ್ರಸಿದ್ಧತ್ವೇನ ಕಥಂಚಿತ್ ಅಪ್ರಸಿದ್ಧವಿಶೇಷಣತ್ವಾಭಾವೇಽಪಿ ಅಸತ್ತ್ವಾತ್ಯಂತಾಭಾವಾಂಶೇ ಸಿದ್ಧಸಾಧನಾಚ್ಚ। ನಹಿ ಸಿದ್ಧಮಸಿದ್ಧೇನ ಸಹೋಚ್ಚರಿತಂ ಅಸಿದ್ಧಂ ಭವತಿ। ಪೃಥಿವೀ ಇತರಭಿನ್ನಾ ಇತ್ಯತ್ರ ತು ಜಲಾದಿ ಏಕೈಕಾನ್ಯೋನ್ಯಾಭಾವೋಽಪಿ ನ ಪೃಥಿವೀತ್ವೋಪಹಿತೇ ಪ್ರಸಿದ್ಧಃ।**

'ಜಗತ್ತಿನಲ್ಲಿ ನೀವು ಸತ್ತ್ವಾಭಾವ ಸಾಧನೆ ಮಾಡಿದರೂ ಸದ್ರೂಪತ್ವೇನ ಅರ್ಥಾಂತರವ' ಎಂದರೆ, 'ನಾವು ಸದ್ರೂಪತ್ವಾಭಾವವನ್ನೂ ಸಾಧನೆ ಮಾಡುತ್ತೇವೆ, ಅರ್ಥಾಂತರತ್ವಕ್ಕೆ ಅವಕಾಶವಿಲ್ಲ' ಎಂದು ಅದ್ವೈತಿ ಹೇಳಬಹುದು. ಇದನ್ನು ಒಪ್ಪಿಕೊಂಡು ಬೇರೆ ದೋಷವನ್ನು ಹೇಳುತ್ತಾರೆ. ಸತ್ತ್ವಾಭಾವ ಅಸತ್ತ್ವಾಭಾವಗಳು ಒಂದು ಅಸತ್ತಿನಲ್ಲಿ ಇನ್ನೊಂದು ಸತ್ತಿನಲ್ಲಿ ಎಂದು ಬೇರೆಬೇರೆಯಾಗಿ ಪ್ರಸಿದ್ಧವಿದ್ದರೂ ಮಿಲಿತವಾಗಿ ಒಂದುಕಡೆ ಎಲ್ಲಿಯೂ ಸಿದ್ಧವಾಗಿಲ್ಲದಿರುವುದರಿಂದ ಅಪ್ರಸಿದ್ಧ ವಿಶೇಷಣತ್ವವು ದೋಷ ಎಂದು.

ಇದಕ್ಕೆ ಅದ್ವೈತಿ ಹೇಳುತ್ತಾನೆ, ಮಿಲಿತವಾಗಿ ಎರಡು ಒಂದುಕಡೆ ಸಿದ್ಧವಿಲ್ಲದಿದ್ದರೂ ಬೇರೆಬೇರೆಯಾಗಿ ಪ್ರಸಿದ್ಧವಾಗಿವೆ. ಇಂಥ ಪ್ರಸಿದ್ಧಿಯೂ ಅನುಮಾನಕ್ಕೆ ಸಾಕು. ಇದು ತಾರ್ಕಿಕರಿಗೆ ಸಮ್ಮತವಾಗಿದೆ. ಇದಕ್ಕೆ ಉದಾಹರಣೆ—

'ಪೃಥಿವಿಯು ಇತರ ಭಿನ್ನವಾಗಿದೆ. ಪೃಥಿವೀತ್ವವಿರುವುದರಿಂದ' ಎಂದು. ಇಲ್ಲಿ ಇತರ ಭೇದ ಎಲ್ಲಿ ಇಲ್ಲವೋ ಅಲ್ಲಿ ಪೃಥಿವೀತ್ವವಿಲ್ಲ. ಜಲಾದಿಗಳಂತೆ, ಜಲಾದಿಗಳಲ್ಲಿ ಜಲಾದಿ ಭೇದವಿಲ್ಲ, ಪೃಥಿವೀತ್ವವೂ ಇಲ್ಲ ಎಂದು ವ್ಯತಿರೇಕವ್ಯಾಪ್ತಿ. ಇತರ ಎಂದರೆ ಜಲದಿಂದ ತೊಡಗಿ ಎಲ್ಲ ದ್ರವ್ಯಗಳು ಮತ್ತು ಗುಣ ಕರ್ಮ ಸಾಮಾನ್ಯ ವಿಶೇಷಗಳು ಎಂದು ಹದಿಮೂರು. ಅಭಾವವನ್ನು 'ಇತರ'ವೆಂದು ಗ್ರಹಿಸಿಲ್ಲ. ಏಕೆಂದರೆ ಪೃಥಿವಿಯು ಭಾವವೆಂಬುದು ಸಿದ್ಧವೇ ಇರುವುದರಿಂದ ಅದರಲ್ಲಿ ಅಭಾವಭೇದದ ಬಗ್ಗೆ ವಿಪ್ರತಿಪತ್ತಿ ಇಲ್ಲ. ಹೀಗಾಗಿ ಅಸಿದ್ಧವಾಗಿರುವ ಜಲಾದಿ ತ್ರಯೋದಶ ಭೇದಕೂಟವನ್ನು ಮಾತ್ರ ಪೃಥಿವಿಯಲ್ಲಿ ಸಾಧನೆ ಮಾಡುತ್ತಾರೆ, ತಾರ್ಕಿಕರು. ಯದ್ಯಪಿ ಘಟಾದಿಗಳಲ್ಲಿ ಅದು ಸಿದ್ಧವೆ. ಆದರೆ ಪೃಥಿವೀತ್ವಾವಚ್ಛೇದೇನ, ಅಂದರೆ ಅತೀಂದ್ರಿಯ ಪರಮಾಣ್ವಾದಿಗಳೂ ಸೇರಿದಂತೆ ಎಲ್ಲ ಪೃಥಿವೀಪದಾರ್ಥಗಳಲ್ಲಿ ಜಲಾದಿಭೇದ ಸಿದ್ಧವಿಲ್ಲ. ಅದರಿಂದ ಪೃಥಿವೀತ್ವಾವಚ್ಛೇದೇನ ಅದನ್ನು ಸಾಧನೆ ಮಾಡುತ್ತಿದ್ದಾರೆ. ಅದರಿಂದ ಸಿದ್ಧಸಾಧನತ್ವವಿಲ್ಲ. ಪ್ರತ್ಯೇಕವಾಗಿ ಜಲಾದಿಗಳಲ್ಲಿ ಚಾಲನೀನ್ಯಾಯದಿಂದ ಜಲಾದಿಭೇದ ಸಿದ್ಧವೇ ಇದ್ದರೂ ಮಿಲಿತವಾಗಿ ಕೂಟರೂಪ

ದಿಂದ ಸಿದ್ಧವಾಗಿಲ್ಲದ್ದರಿಂದಲೂ ಸಿದ್ಧಸಾಧನತ್ವವಿಲ್ಲ. ಪ್ರತ್ಯೇಕವಾಗಿ ಸಿದ್ಧವಾಗಿರುವುದರಿಂದ ಅಪ್ರಸಿದ್ಧವಿಶೇಷಣತ್ವವೂ ಇಲ್ಲ ಎನ್ನುತ್ತಾರೆ.

ಅದ್ವೈತಿಗಳು ಈ ಉದಾಹರಣವನ್ನು ತೋರಿಸಿ ಪ್ರಕೃತ ಮಿಥ್ಯಾತ್ವಾನುಮಾನದಲ್ಲಿ ಅಪ್ರಸಿದ್ಧ ವಿಶೇಷಣತ್ವ ದೋಷವಿಲ್ಲ ಎನ್ನುತ್ತಾರೆ. ಆದರೆ ಸತ್ತ್ವಾಭಾವ ಅಸತ್ತ್ವಾಭಾವಗಳು ಮಿಲಿತವಾಗಿ ಪ್ರಪಂಚದಲ್ಲಿ ಉಂಟೆ ಇಲ್ಲವೆ ಎಂದು ವಿಪ್ರತಿಪತ್ತಿ ಬಂದಿದೆ. ಅದರಿಂದ ಮಿಲಿತವಾಗಿ ಉಂಟೆಂದೇ ಸಾಧನೆ ಮಾಡಬೇಕಾಗಿದೆ. ಅದಕ್ಕೆ 'ಪ್ರತ್ಯೇಕವಾಗಿ ಸಿದ್ಧವಾಗಿರುವುದರಿಂದ ಅಪ್ರಸಿದ್ಧ ವಿಶೇಷಣತ್ವವಿಲ್ಲ' ಎನ್ನುವುದು ವ್ಯಧಿಕರಣವಾಗುತ್ತದೆ. ಮಿಲಿತವಾಗಿ ಸಿದ್ಧವಾಗಿದೆ ಎಂದು ಒಂದುಕಡೆ ಅದನ್ನು ತೋರಿಸಬೇಕಾಗುತ್ತದೆ.

ಆದರೂ 'ಕಥಂಚಿತ್' ಅಂದರೆ, ಪ್ರತ್ಯೇಕವಾಗಿ ಸಿದ್ಧವಾಗಿರುವುದರಿಂದಲೆ ಅಪ್ರಸಿದ್ಧ ವಿಶೇಷಣತ್ವ ಪರಿಹಾರವಾಗಿದೆ ಎಂದು ಅಭ್ಯುಪಗಮವಾದದಿಂದ ಇಟ್ಟುಕೊಂಡರೂ ಅಂಶೇ ಸಿದ್ಧ ಸಾಧನತ್ವದೋಷವಿದೆ. ಏಕೆಂದರೆ ಅಸತ್ತ್ವಾತ್ಯಂತಾಭಾವಾಂಶವು ಪ್ರಪಂಚದಲ್ಲಿ ನಮಗೆ ಸಿದ್ಧವೇ ಇದೆ.

'ಅಸತ್ತ್ವಾತ್ಯಂತಾಭಾವವು ಪ್ರತ್ಯೇಕವಾಗಿ ಸಿದ್ಧವಿದ್ದರೂ ಸತ್ತ್ವಾತ್ಯಂತಾಭಾವದಿಂದ ಸಹಿತವಾಗಿ ಸಿದ್ಧವಾಗಿಲ್ಲ' ಎನ್ನಕೂಡದು. ಸಿದ್ಧವಾದುದನ್ನು ಅಸಿದ್ಧದೊಂದಿಗೆ ಹೇಳಿದ ಮಾತ್ರಕ್ಕೆ ಸಿದ್ಧವಾದುದು ಅಸಿದ್ಧವಾಗುವುದಿಲ್ಲ ತಾನೆ? 'ಪೃಥಿವಿಯು ಇತರ ಭಿನ್ನ' ಎನ್ನುವಲ್ಲಿ ಜಲಾದಿಭೇದವು ಪ್ರತಿಯೊಂದು ಪಕ್ಷತಾವಚ್ಛೇದಕ ಪೃಥಿವೀತ್ವ ಸಾಮಾನಾಧಿಕರಣ್ಯೇನ ಘಟಾದಿಗಳಲ್ಲಿ ಸಿದ್ಧವಾಗಿಲ್ಲ, ಘಟತ್ವಾದಿ ಸಾಮಾನಾಧಿಕರಣ್ಯೇನ ಮಾತ್ರ ಸಿದ್ಧವಾಗಿದೆ. ಘಟತ್ವವು ಪಕ್ಷತಾವಚ್ಛೇದಕವಲ್ಲ, ಪ್ರಕೃತ ಪಕ್ಷತಾವಚ್ಛೇದಕಸಾಮಾನಾಧಿಕರಣ್ಯೇನೈವ ಅಸತ್ತ್ವಾತ್ಯಂತಾಭಾವವು ಸಿದ್ಧವಾಗಿರುವುದರಿಂದ ತದಂಶದಲ್ಲಿ ಸಿದ್ಧಸಾಧನತ್ವದೋಷವು ಅಪರಿಹಾರ್ಯ.

❖❖❖

**दृष्टान्तस्य साध्यवैकल्याच्च । पृथिवीत्वहेतुस्तु केवलव्यतिरेकी । त्रयोदशान्योन्याभावरूपसाध्यस्य व्यतिरेकनिरूपणं तु भिन्नाश्रितानामपि त्रयोदशान्योन्याभावानां समूहालम्बनैकज्ञानोपारूढत्वमात्रेण युक्तम् ।**

**अत एव न तृतीयः । व्याहतेरर्थान्तरात् दृष्टान्ते साध्यवैकल्याच्च ।**

**किञ्च यथा अनित्ये वाङ्मनसे इत्यत्र पक्षतावच्छेदक नानात्वेनांशे सिद्धसाधनत्वेऽपि पृथिवीतरभिन्नेत्यत्र पक्षतावच्छेदकैक्यान्नांशे**

सिद्धसाधनम्, तथेहापि यद्यपि कथञ्चित् साध्यतावच्छेदकैक्यान्नांशे सिद्धसाधनम् ।

नापि व्यर्थविशेष्यत्वम् । विमतं उपादानापरोक्षज्ञप्तिचिकीर्षा-कृतिमज्जन्यमित्यत्र कृतिग्रहणेनैवेश्वरसिद्धावपि चिकीर्षादेरिव, गुणादिकं गुण्यादिना भिन्नाभिन्नं समानाधिकृतत्वादित्यत्र तार्किकाङ्गीकृतभिन्नत्वस्येव च, व्यापकविशेषणानामुद्देश्यप्रतीत्यर्थ-त्वात् । इह च सद्विलक्षणत्वे सत्यसद्विलक्षणमिति प्रतीतेरुद्देश्यत्वात् ।

यदि चाभेदे सत्यपि घटः कलश इति सामानाधिकरण्या-दर्शनादप्रयोजकत्वनिरासाय विशिष्टधीस्तत्रोद्देश्या तर्हि तुच्छे सद्वैलक्षण्ये सत्यपि दृश्यत्वादर्शनादिहापि सोद्देश्येति समम् ।

तथाप्यप्रसिद्धविशेषणत्वम् । पृथिवी इतरभिन्नेत्यत्र त्वनेकधर्म-साधनपक्ष एव प्रत्येकप्रसिद्ध्या साध्यप्रसिद्धिरुक्ता । अन्यथा शशादीनां प्रत्येकं प्रसिद्ध्या शशशृङ्गोल्लिखितत्वस्यापि सा स्यात् ।

नन्वभावद्वयवृत्तिद्वित्वं साध्यतावच्छेदकम् । नच तदवच्छिन्नसाध्यसिद्धिः पक्षे इत्यत आह **दृष्टान्तस्येति** । मन्मते असत एव भानाभ्युपगमादिति भावः । ननु पृथिवी त्रयोदशान्योन्याभाववतीत्यत्र त्रयोदशत्वमेव साध्यतावच्छेदकं, न तु तत्तदभावत्वम् । तथासति तदवच्छिन्नसाध्यवद्व्यावृत्तत्वेन हेतोरसाधारण्यप्रसङ्गात् । तथाच तदवच्छिन्नसाध्यवतोऽप्रसिद्धत्वेऽपि तदनुमानप्रवृत्तिवत् दृश्यत्वानुमानप्रवृत्ति-रस्त्वित्यत आह **पृथिवीत्वहेतुस्त्विति** । तुशब्दस्य न त्वन्वय्यपीत्यर्थः । ननु त्रयोदशत्वावच्छिन्नाभावानामेकत्रानिरूपणे तदभावनिरूपित व्याप्तेरेवानिरूपणात् नैतदनुमानप्रवृत्तिरुपपद्यत इत्यत आह **त्रयोदशेति** । एकस्य त्रयोदशसाध्य-वतोऽप्रसिद्धावपि भिन्नभिन्नाधिकरणस्थानां एते त्रयोदशान्योन्याभावा इति तेषामभावानां त्रयोदशत्वावच्छिन्नत्वज्ञानसम्भवेन साध्यतावच्छेदकावच्छिन्नप्रसिद्धि-संभवात् व्यतिरेकनिरूपणसंभवेऽनुमानप्रवृत्तिरविकलेत्यर्थः । ननु प्रसाध्याङ्गक एवायं

दृष्टान्त इत्यत आह **किञ्चेति** । यद्यपीत्येतत् किञ्चेत्यस्यानन्तरमेव योज्यम् । **पक्षतावच्छेदकैक्यादिति** । यद्यपि पक्षतावच्छेदकैक्येऽप्यंशतः सिद्धसाधनं व्यवस्थापितमधस्तात् । तथापि सिषाधयिषा घटित पक्षतामभिप्रेत्यैतदुक्तं भवति । विशेषप्रकारसिद्धौ जातायामपि सामान्यधर्मावच्छिन्नसिद्धाविच्छा सिद्धा । **कथञ्चिदिति** । विशिष्टस्य विशेषणविशेष्योभयात्मकत्वेन विशिष्टत्वस्यो-भयपर्याप्तत्वादित्यर्थः । **विमतमिति** । यद्यप्यत्रैकैकजन्यत्वं सिध्यदर्थात्त्रितयजन्यत्व-समूहालम्बनानुमित्या विषयीक्रियत इति चिन्तामणौ कण्ठरवेणाभिहितम् । तथापि तत्प्रतीतेरुद्देश्यत्वे विशिष्टस्य साध्यत्वेनोपादानेऽपि न क्षतिरित्यभिप्रेत्यैतदुक्तमिति ध्येयम् । **तथापीति** । ऐकाधिकरण्यरूपसाध्यतावच्छेदकावच्छिन्नसाध्याप्रसिद्धेरित्यर्थः ।

❖❖❖

**ದೃಷ್ಟಾಂತಸ್ಯ ಸಾಧ್ಯ ವೈಕಲ್ಯಾಚ್ಚ ।**

'ಸತ್ತ್ವಾಭಾವ ಮತ್ತು ಅಸತ್ತ್ವಾಭಾವ' ಇವುಗಳ ದ್ವಯವು ಸಾಧ್ಯ. ಅಂದರೆ ದ್ವಿತ್ವಾವಚ್ಛಿನ್ನ ಸತ್ತ್ವಾಭಾವಾಸತ್ತ್ವಾಭಾವಗಳು ಸಾಧ್ಯ. ದ್ವಿತ್ವವು ಸಾಧ್ಯತಾವಚ್ಛೇದಕ. ತತ್ತ್ವವಾದಿಗೆ ಪ್ರಪಂಚದಲ್ಲಿ ಅಸತ್ತ್ವಾಭಾವವು ಸಿದ್ಧವಾಗಿದ್ದರೂ ಅದು ಪ್ರತ್ಯೇಕವಾಗಿ ಅಸತ್ತ್ವಾಭಾವತ್ವೇನ ಸಿದ್ಧವಾಗಿದೆ ಹೊರತು ದ್ವಿತ್ವವಿಶಿಷ್ಟವಾಗಿ ಸತ್ತ್ವಾಭಾವಾಸತ್ತ್ವಾಭಾವಗಳು ಸಿದ್ಧವಾಗಿಲ್ಲ ಆದರಿಂದ ಸಿದ್ಧಸಾಧನವಿಲ್ಲ'—ಎಂದು ಹೇಳಿದರೆ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ. ದೃಷ್ಟಾಂತವಾದ ಶುಕ್ತಿರಜತದಲ್ಲಿ ತತ್ತ್ವವಾದಿಯು ಸತ್ತ್ವಾಭಾವ ವನ್ನು ಮಾತ್ರ ಒಪ್ಪಿದ್ದಾನೆ. ಅಸತ್ತ್ವಾಭಾವವನ್ನು ಒಪ್ಪಿಲ್ಲ. ಸಾಧ್ಯತಾವಚ್ಛೇದಕ ದ್ವಿತ್ವಾವಚ್ಛಿನ್ನವಾದ ಸತ್ತ್ವಾಭಾವ ಅಸತ್ತ್ವಾಭಾವಗಳು ದೃಷ್ಟಾಂತದಲ್ಲಿಲ್ಲ. ಆದರಿಂದ ಸಾಧ್ಯವೈಕಲ್ಯ.

**ಪೃಥಿವೀತ್ವ ಹೇತುಸ್ತು ಕೇವಲ ವ್ಯತಿರೇಕೀ । ತ್ರಯೋದಶಾನ್ಯೋನ್ಯಾಭಾವರೂಪ ಸಾಧ್ಯಸ್ಯ ವ್ಯತಿರೇಕ ನಿರೂಪಣಂ ತು ಭಿನ್ನಾಶ್ರಿತಾನಾಮಪಿ ತ್ರಯೋದಶಾನ್ಯೋನ್ಯಾ ಭಾವಾನಾಂ ಸಮೂಹಾಲಂಬನೈಕಜ್ಞಾನೋಪಾರೂಢತ್ವ ಮಾತ್ರೇಣ ಯುಕ್ತಂ ।**

ಮಿಥ್ಯಾತ್ವಾನುಮಾನಕ್ಕೆ ದೃಷ್ಟಾಂತವಾದ ಶುಕ್ತಿರಜತದಲ್ಲಿ ಸಾಧ್ಯವಾಗಿರುವ ಸತ್ತ್ವಾಭಾವ ಅಸತ್ತ್ವಾಭಾವಗಳಲ್ಲಿ ಸತ್ತ್ವಾಭಾವವಿದ್ದರೂ ಅಸತ್ತ್ವಾಭಾವವಿಲ್ಲವಾದ್ದರಿಂದ, ಮಿಲಿತವಾದ ಎರಡು ಅಭಾವವಿಲ್ಲದ್ದರಿಂದ, ಸಾಧ್ಯವೈಕಲ್ಯ ಎನ್ನುವುದಾದರೆ, ಇತರಭೇದಾನುಮಾನದಲ್ಲಿಯೂ ಸಾಧ್ಯವಾಗಿರುವ ಜಲಾದಿ ತ್ರಯೋದಶಭೇದಗಳಲ್ಲಿ ದ್ವಾದಶಭೇದಗಳು ಜಲದಲ್ಲಿದ್ದರೂ ಜಲಭೇದ ಒಂದಿಲ್ಲದ್ದರಿಂದ ತ್ರಯೋದಶ ಭೇದರೂಪ ಸಾಧ್ಯವೈಕಲ್ಯವನ್ನು ಹೇಳಬೇಕಾದೀತು. ಮತ್ತು ತೇಜಃ ಪ್ರಭೃತಿಗಳಲ್ಲಿಯೂ ಹೀಗೇ ದ್ವಾದಶಭೇದಗಳಿದ್ದರೂ ತೇಜೋಭೇದಾದಿಗಳಿಲ್ಲದ್ದರಿಂದ ತ್ರಯೋದಶ

ಭೇದಗಳಿಲ್ಲವೆಂದು ಸಾಧ್ಯವೈಕಲ್ಯ ಎಂಬ ಸಮಸ್ಯೆ ಸಮಾನ.'— ಹೀಗೆ ಹೇಳುವುದು ಸರಿಯಲ್ಲ. ಜಲಾದಿದೃಷ್ಟಾಂತಗಳಲ್ಲಿ ತ್ರಯೋದಶಭೇದ ರೂಪವಾದ ಸಾಧ್ಯ ವೈಕಲ್ಯವಿರುವುದರಿಂದ ಅನ್ವಯವ್ಯಾಪ್ತಿಗ್ರಹಣವಾಗದಿದ್ದರೂ ವ್ಯತಿರೇಕವ್ಯಾಪ್ತಿಯಿಂದಲೇ ಅನುಮಾನವು ಪ್ರವೃತ್ತಿ ಮಾಡಬಹುದು. ಏಕೆಂದರೆ ಇತರ ಭೇದಸಾಧಕವಾದ ಪೃಥಿವೀತ್ವ ಹೇತುವು ಕೇವಲ ವ್ಯತಿರೇಕಿ.

ಯದ್ಯಪಿ ಜಲಾದಿತ್ರಯೋದಶಾಭಾವರೂಪ ಸಾಧ್ಯವು ಅಪ್ರಸಿದ್ಧ. ಆದರಿಂದ ಅದರ ವ್ಯತಿರೇಕವೂ ಅಪ್ರಸಿದ್ಧ. ವ್ಯತಿರೇಕ ಗ್ರಹಣಕ್ಕೆ ಪ್ರತಿಯೋಗಿ ಗ್ರಹಣವು ಆವಶ್ಯಕ. ಹಾಗಿದ್ದರೂ ವ್ಯತಿರೇಕ ಗ್ರಹಣಕ್ಕೆ ಪ್ರತಿಯೋಗಿಗ್ರಹಣ ಬೇಕು ನಿಜ. ಆದರೆ ಅದು ಒಂದು ಅಧಿಕರಣದಲ್ಲಿ ಸಿದ್ಧವಾಗಿರ ಬೇಕೆಂದಿಲ್ಲ. ಜಲಾದಿಭೇದಗಳು ಹದಿಮೂರೂ ಕೂಡ ಪ್ರತ್ಯೇಕವಾಗಿ ತಮ್ಮತಮ್ಮ ಅಧಿಕರಣಗಳಲ್ಲಿ ಸಿದ್ಧವೇ ಇವೆ. ಅವುಗಳ ಜ್ಞಾನವೆ ಪ್ರತಿಯೋಗಿಜ್ಞಾನ. ಆ ಜ್ಞಾನದಿಂದಲೆ ವ್ಯತಿರೇಕಗ್ರಹಣವಾಗುತ್ತದೆ.

ಆದರೆ ಜಲಾದಿ ಪ್ರತಿ ಅಧಿಕರಣಗಳಲ್ಲಿ ಸಾಧ್ಯತಾವಚ್ಛೇದಕಾವಚ್ಛಿನ್ನವಾದ ದ್ವಾದಶ ಭೇದಗಳು ಪ್ರತ್ಯೇಕವಾಗಿ ಬರುವುದರಿಂದ ಅವೆಲ್ಲವೂ ಸಪಕ್ಷಗಳೆ. ಅವುಗಳಲ್ಲಿ ಹೇತುವಾದ ಪೃಥಿವೀತ್ವ ಬಾರದಿರುವುದರಿಂದ ಅಸಾಧಾರಣ್ಯ ಬರುತ್ತದೆ, ಎಂದರೆ, ಇಲ್ಲ. ಏಕೆಂದರೆ ಸಾಧ್ಯತಾವಚ್ಛೇದಕವು ಜಲಭೇದತ್ವಾದಿಗಳಲ್ಲ. ಜಲಾದಿತ್ರಯೋದಶ ಭೇದಗಳು ಪ್ರತ್ಯೇಕವಾಗಿ ಸಾಧ್ಯವಾಗಿರುವುದಿಲ್ಲ. ಅವುಗಳ ಕೂಟ, ಸಮೂಹ ಸಾಧ್ಯ. ಅಂದರೆ, ತ್ರಯೋದಶ ಭೇದಗಳ ಸಮೂಹಾಲಂಬನಾತ್ಮಕಜ್ಞಾನ ವಿಷಯತ್ವ ಅಪೇಕ್ಷಾಬುದ್ಧಿವಿಶೇಷವಿಷಯತ್ವಾದಿ ಧರ್ಮಗಳೇ ಸಾಧ್ಯತಾವಚ್ಛೇದಕ. ಈ ಸಾಧ್ಯತಾವಚ್ಛೇದಕ ಧರ್ಮವು ಪರ್ಯಾಪ್ತಿ ಸಂಬಂಧದಿಂದ ತ್ರಯೋದಶ ಭೇದಗಳ ಸಮುದಾಯದಲ್ಲಿರುತ್ತದೆ ಹೊರತು ಪ್ರತ್ಯೇಕವಾಗಿ ಪ್ರತಿಯೊಂದು ಭೇದದಲ್ಲಿ ಇರುವುದಿಲ್ಲ. ಪ್ರತಿಯೊಂದು ಭೇದವು ಸಾಧ್ಯವೆನಿಸುವುದಿಲ್ಲ. ಹೀಗಾಗಿ ಸಾಧ್ಯತಾವಚ್ಛೇದಕಾವಚ್ಛಿನ್ನಸಾಧ್ಯವು ಜಲಾದಿಗಳಲ್ಲಿ ಎಲ್ಲಿಯೂ ಪ್ರತ್ಯೇಕವಾಗಿ ಬಾರದಿರುವುದರಿಂದ ಅವು ಸಪಕ್ಷವೆನಿಸುವುದಿಲ್ಲ. ಹೇತುವಿಗೆ ಅಸಾಧಾರಣ್ಯವಿಲ್ಲ.

ಪ್ರತ್ಯೇಕ ಅಧಿಕರಣಗಳಲ್ಲಿರುವ ಪ್ರತ್ಯೇಕ ತ್ರಯೋದಶಾಭಾವಗಳ ಸಮೂಹತ್ವೇನ ಜ್ಞಾನವು, ಬೇರೆಬೇರೆ ಕಡೆ ಇರುವ ಎರಡು ಘಟಗಳನ್ನು ಕಂಡಾಗ 'ಘಟಗಳು ಎರಡು' ಎಂದು ದ್ವಿತ್ವೇನ ಜ್ಞಾನಬರುವಂತೆ, ಸಮೂಹಾಲಂಬನ ಬುದ್ಧಿಯಿಂದ ಅಥವಾ ಅಪೇಕ್ಷಾಬುದ್ಧಿಯಿಂದ ಬರುವುದು ಅಶಕ್ಯವಲ್ಲ. ಮಿಥ್ಯಾತ್ವಾನುಮಾನದಲ್ಲಿ ಹೀಗೆ ಸಮಾಧಾನ ಹೇಳಲು ಬರುವುದಿಲ್ಲ. ಅದು ಕೇವಲ ವ್ಯತಿರೇಕಿಯಲ್ಲ. ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವು ಅಲ್ಲಿ ದೋಷವೆ.

ಅದ್ವೈತಿಗಳು ಹೇಳುತ್ತಾರೆ— 'ಸತ್ವಾಭಾವ ಮತ್ತು ಅಸತ್ವಾಭಾವಗಳು ಎರಡು ಪ್ರತ್ಯೇಕವಾಗಿ ಸಾಧ್ಯವಾಗಿದ್ದು ಪ್ರತ್ಯೇಕವಾಗಿ ಪ್ರಸಿದ್ಧವೇ ಆಗಿರುವುದರಿಂದ ಅಪ್ರಸಿದ್ಧವಿಶೇಷಣತ್ವವಿಲ್ಲ. ದೃಷ್ಟಾಂತವಾದ ಶುಕ್ತಿರಜತದಲ್ಲಿ ಅಸತ್ವಾಭಾವವಿಲ್ಲದಿದ್ದರೂ ಸತ್ವಾಭಾವರೂಪ ಸಾಧ್ಯವಿರುವುದರಿಂದ ಸಾಧ್ಯವೈಕಲ್ಯವಿಲ್ಲ. ಸಪಕ್ಷವಾದ ದೃಷ್ಟಾಂತದಲ್ಲಿ ಹೇತುವಿರುವುದರಿಂದ ಅಸಾಧಾರಣ್ಯವೂ ಇಲ್ಲ'

ಎಂದು. ಆದರೆ ಹೀಗೆ ಹೇಳಿದರೆ ಸಾಧ್ಯವಾದ ಅಸತ್ತ್ವಾಭಾವವು ಬ್ರಹ್ಮನಲ್ಲಿ ನಿಶ್ಚಿತವಾಗಿರುವುದರಿಂದ ಬ್ರಹ್ಮನು ಸಪಕ್ಷ. ಅವನಲ್ಲಿ ದೃಶ್ಯತ್ವ ಹೇತು ಇಲ್ಲದ್ದರಿಂದ ಅಸಾಧಾರಣ್ಯ ಪರಿಹಾರವಾಗಿಲ್ಲ. ಆದರಿಂದ ಅಸತ್ತ್ವಾಭಾವರೂಪ ಸಾಧ್ಯವು ಶುಕ್ತಿರಜತ ದೃಷ್ಟಾಂತದಲ್ಲಿ ಇಲ್ಲದ್ದರಿಂದ ಸಾಧ್ಯವೈಕಲ್ಯವೂ ಪರಿಹಾರವಾಗಿಲ್ಲ. ಸತ್ತ್ವಾಭಾವರೂಪ ಸಾಧ್ಯವು ಶುಕ್ತಿರಜತದಲ್ಲಿದ್ದರೂ ಅಸತ್ತ್ವಾಭಾವರೂಪ ಸಾಧ್ಯವಿಲ್ಲದ್ದರಿಂದ, ಮಿಲಿತವಾದ ಅಭಾವದ್ವಯರೂಪ ಸಾಧ್ಯವಿಲ್ಲವೆಂದು ಸಾಧ್ಯವೈಕಲ್ಯವಿದ್ದೇ ಇದೆ.

**ಅತ ಏವ ನ ತೃತೀಯಃ, ವ್ಯಾಹತೇಃ, ಅರ್ಥಾಂತರಾತ್, ದೃಷ್ಟಾಂತೇ ಸಾಧ್ಯವೈಕಲ್ಯಾಚ್ಚ ।**

ದ್ವಿತೀಯಪಕ್ಷಕ್ಕೆ ಇಷ್ಟರವರೆಗೆ ಮಿಲಿತ ಅಭಾವದ್ವಯ ಸಾಧನಮಾಡುವಾಗ ವ್ಯಾಹತಿ ಅರ್ಥಾಂತರ ಸಾಧ್ಯವೈಕಲ್ಯಗಳನ್ನು ಹೇಳಿದ್ದೇವೆ. ವಿಶಿಷ್ಟ ಅಭಾವದ್ವಯ ಸಾಧನಮಾಡುವ ತೃತೀಯಪಕ್ಷದಲ್ಲಿಯೂ ಅವೇ ದೋಷಗಳಿವೆ. ಒಂದು ಅಧಿಕರಣದಲ್ಲಿ ಎರಡು ವಿರುದ್ಧ ಧರ್ಮ ಬರುವುದು ಹೇಗೆ ವ್ಯಾಹತವೋ ಹಾಗೇ ಸಾಮಾನಾಧಿಕರಣ್ಯೇನ ಪರಸ್ಪರವಾಗಿ ಎರಡು ವಿರುದ್ಧ ಧರ್ಮಗಳು ವಿಶೇಷಣ ವಿಶೇಷ್ಯಭಾವದಿಂದ ಸೇರುವುದೂ ವ್ಯಾಹತವೆ.

ಸತ್ತ್ವಾತ್ಯಂತಾಭಾವವು ಬ್ರಹ್ಮನಲ್ಲಿದ್ದರೂ ಸದ್ರೂಪತ್ವೇನ ಅಮಿಥ್ಯಾತ್ವ ಕೂಡುವಂತೆ ಪ್ರಪಂಚದಲ್ಲಿಯೂ ಹಾಗೇ ಅಮಿಥ್ಯಾತ್ವ ಕೂಡಬಹುದೆಂದು ಅರ್ಥಾಂತರತ್ವವೂ ದ್ವಿತೀಯಪಕ್ಷದಂತೆ ತೃತೀಯಪಕ್ಷದಲ್ಲಿದೆ.

ಶುಕ್ತಿರಜತದಲ್ಲಿ ಸತ್ತ್ವಾಭಾವರೂಪ ವಿಶೇಷಣವಿದ್ದರೂ ಅಸತ್ತ್ವಾಭಾವರೂಪ ವಿಶೇಷ್ಯವಿಲ್ಲ ದಿರುವುದರಿಂದ ವಿಶಿಷ್ಟವಾದ ಸಾಧ್ಯದ ಅಭಾವ ಬರುವುದರಿಂದ ಸಾಧ್ಯವೈಕಲ್ಯವೂ ಸಮಾನವೆ.

**ಕಿಂಚ ಯಥಾ 'ಅನಿತ್ಯೇ ವಾಙ್ಮನಸೇ' ಇತ್ಯತ್ರ ಪಕ್ಷತಾವಚ್ಛೇದಕ ನಾನಾತ್ವೇನ ಅಂಶೇ ಸಿದ್ಧಸಾಧನತ್ವೇಽಪಿ, ಪೃಥಿವೀ ಇತರಭಿನ್ನಾ ಇತ್ಯತ್ರ ಪಕ್ಷತಾವಚ್ಛೇದಕೈಕ್ಯಾತ್ ನಾಂಶೇ ಸಿದ್ಧಸಾಧನಂ, ತಥಾ ಇಹಾಪಿ, ಯದ್ಯಪಿ, ಕಥಂಚಿತ್ ಸಾಧ್ಯತಾವಚ್ಛೇದಕೈಕ್ಯಾತ್ ನಾಂಶೇ ಸಿದ್ಧಸಾಧನತ್ವಂ ।**

'ಯದ್ಯಪಿ ಅಂಶೇ ಸಿದ್ಧಸಾಧನತ್ವವಿಲ್ಲ, ವ್ಯರ್ಥವಿಶೇಷ್ಯತ್ವವೂ ಇಲ್ಲ. ಆದರೂ ಅಪ್ರಸಿದ್ಧ ವಿಶೇಷಣತ್ವವಿದೆ' ಎಂದು ಮುಂದಕ್ಕೆ ಅನ್ವಯಮಾಡಬೇಕು.

'ಅನಿತ್ಯೇ ವಾಙ್ಮನಸೇ' ಎಂಬಲ್ಲಿ ಪಕ್ಷತಾವಚ್ಛೇದಕಗಳು ವಾಕ್ತ್ವ ಮತ್ತು ಮನಸ್ತ್ವಗಳೆಂದು ಅನೇಕ ಇವೆಯಾದ್ದರಿಂದ ಸಿದ್ಧಸಾಧನತ್ವವಿದೆ. ಆದರೂ 'ಪೃಥಿವೀ ಇತರಭಿನ್ನಾ' ಎಂಬಲ್ಲಿ ಪಕ್ಷತಾವಚ್ಛೇದಕವು ಒಂದೇ ಇರುವುದರಿಂದ ಅಂಶೇ ಸಿದ್ಧಸಾಧನತ್ವವಿಲ್ಲ. ಹಾಗೇ ಮಿಥ್ಯಾತ್ವಾನು ಮಾನದಲ್ಲಿಯೂ ಕಥಂಚಿತ್ ಸಾಧ್ಯತಾವಚ್ಛೇದಕ ಒಂದೇ ಇದೆ ಎಂದರೆ ಅಂಶೇ ಸಿದ್ಧಸಾಧನತ್ವವಿಲ್ಲ.

'ಅನಿತ್ಯೇ ವಾಙ್‌ಮನಸೇ' 'ಮಾತು ಮನಸ್ಸುಗಳು ಎರಡೂ ಅನಿತ್ಯವಾಗಿವೆ' ಎಂದು ಸಾಧನೆ ಮಾಡುವಾಗ ವಾಕ್ತ್ವರೂಪದಿಂದ ವಾಕ್ಕೂ, ಮನಸ್ತ್ವರೂಪದಿಂದ ಮನಸೂ ಪಕ್ಷವಾಗಿರುವುದರಿಂದ ವಾಕ್ತ್ವಮನಸ್ತ್ವಗಳೆರಡೂ ಪಕ್ಷತಾವಚ್ಛೇದಕಗಳು. ವಾಕ್ತ್ವರೂಪ ಪಕ್ಷತಾವಚ್ಛೇದಕ ಸಾಮಾನಾಧಿಕರಣ್ಯೇನ ವಾಕ್ಕಿನಲ್ಲಿ ಅನಿತ್ಯತ್ವರೂಪ ಸಾಧ್ಯವು ಸಿದ್ಧನೆ ಇರುವುದರಿಂದ ವಾಕ್ಕಿನ ಅಂಶದಲ್ಲಿ ಸಿದ್ಧಸಾಧನತ್ವ ದೋಷವಿದೆ. 'ಪೃಥಿವೀ ಇತರಭಿನ್ನಾ' ಎಂಬಲ್ಲಿ ಘಟದಲ್ಲಿ ಘಟತ್ವ ಸಾಮಾನಾಧಿಕರಣ್ಯೇನ ಜಲಾದಿಭೇದರೂಪಸಾಧ್ಯವು ಸಿದ್ಧವಿದ್ದರೂ ಘಟತ್ವವು ಪಕ್ಷತಾವಚ್ಛೇದಕವಲ್ಲ. ಪಕ್ಷತಾವಚ್ಛೇದಕವು ಪೃಥಿವೀತ್ವ. ಪೃಥಿವೀತ್ವಸಾಮಾನಾಧಿಕರಣ್ಯೇನ ಘಟದಲ್ಲಿ ಇತರ ಭೇದಸಿದ್ಧಿಯು ಉದ್ದಿಷ್ಟವಾಗಿದೆ. ಅದು ಸಿದ್ಧವಿಲ್ಲದಿರುವುದರಿಂದ ಅಂಶೇ ಸಿದ್ಧಸಾಧನತ್ವದೋಷವಿಲ್ಲ.

ಯದ್ಯಪಿ ಪಕ್ಷತಾವಚ್ಛೇದಕ ಒಂದೇ ಇದ್ದರೂ ಅಂಶತಃಸಿದ್ಧಸಾಧನತ್ವ ದೋಷವಿದೆ ಎಂದು ಹಿಂದೆ ಹೇಳಿದ್ದೇವೆ. 'ಸಿದ್ಧಸಾಧನತ್ವಕ್ಕೆ ಉದ್ದಿಷ್ಟಪ್ರತೀತಿ ಸಿದ್ಧವಾಗಿರುವುದೇ ಪ್ರಯೋಜಕ. ಸಿದ್ಧಸಾಧನತ್ವಾಭಾವಕ್ಕೆ ಉದ್ದಿಷ್ಟಪ್ರತೀತಿ ಸಿದ್ಧವಾಗದಿರುವುದೇ ಪ್ರಯೋಜಕ, ಹೊರತು 'ಸಿದ್ಧಸಾಧನಕ್ಕೆ ಪಕ್ಷತಾವಚ್ಛೇದಕ ನಾನಾತ್ವವು ಪ್ರಯೋಜಕ, ಸಿದ್ಧಸಾಧನಾಭಾವಕ್ಕೆ ಪಕ್ಷತಾವಚ್ಛೇದಕೈಕ್ಯವು ಪ್ರಯೋಜಕ' ಎನ್ನಬಾರದು. ಹೀಗೆ ಹೇಳಿದರೆ 'ಸಿದ್ಧಸಾಧನತ್ವ'ವೆಂಬುದು ಅರ್ಥಶೂನ್ಯವಾದ ಪರಿಭಾಷಾ ಮಾತ್ರವಾದೀತು' ಎಂದು ಹೇಳಿದ್ದೇವೆ.

ಆದರಿಂದ ಪಕ್ಷತಾವಚ್ಛೇದಕ ಒಂದೇ ಇದ್ದರೂ ಅಂಶತಃಸಿದ್ಧಸಾಧನವು ದೋಷವೇ. ಆದರೂ ಅದು ಪಕ್ಷತಾ ವಿಘಟಕವಾಗಿ ದೋಷವಾಗುತ್ತದೆ ಎನ್ನುವುದಾದರೆ ಅದಕ್ಕೆ ನಮ್ಮ ಸಮ್ಮತಿ ಇಲ್ಲ. ಸಾಧ್ಯಸಂದೇಹರೂಪಪಕ್ಷತಾ ಇಲ್ಲದಿದ್ದರೂ ಸಿಷಾಧಯಿಷಾ ಬರಬಹುದಾದ್ದರಿಂದ ಸಿಷಾಧಯಿಷಾ ವಿರಹ ವಿಶಿಷ್ಟಸಿದ್ಧ್ಯಭಾವರೂಪ ಪಕ್ಷತಾದಿಂದ ಅನುಮಿತಿ ಬರಬಹುದು. ವಿಶೇಷ ಪ್ರಕಾರೇಣ ಸಿದ್ಧಿ ಇದ್ದರೂ ಸಾಮಾನ್ಯಧರ್ಮ ಪ್ರಕಾರೇಣ ಸಿದ್ಧೀಚ್ಛೆ ಬರುವುದು ಕಂಡಿದೆ. ಹೀಗೆ ಪಕ್ಷತಾವಚ್ಛೇದಕ ನಾನಾತ್ವವಿರುವಾಗ ಅಂಶೇಸಿದ್ಧಸಾಧನತ್ವವು ದೋಷವಾಗುವಂತೆ ಸಾಧ್ಯತಾವಚ್ಛೇದಕ ನಾನಾತ್ವ ವಿರುವಾಗಲೂ ಅಂಶೇಸಿದ್ಧಸಾಧನತ್ವವು ದೋಷವಾಗುವುದು ಯುಕ್ತವೇ. ಸತ್ತ್ವಾಭಾವ ಅಸತ್ತ್ವಾಭಾವ ಗಳನ್ನು ಸತ್ತ್ವಾಭಾವತ್ವೇನ ಅಸತ್ತ್ವಾಭಾವತ್ವೇನ ಎಂದು ನಾನಾ ಅವಚ್ಛೇದಕಾವಚ್ಛೇದೇನ ಸಾಧನ ಮಾಡುವಾಗ ಅಂಶೇಸಿದ್ಧಸಾಧನತ್ವವನ್ನು ಹೇಳುತ್ತಿದ್ದೇವೆ. ಕಥಂಚಿತ್ ಸಾಧ್ಯತಾವಚ್ಛೇದಕವು ಒಂದೇ ಆಗುವುದಾದರೆ ಅಂಶೇಸಿದ್ಧಸಾಧನತ್ವವನ್ನು ಹೇಳುವುದಿಲ್ಲ. ಪ್ರಕೃತ ತೃತೀಯ ಪಕ್ಷದಲ್ಲಿ ಸತ್ತ್ವಾಭಾವ ವಿಶಿಷ್ಟ ಅಸತ್ತ್ವಾಭಾವತ್ವವು ಕಥಂಚಿತ್ ಒಂದು ಧರ್ಮವಾಗಿದ್ದು ಸಾಧ್ಯತಾವಚ್ಛೇದಕವಾಗಿದೆ. ಆದರಿಂದ ಸಿದ್ಧಸಾಧನತ್ವವಿಲ್ಲ.

'ಕಥಂಚಿತ್' ಎಂದೇಕೆ ಹೇಳಿದ್ದೆಂದರೆ ಸ್ವರಸವಾಗಿ ತಾರ್ಕಿಕರ ಪ್ರಕಾರ ವಿಶಿಷ್ಟವು ವಿಶೇಷ್ಯ ವಿಶೇಷಣಗಳೆಂಬ ಎರಡು ಧರ್ಮಗಳೇ ಹೊರತು ಅತಿರಿಕ್ತವಲ್ಲ. ಅದರಲ್ಲಿರುವ ಧರ್ಮಗಳೂ ಎರಡೂ ಬೇರಬೇರೆಯೇ ಹೊರತು ಒಂದಲ್ಲ. ಆದರೆ ವಿಶಿಷ್ಟವು ಅತಿರಿಕ್ತ ಪದಾರ್ಥ ಎನ್ನುವ ಮತದಲ್ಲಿ

ಏಕವಿಶಿಷ್ಟ ಅಪರತ್ವವು ಒಂದೇ ಧರ್ಮವಾಗಿದ್ದು ವಿಶೇಷಣ ವಿಶೇಷ್ಯ ಉಭಯದಲ್ಲಿ ಪರ್ಯಾಪ್ತಿ ಸಂಬಂಧದಿಂದ ಇರುತ್ತದೆ. ಹೀಗೇ ವಿಶಿಷ್ಟವನ್ನು ಸಾಧ್ಯತಾವಚ್ಛೇದಕ ಮಾಡಿದರೆ ಅಂಶೇ ಸಿದ್ಧಸಾಧನ ಸ್ಥಳದಲ್ಲಿ ಸಾಧ್ಯತಾವಚ್ಛೇದಕವು ಒಂದು ಅಂಶದಲ್ಲಿ ಪ್ರತ್ಯೇಕವಾಗಿ ಬರುವುದಿಲ್ಲ. ಅದು ಸಾಧ್ಯಸಿದ್ಧಿ ಎನಿಸುವುದೇ ಇಲ್ಲ. ದೋಷವಾಗುವುದಿಲ್ಲ.

**ನಾಪಿ ವ್ಯರ್ಥ ವಿಶೇಷ್ಯತ್ವಂ। ವಿಮತಂ ಉಪಾದಾನ ಅಪರೋಕ್ಷಜ್ಞಪ್ತಿ ಚಿಕೀರ್ಷಾ ಕೃತಿಮಜ್ಜನ್ಯಂ ಇತ್ಯತ್ರ ಕೃತಿಗ್ರಹಣೇನೈವ ಈಶ್ವರಸಿದ್ಧಾವಪಿ ಚಿಕೀರ್ಷಾದೇರಿವ, ಗುಣಾದಿಕಂ ಗುಣ್ಯಾದಿನಾ ಭಿನ್ನಾಭಿನ್ನಂ ಸಮಾನಾಧಿಕೃತತ್ವಾತ್ ಇತ್ಯತ್ರ ತಾರ್ಕಿಕಾಂಗೀಕೃತ ಭಿನ್ನತ್ವಸ್ಯೇವ ಚ ವ್ಯಾಪಕ ವಿಶೇಷಣಾನಾಂ ಉದ್ದೇಶ್ಯಪ್ರತೀತ್ಯರ್ಥತ್ವಾತ್। ಇಹ ಚ ಸದ್ವಿಲಕ್ಷಣತ್ವೇ ಸತಿ ಅಸದ್ವಿಲಕ್ಷಣಂ ಇತಿ ಪ್ರತೀತೇಃ ಉದ್ದೇಶ್ಯತ್ವಾತ್।**

ಯದ್ಯಪಿ ಮಿಥ್ಯಾತ್ವಾನುಮಾನ ಸಾಧ್ಯಕೋಟಿಯಲ್ಲಿ ವ್ಯರ್ಥವಿಶೇಷ್ಯತ್ವವನ್ನೂ ಕೂಡ ಹೇಳುವಂತಿಲ್ಲ. ಏಕೆಂದರೆ ವ್ಯಾಪಕದಲ್ಲಿ ಸೇರಿಸಿದ ವಿಶೇಷಣವು ಉದ್ದೇಶ್ಯಪ್ರತೀತಿ ಸಿದ್ಧ್ಯರ್ಥವಾಗಿ ಸೇರಿಸಿದ್ದಾಗಿದೆ. ಇದಕ್ಕೆ ಉದಾಹರಣೆ—'ವಿಮತಂ ಉಪಾದಾನ ಅಪರೋಕ್ಷಜ್ಞಪ್ತಿ ಚಿಕೀರ್ಷಾ ಕೃತಿಮಜ್ಜನ್ಯಂ' ಎಂದು ತಾರ್ಕಿಕರ ಈಶ್ವರಾನುಮಾನದಲ್ಲಿ 'ಕೃತಿಮಜ್ಜನ್ಯಂ' ಎಂದಿಷ್ಟೇ ಹೇಳಿದರೂ ಕೃತ್ಯಾಶ್ರಯತ್ವೇನ ಈಶ್ವರಸಿದ್ಧಿಯಾಗುತ್ತಿದ್ದರೂ ಚಿಕೀರ್ಷಾ ಮತ್ತು ಅಪರೋಕ್ಷಜ್ಞಪ್ತಿಗಳನ್ನು ವ್ಯಾಪಕವಿಶೇಷಣವಾಗಿ ಜೊತೆಗೆ ಹೇಳಿದ್ದು, ಈಶ್ವರನು ಅಪರೋಕ್ಷಜ್ಞಾನ ಚಿಕೀರ್ಷಾಗಳುಳ್ಳವನೆಂದು ಸಿದ್ಧನಾಗಲಿ ಎಂಬ ಉದ್ದೇಶದಿಂದ.

ಯದ್ಯಪಿ ಜ್ಞಪ್ತಿಜನ್ಯತ್ವ-ಚಿಕೀರ್ಷಾಜನ್ಯತ್ವ-ಕೃತಿಜನ್ಯತ್ವರೂಪ ಮೂರು ಸಾಧ್ಯಗಳ ಸಮೂಹಾಲಂಬನಾನುಮಿತಿಯಿಂದ ಅರ್ಥಾತ್ ಜ್ಞಪ್ತಿಚಿಕೀರ್ಷಾಕೃತಿರೂಪ ತ್ರಿತಯಜನ್ಯತ್ವ ಸಿದ್ಧಿಸಲಿ ಎಂಬ ಉದ್ದೇಶವಿದೆ. ಆದರಿಂದ ಜ್ಞಪ್ತಿಚಿಕೀರ್ಷಾರೂಪ ವಿಶೇಷಣಗಳು ವ್ಯರ್ಥವೆನ್ನುವ ಶಂಕೆಗೆ ಆಸ್ಪದವಿಲ್ಲ. ಇದು ತತ್ವ ಚಿಂತಾಮಣಿ ಗ್ರಂಥದಲ್ಲಿ ಸ್ಪಷ್ಟವಿದೆ. ಆದರೂ ಜ್ಞಾನೇಚ್ಛಾಕೃತಿಮಜ್ಜನ್ಯತ್ವವೆಂಬ ವಿಶಿಷ್ಟವನ್ನು ಸಾಧ್ಯಮಾಡಿದರೂ ತ್ರಿತಯಜನ್ಯತ್ವ ಪ್ರತೀತಿ ಉಂಟಾಗಲು ಬಾಧಕವಿಲ್ಲ ಎಂಬ ಅಭಿಪ್ರಾಯದಿಂದ ವಿಶಿಷ್ಟವನ್ನೇ ಸಾಧ್ಯಮಾಡಿ ವಿಶೇಷಣಕೃತ್ಯವಿಚಾರ ಮಾಡುತ್ತಿದ್ದಾರೆ.

ಇನ್ನೊಂದು ಉದಾಹರಣೆ— ಗುಣಾದಿಗಳು ಗುಣಾದಿಉಳ್ಳದ್ರವ್ಯಗಳಿಂದ ಭಿನ್ನಾಭಿನ್ನ ವಾಗಿವೆ. ಸಮಾನಾಧಿಕರಣವಾದ್ದರಿಂದ, ಎಂದು ಮೀಮಾಂಸಕರು ಗುಣಗುಣಿಗಳಿಗೆ ಅಭೇದಸಾಧಕ ಅನುಮಾನ ಪ್ರಯೋಗ ಮಾಡುತ್ತಾರೆ. ಇಲ್ಲಿ ಗುಣಗುಣಿ ಭೇದವಾದಿಗಳಾದ ತಾರ್ಕಿಕರಿಗೆ ಭಿನ್ನತ್ವ ಸಿದ್ಧವಾಗಿರುವುದರಿಂದ ಕೇವಲ ಅಭಿನ್ನತ್ವವನ್ನು ಸಾಧನೆ ಮಾಡಿದರೆ ಸಾಕಾಗಿತ್ತು. ಆದರೂ ಭಿನ್ನಾಭಿನ್ನತ್ವವು ಸಿದ್ಧವಾಗಲಿ ಎಂಬ ಉದ್ದೇಶದಿಂದ ಭಿನ್ನತ್ವ ವಿಶೇಷಣ ನೀಡಿದ್ದಾರೆ.

ಹೀಗೆ ವ್ಯಾಪಕವಾದ ಸಾಧ್ಯ ಕೋಟಿಯಲ್ಲಿ ಸೇರಿದ ವಿಶೇಷಣವು ಉದ್ದಿಷ್ಟಾಕಾರದ

ಅನುಮಿತಿಗಾಗಿ ಇರುವುದರಿಂದ ವ್ಯರ್ಥವಲ್ಲ. ಹಾಗೇ ಪ್ರಕೃತ ಸದ್‌ವಿಲಕ್ಷಣತ್ವೇ ಸತಿ ಅಸದ್ ವಿಲಕ್ಷಣತ್ವವೆಂಬ ವಿಶಿಷ್ಟಪ್ರತೀತಿ ಉದ್ದಿಷ್ಟವಾಗಿರುವುದರಿಂದ ವಿಶಿಷ್ಟದಲ್ಲಿ ವಿಶೇಷ್ಯಾಂಶವನ್ನು ವ್ಯರ್ಥವೆನ್ನಲಾಗದು.

ಯದ್ಯಪಿ ಅನ್ವಯ ವ್ಯಾಪ್ತಿಯಲ್ಲಿ ಸಾಧ್ಯವು ವ್ಯಾಪಕವಾದರೂ ವ್ಯತಿರೇಕ ವ್ಯಾಪ್ತಿಯಲ್ಲಿ ಸಾಧ್ಯಾಭಾವವು ವ್ಯಾಪ್ಯವಾಗುವುದರಿಂದ ಸಾಧ್ಯಘಟಕ ವಿಶೇಷಣವು ವ್ಯಾಪ್ಯವಿಶೇಷಣವಾಗುತ್ತದೆ. ವ್ಯಾಪ್ಯವಿಶೇಷಣವು ವ್ಯರ್ಥವಾದರೆ ದೋಷವೇ ಆಗುತ್ತದೆ. ಆದರೆ 'ಶರೀರಜನ್ಯತ್ವಾಭಾವ'ದಲ್ಲಿ ಶರೀರವೆಂಬ ವಿಶೇಷಣ ವ್ಯರ್ಥವಾಗುವುದಿಲ್ಲ. 'ಶರೀರ' ವಿಶೇಷಣರಹಿತವಾದ 'ಜನ್ಯತ್ವಾಭಾವ' ಮತ್ತು ಶರೀರವಿಶೇಷಣಸಹಿತವಾದ 'ಶರೀರ ಜನ್ಯತ್ವಾಭಾವ'ಗಳು ಬೇರೆಬೇರೆ ಅಖಂಡಾಭಾವಗಳು. ಒಂದು ಅಭಾವದಲ್ಲಿ ಜನ್ಯತ್ವಾಭಾವತ್ವ ಶರೀರಜನ್ಯತ್ವಾಭಾವತ್ವಗಳೆಂದು ಎರಡು ಧರ್ಮಗಳಿಲ್ಲ ದಿರುವುದರಿಂದ ಒಂದಕ್ಕೆ ಇನ್ನೊಂದರಿಂದ ಗತಾರ್ಥತ್ವವಿಲ್ಲ. ಹಾಗೇ ವ್ಯಾಪಕಾಭಾವವೂ ಅಖಂಡ ವಾದ ಒಂದು ಅಭಾವ. ಆದರಲ್ಲಿ ವಿಶಿಷ್ಟಾಭಾವತ್ವ ಅವಿಶಿಷ್ಟಾಭಾವತ್ವಗಳೆಂದು ಎರಡು ಧರ್ಮಗಳಿಲ್ಲ. ಹೀಗಾಗಿ ಬೇರೊಂದು ಅಖಂಡಾಭಾವ ಸಂಪಾದಕತ್ವೇನ ವಿಶೇಷಣ ಸಾರ್ಥಕ್ಯವಿದೆ. ವೈಯರ್ಥ್ಯಶಂಕೆಗೆ ಕಾರಣವಿಲ್ಲ.

**ಯದಿ ಚ, ಅಭೇದೇ ಸತ್ಯಪಿ ಘಟಃ ಕಲಶ ಇತಿ ಸಾಮಾನಾಧಿಕರಣ್ಯಾದರ್ಶನಾತ್ ಅಪ್ರಯೋಜಕತ್ವ ನಿರಾಸಾಯ ವಿಶಿಷ್ಟಧೀಃ ತತ್ರ ಉದ್ದೇಶ್ಯಾ, ತರ್ಹಿ, ತುಚ್ಛೇ ಸದ್‌ವೈಲಕ್ಷಣ್ಯೇ ಸತ್ಯಪಿ ದೃಶ್ಯತ್ವಾದರ್ಶನಾತ್ ಇಹಾಪಿ ಸಾ ಉದ್ದೇಶ್ಯಾ ಇತಿ ಸಮಂ।**

'ಗುಣಗುಣಿಗಳಿಗೆ ಕೇವಲ ಅಭಿನ್ನತ್ವಸಾಧನೆ ಮಾಡಿದರೆ ಸಾಕಾಗಿತ್ತು. ಭಿನ್ನತ್ವವನ್ನು ತಾರ್ಕಿಕನು ಒಪ್ಪಿಯೇ ಇದ್ದಾನೆ. ಅದನ್ನು ಸಾಧನೆ ಮಾಡುವುದು ವ್ಯರ್ಥ'—ಹೀಗೆ ಹೇಳುವುದು ಯುಕ್ತವಲ್ಲ. ಕೇವಲ ಅಭಿನ್ನತ್ವ ಸಾಧನೆ ಮಾಡುವ ಪಕ್ಷದಲ್ಲಿ 'ಸಮಾನಾಧಿಕೃತತ್ವಾತ್' ಎಂಬ ಹೇತು ಅಪ್ರಯೋಜಕವಾಗುತ್ತದೆ. 'ಘಟಃ ಕಲಶಃ' ಎಂದು ಹೇಳಿದರೆ ಘಟಕಲಶಗಳಿಗೆ ಅಭಿನ್ನತ್ವವಿದ್ದರೂ 'ಸಮಾನಾಧಿಕೃತತ್ವ' ಸಮಾನಾಧಿಕರಣತ್ವ ಅಂದರೆ ಅಭೇದಾನ್ವಯ ಬೋಧಜನಕವಾದ ಸಮಾನ ವಿಭಕ್ತಿಮತ್ವವಿಲ್ಲ. ಸಮಾನವಿಭಕ್ತಿಯು ಅಭೇದಾನ್ವಯ ಬೋಧಜನಕವಾಗಿಲ್ಲ. 'ತಸ್ಮಿನ್ ಸತಿ ಅಭವತಃ, ತೇನ ವಿನಾಪಿ ಭವತಃ ತದಪ್ರಯೋಜಕತ್ವಾತ್' 'ಅದು ಇದ್ದರೂ ಇಲ್ಲದುದು, ಅದಿಲ್ಲದಿದ್ದರೂ ಇರುವುದು, ಅದಕ್ಕೆ ಪ್ರಯೋಜಕವಲ್ಲ' ಹೀಗಾಗಿ ಸಮಾನಾಧಿಕೃತತ್ವವು ಅಪ್ರಯೋಜಕವಾಗುವ ಪ್ರಸಂಗವಿದೆ. ಅದಕ್ಕೆ ಭಿನ್ನಾಭಿನ್ನತ್ವವನ್ನು ಸಾಧನೆ ಮಾಡಬೇಕು. ಘಟ ಕಲಶಗಳಿಗೆ ಭಿನ್ನಾಭಿನ್ನತ್ವವಿಲ್ಲ. ಕೇವಲ ಅಭೇದವಿದೆ. ಆದರಿಂದ ಭಿನ್ನತ್ವವಿಶಿಷ್ಟ ಅಭಿನ್ನತ್ವ ಪ್ರತೀತಿಯ ಉದ್ದೇಶವಿರುವುದರಿಂದ ಭಿನ್ನತ್ವವಿಶೇಷಣವು ವ್ಯರ್ಥವಲ್ಲ—ಹೀಗೇ ಪ್ರಕೃತದಲ್ಲಿ ಸದ್‌ವೈಲಕ್ಷಣ್ಯಮಾತ್ರವನ್ನು ಸಾಧ್ಯಮಾಡಿದರೆ ಅಸತ್ತಿನಲ್ಲಿ ಸದ್‌ವೈಲಕ್ಷಣ್ಯರೂಪಸಾಧ್ಯವಿದ್ದರೂ ದೃಶ್ಯತ್ವರೂಪ ಹೇತುವಿರುವುದಿಲ್ಲ. ಅದು ಅಪ್ರಯೋಜಕವೆಂದಾದೀತು. ಅದಕ್ಕೆ ಸದ್‌ವೈಲಕ್ಷಣ್ಯ ವಿಶಿಷ್ಟ ಅಸದ್‌ವೈಲಕ್ಷಣ್ಯವನ್ನೇ ಸಾಧನೆ ಮಾಡಬೇಕು. ವಿಶಿಷ್ಟಪ್ರತೀತಿಯೆ ಉದ್ದೇಶ್ಯವೆನ್ನಬೇಕು. ವ್ಯರ್ಥವಿಶೇಷ್ಯತ್ವವಿಲ್ಲ.

**ತಥಾಪಿ ಅಪ್ರಸಿದ್ಧ ವಿಶೇಷಣತ್ವಂ। 'ಪೃಥಿವೀ ಇತರಭಿನ್ನಾ' ಇತ್ಯತ್ರ ತು ಅನೇಕ ಧರ್ಮ ಸಾಧನಪಕ್ಷ ಏವ ಪ್ರತ್ಯೇಕ ಪ್ರಸಿದ್ಧ್ಯಾ ಸಾಧ್ಯಪ್ರಸಿದ್ಧಿರುಕ್ತಾ । ಅನ್ಯಥಾ ಶಶಾದೀನಾಂ ಪ್ರತ್ಯೇಕ ಪ್ರಸಿದ್ಧ್ಯಾ ಶಶಶೃಂಗೋಲ್ಲಿಖಿತತ್ವಸ್ಯಾಪಿ ಸಾ ಸ್ಯಾತ್ ॥**

ತಥಾಪಿ ಅಪ್ರಸಿದ್ಧ ವಿಶೇಷಣತ್ವವು ಮಿಥ್ಯಾತ್ವಾನುಮಾನದಲ್ಲಿ ಅಪರಿಹಾರ್ಯ. ಏಕೆಂದರೆ ಸದ್ವಿಲಕ್ಷಣತ್ವ ಮತ್ತು ಅಸದ್‌ವಿಲಕ್ಷಣತ್ವಗಳಿಗೆ ಸಾಮಾನಾಧಿಕರಣ್ಯವೆಲ್ಲಿಯೂ ಇಲ್ಲದ್ದರಿಂದ ಸಾಮಾನಾಧಿಕರಣ್ಯೇನ ಸದ್ವೈಲಕ್ಷಣ್ಯವಿಶಿಷ್ಟ ಅಸದ್‌ವೈಲಕ್ಷಣ್ಯವು ಅಪ್ರಸಿದ್ಧ.

ಹಾಗಾದರೆ ಪೃಥಿವೀ ಇತರಭಿನ್ನಾ ಎಂಬಲ್ಲಿಯೂ ಜಲಾದಿ ದ್ವಾದಶಭೇದ ವಿಶಿಷ್ಟ ಸಮವಾಯ ಭೇದವು ಎಲ್ಲಿಯೂ ಒಂದು ಅಧಿಕರಣದಲ್ಲಿ ಬರುವುದಿಲ್ಲವಾದ್ದರಿಂದ ಅಪ್ರಸಿದ್ಧ ವಿಶೇಷಣತ್ವ ದೋಷವನ್ನು ಹೇಳಬೇಕಾದೀತು. ಪ್ರತ್ಯೇಕ ಅಧಿಕರಣ ಗಳಲ್ಲಿ ವಿಶೇಷಣ ವಿಶೇಷ್ಯಗಳು ಪ್ರಸಿದ್ಧವಾದ್ದ ರಿಂದ ವಿಶಿಷ್ಟವು ಪ್ರಸಿದ್ಧ ಎಂದು ಅಲ್ಲಿ ದೋಷಪರಿಹಾರ ಮಾಡುವುದಾದರೆ ಮಿಥ್ಯಾತ್ವಾನುಮಾನ ದಲ್ಲಿಯೂ ಹಾಗೇ ಸದ್ವೈಲಕ್ಷಣ್ಯ ಅಸದ್‌ವೈಲಕ್ಷಣ್ಯಗಳು ಪ್ರತ್ಯೇಕ ಅಧಿಕರಣಗಳಲ್ಲಿ ಪ್ರಸಿದ್ಧವಾದ್ದರಿಂದ ವಿಶಿಷ್ಟಪ್ರಸಿದ್ಧಿ ಎಂದೇಕೆ ಹೇಳಬಾರದು?—ಎಂದು ಅದ್ವೈತಿ ಕೇಳುತ್ತಾನೆ. ಇದು ಸರಿಯಲ್ಲ.

ಪೃಥಿವೀ ಇತರ ಭಿನ್ನಾ ಎಂಬಲ್ಲಿ ಜಲಾದಿದ್ವಾದಶಭೇದವಿಶಿಷ್ಟವಾದ ಒಂದು ಸಮವಾಯಿಭೇದ ಸಾಧನಪಕ್ಷದಲ್ಲಿ ಪ್ರತ್ಯೇಕ ಭೇದ ಪ್ರಸಿದ್ಧಿಯಿಂದ ದೋಷ ಪರಿಹಾರ ಮಾಡಿಲ್ಲ. ಅನೇಕ ಜಲಾದಿ ತ್ರಯೋದಶ ಭೇದ ಸಾಧನಪಕ್ಷದಲ್ಲಿಯೇ ಒಂದು ಅಧಿಕರಣದಲ್ಲಿ ಎಲ್ಲ ಭೇದಗಳು ಪ್ರಸಿದ್ಧವಾಗದಿದ್ದರೂ 'ಇವು ಹದಿಮೂರು ಭೇದಗಳು' ಎಂದು ಸಮೂಹಾಲಂಬನವಾದ ಒಂದು ಬುದ್ಧಿಯಲ್ಲಿ ಅವೆಲ್ಲ ಭೇದಗಳು ಜೊತೆಯಾಗಿ ಪ್ರಸಿದ್ಧವಾಗಿವೆ ಎಂದು ಅಪ್ರಸಿದ್ಧಿ ದೋಷಪರಿಹಾರ ಮಾಡಿದ್ದಾರೆ. ವಿಶಿಷ್ಟ ಸಾಧನಪಕ್ಷದಲ್ಲಿ ಅಲ್ಲ.

ವಿಶಿಷ್ಟಸಾಧನ ಪಕ್ಷದಲ್ಲಿಯೂ ವಿಶೇಷಣ ಮತ್ತು ವಿಶೇಷ್ಯಗಳು ಪ್ರತ್ಯೇಕ ಅಧಿಕರಣಗಳಲ್ಲಿ ಪ್ರತ್ಯೇಕವಾಗಿ ಪ್ರಸಿದ್ಧವಾದ ಮಾತ್ರಕ್ಕೇ ಅಪ್ರಸಿದ್ಧಿ ಪರಿಹಾರ ಯುಕ್ತವೆನಿಸುವುದಾದರೆ 'ಭೂಃ ಶಶವಿಷಾಣೋಲ್ಲಿಖಿತಾ ಭೂತ್ವಾತ್' ಎಂಬ ಅನುಮಾನದಲ್ಲಿಯೂ ಶಶವಿಷಾಣೋಲ್ಲಿಖಿತತ್ವರೂಪ ವಿಶಿಷ್ಟದ ಅಪ್ರಸಿದ್ಧಿಯನ್ನು ಶಶ ಒಂದೆಡೆ ಪ್ರಸಿದ್ಧ, ವಿಷಾಣ ಒಂದೆಡೆ ಪ್ರಸಿದ್ಧ ಎಂದು ಮುಂತಾಗಿ ಪ್ರತ್ಯೇಕ ಪ್ರಸಿದ್ಧಿಯನ್ನು ತೋರಿಸಿ ಪರಿಹಾರ ಮಾಡುವ ಪ್ರಸಂಗ ಬಂದೀತು.

❖❖❖

## 11. द्वितीयमित्यात्वनिरुक्तिभङ्गः

**न द्वितीयः । त्रैकालिकनिषेधस्य तात्त्विकत्वेऽद्वैतहानेः ।**

प्रातिभासिकत्वे सिद्धसाधनात् । व्यावहारिकत्वेऽपि तस्य बाध्यत्वेन तात्त्विक सत्त्वाविरोधित्वेनार्थान्तरात् । अद्वैतश्रुतेरतत्वावेदकत्वापाताच्च । तत्प्रतियोगिनोऽप्रातिभासिकस्य प्रपञ्चस्य पारमार्थिकत्वापत्तेश्च ।

किञ्च निषेधप्रतियोगित्वं किं स्वरूपेण किंवा असद्विलक्षणस्वरूपानुपमर्देन पारमार्थिकत्वाकारेण । नाद्यः । श्रुत्यादिसिद्धोत्पत्त्यादिकस्यार्थक्रियासमर्थस्याविद्योपादानकस्य तत्त्वज्ञाननाश्यस्य च वियदादे रूप्यादेश्च धीकाले विद्यमानेनासद्विलक्षणस्वरूपेण त्रैकालिकनिषेधायोगात् ।

त्रैकालिकनिषेधं प्रति स्वरूपेणापणस्थरूप्यं पारमार्थिकत्वा कारेण प्रातिभासिकरूप्यं वा प्रतियोगीति त्वन्मतहानेश्च ।

अत्यन्तासत्त्वापाताच्च । प्रतिपन्नोपाधौ त्रैकालिकनिषेधप्रतियोगित्वमपि ह्यन्यत्रासत्त्वेन संमतस्य पटादेः सर्वत्र त्रैकालिकनिषेधप्रतियोगित्वपर्यन्तमिति त्वन्मतम् । अन्यथा अन्यत्र तत्सत्त्वापातात् । 'नहि तेषामन्यत्र सत्ता सम्भाविनी'ति त्वदुक्तेश्च । तथाच कथं नात्यन्तासत्त्वापत्तिः ।

**अद्वैतहानेरिति** । तथाच ततो भीतेन त्वया त्रैकालिकनिषेधस्य ब्रह्मानतिरिक्तत्वाङ्गीकारेण नाद्वैतहानिः । तथापि ब्रह्मणो वियदादिभावरूपप्रपञ्चप्रतियोगिकत्रैकालिकनिषेधानतिरिक्तत्वे घटादिप्रतियोगिकत्रैकालिकनिषेधवदनुपलब्धिप्रमाणकत्वापातेन भावरूपत्वाभावप्रसङ्गः । भावप्रतियोगिकत्रैकालिकनिषेधस्यानुपलब्धिप्रमाणकत्वनियमात् । अन्यथा घटादेरपि अनुपलब्धिप्रमाणकाभावान्तरास्वीकारप्रसङ्गात् ब्रह्मरूपाभावेनैव घटाद्यभावप्रतीतिव्यवहारोपपत्तेः ब्रह्मण एव तव प्रपञ्चात्यन्ताभावरूपत्वस्वीकारावश्यंभावात् । किञ्च वियदादिप्रपञ्चकारणस्य ब्रह्मणो वियदाद्यभावत्वाङ्गीकारे अवश्यं तत्कारणीभूताभावस्य तत्प्रागभावत्वापत्त्या

तदत्यन्ताभावत्वमेव न स्यात् । प्रागभावरूपत्वे च प्रतियोगिनाऽयत्वाद्यापत्तेश्चेति भावः । **प्रातिभासिकत्व इति ।।** आगन्तुकदोषप्रयुक्तभानत्व इत्यर्थः । तथाच घटवति घटप्रतियोगिकनिषेध इव प्रपञ्चवति ब्रह्मणि अन्यत्र वा तत्प्रतियोगिकनिषेधे आगन्तुकदोष प्रयुक्तभानरूपाध्यास एव परमते पर्यवसित इति प्रपञ्चे तादृशप्रतिषेधप्रतियोगित्वं साधयतः परस्य न तत्र स्वाभिमतमिथ्यात्वसिद्धिः । अत एव प्रपञ्चसत्यत्ववादिना तथा मिथ्यात्वं साधयन्तं (परं) प्रति सिद्धसाधनोद्भावनमर्थान्तरोद्भावनं वा सुकरमिति भावः । **तस्य बाध्यत्वेनेति ।।** अध्यस्तत्वे सत्यागन्तुकदोषाजन्यस्य परेण व्यावहारिकशब्दार्थत्वेन स्वीकृतस्य ब्रह्मज्ञानबाध्यत्वस्वीकारादित्यर्थः । **तात्त्विकसत्त्वाविरोधित्वेनेति ।** परेण समसत्ताकयोरेव विरोधस्वीकारादिति भावः ।। **अद्वैतश्रुतेरिति ।।** यद्यपि परमते अद्वैतश्रुतेरखण्डचिन्मात्रपरत्वेन नातत्त्वावेदकत्वम् । तथापि तच्छ्रुतितः प्रपञ्चमिथ्यात्वसिद्धिं प्रार्थयमानेन परेण न तच्छ्रुतेरखण्डचिन्मात्रपरत्वमङ्गीकार्यम् । अन्यथा मिथ्यात्वशरीरप्रविष्टत्रैकालिकनिषेधासिद्ध्या तद्घटित(मूर्तिक)मिथ्यात्वासिद्धिप्रसङ्गादिति भावः । **तत्प्रतियोगिन इति ।।** व्यावहारिकनिषेधप्रतियोगिन इत्यर्थः । ननु किमेवं विमतः प्रपञ्चः पारमार्थिकः अप्रातिभासिकत्वे सति व्यावहारिकनिषेधप्रतियोगित्वादिति साधनमभिप्रेतं? किं वा पारमार्थिकत्वे अप्रातिभासिकत्वे सति व्यावहारिकनिषेधप्रतियोगित्वं प्रयोजकमभिप्रेतम् ? नाद्यः । व्याप्तिग्रहस्थलाभावात् । न द्वितीयः । त्वदुक्तं प्रयोजकं विनापि ब्रह्मणः पारमार्थिकत्वेन व्यभिचारादिति चेन्न । आद्यपक्षाङ्गीकारे दोषाभावात् । ब्रह्मण एव व्यतिरेकव्याप्तिग्रहस्थलत्वात् । न चाप्रयोजकता । निरुपाधिसहचाररूपतत्सत्त्वेनाप्रयोजकत्वाभावात् । न च तत्रापरिच्छिन्नत्वमेवोपाधिः । तस्य पक्षमात्रव्यावर्तकत्वेन पक्षेतरत्वादिति भावः । **अन्यथेति ।** अन्यत्रासत्त्वेनासंमतत्व इत्यर्थः ।

❖❖❖

## ದ್ವಿತೀಯಮಿಥ್ಯಾತ್ವನಿರುಕ್ತಿಭಂಗ

ನ ದ್ವಿತೀಯಃ । ತ್ರೈಕಾಲಿಕ ನಿಷೇಧಸ್ಯ ತಾತ್ತ್ವಿಕತ್ವೇ ಅದ್ವೈತಹಾನೇಃ । ಪ್ರಾತಿಭಾಸಿಕತ್ವೇ ಸಿದ್ಧಸಾಧನಾತ್ । ವ್ಯಾವಹಾರಿಕತ್ವೇಽಪಿ ತಸ್ಯ ಬಾಧ್ಯತ್ವೇನ ತಾತ್ತ್ವಿಕ ಸತ್ತ್ವಾವಿರೋಧಿತ್ವೇನ

**ಅರ್ಥಾಂತರಾತ್, ಅದ್ವೈತಶ್ರುತೇಃ ಅತತ್ತ್ವಾವೇದಕತ್ವಾಪಾತಾಚ್ಚ। ತತ್ಪ್ರತಿಯೋಗಿನಃ ಅಪ್ರಾತಿಭಾಸಿಕಸ್ಯ ಪ್ರಪಂಚಸ್ಯ ಪಾರಮಾರ್ಥಿಕತ್ವಾಪತ್ತೇಶ್ಚ।**

'ಸರ್ವಸ್ಮಿನ್ ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧಪ್ರತಿಯೋಗಿತ್ವಂ ಮಿಥ್ಯಾತ್ವಂ' ಎಂಬ ದ್ವಿತೀಯ ಮಿಥ್ಯಾತ್ವನಿರುಕ್ತಿಯೂ ಸರಿಯಲ್ಲ. ತ್ರೈಕಾಲಿಕ ನಿಷೇಧವು ತಾತ್ತ್ವಿಕವೆ, ಪ್ರಾತಿಭಾಸಿಕವೆ ಅಥವಾ ವ್ಯಾವಹಾರಿಕವೆ? ಮೂರೂ ಕೂಡುವುದಿಲ್ಲ. ತಾತ್ತ್ವಿಕ ಎನ್ನುವ ಪಕ್ಷದಲ್ಲಿ ಬ್ರಹ್ಮ ಒಂದು ತಾತ್ತ್ವಿಕ, ತ್ರೈಕಾಲಿಕ ನಿಷೇಧವಿನ್ನೊಂದು ತಾತ್ತ್ವಿಕವೆಂದು ಅದ್ವೈತಹಾನಿ ಪ್ರಸಂಗ ಬರುತ್ತದೆ.

ಅದ್ವೈತಹಾನಿಗೆ ಹೆದರಿ ನಿಷೇಧವನ್ನು ಬ್ರಹ್ಮಕ್ಕಿಂತ ಅನತಿರಿಕ್ತ ಎಂದರೆ ಯದ್ಯಪಿ ಅದ್ವೈತಹಾನಿ ಇಲ್ಲ, ಆದರೂ ಆಕಾಶಾದಿಭಾವರೂಪ ಪ್ರಪಂಚಪ್ರತಿಯೋಗಿಕ ತ್ರೈಕಾಲಿಕ ನಿಷೇಧಕ್ಕಿಂತ ಬ್ರಹ್ಮನು ಅತಿರಿಕ್ತನಲ್ಲ ಎಂದರೆ ಘಟಾದಿ ಪ್ರತಿಯೋಗಿಕ ತ್ರೈಕಾಲಿಕ ನಿಷೇಧದಂತೆ ಬ್ರಹ್ಮನೂ ಕೂಡ ಅನುಪಲಬ್ಧಿಪ್ರಮಾಣ ಗಮ್ಯನಾಗುವ ಪ್ರಸಂಗ ಬರುತ್ತದೆ. ಭಾವರೂಪನಲ್ಲ ಎನ್ನಬೇಕಾಗುತ್ತದೆ. ಏಕೆಂದರೆ ಭಾವಪ್ರತಿಯೋಗಿಕ ತ್ರೈಕಾಲಿಕ ನಿಷೇಧವು ಅನುಪಲಬ್ಧಿ ಪ್ರಮಾಣಗಮ್ಯವೆಂದು ನಿಯಮವಿದೆ. ನಿಯಮವಿಲ್ಲದಿದ್ದರೆ ಘಟಾದಿಗಳಿಗೆ ಅನುಪಲಬ್ಧಿಪ್ರಮಾಣಕ ಅಭಾವಾಂತರವನ್ನು ಸ್ವೀಕರಿಸಬೇಕಾಗಿಲ್ಲ. ಸ್ವತಃಸಿದ್ಧಬ್ರಹ್ಮರೂಪ ಅಭಾವದಿಂದಲೇ ಘಟಾಭಾವಪ್ರತೀತಿ ವ್ಯವಹಾರಗಳನ್ನು ಕೂಡಿಸಬಹುದು ತಾನೆ?

ಆಕಾಶಾದಿಪ್ರಪಂಚ ಕಾರಣವಾದ ಬ್ರಹ್ಮವು ಒಂದು ಅಭಾವವೆ ಎಂದು ಅಂಗೀಕರಿಸಿದಾಗ ಆ ಅಭಾವವು ಪ್ರಾಗಭಾವವೆಂದು ಸಿದ್ಧವಾಗುವುದರಿಂದ ಅದಕ್ಕೇ ಅತ್ಯಂತಾಭಾವತ್ವವಿಲ್ಲವಾದೀತು. ಪ್ರಾಗಭಾವವು ಪ್ರತಿಯೋಗಿ ನಾಶ್ಯವಾಗಿರುವುದರಿಂದ ಬ್ರಹ್ಮರೂಪಪ್ರಾಗಭಾವದಿಂದ ಆಕಾಶಾದಿ ಪ್ರಪಂಚ ಹುಟ್ಟಿದಾಗ ಪ್ರತಿಯೋಗಿಯಾದ ಪ್ರಪಂಚದಿಂದ ಪ್ರಾಗಭಾವರೂಪ ಬ್ರಹ್ಮ ನಾಶವಾಗಬೇಕಾದೀತು.

ವಸ್ತುತಃ ತ್ರೈಕಾಲಿಕ ನಿಷೇಧವು ಪ್ರತಿಯೋಗಿ ಘಟಿತವಾಗಿರುವುದರಿಂದ ಸೋಪಾಧಿಕ. ಅದಕ್ಕೆ ನಿರುಪಾಧಿಕ ಬ್ರಹ್ಮರೂಪತ್ವ ಕೂಡಲಾರದು. 'ನಿಷೇಧದಲ್ಲಿ ಪ್ರತಿಯೋಗಿಯು ಉಪಲಕ್ಷಣ ಮಾತ್ರವಾಗಿದೆ ಹೊರತು ವಿಶೇಷಣವಾಗಿಲ್ಲವಾದ್ದರಿಂದ ನಿಷೇಧವು ನಿರುಪಾಧಿಕವೆ, ನಿರುಪಾಧಿಕ ಬ್ರಹ್ಮನಿಂದ ಅದು ಅಭಿನ್ನವಾಗಬಹುದು' ಎಂದರೆ 'ಸತ್ಯಂ ಜ್ಞಾನಂ' ಇತ್ಯಾದಿ ವಾಕ್ಯದಂತೆ 'ಯಃ ಸರ್ವಜ್ಞಃ' ಇತ್ಯಾದಿ ವಾಕ್ಯವೂ ಕೂಡ ತತ್ತ್ವಾವೇದಕವಾಗಬಹುದು.

ಅದ್ವೈತಹಾನಿಪ್ರಸಂಗವು ಉಪಲಕ್ಷಣ. ಶುಕ್ತಿರಜತದ ತ್ರೈಕಾಲಿಕ ನಿಷೇಧವು ವ್ಯಾವಹಾರಿಕ ವೆನ್ನುವ ಪಕ್ಷದಲ್ಲಿ ತಾತ್ತ್ವಿಕತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವರೂಪಸಾಧ್ಯವು ಶುಕ್ತಿರಜತದಲ್ಲಿಲ್ಲ. ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ. ಶುಕ್ತಿರಜತ ನಿಷೇಧವು ತಾತ್ತ್ವಿಕವೆಂದರೆ ತದ್‌ಬೋಧಕವಾದ ಪ್ರತ್ಯಕ್ಷಾದಿ ಪ್ರಮಾಣ ತತ್ತ್ವಾವೇದಕವಾದೀತು.

ಪ್ರಪಂಚಭ್ರಮಕ್ಕೆ ಅಧಿಷ್ಠಾನಸ್ಫುರಣ ಬೇಕು. ಅಧಿಷ್ಠಾನವಾದ ಬ್ರಹ್ಮವು 'ಪ್ರಪಂಚಾಭಾವ ರೂಪವಾಗಿದೆ. 'ಪ್ರಪಂಚಾಭಾವರೂಪಬ್ರಹ್ಮ ಸ್ಫುರಣವಾಗುವಾಗ ಅದರಲ್ಲಿ ಪ್ರಪಂಚಾರೋಪ' ವೆಂದರೆ ವ್ಯಾಹತವಾಗುವುದು.

'ಬ್ರಹ್ಮವು ಪ್ರಪಂಚಾಭಾವರೂಪವಾದರೂ ಇದಂತ್ವಾದಿರೂಪದಿಂದ ಕಾಣುವುದರಿಂದ ಪ್ರಪಂಚಾರೋಪ ವಿರುದ್ಧವಲ್ಲ' ಎಂದರೆ ಅದು ಸರಿಯಲ್ಲ. ಪ್ರಪಂಚಾಭಾವತ್ವವು ಬ್ರಹ್ಮಸ್ವರೂಪವೇ ಆಗಿರುವಾಗ ಬ್ರಹ್ಮಸ್ಫುರಣದಲ್ಲಿ ಅದರ ಸ್ಫುರಣವಾಗದಿರಲು ಕಾರಣವಿಲ್ಲ.

'ಬ್ರಹ್ಮಸ್ಫುರಣ ಸಾಕ್ಷಿರೂಪ. ಪ್ರಪಂಚೋಪಾದಾನವಾದ ಅವಿದ್ಯೆಗೆ ವಿರೋಧಿಯಲ್ಲ' ಎನ್ನಕೂಡದು. ಬ್ರಹ್ಮವು ಅಜ್ಞಾನವಿರೋಧಿಯಾಗದ ಜ್ಞಾನರೂಪವೆನ್ನುವುದೆ ವ್ಯಾಹತ ಮತ್ತು ಸಾಕ್ಷಿವಿಷಯವಾದ ಸುಖಾದಿ ವಿಷಯದಲ್ಲಿ ಅಜ್ಞಾನಪ್ರಸಕ್ತಿಯೂ ಬರುತ್ತದೆ.

ತಾತ್ತ್ವಿಕನಿಷೇಧವು ಬ್ರಹ್ಮಾನತಿರಿಕ್ತವೆಂದರೆ 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯು 'ಇಹ' 'ಈ ಬ್ರಹ್ಮನಲ್ಲಿ' 'ಕಿಂಚನ ನಾನಾ ನಾಸ್ತಿ' 'ಸಕಲಪ್ರಪಂಚ ನಿಷೇಧವಿದೆ' ಎಂದು ನಿಷೇಧಾಧಿಕರಣತ್ವವನ್ನು ಬ್ರಹ್ಮನಲ್ಲಿ ಹೇಳುವುದು ಕೂಡಲಾರದು. 'ಘಟಾಭಾವೇ ಘಟೋ ನಾಸ್ತಿ' ಎಂದು ಘಟಾಭಾವದಲ್ಲಿ ಘಟಾಭಾವ ಸ್ವರೂಪವೇ ಆದ ಘಟಾಭಾವದ ಅಧಿಕರಣತ್ವವು ಕಂಡಿದೆ' ಎಂದರೆ ಅದು ವಿಶೇಷ ಬಲದಿಂದ. ನಿರ್ವಿಶೇಷಬ್ರಹ್ಮನಲ್ಲಿ ವಿಶೇಷಬಲದಿಂದ ಈ ವ್ಯವಹಾರವನ್ನು ಕೂಡಿಸಲಾಗದು.

ತ್ರೈಕಾಲಿಕ ನಿಷೇಧವನ್ನು ಪ್ರಾತಿಭಾಸಿಕವೆಂದು ಹೇಳುವ ಪಕ್ಷದಲ್ಲಿ ಈ ಯಾವ ಅನುಪತ್ತಿಯೂ ಬರುವುದಿಲ್ಲ. ಆದರೆ 'ಪ್ರಾತಿಭಾಸಿಕ'ವೆಂದರೆ 'ಆಗಂತುಕ ದೋಷಪ್ರಯುಕ್ತವಾಗಿ ಕಾಣುವುದು' ಎಂದರ್ಥ. ಇದೇ ಅಧ್ಯಾಸವೆಂದು ಅದ್ವೈತಮತವಿದೆ. ಘಟವಿರುವಲ್ಲಿ 'ಘಟವಿಲ್ಲ' ಎನ್ನುವುದು ಹೇಗೋ ಹಾಗೇ 'ಪ್ರಪಂಚ ಉಳ್ಳಬ್ರಹ್ಮನಲ್ಲಿ ಪ್ರಪಂಚವಿಲ್ಲ' 'ನೇಹ ನಾನಾಸ್ತಿ' ಎಂದು ಆಗಂತುಕ ದೋಷಪ್ರಯುಕ್ತ ಉಂಟಾಗಿರುವ ಅಧ್ಯಾಸವೇ ಹೊರತು ಯಥಾರ್ಥಜ್ಞಾನವಲ್ಲವೆಂದಾಗುವುದು. ಯಥಾರ್ಥಜ್ಞಾನವೆನ್ನುವುದೇ ಅವನ ಮತ. ಹೀಗಾಗಿ 'ಪ್ರಪಂಚವು ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧಪ್ರತಿಯೋಗಿ' ಎಂದು ಅದ್ವೈತಿಯು ಈ ಅಧ್ಯಾಸವನ್ನೇ ಸಾಧನೆ ಮಾಡಿದರೆ ಪ್ರಪಂಚ ಸತ್ಯತ್ವವೇ ಸಿದ್ಧಿಸುವುದು. ಅವನಿಗೆ ಅಭಿಪ್ರೇತವಾದ ಪ್ರಪಂಚಮಿಥ್ಯಾತ್ವ ಸಿದ್ಧಿಸುವುದಿಲ್ಲ. ಆದರಿಂದ ಅವನು ಹೀಗೆ 'ಮಿಥ್ಯಾತ್ವಸಾಧನ' ಮಾಡಿದರೆ ಸತ್ಯತ್ವವಾದಿಯು ಅದನ್ನು ಸಿದ್ಧಸಾಧನವೆನ್ನುತ್ತಾನೆ, ಅಥವಾ ಅರ್ಥಾಂತರವೆಂದು ಸುಲಭವಾಗಿ ಹೇಳುತ್ತಾನೆ.

ತ್ರೈಕಾಲಿಕ ನಿಷೇಧವನ್ನು ವ್ಯಾವಹಾರಿಕವೆಂದು ಹೇಳುವ ಪಕ್ಷದಲ್ಲಿ 'ಅಧ್ಯಸ್ತವಾಗಿದ್ದು ಆಗಂತುಕದೋಷಾಜನ್ಯ'ವಾದುದನ್ನು ಅದ್ವೈತೀಯು 'ವ್ಯಾವಹಾರಿಕ' ಎಂದು ಸ್ವೀಕರಿಸಿರುವುದರಿಂದ ಅದನ್ನು ಅವನು ಬ್ರಹ್ಮಜ್ಞಾನಬಾಧ್ಯವೆಂದೇ ಸ್ವೀಕರಿಸಿದ್ದಾನೆ. ಆದರಿಂದ ನಿಷೇಧವು ಬಾಧ್ಯವಾದರೆ ಪ್ರತಿಯೋಗಿಯು ತಾತ್ತ್ವಿಕವಾಗಬಹುದು. ಬಾಧ್ಯವಾದ ನಿಷೇಧವು ಪ್ರತಿಯೋಗಿಯ ತಾತ್ತ್ವಿಕ ಸತ್ಯತ್ವಕ್ಕೆ

ವಿರೋಧಿಯಾಗುವುದಿಲ್ಲ. ಅದ್ವೈತಿ ಹೀಗೆ 'ಮಿಥ್ಯಾತ್ವ ಸಾಧನೆ' ಮಾಡಿದರೆ, ಪ್ರಪಂಚವು ತಾತ್ವಿಕವೇ ಆಗಬಹುದಾದ್ದರಿಂದ ಅರ್ಥಾಂತರತ್ವ.

ಪ್ರಪಂಚನಿಷೇಧವನ್ನು ವ್ಯಾವಹಾರಿಕವೆಂದು ಒಪ್ಪುವ ಪಕ್ಷದಲ್ಲಿ ಅದ್ವೈತಶ್ರುತಿಯು ವ್ಯಾವಹಾರಿಕವಾದ ಈ ಪ್ರಪಂಚನಿಷೇಧವನ್ನೇ ಹೇಳುತ್ತದೆ ಎಂದು ಅದ್ವೈತಿ ಒಪ್ಪಬೇಕು. ಅಖಂಡಚಿನ್ಮಾತ್ರವನ್ನೇ ಶ್ರುತಿಯು ಹೇಳುತ್ತಿದ್ದರೆ, ಪ್ರಪಂಚನಿಷೇಧವು, ಸಾಧಕಪ್ರಮಾಣವಿಲ್ಲದ್ದರಿಂದ ಸಿದ್ಧವಾಗದು. ಹೀಗಾಗಿ ಅದ್ವೈತ ಶ್ರುತಿಯು ಅತತ್ತಾವೇದಕವೆನಿಸೀತು.

ಮತ್ತು ವ್ಯಾವಹಾರಿಕ ನಿಷೇಧ ಪ್ರತಿಯೋಗಿಯಾದ ಪ್ರಪಂಚವು ಪ್ರಾತಿಭಾಸಿಕವಲ್ಲವೆಂದ ಮೇಲೆ ಅದು ಪಾರಮಾರ್ಥಿಕವೇ ಆಗಬೇಕಾದೀತು.

ಇಲ್ಲಿ ಅದ್ವೈತಿ ಆಕ್ಷೇಪ ಮಾಡಬಹುದು—'ಪ್ರಪಂಚವು ಪಾರಮಾರ್ಥಿಕ, ಅಪ್ರಾತಿಭಾಸಿಕ ವಾಗಿದ್ದು ವ್ಯಾವಹಾರಿಕನಿಷೇಧಕ್ಕೆ ಪ್ರತಿಯೋಗಿಯಾದ್ದರಿಂದ' ಎಂದು ಸಾಧನೆ ಮಾಡುತ್ತಿರುವಿರ? ಅಥವಾ 'ಪ್ರಪಂಚಪಾರಮಾರ್ಥಿಕತ್ವಕ್ಕೆ ಅದು ಅಪ್ರಾತಿಭಾಸಿಕವಾಗಿದ್ದು ವ್ಯಾವಹಾರಿಕ ನಿಷೇಧಕ್ಕೆ ಪ್ರತಿಯೋಗಿಯಾಗಿರುವುದು ಪ್ರಯೋಜಕ'ವೆನ್ನುತ್ತಿರುವಿರ? ಪ್ರಪಂಚಪಾರಮಾರ್ಥಿಕತ್ವವನ್ನು ಸಾಧನೆಮಾಡುವುದು ಕೂಡುವುದಿಲ್ಲ, ವ್ಯಾಪ್ತಿಗ್ರಹಣಕ್ಕೆ ಸರಿಯಾದ ಉದಾಹಣೆ ಇಲ್ಲದ್ದರಿಂದ. ಪಾರಮಾರ್ಥಿಕತ್ವಕ್ಕೆ 'ಅಪ್ರಾತಿಭಾಸಿಕವಾಗಿದ್ದು ವ್ಯಾವಹಾರಿಕ ನಿಷೇಧಕ್ಕೆ ಪ್ರತಿಯೋಗಿಯಾಗುವುದು' ಪ್ರಯೋಜಕವೂ ಅಲ್ಲ. ಬ್ರಹ್ಮನಲ್ಲಿ ಈ ಪ್ರಯೋಜಕವಿಲ್ಲದಿದ್ದರೂ ಪಾರಮಾರ್ಥಿಕತ್ವವಿರುವುದರಿಂದ ವ್ಯಭಿಚಾರವಿದೆ'.

ಈ ಆಕ್ಷೇಪ ಯುಕ್ತವಲ್ಲ. ಮೊದಲನೆ ಪಕ್ಷ ಸಮಂಜಸವೇ ಆಗಿದೆ. ವ್ಯತಿರೇಕ ವ್ಯಾಪ್ತಿಗ್ರಹಣಕ್ಕೆ ಬ್ರಹ್ಮನೇ ದೃಷ್ಟಾಂತ–'ಪ್ರಪಂಚಃ ಪಾರಮಾರ್ಥಿಕಃ ವ್ಯಾವಹಾರಿಕ ನಿಷೇಧಪ್ರತಿಯೋಗಿತ್ವಾತ್. ಯತ್ರ ಪಾರಮಾರ್ಥಿಕತ್ವಾಭಾವಃ ತತ್ರ ವ್ಯಾವಹಾರಿಕ ನಿಷೇಧ ಪ್ರತಿಯೋಗಿತ್ವಾಭಾವಃ, ಯಥಾ ಬ್ರಹ್ಮಣಿ' ಪ್ರಪಂಚದಲ್ಲಿ ಪಾರಮಾರ್ಥಿಕತ್ವವಿದೆ, ವ್ಯಾವಹಾರಿಕ ನಿಷೇಧಪ್ರತಿಯೋಗಿತ್ವವಿರುವುದರಿಂದ. ಎಲ್ಲಿ ಪಾರಮಾರ್ಥಿಕತ್ವವಿಲ್ಲವೋ ಅಲ್ಲಿ, ನಿರ್ಧರ್ಮಕನಾದ ಬ್ರಹ್ಮನಲ್ಲಿ, ವ್ಯಾವಹಾರಿಕ ನಿಷೇಧ ಪ್ರತಿಯೋಗಿತ್ವವಿಲ್ಲ ಎಂದು ವ್ಯತಿರೇಕವ್ಯಾಪ್ತಿಗ್ರಹಣಸ್ಥಲವು ಬ್ರಹ್ಮ. ಹೇತುವನ್ನು ಅಪ್ರಯೋಜಕ ವೆನ್ನುತ್ತೀನೆ ಎಂದರೆ, 'ಅಪ್ರಯೋಜಕವಲ್ಲ, ಉಪಾಧಿರಹಿತಸಹಚಾರರೂಪ ವ್ಯಾಪ್ತಿ ಇರುವುದರಿಂದ' ಎಂದು ನಾವು ಹೇಳುತ್ತೇವೆ. 'ಅಪರಿಚ್ಛಿನ್ನತ್ವವು ಉಪಾಧಿ. ಅದು ಸಾಧ್ಯವಾದ ಪಾರಮಾರ್ಥಿಕತ್ವಕ್ಕೆ ವ್ಯಾಪಕವಾಗಿದೆ. ಪಕ್ಷವಾದ ಪ್ರಪಂಚದಲ್ಲಿ ಇಲ್ಲದ್ದರಿಂದ ಸಾಧನಾವ್ಯಾಪಕವಾಗಿದೆ' ಎಂದರೆ ಈ ಉಪಾಧಿಯು ಪಕ್ಷವಾದ ಪ್ರಪಂಚಮಾತ್ರ ವ್ಯಾವರ್ತಕವಾಗಿದ್ದು ಪಕ್ಷೇತರತ್ವತುಲ್ಯವಾದ್ದರಿಂದ ಅನುಮಿತಿಗೆ ಪ್ರತಿಬಂಧಕವಾಗುವುದಿಲ್ಲ' ಎನ್ನುತ್ತೇವೆ.

'ಸ್ವಪ್ನದಲ್ಲಿ ಕಂಡ ಗಜಕ್ಕೆ ಸ್ವಪ್ನದಲ್ಲಿ ನಿಷೇಧ ಕಂಡಿದೆ. ಈ ನಿಷೇಧ ಸ್ವಪ್ನದಲ್ಲಿ ಕಂಡಿದ್ದರಿಂದ ಬಾಧ್ಯವಾಗಿದೆ. ಬಾಧ್ಯವಾದ ಈ ನಿಷೇಧದ ಪ್ರತಿಯೋಗಿಯು ಬಾಧ್ಯವೆ ಹೊರತು ಅಬಾಧ್ಯವಾಗಿಲ್ಲ.

ಹಾಗೇ ವ್ಯವಹಾರದಲ್ಲಿ ಕಂಡ ಪ್ರಪಂಚ ಬಾಧ್ಯವಾದ ವ್ಯಾವಹಾರಿಕ ನಿಷೇಧಕ್ಕೆ ಪ್ರತಿಯೋಗಿಯಾದರೆ ಪ್ರಪಂಚ ಅಬಾಧ್ಯವಾಗಲಾರದು. ಹೀಗಾಗಿ ಪ್ರಪಂಚ ನಿಷೇಧವನ್ನು ವ್ಯಾವಹಾರಿಕವೆಂದು ಅಂಗೀಕರಿಸುವ ಪಕ್ಷದಲ್ಲಿ ಪ್ರಪಂಚವನ್ನು ಪಾರಮಾರ್ಥಿಕವೆಂದು ಒಪ್ಪುವ ಪ್ರಸಂಗವಿಲ್ಲ' ಎಂದು ಅದ್ವೈತಸಿದ್ಧಿಕಾರ ಹೇಳುತ್ತಾನೆ. ಇದು ಸರಿಯಲ್ಲ. ಸ್ವಪ್ನದಲ್ಲಿ ಕಂಡಿದ್ದರಿಂದ ಗಜನಿಷೇಧ ಬಾಧ್ಯವೆನ್ನುವುದಾದರೆ ಸ್ವಪ್ನದಲ್ಲಿ ಕಂಡ ಆತ್ಮವೂ ಬಾಧ್ಯ ಎನ್ನಬೇಕಾದೀತು. ಆದರಿಂದ ಸ್ವಪ್ನದೃಷ್ಟಾಂತ ಸರಿಯಲ್ಲ. ನಿಷೇಧವು ಬಾಧ್ಯವಾದರೆ ಪ್ರತಿಯೋಗಿ ಅಬಾಧ್ಯವೆನ್ನಲೇಬೇಕು.

**ಕಿಂ ಚ ನಿಷೇಧಪ್ರತಿಯೋಗಿತ್ವಂ ಕಿಂ ಸ್ವರೂಪೇಣ, ಕಿಂವಾ, ಅಸದ್ವಿಲಕ್ಷಣ ಸ್ವರೂಪಅನುಪಮರ್ದೇನ ಪಾರಮಾರ್ಥಿಕತ್ವಾಕಾರೇಣ? ನಾದ್ಯಃ। ಶ್ರುತ್ಯಾದಿ ಸಿದ್ಧಉತ್ಪತ್ತ್ಯಾದಿಕಸ್ಯ ಅರ್ಥಕ್ರಿಯಾ ಸಮರ್ಥಸ್ಯ ಅವಿದ್ಯೋಪಾದಾನಕಸ್ಯ ತತ್ತ್ವಜ್ಞಾನ ನಾಶ್ಯಸ್ಯ ಚ ವಿಯದಾದೇಃ ರೂಪ್ಯಾದೇಶ್ಚ ಧೀಕಾಲೇ ವಿದ್ಯಮಾನೇನ ಅಸದ್ವಿಲಕ್ಷಣ ಸ್ವರೂಪೇಣ ತ್ರೈಕಾಲಿಕ ನಿಷೇಧಾಯೋಗಾತ್ ।**

ವಾಯುವಿನಲ್ಲಿ ರೂಪಾಭಾವವತ್ವದಂತೆ ಸ್ವರೂಪದಿಂದಲೇ ಬ್ರಹ್ಮನಲ್ಲಿ ಪ್ರಪಂಚಕ್ಕೂ, ಪುರೋವರ್ತಿಯಲ್ಲಿ ರಜತಕ್ಕೂ, ಅತ್ಯಂತಾಭಾವಪ್ರತಿಯೋಗಿತ್ವವೆ? ಅಥವಾ ಅಸದ್‌ವಿಲಕ್ಷಣ ಸ್ವರೂಪವನ್ನು ನಿಷೇಧಿಸದೆ, ಘಟದಲ್ಲಿ ಅಭಿಧೇಯತ್ವವಿದ್ದರೂ ಸಮವಾಯೇನ ಅದು ಇಲ್ಲವೆನ್ನುವಂತೆ, ಪಾರಮಾರ್ಥಿಕತ್ವರೂಪ ವ್ಯಧಿಕರಣ ಧರ್ಮದಿಂದ ಬ್ರಹ್ಮನಲ್ಲಿ ಪ್ರಪಂಚಕ್ಕೂ ಪುರೋವರ್ತಿಯಲ್ಲಿ ರಜತಕ್ಕೂ ಅತ್ಯಂತಾಭಾವ ಪ್ರತಿಯೋಗಿತ್ವವೆ?

ಪ್ರಪಂಚವನ್ನೂ ಶುಕ್ತಿರಜತವನ್ನೂ ಸ್ವರೂಪೇಣ ನಿಷೇಧ ಮಾಡಲಾಗದು. ಮಾಡುವೆವೆನ್ನುವ ಮೊದಲನೆ ಪಕ್ಷ ಯುಕ್ತವಲ್ಲ. ಏಕೆಂದರೆ ಅದು ಮಿಥ್ಯಾ.

ಮಿಥ್ಯಾ ಪದಾರ್ಥಕ್ಕೆ ಸ್ವರೂಪವೆ ಇಲ್ಲವೆಂದಮೇಲೆ ಸ್ವರೂಪೇಣ ನಿಷೇಧ ಸಂಭಾವಿತ ವಾಗುವುದು ಹೇಗೆ? ಎಂದರೆ, ಅಸತ್ತಿಗೆ ಸ್ವರೂಪವಿಲ್ಲದಿದ್ದರೂ ಮಿಥ್ಯಾಪದಾರ್ಥ ಅಸದ್ ವಿಲಕ್ಷಣವಾಗಿದೆ, ಅದಕ್ಕೆ ಅಸದ್‌ವಿಲಕ್ಷಣ ಸ್ವರೂಪವಿದೆ. ಇಲ್ಲದಿದ್ದರೆ ವ್ಯಾವಹಾರಿಕ ಪ್ರಪಂಚವಾಗಲಿ ಪ್ರಾತಿಭಾಸಿಕ ಶುಕ್ತಿ ರಜತವಾಗಲಿ ಅವಿದ್ಯೋಪಾದಾನಕವಾಗುವುದು ಹೇಗೆ? ಅದರಿಂದ ಸ್ವರೂಪೇಣ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವಪಕ್ಷ ಸಂಭಾವಿತವೆ. ನಿಷೇಧವು ಈ ಪಕ್ಷದಲ್ಲಿ 'ಸ್ವ-ರೂಪ'ದಿಂದ ಅಂದರೆ, ಸಮಾನಾಧಿಕರಣ ಧರ್ಮದಿಂದ ಅವಚ್ಛಿನ್ನವಾದ ಪ್ರತಿಯೋಗಿತಾಕ.

ಆದರೆ ಈ ಪಕ್ಷವು ಅಯುಕ್ತ. ಏಕೆಂದರೆ 'ಶ್ರುತ್ಯಾದಿ ಪ್ರಮಾಣಗಳಿಂದ ಪ್ರಪಂಚಕ್ಕೆ ಉತ್ಪತ್ತಿ ಸ್ಥಿತಿ ಸಂಹಾರಗಳು ಸಿದ್ಧವಾಗಿವೆ. ಅದು ಅರ್ಥಕ್ರಿಯಾ ಸಮರ್ಥವಾಗಿದೆ. ಅದಕ್ಕೆ ಅವಿದ್ಯೆ ಎಂಬ ಉಪಾದಾನವಿದೆ' ಎಂದೂ, 'ತತ್ತ್ವಜ್ಞಾನದಿಂದ ನಾಶವಿದೆ' ಎಂದೂ ಅದ್ವೈತಿ ಒಪ್ಪಿದ್ದಾನೆ. ಶುಕ್ತಿರಜತಾದಿಗಳಿಗೂ ಅವಿದ್ಯೋಪಾದಾನಕತ್ವ ತತ್ತ್ವಜ್ಞಾನನಾಶ್ಯತ್ವಗಳನ್ನು ಒಪ್ಪಿದ್ದಾನೆ. ಭ್ರಮಕಾಲದಲ್ಲಿ

ಶುಕ್ತಿರಜತಕ್ಕೂ ಕೂಡ ಅಸದ್‌ವಿಲಕ್ಷಣಸ್ವರೂಪವಿದೆ, ಇಲ್ಲದಿದ್ದರೆ ಅದರ ಪ್ರತೀತಿ ಕೂಡಲಾರದು ಎನ್ನುತ್ತ ಅಸದ್‌ವಿಲಕ್ಷಣಸ್ವರೂಪವನ್ನು ಅಂಗೀಕರಿಸಿದ್ದಾನೆ. ಹೀಗೆ ಪ್ರಪಂಚಕ್ಕೆ ಅಸದ್‌ವಿಲಕ್ಷಣ ಸ್ವರೂಪವು ಶ್ರುತ್ಯಾದಿಸಿದ್ಧವಾಗಿದ್ದು ಅದ್ವೈತಿ ತಾನೂ ಒಪ್ಪಿರುವಾಗ ಅದನ್ನು ನಿಷೇಧಮಾಡುವುದು ಅಯುಕ್ತ.

ಶ್ರುತ್ಯಾದಿಬಾಧವೂ ಇದೆ ಸ್ವಸಿದ್ಧಾಂತವಿರೋಧವೂ ಇದೆ. ಪ್ರಪಂಚವು ತ್ರಿಕಾಲ ನಿಷೇಧ ಪ್ರತಿಯೋಗಿಯಲ್ಲ, ಉತ್ಪತ್ತ್ಯಾದ್ಯಸಂಭವಾಪತ್ತಿ ಇರುವುದರಿಂದ, 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇತ್ಯಾದಿ ಪ್ರಮಾಣವಿರೋಧವಿರುವುದರಿಂದ ಎಂಬ ಅನುಮಾನವಿರೋಧವೂ ಇದೆ. ಈ ವಿರೋಧಿ ಅನುಮಾನಕ್ಕೆ ವಿಪಕ್ಷೇ ಹೇತೂಚ್ಛಿತ್ತಿಯೇ ಸಾಧಕವಾಗಿದೆ.

**ತ್ರೈಕಾಲಿಕ ನಿಷೇಧಂ ಪ್ರತಿ ಸ್ವರೂಪೇಣ ಆಪಣಸ್ಥರೂಪ್ಯಂ, ಪಾರಮಾರ್ಥಿಕತ್ವಾ ಕಾರೇಣ ಪ್ರಾತಿಭಾಸಿಕರೂಪ್ಯಂ ವಾ ಪ್ರತಿಯೋಗಿ ಇತಿ ತ್ವನ್ಮತಹಾನೇಶ್ಚ ।**

'ಶುಕ್ತಿರಜತ ಸ್ಥಳದಲ್ಲಿ ಶುಕ್ತಿಯಲ್ಲಿರುವ ತ್ರೈಕಾಲಿಕನಿಷೇಧಕ್ಕೆ 'ಆಭಾಸ್ಯಪ್ರಸಕ್ತ್ಯಾ ಅನಾಭಾಸಸ್ಯ ನಿಷೇಧಃ' ಎಂಬ ಮತದಂತೆ ಸ್ವರೂಪೇಣ ಆಪಣಸ್ಥವ್ಯಾವಹಾರಿಕ ರಜತವು ಪ್ರತಿಯೋಗಿ, ಅಥವಾ ವ್ಯಧಿಕರಣ ಧರ್ಮಾವಚ್ಛಿನ್ನಾಭಾವವನ್ನು ಒಪ್ಪುವ ಮತದಂತೆ ಪ್ರಾತಿಭಾಸಿಕ ರಜತವು ಪಾರಮಾರ್ಥಿಕತ್ವಾ ಕಾರೇಣ ಪ್ರತಿಯೋಗಿ' ಎಂದು ಅದ್ವೈತಮತವಿರುವುದರಿಂದ, ಈಗ ನೀನು 'ಪ್ರಾತಿಭಾಸಿಕರಜತವೇ ಸ್ವರೂಪೇಣ ನಿಷೇಧಪ್ರತಿಯೋಗಿ' ಎನ್ನುವುದು ನಿನ್ನ ಮತಕ್ಕೆ ವಿರುದ್ಧ ವಾಗುತ್ತದೆ.

**ಅತ್ಯಂತಾಸತ್ತ್ವಾಪಾತಾಚ್ಚ । ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವ ಮಪಿ ಅನ್ಯತ್ರ ಅಸತ್ವೇನ ಸಮ್ಮತಸ್ಯ ಪಟಾದೇಃ ಸರ್ವತ್ರ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವ ಪರ್ಯಂತಂ ಇತಿ ಹಿ ತ್ವನ್ಮತಂ। ಅನ್ಯಥಾ ಅನ್ಯತ್ರ ತತ್‌ಸತ್ತ್ವಾಪಾತಾತ್। 'ನಹಿ ತೇಷಾಮನ್ಯತ್ರ ಸತ್ತಾ ಸಂಭಾವಿನೀ' ಇತಿ ತ್ವದುಕ್ತೇಶ್ಚ। ತಥಾಚ ಕಥಂ ನಾತ್ಯಂತಾ ಸತ್ತ್ವಾಪತ್ತಿಃ ?**

ಪ್ರಪಂಚಕ್ಕೂ ಪ್ರಾತಿಭಾಸಿಕ ರಜತಕ್ಕೂ ಸ್ವರೂಪೇಣ ನಿಷೇಧವನ್ನು ಅಂಗೀಕರಿಸುವ ಪಕ್ಷದಲ್ಲಿ ಅತ್ಯಂತಾಸತ್ವವನ್ನೇ ಒಪ್ಪಿದಂತಾದೀತು. ಏಕೆಂದರೆ ಪ್ರತಿಪನ್ನ ಉಪಾಧಿಯಲ್ಲಿ ಸ್ವರೂಪೇಣ ತ್ರೈಕಾಲಿಕ ನಿಷೇಧಪ್ರತಿಯೋಗಿತ್ವವನ್ನು ಹೇಳಿದರೆ ಅದರ ಪರ್ಯವಸಾನ ಸರ್ವ ಉಪಾಧಿಗಳಲ್ಲಿಯೂ ಸ್ವರೂಪೇಣ ನಿಷೇಧ ಪ್ರತಿಯೋಗಿಯಾಗಿದೆ ಎಂದಾಗುತ್ತದೆ.

ಏಕೆಂದರೆ ಬೇರೆ ಮೃದಾದಿ ಉಪಾಧಿಗಳಲ್ಲಿ ಪಟಾದಿಗಳು ಅಸತ್ತಾಗಿವೆ, ನಿಷೇಧ ಪ್ರತಿಯೋಗಿಯಾಗಿವೆ ಎಂದು ಸಮ್ಮತಿ ಇದೆ. 'ಸ್ವೋಪಾಧಿಯಾದ ತಂತುವಿನಲ್ಲಿಯೂ ಅಸತ್ತೆ' ಎಂದರೆ, ಸ್ವೋಪಾಧಿ-ಪರೋಪಾಧಿ ಎಂದು ಭೇದವಿಲ್ಲದೆ ಸರ್ವಉಪಾಧಿಗಳಲ್ಲಿಯೂ ನಿಷೇಧಪ್ರತಿಯೋಗಿ

ಎಂದೇ ಹೇಳಿದಂತಾಗುತ್ತದೆ. ಇದು ನಿನ್ನ ಮತ. ಪಟಾದಿಗಳು ಮೃದಾದಿ ಬೇರೆ ಉಪಾಧಿಗಳಲ್ಲಿ ಅಸತ್ತೆಂದು ಸಮ್ಮತವಾಗದಿರುವ ಪಕ್ಷದಲ್ಲಿ ಅಲ್ಲ. ಆ ಪಕ್ಷಬಿಟ್ಟುಕೊಂಡರೆ ಪಟಾದಿಯು ಅನ್ಯತ್ರ ಸತ್ಯವೆಂದಾದೀತು. ಮತ್ತು 'ಅನ್ಯತ್ರ ಅವುಗಳಿಗೆ ಸತ್ಯತ್ವ ಸಂಭಾವಿತವಲ್ಲ' ಎಂದು ನಿನ್ನಮತದಲ್ಲಿ ಉಕ್ತವಾಗಿದೆ ಎಂದಮೇಲೆ ಪಟಾದಿಗಳಿಗೆ ಅತ್ಯಂತಾಸತ್ತ್ವಾಪತ್ತಿ ಹೇಗೆ ಇಲ್ಲವಾದೀತು?

ಹೀಗಾಗಿ 'ಈ ಪಟವು ಈ ತಂತುನಿಷ್ಠ ಅತ್ಯಂತಾಭಾವಕ್ಕೆ ಪ್ರತಿಯೋಗಿ' ಎಂದು ಮಿಥ್ಯಾತ್ವಾನುಮಾನ ಮಾಡಿದರೆ ಬೇರೆ ತಂತುಗಳಲ್ಲಿಯೂ ಮೃದಾದಿಗಳಲ್ಲಿಯೂ ಈ ಪಟವು ಸತ್ಯವಾಗಬಹುದು ಎಂದು ಅರ್ಥಾಂತರತ್ವದೋಷ ಬಂದೀತು.

ಇದರಿಂದ ಸ್ವರೂಪೇಣ ತ್ರೈಕಾಲಿಕ ನಿಷೇಧಪಕ್ಷದಲ್ಲಿ ಉತ್ಪತ್ತ್ಯಾದಿಗಳು ಕೂಡದಿರುವುದು, ಸ್ವಾಚಾರ್ಯವಚನ ವಿರೋಧ ಮತ್ತು ಅತ್ಯಂತಾಸತ್ತ್ವಾಪತ್ತಿ ಎಂದು ಮೂರು ದೋಷಗಳನ್ನು ಹೇಳಿದಂತಾಯಿತು.

ಸಿದ್ಧಿಕಾರನು ಇಲ್ಲಿ ಹೇಳುತ್ತಾನೆ— 'ಸ್ವರೂಪೇಣ ತ್ರೈಕಾಲಿಕ ನಿಷೇಧಪ್ರತಿಯೋಗಿತ್ವವು ಮಿಥ್ಯಾತ್ವವೆನ್ನುವ ಪಕ್ಷದಲ್ಲಿ 'ನೇಹ ನಾನಾಸ್ತಿ' ಶ್ರುತಿಯೂ 'ನೇದಂ ರಜತಂ' ಎಂಬ ಪ್ರತೀತಿಯೂ ಪ್ರಮಾಣವಾಗಿದೆ.

ಶುಕ್ತಿಯಲ್ಲಿ ಆಪಣಸ್ಥರಜತ ನಿಷೇಧ ಎಂಬುದನ್ನು ನಾನು ಒಪ್ಪುವುದಿಲ್ಲ. ಭ್ರಮ ಬಾಧಗಳಿಗೆ ವಿಷಯಗಳೇ ಬೇರೆ ಎನ್ನುವುದನ್ನೂ ಅಪ್ರಸಕ್ತಪ್ರತಿಷೇಧವನ್ನೂ ಒಪ್ಪಲಾಗದು. ಸ್ವಾಚಾರ್ಯ ವಚನಕ್ಕೆ ಅಭಿಪ್ರಾಯ ಬೇರೆಯೆ ಇದೆ. 'ಆಪಣಸ್ಥರಜತತಾದಾತ್ಮ್ಯೇನ ಪ್ರತೀತವಾದ ಪ್ರಾತಿಭಾಸಿಕರಜತವೇ ನಿಷೇಧ ಪ್ರತಿಯೋಗಿ ಹೊರತು ಕೇವಲ ಶುಕ್ತಿತಾದಾತ್ಮ್ಯೇನ ಪ್ರತೀತವು ನಿಷೇಧ ಪ್ರತಿಯೋಗಿಯಲ್ಲ' ಎಂದು.

'ಸ್ವರೂಪೇಣ ವ್ಯಾವಹಾರಿಕ ರಜತವಾಗಲಿ ಪಾರಮಾರ್ಥಿಕತ್ವೇನ ಪ್ರಾತಿಭಾಸಿಕರಜತವಾಗಲಿ ನಿಷೇಧ ಪ್ರತಿಯೋಗಿ' ಎಂದು ವಾಕಾರ ಸೇರಿಸಿದ್ದು ಅನಾಸ್ಥಾಭಿಪ್ರಾಯದಿಂದ. ಸ್ವರೂಪೇಣ ಪಾರಮಾರ್ಥಿಕತ್ವಾಕಾರೇಣ ಎಂದು ಪ್ರತಿಯೋಗಿತಾವಚ್ಛೇದಕವನ್ನು ನಿರ್ಧರಿಸುವಲ್ಲಿ ಆಸ್ಥೆ ಇಲ್ಲ, ಎಂದು. ಏಕೆಂದರೆ ಸ್ವರೂಪೇಣ ನಿಷೇಧಮಾಡಿದರೂ ಕ್ವಚಿದಪ್ಯುಪಾಧೌ ಸತ್ತ್ವೇನಾಪ್ರತೀಯಮಾನತ್ವ ರೂಪ ಅಸತ್ವವಿಲ್ಲದ್ದರಿಂದ ಪ್ರಪಂಚ ಅತ್ಯಂತಾಸತ್ತಾಗಬೇಕಿಲ್ಲ.

'ಸ್ವರೂಪೇಣ ನಿಷೇಧಮಾಡಿದರೆ ಉತ್ಪತ್ತ್ಯಾದಿ ಹೇಗೆ ಕೂಡೀತು?' ಎಂದರೆ, ಅನಿಷೇಧವೇ ಉತ್ಪತ್ತ್ಯಾದಿ ಪ್ರಯೋಜಕವೆಂದು ಅಭಿಪ್ರಾಯವಾಗಿದ್ದಲ್ಲಿ ಅನಿಷಿದ್ಧವಾದ ಆಕಾಶಾದಿಗಳಲ್ಲಿ ಉತ್ಪತ್ತ್ಯಾದಿ ಇಲ್ಲದ್ದರಿಂದ ವ್ಯಭಿಚಾರ. ಆದರಿಂದ ಉತ್ಪತ್ತ್ಯಾದಿಗಳಿಗೆ ಆಯಾ ವಸ್ತುಸ್ವಭಾವವೇ ಪ್ರಯೋಜಕವೆನ್ನಬೇಕು ಹೊರತು ಸ್ವರೂಪೇಣ ನಿಷೇಧವನ್ನು ನಿಷೇಧಿಸಬಾರದು.'

ಇದು ಸರಿಯಲ್ಲ. ಅನಿಷೇಧವು ಉತ್ಪತ್ತ್ಯಾದಿ ಪ್ರಯೋಜಕವೆಂದು ನಾವು ಹೇಳುತ್ತಿಲ್ಲ.

ಉತ್ಪತ್ತ್ಯಾದಿಗಳಿಗೆ ಸ್ವರೂಪನಿಷೇಧವು ವಿರೋಧಿ. ಉತ್ಪತ್ತ್ಯಾದಿಗಳಿದ್ದರೆ ಸ್ವರೂಪವನ್ನು ಒಪ್ಪಲೇಬೇಕು. ಆದರೂ ಸ್ವರೂಪನಿಷೇಧ ಮಾಡುತ್ತೇವೆ. ಎಂದರೆ ವ್ಯಾಹತಿ ತಾನೆ?

ಸ್ವರೂಪೇಣ ಪ್ರಾತಿಭಾಸಿಕ ನಿಷೇಧಕ್ಕೆ 'ನೇಹನಾನಾ'ಶ್ರುತಿ 'ನೇದಂ ರಜತಂ' ಎಂಬ ಪ್ರತೀತಿಗಳು ನಿರವಕಾಶ ಪ್ರಮಾಣವಾಗುವುದಿಲ್ಲ, ಮತ್ತು ಸ್ವರೂಪೇಣ ವ್ಯಾವಹಾರಿಕ ನಿಷೇಧಕ್ಕೂ ಪಾರಮಾರ್ಥಿಕತ್ವಾಕಾರೇಣ ಪ್ರಾತಿಭಾಸಿಕನಿಷೇಧಕ್ಕೂ ಸ್ವಾಚಾರ್ಯವಚನ ಸ್ಪಷ್ಟ ಪ್ರಮಾಣವಾಗಿದೆ. 'ಆಭಾಸಸ್ಯ ಪ್ರಸಕ್ತ್ಯಾ ಅನಾಭಾಸೋ ನಿಷಿಧ್ಯತೇ' ಎಂದು ಮುಂತಾಗಿಯೂ ಸ್ಪಷ್ಟವಾಗಿ ಇದನ್ನು ಹೇಳಿದ್ದಾರೆ.

ಕ್ವಚಿದಪ್ಯುಪಾಧೌ ಸತ್ತ್ವೇನ ಅಪ್ರತೀಯಮಾನತ್ವವನ್ನು 'ಅಸತ್ತ್ವ'ವೆನ್ನುತ್ತ ಅಂಥ ಅಸತ್ತ್ವ ವಿಲ್ಲದ್ದರಿಂದ ಅತ್ಯಂತಾಸತ್ತ್ವಾಪತ್ತಿ ಇಲ್ಲ ಎನ್ನುವುದು ಮುಂದೆ ಹೇಳುವಂತೆ ಅತ್ಯಂತ ಅಯುಕ್ತ. 'ಅಸತ್ತಾದರೆ ಸತ್ತ್ವೇನ ಕಾಣದಿದ್ದೀತು' ಎಂದರೆ 'ಸತ್ತ್ವೇನ ಕಾಣದಿದ್ದರೆ ಸತ್ತ್ವೇನ ಕಾಣದಿದ್ದೀತು' ಎಂದು ಹೇಳಿದಂತಾಗುವುದರಿಂದ ಅರ್ಥವಿಲ್ಲದ ಮಾತಾಗುವುದು.

❖❖❖

नहि शशशृङ्गादीनामपीतोऽन्यदसत्त्वमस्ति । नच निरुपाख्यत्वमेव तेषामसत्त्वम् । निरुपाख्यपदेनैव ख्यायमानत्वात् । असतोऽप्रतीतावसद्वैलक्षण्यज्ञानस्यासत्प्रतीतिनिरासस्य असत्पदप्रयोगस्य चायोगाच्च । नाप्यपरोक्षतोऽप्रतीयमानत्वमसत्त्वम् । नित्यातीन्द्रियेऽपि सत्त्वात् ।

नापि क्वचिदप्युपाधौ सत्त्वेनाप्रतीयमानत्वमसत्त्वं, जगति शुक्तिरूप्यादौ चैवंविधासद्वैलक्षण्यस्य शून्यवादेऽपि सत्त्वात् । त्वयाप्यसच्चेन्न प्रतीयेतेति वदतोक्ताप्रतीतिं प्रति प्रयोजकस्यान्यस्यैवासत्त्वस्य वक्तव्यत्वाच्च ।

ब्रह्मण्यङ्गीकृतं यत्प्रतिपन्नोपाधौ त्रैकालिकनिषेधाप्रतियोगित्वात्मकाबाध्यत्वरूपं सत्त्वं तद्विरुद्धस्यैवासत्त्वरूपत्वाच्च । अन्यथा अप्रतीत्यनुपाधिकासत्त्वाभावे ब्रह्मण्यपि सत्त्वेन प्रतीतिरेव सत्त्वं स्यात् ।

**येन पुंसा शशभृङ्गाभावो न निश्चितः तस्य गोशृङ्गमस्तीतिवाक्यादिव शशशृङ्गमस्तीतिवाक्यादपि ज्ञानोत्पत्तेश्च । त्वन्मतेऽपि हि तत्राध्यस्तस्यास्तित्वस्यानिर्वाच्यत्वेऽप्यधिष्ठानमसदेव । वक्ष्यते चैतदनिर्वाच्यत्वभंगे ।**

**''तद्धैक आहुरसदेवेदमग्र आसी''दिति श्रुत्याप्यसतस्सत्त्वेन प्रतीतेश्च ।**

ननु निरुपाख्यत्वं किं प्रतिपादकशब्दशून्यत्वं किंवा प्रतीतिमात्राविषयत्वमिति विकल्प्य तत्राद्ये दोषमाह **निरुपाख्यपदेनैवेति** । यद्यपि निरुपाख्येति शक्तं पदमिति पक्षे न पदं,किन्तु वाक्यमेव । तथाच निरुपाख्यत्वं पदाशक्यत्वमित्युक्ते न कश्चिद्दोषः । तथाप्यत्यन्तासतः शशशृङ्गादेरपि शशशृङ्गादिपदवाच्यत्वमस्त्येव । अन्यथा कस्य विशेषणमसदित्यादिकमित्यवधेयम् । द्वितीये त्वाह **असत इति** । ननु ब्रह्मभिन्ने शून्यवादिभिरस्माकं साम्यमेवेत्यत आह **त्वयापीति** । तथाच आपाद्यापादकयोरभेदः स्यादिति भावः । ननु सत्त्वेनाप्रतीतिरपरोक्षत्वेनाप्रतीतौ प्रयोजिकेति आपाद्यापादकयोरभेद एव नेत्यत आह **ब्रह्मणीति** । ननु ब्रह्मनिष्ठसत्ताविरोधित्वं किं तद्विरहव्याप्यत्वं किं वा तद्विरहरूपत्वम् ? नाद्यः । तस्यासत्त्वेऽसत्त्वात् । व्याप्यत्वस्य सामानाधिकरण्यगर्भत्वात् । असतोऽनधिकरणत्वात् । न द्वितीयः । तस्य प्रपञ्चसाधारणत्वेनासत्पदप्रवृत्तिनिमित्तत्वायोगादिति चेन्न । तद्विरहरूपत्वस्यैव ब्रह्मनिष्ठसत्ताविरोधित्वरूपत्वेन विवक्षितत्वात् । नच तस्य प्रपञ्चसाधारणत्वेनासत्पदप्रवृत्तिनिमित्तत्वायोगः । प्रपञ्चः प्रतिपन्नोपाधिस्थत्रैकालिकनिषेधप्रतियोगी न वेति विप्रतिपत्तिदशायां ब्रह्मनिष्ठसत्ताविरहस्य तत्रासिद्धत्वेन प्रपञ्चसाधारण्यासिद्धेरिति भावः । **ज्ञानोत्पत्तेश्चेति** । तदनङ्गीकारेऽनुभवविरोध इति भावः ।

**वक्ष्यते चैतदनिर्वाच्यत्वभङ्ग इति** । आभासभूतानिर्वाच्यान्यानाभासभूतासच्छशशृङ्गादेः शशशृङ्गमस्तीत्यादिवाक्यादपि प्रत्यक्षादित इव प्रतीत्यनङ्गीकारे ब्रह्मजगतोस्तद्वैलक्षण्यमेव न सिध्येत् । अतस्तत्प्रतीतिः परेणावश्यमङ्गीकार्येति वक्ष्यत इत्यर्थः ।

तद्धैक आहुरिति । न ह्येतच्छ्रुतिगतासत्पदस्याप्याभासभूतानिर्वचनीयासत्-परत्वं परेणाभ्युपगन्तुं शक्यम् । तच्छ्रुतेर्बाह्यमतनिराकरणार्थं प्रवृत्ततया तत्रत्यासत्पदस्य बाह्याभिमतासत्परताया एव स्वीकार्यत्वात् । अन्यथा कथमसत: सज्जायेतेति उत्तरवाक्ये तन्निराकरणानुपपत्तिरिति भाव: ।

❖❖❖

## ನಿರುಪಾಖ್ಯತ್ವವು ಅಸತ್ತ್ವವಲ್ಲ

**ನಹಿ ಶಶಶೃಂಗಾದೀನಾಮಪಿ ಇತೋಽನ್ಯತ್ ಅಸತ್ತ್ವಮಸ್ತಿ। ನ ಚ ನಿರುಪಾಖ್ಯತ್ವಮೇವ ತೇಷಾಂ ಅಸತ್ತ್ವಂ। ನಿರುಪಾಖ್ಯ ಪದೇನೈವ ಖ್ಯಾಯಮಾನತ್ವಾತ್। ಅಸತಃ ಅಪ್ರತೀತೌ ಅಸದ್‌ವೈಲಕ್ಷಣ್ಯಜ್ಞಾನಸ್ಯ, ಅಸತ್‌ಪ್ರತೀತಿ ನಿರಾಸಸ್ಯ, ಅಸತ್‌ಪದಪ್ರಯೋಗಸ್ಯ ಚ ಅಯೋಗಾಚ್ಚ।**

ಸರ್ವತ್ರ ಸ್ವರೂಪೇಣ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವವೇ ಅಸತ್ತ್ವವೆನ್ನಬೇಕು. ಇದಕ್ಕಿಂತ ಬೇರೆ ಅಸತ್ತ್ವವು ಶಶವಿಷಾಣಾದಿಗಳಿಗೂ ಇರುವುದಿಲ್ಲ.

ಬೇರೆ ಅಸತ್ತ್ವವೆಂದರೆ ಆರು ಬಗೆಯಿಂದ ಅದನ್ನು ಹೇಳಬಹುದು. ಮೊದಲಿಗೆ 'ನಿರುಪಾಖ್ಯತ್ವವು ಅಸತ್ತ್ವ' ಎಂದು. 'ಉಪಾಖ್ಯಾಯತೇ ಅನೇನ' ಎಂಬ ವ್ಯುತ್ಪತ್ತಿಯಿಂದ ಪ್ರತಿಪಾದಕ ಶಬ್ದ ಶೂನ್ಯತ್ವ ಎಂದರೆ ವೃತ್ತ್ಯಾ ಪದಾಪ್ರತಿಪಾದ್ಯತ್ವ ಅಥವಾ ಪ್ರತೀತ್ಯವಿಷಯತ್ವವು ಅಸತ್ತ್ವ ಎಂದರೆ ಅದು ಸರಿಯಲ್ಲ. 'ನಿರುಪಾಖ್ಯ' ಎಂಬ ಪದದಿಂದ ಅಸತ್ತನ್ನು ಹೇಳುತ್ತಲೇ ವೃತ್ತ್ಯಾ ಪದಾಪ್ರತಿಪಾದ್ಯ ಎಂದರೆ ವ್ಯಾಹತಿ. ಅಸದ್ ವೈಲಕ್ಷಣ್ಯಪ್ರತೀತಿಗೆ ಮೊದಲು ಅಸತ್ ಪ್ರತೀತಿ ಬೇಕು. ಅಭಾವಜ್ಞಾನಕ್ಕೆ ಪ್ರತಿಯೋಗಿಜ್ಞಾನ ಬೇಕು. ಅಸತ್ ಪ್ರತೀತಿಯೇ ಇಲ್ಲ ಎಂದು ನಿರಾಕರಣೆ ಮಾಡುವುದಕ್ಕೂ ಮೊದಲಿಗೆ ಅಸತ್ ಪ್ರತೀತಿ ಪ್ರಸಕ್ತವಾಗಬೇಕು. 'ಅಸತ್' ಎಂಬ ಪದಪ್ರಯೋಗಕ್ಕೂ ಕೂಡ ಅಸತ್ ಶಬ್ದಾರ್ಥ ಜ್ಞಾನ ಮೊದಲಿಗೆ ಬೇಕಾಗುವುದರಿಂದ ಅಸಜ್ಞಾನ ಮೊದಲಿಗೆ ಬರಬೇಕಾಗುತ್ತದೆ. ಅದಿಲ್ಲದಿದ್ದರೆ ಅವೆರಡೂ ಕೂಡಲಾರವು.

ಯದ್ಯಪಿ 'ನಿರುಪಾಖ್ಯಂ' ಎಂದರೆ 'ಶಕ್ತಂ ಪದಂ' ಎನ್ನುವ ಪಕ್ಷದಲ್ಲಿ ಅದು ಒಂದು ಪದವಲ್ಲ. ವಾಕ್ಯವಾಗುತ್ತದೆ. ಆದರೂ 'ನಿರುಪಾಖ್ಯತ್ವ'ವೆಂದರೆ ಪದಶಕ್ತಿಗೆ ಅವಿಷಯತ್ವವೆಂದು ಹೇಳಿದರೆ ಏನೂ ದೋಷವಿಲ್ಲ. ಏಕೆಂದರೆ, ಅತ್ಯಂತಾಸತ್ತಾದ ಶಶವಿಷಾಣಾದಿಗೂ ಕೂಡ ಶಶವಿಷಾಣ ಪದವಾಚ್ಯತ್ವವಿದೆ. ಇಲ್ಲದಿದ್ದರೆ 'ಶಶವಿಷಾಣವು ಅಸತ್' ಎಂಬಲ್ಲಿ 'ಅಸತ್' ಪದ ಯಾವುದಕ್ಕೆ ವಿಶೇಷಣ? ಎಂದು ಮುಂತಾಗಿ ಅನುಪಪತ್ತಿ ಬರುತ್ತದೆ.

**ಅಪರೋಕ್ಷತಃ ಅಪ್ರತೀಯಮಾನತ್ವವು ಅಸತ್ತ್ವವಲ್ಲ. ಸತ್ತ್ವೇನ ಅಪ್ರತೀಯಮಾನತ್ವವೂ ಅಸತ್ತ್ವವಲ್ಲ**

**ನಾಪಿ ಅಪರೋಕ್ಷತಃ ಅಪ್ರತೀಯಮಾನತ್ವಂ ಅಸತ್ತ್ವಂ। ನಿತ್ಯಾತೀಂದ್ರಿಯೇಽಪಿ ಸತ್ತ್ವಾತ್। ನಾಪಿ ಕ್ವಚಿದಪಿ ಉಪಾಧೌ ಸತ್ತ್ವೇನ ಅಪ್ರತೀಯಮಾನತ್ವಂ ಅಸತ್ತ್ವಂ। ಜಗತಿ ಶುಕ್ತಿರೂಪ್ಯಾದೌ ಚ ಏವಂವಿಧ ಅಸದ್ ವೈಲಕ್ಷಣ್ಯಸ್ಯ ಶೂನ್ಯವಾದೇಽಪಿ ಸತ್ತ್ವಾತ್। ತ್ವಯಾಪಿ 'ಅಸಚ್ಚೇತ್ ನ ಪ್ರತೀಯೇತ' ಇತಿ ವದತಾ ಉಕ್ತಾಪ್ರತೀತಿಂ ಪ್ರತಿ ಪ್ರಯೋಜಕಸ್ಯ ಅನ್ಯಸ್ಯೈವ ಅಸತ್ತ್ವಸ್ಯ ವಕ್ತವ್ಯತ್ವಾಚ್ಚ।**

ಅಪರೋಕ್ಷಕ್ಕೆ ಗೋಚರವಾಗದಿರುವುದೇ ಅಸತ್ತ್ವವೆನ್ನುವುದೂ ಸರಿಯಲ್ಲ. ನಿತ್ಯಾತೀಂದ್ರಿಯ ಪದಾರ್ಥಗಳಲ್ಲಿಯೂ ಅದು ಇರುವುದರಿಂದ ಅತಿವ್ಯಾಪ್ತವಾಗಿದೆ. ಸ್ವೋಪಾಧಿಯಲ್ಲಾಗಲಿ ಪರೋಪಾಧಿಯಲ್ಲಾಗಲಿ ಎಲ್ಲಿಯೂ ಸತ್ತ್ವೇನ ಪ್ರತೀತಿಗೋಚರವಾಗದಿರುವುದು ಅಸತ್ತ್ವವೆನ್ನುವುದೂ ಸರಿಯಲ್ಲ. ಜಗತ್ತಿನಲ್ಲಿಯೂ ಶುಕ್ತಿರಜತಾದಿಯಲ್ಲಿಯೂ ಇಂಥ ಅಸತ್ತಿಗಿಂತ ವಿಲಕ್ಷಣತ್ವವು ಶೂನ್ಯವಾದದಲ್ಲಿಯೂ ಇದೆ. ಶೂನ್ಯವಾದಿಗೆ ಜಗತ್ತು ನಿಸ್ಸ್ವರೂಪವಾದ್ದರಿಂದ ಅಸತ್ತೆನಿಸಿದೆ. ಅದ್ವೈತಿ ಅವನಿಗೆ ಅಸದ್ ವೈಲಕ್ಷಣ್ಯಸಾಧನೆ ಮಾಡಲು ನಿಸ್ಸ್ವರೂಪತ್ವರೂಪ ಸತ್ತ್ವವನ್ನೇ ಜಗತ್ತಿನಲ್ಲಿ ಇಲ್ಲವೆನ್ನಬೇಕು. ಸತ್ತ್ವೇನ ಅಪ್ರತೀಯಮಾನತ್ವರೂಪ ಅಸತ್ತ್ವವಿಲ್ಲವೆಂದರೆ ಅವನಿಗೆ ಇಷ್ಟಾಪತ್ತಿ. ಅವನೂ ಜಗತ್ತಿನಲ್ಲಿ ಸಾಂವ್ಯವಹಾರಿಕಸತ್ತ್ವವನ್ನು ಅಂಗೀಕರಿಸಿರುವುದರಿಂದ, 'ಸತ್ತ್ವೇನ ಅಪ್ರತೀಯಮಾನವಲ್ಲ'ವೆಂದು ಸಾಧಿಸಿದರೆ ಸಿದ್ಧಸಾಧನತ್ವವೆನ್ನುತ್ತಾನೆ.

'ಬ್ರಹ್ಮಭಿನ್ನವಿಷಯದಲ್ಲಿ ಶೂನ್ಯವಾದಿ ಅದ್ವೈತಿಗಳಿಗೆ ಏಕಾಭಿಪ್ರಾಯವೆ ಇದೆ. ವಿಪ್ರತಿಪತ್ತಿ ಇಲ್ಲ' ಎನ್ನುವುದಾದರೆ ಬೇರೆ ದೋಷ—'ಅಸತ್ತಾದರೆ ಸತ್ತ್ವೇನ ಕಾಣದೇ ಇದ್ದೀತು' ಎನ್ನುವ ನೀನೂ ಕೂಡ ಸತ್ತ್ವೇನ ಅಪ್ರತೀತಿಗೆ ಸತ್ತ್ವೇನ ಅಪ್ರತೀತಿಯೆ ಪ್ರಯೋಜಕವೆನ್ನುವುದು ಆತ್ಮಾಶ್ರಯದಿಂದ ಅಯುಕ್ತವಾಗುವುದು. ಅದರಿಂದ ಬಾಧ್ಯತ್ವರೂಪವಾದ ಬೇರೆಯೇ ಅಸತ್ತ್ವವನ್ನು ನೀನು ಹೇಳಬೇಕಾಗುತ್ತದೆ.

'ಆಪಾದ್ಯಾಪಾದಕಗಳಿಗೆ ಅಭೇದವಿಲ್ಲ. ಸತ್ತ್ವೇನ ಅಪ್ರತೀತಿಯು ಅಪರೋಕ್ಷತ್ವೇನ ಅಪ್ರತೀತಿಗೆ ಪ್ರಯೋಜಕವೆನ್ನುತ್ತೇನೆ' ಎಂದರೆ ಬೇರೆ ದೋಷ ಹೇಳುತ್ತೇವೆ—

**ಬ್ರಹ್ಮಣ್ಯಂಗೀಕೃತಂ ಯತ್ ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧಾಪ್ರತಿಯೋಗಿತ್ವಾತ್ಮಕ ಅಬಾಧ್ಯತ್ವರೂಪಂ ಸತ್ತ್ವಂ ತದ್ವಿರುದ್ಧಸ್ಯೈವ ಅಸತ್ತ್ವರೂಪತ್ವಾಚ್ಚ। ಅನ್ಯಥಾ ಅಪ್ರತೀತ್ಯನುಪಾಧಿಕ ಅಸತ್ತ್ವಾಭಾವೇ ಬ್ರಹ್ಮಣ್ಯಪಿ ಸತ್ತ್ವೇನ ಪ್ರತೀತಿರೇವ ಸತ್ತ್ವಂ ಸ್ಯಾತ್।**

ಪ್ರತಿಪನ್ನೋಪಾಧೌ ತ್ರೈಕಾಲಿಕನಿಷೇಧಾಪ್ರತಿಯೋಗಿತ್ವರೂಪ ಅಬಾಧ್ಯತ್ವವೆ ಬ್ರಹ್ಮನಲ್ಲಿ ನೀನು ಅಂಗೀಕರಿಸಿರುವ ಸತ್ತ್ವ ಎಂದಮೇಲೆ, ಅದಕ್ಕೆ ವಿರುದ್ಧವಾದ ಬಾಧ್ಯತ್ವವನ್ನೇ ಅಸತ್ತ್ವವೆನ್ನಬೇಕು. ಸತ್ತ್ವೇನ ಅಪ್ರತೀಯಮಾನತ್ವವನ್ನಲ್ಲ.

'ಬ್ರಹ್ಮನಿಷ್ಠಸತ್ತ್ವವಿರೋಧಿತ್ವವು ತದ್ವಿರಹವ್ಯಾಪ್ಯತ್ವರೂಪವಲ್ಲ. ವ್ಯಾಪ್ತಿಗೆ ಸಾಮಾನಾಧಿಕರಣ್ಯ ಬೇಕು. ಅಸತ್ತು ಅಧಿಕರಣವಾಗದಿರುವುದರಿಂದ ತದಂತರ್ಭಾವೇಣ ಸಾಮಾನಾಧಿಕರಣ್ಯವಿಲ್ಲ. ತದ್ವಿರಹರೂಪತ್ವವು ಪ್ರಪಂಚಸಾಧಾರಣ. ಅಸತ್‌ಪದ ಪ್ರವೃತ್ತಿನಿಮಿತ್ತವೆನಿಸಲಾರದು. ಎಂದರೆ, ಅದು ಸರಿಯಲ್ಲ. ಇದು ವಿಪ್ರತಿಪತ್ತಿದಶಾ. ವಿಪ್ರತಿಪತ್ತಿದಶೆಯಲ್ಲಿ ಬ್ರಹ್ಮನಿಷ್ಠಸತ್ತ್ವವಿರಹವು ಪ್ರಪಂಚದಲ್ಲಿ ಸಿದ್ಧವಾಗಿಲ್ಲ. ಸತ್ತ್ವೇನ ಅಪ್ರತೀಯಮಾನತ್ವವು ಅಪ್ರತೀತ್ಯುಪಾಧಿಕ. 'ಉಪಾಧಿ'ಯಿಂದ ಅಂದರೆ ಘಟಕಪದಾರ್ಥದಿಂದಾದುದು. ಬಾಧ್ಯತ್ವವು ಅಪ್ರತೀತ್ಯನುಪಾಧಿಕ. ಇಂಥ ಅಪ್ರತೀತ್ಯನುಪಾಧಿಕ ಅಸತ್ತ್ವವೆಂಬುದೆ ಇಲ್ಲವೆಂದರೆ ಬ್ರಹ್ಮನಲ್ಲಿ ಸತ್ತ್ವವೂ ಹಾಗೇ ಪ್ರತೀತ್ಯುಪಾಧಿಕವಾಗಿದ್ದು 'ಸತ್ತ್ವೇನ ಪ್ರತೀತಿ'ಯೇ ಸತ್ತ್ವವೆಂದಾಗಲಿ. ವಸ್ತುತಃ ಸತ್ತ್ವವಿಲ್ಲವೆಂದಾಗಲಿ.

**ಯೇನ ಪುಂಸಾ ಶಶಶೃಂಗಾಭಾವೋ ನ ನಿಶ್ಚಿತಃ ತಸ್ಯ ಗೋಶೃಂಗಮಸ್ತೀತಿ ವಾಕ್ಯಾದಿವ ಶಶಶೃಂಗಮಸ್ತೀತಿ ವಾಕ್ಯಾದಪಿ ಜ್ಞಾನೋತ್ಪತ್ತೇಶ್ಚ।**

'ಮೊಲಕ್ಕೆ ಕೊಂಬಿಲ್ಲ' ಎಂದು ನಿಶ್ಚಯವಾಗಿ ತಿಳಿಯದಿರುವ ವ್ಯಕ್ತಿಗೆ ಅಯೋಗ್ಯತಾ ನಿಶ್ಚಯವಿಲ್ಲದಿರುವುದರಿಂದ 'ದನಕ್ಕೆ ಕೊಂಬಿದೆ' ಎಂಬ ವಾಕ್ಯದಂತೆ 'ಮೊಲಕ್ಕೆ ಕೊಂಬಿದೆ' ಎಂಬ ವಾಕ್ಯದಿಂದಲೂ ಸತ್ತ್ವೇನ ಅಸತ್ತಾದ ಮೊಲದ ಕೊಂಬಿನ ಜ್ಞಾನ ಬರುವುದು ಕಂಡಿದೆ. 'ಜಬಗಡದಶ್' ಎಂಬ ಅಕ್ಷರಸಮೂಹದಿಂದ ಪದಾರ್ಥ ಬೋಧ ಬಾರದಿರುವಂತೆ ಅಥವಾ 'ಕುಂಡಂ ಅಜಾಜಿನಂ ದಶ ದಾಡಿಮಾ ದಶ ಅಪೂಪಾಃ' ಎಂಬ ಅನನ್ವಿತ ಪದಸಮೂಹದಿಂದ ಅನ್ವಯ ಬೋಧ ಬಾರದಿರುವಂತೆ. 'ಮೊಲಕ್ಕೆ ಕೊಂಬಿದೆ' ಎಂಬ ವಿಪರೀತ ಬೋಧಕವಾದ ಮಾತಿನಿಂದ ಏನೂ ಬೋಧವೆ ಬರುವುದಿಲ್ಲವೆಂದಿಲ್ಲ. ಯೋಗ್ಯತಾ ಇಲ್ಲದಿದ್ದರೂ ಯೋಗ್ಯತಾ ಭ್ರಮದಿಂದ ಶಾಬ್ದ ಬೋಧ ಬರುತ್ತದೆ ಎನ್ನುವುದು ಅನುಭವಸಿದ್ಧ. ಇದನ್ನು ಒಪ್ಪದಿದ್ದರೆ ಅನುಭವ ವಿರೋಧ.

**ತ್ವನ್ಮತೇಽಪಿ ಹಿ ತತ್ರ ಅಧ್ಯಸ್ತಸ್ಯ ಅಸ್ತಿತ್ವಸ್ಯ ಅನಿರ್ವಾಚ್ಯತ್ವೇಽಪಿ ಅಧಿಷ್ಠಾನಂ ಅಸದೇವ। ವಕ್ಷ್ಯತೇ ಚೈತತ್ ಅನಿರ್ವಾಚ್ಯತ್ವಭಂಗೇ।**

'ಸತ್ತ್ವೇನ ಅಪ್ರತೀಯಮಾನತ್ವರೂಪ ಅಸತ್ತ್ವಲಕ್ಷಣಕ್ಕೆ 'ಮೊಲಕ್ಕೆ ಕೊಂಬು ಇದೆ' ಎಂಬ ಪ್ರತೀತಿಗನುಸಾರವಾಗಿ ಸತ್ತ್ವೇನ ಪ್ರತೀಯಮಾನವಾದ ಮೊಲದ ಕೊಂಬಿನಲ್ಲಿ ಅವ್ಯಾಪ್ತಿ ಹೇಳಲು ಬರುವುದಿಲ್ಲ. ಏಕೆಂದರೆ, ಇದು ಅನಿರ್ವಚನೀಯವಾದ ಮೊಲದ ಕೊಂಬಿನಲ್ಲಿ ಅಸ್ತಿತ್ವಾರೋಪ ರೂಪವಾದ ಭ್ರಮ. ಇದರಲ್ಲಿ ಮೊಲದ ಕೊಂಬು ಅಧಿಷ್ಠಾನ. ಅಧಿಷ್ಠಾನ ಅಸತ್ತಲ್ಲ. ಹಾಗೆ ನಾವು ಒಪ್ಪುವುದಿಲ್ಲ, ಬೌದ್ಧನು ಒಪ್ಪುತ್ತಾನೆ. ಅಧ್ಯಸ್ತವಾದ ಅಸ್ತಿತ್ವದಲ್ಲಿ ಅವ್ಯಾಪ್ತಿ ಹೇಳೋಣ ಎಂದರೆ ಅದು ಕೂಡ ಆರೋಪ್ಯವಾಗಿದ್ದು ಅಸದ್ವಿಲಕ್ಷಣ ಅನಿರ್ವಚನೀಯವಾದ್ದರಿಂದ ಅಸತ್ತ್ವಲಕ್ಷಣಕ್ಕೇ ಲಕ್ಷ್ಯವಲ್ಲ'—ಹೀಗೆ ಅದ್ವೈತಿ ಹೇಳಿದರೆ ಹೇಳಬೇಕು, 'ಅಧಿಷ್ಠಾನವಾದರೂ ಆರೋಪಿತವಲ್ಲದ್ದರಿಂದ ಶಶವಿಷಾಣವು ಅಸತ್ತೆ. ಭ್ರಮಾಧಿಷ್ಠಾನವು ಅಸತ್ತೆಂದಮಾತ್ರಕ್ಕೆ ಅದು ಬೌದ್ಧವಾದವೆನಿಸುವುದಿಲ್ಲ. ಬೌದ್ಧನು ಭ್ರಮಾಧಿಷ್ಠಾನವೆಲ್ಲವನ್ನೂ ಅಸತ್ತೆನ್ನುತ್ತಾನೆ. ಬೌದ್ಧನಂತೆ ಅದ್ವೈತಿಯು ಭ್ರಮಾಧಿಷ್ಠಾನ

ಎಲ್ಲವನ್ನೂ ಅಸತ್ತೆನ್ನುವುದಿಲ್ಲ. ತುಚ್ಛಾಧಿಕರಣಕ ಭ್ರಮದಲ್ಲಿ ಮಾತ್ರ ಅಧಿಷ್ಠಾನ ಅಸತ್ತು. ಅದರಲ್ಲಿ ಈಗ ನಾವು, ಸತ್ತ್ವೇನ ಅಪ್ರತೀಯಮಾನತ್ವರೂಪ ಅಸತ್ವಲಕ್ಷಣ ಬರುವುದಿಲ್ಲ, ಸತ್ವೇನ ಪ್ರತೀಯಮಾನ ವಾಗಿದೆ ಎಂದು ಅವ್ಯಾಪ್ತಿಯನ್ನು ಹೇಳಲು ಶಕ್ಯವಿದೆ.

ಅದ್ವೈತಿ ಹೇಳುತ್ತಾನೆ—'ಶಶಶೃಂಗಾದಿ ಶಬ್ದದಿಂದ ಅಸತ್ತಿನ 'ಪ್ರತೀತಿ' ಉಂಟಾಗುವುದಿಲ್ಲ, 'ವಿಕಲ್ಪ' ಮಾತ್ರ ಉಂಟಾಗುತ್ತದೆ. 'ಶಬ್ದಜ್ಞಾನಾನುಪಾತೀ ವಸ್ತುಶೂನ್ಯೋ ವಿಕಲ್ಪಃ' 'ಶಬ್ದಜ್ಞಾನ ಬಂದಾಗ ಅದರಿಂದ ಸದ್ರೂಪ ವಸ್ತು ಅವಿಷಯಕವಾದ 'ವಿಕಲ್ಪ'ವೆಂಬ ಒಂದು ಮನೋವೃತ್ತಿ ಉಂಟಾಗುತ್ತದೆ' ಎಂದು, 'ವೃತ್ತಯಃ ಪಂಚತಯ್ಯಃ ಪ್ರಮಾಣ ವಿಪರ್ಯಯ ವಿಕಲ್ಪ ನಿದ್ರಾ ಸ್ಮೃತಯಃ' 'ಪ್ರಮಾಣ ವಿಪರ್ಯಯ ವಿಕಲ್ಪ ನಿದ್ರಾ ಮತ್ತು ಸ್ಮೃತಿ ಎಂದು ಐದು ಬಗೆಯ ಮನೋವೃತ್ತಿಗಳಲ್ಲಿ ಸದ್ರೂಪಾಧಿಷ್ಠಾನವಿಷಯಕವಾದ ವಿಪರ್ಯಯಕ್ಕಿಂತ ಬೇರೆಯಾದ ಸದ್ರೂಪಾಧಿಷ್ಠಾನಾವಿಷಯಕವಾದ ವಿಕಲ್ಪವೆಂಬ ವೃತ್ತಿಯು ಪಾತಂಜಲಸೂತ್ರದಲ್ಲಿ ಉಕ್ತವಾಗಿದೆ.'

ಇದು ಸರಿಯಲ್ಲ. ಅಸದ್ರಜತಾತ್ಮನಾ ಸತ್ತಾದ ಶುಕ್ತಿಭಾನವಿದ್ದರೆ ಅದು ವಿಪರ್ಯಯ. ಅಸತ್ ಶಶವಿಷಾಣಾದಿಯೇ ಸದಾತ್ಮನಾ ಕಂಡರೆ ಅದು ವಿಕಲ್ಪ ಎನ್ನಬೇಕು. ಅವೆರಡೂ ಜ್ಞಾನಗಳೆ. 'ವಿಕಲ್ಪವು ಇಚ್ಛಾದಿಗಳಂತೆಯೇ ಜ್ಞಾನಕ್ಕಿಂತ ಬೇರೆಯಾದ ವೃತ್ತಿ' ಎಂದರೆ ಅನುಭವವಿರೋಧ ಎಂದು ಮುಂತಾಗಿ ಅನಿರ್ವಾಚ್ಯತ್ವ ಭಂಗದಲ್ಲಿ ಹೇಳುತ್ತೇವೆ.

ಆಭಾಸಭೂತ ಅನಿರ್ವಾಚ್ಯಕ್ಕಿಂತ ವಿಲಕ್ಷಣವಾದ ಅನಾಭಾಸಭೂತ ಅಸತ್ ಶಶವಿಷಾಣಾದಿಗಳ ಪ್ರತೀತಿಯು 'ಮೊಲಕ್ಕೆ ಕೊಂಬು ಇದೆ' ಎಂಬ ಶಬ್ದಾಭಾಸದಿಂದಲೂ ಪ್ರತ್ಯಕ್ಷದಂತೇ ಬರುವುದಿಲ್ಲ ಎಂದರೆ ಬ್ರಹ್ಮನಲ್ಲಿಯೂ ಜಗತ್ತಿನಲ್ಲಿಯೂ ಅಸದ್‌ವೈಲಕ್ಷಣ್ಯ ಸಿದ್ಧವಾಗದೆ ಹೋದೀತು. ಅದರಿಂದ ಅದರ ಪ್ರತೀತಿಯನ್ನು ಅದ್ವೈತಿಯು ಒಪ್ಪಲೇಬೇಕು ಎಂದು ಮುಂದೆ ಹೇಳುತ್ತೇವೆ.

**'ತದ್ಧೈಕ ಆಹುರಸದೇವೇದಮಗ್ರ ಆಸೀತ್' ಇತಿ ಶ್ರುತ್ಯಾಪಿ**
**ಅಸತಃ ಸತ್ವೇನ ಪ್ರತೀತೇಶ್ಚ ।**

'ಸದೇವ ಸೋಮ್ಯೇದಮಗ್ರ ಆಸೀತ್ ಏಕಮೇವಾದ್ವಿತೀಯಂ। ತದ್ಧೈಕ ಆಹುಃ ಅಸದೇವೇದಮಗ್ರ ಆಸೀತ್ ಏಕಮೇವಾದ್ವಿತೀಯಂ। ತಸ್ಮಾದಸತಃ ಸಜ್ಜಾಯತೇ ಇತಿ। ಕುತಸ್ತು ಖಲು ಸೋಮ್ಯೈವಂ ಸ್ಯಾತ್? ಇತಿ ಹೋವಾಚ ಕಥಮಸತಃ ಸಜ್ಜಾಯೇತ ಇತಿ। ಸತ್ತ್ವೇವ ಸೋಮ್ಯೇದಮಗ್ರ ಆಸೀತ್ ಏಕಮೇವಾದ್ವಿತೀಯಂ।' (ಛಾಂದೋಗ್ಯ 6.2.1)

'ಸೃಷ್ಟಿಯ ಮೊದಲು ಪ್ರಳಯಕಾಲದಲ್ಲಿ ಸತ್ ಬ್ರಹ್ಮ ಒಂದೇ ಇತ್ತು. ಇದು ಏಕಮೇವ ಅದ್ವಿತೀಯ. ಕೆಲವರು ಹೇಳುತ್ತಾರೆ– 'ಸೃಷ್ಟಿಗಿಂತ ಮೊದಲು ಅಸತ್ತು ಮಾತ್ರ ಇತ್ತು. ಏಕಮೇವ ಅದ್ವಿತೀಯವಾಗಿತ್ತು. ಆ ಅಸತ್ತಿನಿಂದ ಸತ್ ಹುಟ್ಟಿತು' ಎಂದು. ಇದು ಹೇಗೆ ಸಾಧ್ಯ? ಅಸತ್ತಿನಿಂದ ಸತ್ ಹೇಗೆ ಜನಿಸೀತು? ಅದರಿಂದ ಸೃಷ್ಟಿಗಿಂತ ಪೂರ್ವದಲ್ಲಿ ಸತ್ ಒಂದೇ ಇತ್ತು ಏಕಮೇವಾದ್ವಿತೀಯ ವಾಗಿತ್ತು' —

ಇಲ್ಲಿ ಉಪನಿಷತ್ತು ಅಸತ್ತಾದ ಶೂನ್ಯವೇ ಜಗತ್ಕಾರಣವೆಂದು ಬೌದ್ಧರು ಹೇಳುವುದನ್ನು ಅನುವಾದ ಮಾಡುತ್ತ 'ಅಸತ್ ಆಸೀತ್' 'ಅಸತ್ತು ಇತ್ತು ಎನ್ನುತ್ತಾರೆ' ಎಂದು ಬೌದ್ಧರಲ್ಲಿ ಅಸತ್ತಿನ ಸತ್ವಪ್ರತೀತಿ ಇತ್ತೆಂದು ಹೇಳುವುದರಿಂದ ಅಸತ್ತಿಗೆ ಸತ್ವೇನ ಅಪ್ರತೀಯಮಾನತ್ವರೂಪ ಅಸತ್ವಲಕ್ಷಣವು ಅಸಂಭವಿ. ಏಕೆಂದರೆ, ಇಲ್ಲಿ ಬರುವ 'ಅಸತ್' ಪದಕ್ಕೂ ಕೂಡ ಅಭಾಸಭೂತ ಅನಿರ್ವಚನೀಯ ಅಸತ್ ಅರ್ಥ ಎಂದು ಅದ್ವೈತಿಯು ಹೇಳುವುದು ಶಕ್ಯವಿಲ್ಲ. ಈ ಶ್ರುತಿಯು ಬೌದ್ಧಮತ ನಿರಾಕರಣೆಗೆ ಹೊರಟಿರುವುದರಿಂದ ಅದರಲ್ಲಿ ಬರುವ ಅಸತ್ ಶಬ್ದಕ್ಕೆ ಬೌದ್ಧರು ಹೇಳುವ ಅನಾಭಾಸಭೂತ ಅಸತ್ತೇ ಅರ್ಥ ಎಂದು ಸ್ವೀಕರಿಸಬೇಕಾಗುತ್ತದೆ. ಇಲ್ಲವಿದ್ದರೆ 'ಅಸತ್ತಿನಿಂದ ಸತ್ ಹೇಗೆ ಹುಟ್ಟೀತು?' ಎಂಬ ಮುಂದಿನವಾಕ್ಯದಲ್ಲಿ ಅದನ್ನು ನಿರಾಕರಣ ಮಾಡುವುದು ಹೇಗೆ ಯುಕ್ತವಾದೀತು?

❖❖❖

नापि सदनिर्वाच्याभ्यामन्यत्वमसत्त्वं, अनिर्वाच्यत्वस्यासत्त्वनिरूप्यत्वेनान्योन्याश्रयात् । लाघवेन सार्वत्रिकत्रैकालिकनिषेधाप्रतियोगिरूपसदन्यत्वस्यैव तत्त्वाच्च ।

अनिर्वाच्यस्यापि स्वरूपेण त्रैकालिकनिषेधेऽसतोऽनिर्वाच्यादन्यत्वासिद्धेश्च ।

अर्थक्रियासामर्थ्याभावादिकमसत्त्वमित्यशक्यशङ्कम् । शुक्तिरूप्यादौ शुद्धब्रह्मणि च सत्त्वात् । नच निःस्वरूपत्वमसत्त्वं मिथ्याभूतं तु सस्वरूपमिति वाच्यम् । मिथ्याभूतस्यापि स्वरूपेणैव त्रैकालिकनिषेध इति पक्षे निःस्वरूपत्वस्य दुर्वारत्वात् ।

नच मिथ्याभूतं स्वरूपं मिथ्यात्वादेव स्वरूपेण त्रैकालिकनिषेधसामानाधिकरण्याविरोधीति वाच्यम् । स्वदेशकालयोस्तत्स्वरूप सहिष्णोस्तत्स्वरूप प्रतिषेधत्वस्य पारिभाषिकत्वापातात् । अन्यथा तन्तुष्विवातन्तुष्वपि व्यावहारिकपटस्वरूपापातात् ।

प्रागभावादिसमानकालीनत्वेनाप्यविरोधापाताच्च । तुच्छेऽपि परोक्षप्रतीत्याद्यन्यथानुपपत्त्या एतादृशस्वरूपस्यापि सुवचत्वाच्च ।

**असत्त्वनिरूप्यत्वेनेति** । अनिर्वाच्यत्वस्य सद्विलक्षणत्वे सत्यसद्विलक्षणत्व-रूपत्वेनासत्त्वघटितमूर्तितयेत्यर्थः । नन्वस्मिन् पक्षे बाध्यत्वमनिर्वाच्यत्वं, नतु सदसद्वैलक्षण्यगर्भं वा असत्त्वानधिकरणत्वगर्भं वा येनानिर्वाच्यत्वस्यासत्त्वघटित-मूर्तित्वेनान्योन्याश्रयः स्यादिति चेन्न । अनिर्वाच्यत्वे बाधान्यथानुपपत्तिं प्रमाणत्वेन वदता बाध्यत्वान्यस्यैवानिर्वाच्यत्वस्य वक्तव्यत्वात् । यद्वा एतदस्वरसादेवाह **लाघवेनेति** । ननु निरुक्तमसत्त्वमनिर्वाच्यसाधारणमित्यत आह **अनिर्वाच्य-स्यापीति** । **शुक्तिरूप्यादाविति** । तथाच तत्रैवातिव्याप्तिरिति भावः । नहि शुक्तिरूप्यं शुद्धं ब्रह्म वात्यन्तासत्त्वेन परेण स्वीकृतमिति ।

ननु शुक्तिरूप्यादावर्थक्रियाभावोऽसिद्धः । बाधानन्तरं प्रतियोगित्वेनान्ततः स्वनिवृत्तिं प्रत्येव जनकत्वात् । कटककुण्डलाद्युचितार्थक्रियाभावस्तूत्पन्नविनष्ट-रूप्यादौ विनश्यदवस्थागतकर्मादौ चास्तीति तत्साधारणो नासत्त्वापादकः। किञ्चादृढ-दण्डवत् जनकतावच्छेदकावच्छिन्नत्वसहकारिसंपत्तिरहितत्वदशायामर्थक्रियाऽजनक-त्वेऽपि तद्दशायां ब्रह्मणोऽप्यर्थक्रियाजनकत्वमविरुद्धमिति चेत् न । बाधानन्तरं मम शुक्त्यज्ञानं नष्टं तत्र मम रूप्यभ्रमो नष्ट इतिवत् शुक्तिरूप्यमुत्पन्नं नष्टमिति कदाप्यननुभवेन तदुत्पत्तिविनाशयोरेव प्रमाणाभावात् । यत्तु शुद्धब्रह्मणि अदृढदण्डवत् शुद्धत्वदशायां जनकताचच्छेदकविरहात् सहकारिविरहाद्वार्थक्रियानार्जकत्वेऽपि तद्दशायां तदविरुद्धमित्युक्तं, तन्न । असङ्गैकस्वभावतया श्रुत्यवधारितस्य विशुद्धचैतन्यस्या-वच्छेदकीभूतधर्मसहकारिसङ्गे स्वभावव्याकोपापत्तेः । नचौपाधिकतत्सङ्गस्वीकारात् तस्य स्वाभाविकासङ्गैकरूपत्वमविरुद्धमिति वाच्यम् । अनाद्यविद्यासङ्गस्यानौपाधि-कत्वात् । लोकवेदयोरागन्तुक एव उपाधिप्रागभावप्रयुक्तप्रागभावप्रतियोगि-न्यौपाधिकत्वव्यवहारस्य दर्शनात् । अन्यत्र तददर्शनाच्च । तन्निवृत्तिप्रयुक्तनिवृत्ति-प्रतियोगित्वेनौपाधिकत्वे परिभाषामात्रत्वप्रसङ्गात् । अपेक्षाबुद्धिनिवृत्तिप्रयुक्त-निवृत्तिप्रतियोगिद्वित्वादौ तदुपाधिकत्वाव्यवहाराच्चेति ।

**स्वदेशकालयोरिति** । कदापि तत्स्वरूपप्रतिक्षेप(क)स्वभावत्वाभावेऽपि तन्निषेध रूपत्वेऽतिप्रसङ्ग इति भावः । पटस्वरूपमात्रापादने तत्र प्रातिभासिक-

पटसत्त्वादिष्टापत्तिरित्यत आह **व्यावहारिकेति** । अर्थक्रियासमर्थपटस्वरूपापातादित्यर्थः । नन्वभावस्य व्यावहारिकपटस्वरूपसहिष्णुता न तत्स्वरूपसत्तापादिका । किन्तु तत्सामग्री । सा च तन्तुष्वेवास्ति । नातन्तुष्वपि । कार्यव्यवस्थादर्शनेन तत्सामग्र्याः तत्रैव कल्पनादित्यनुशयादाह **प्रागभावादीति** । नथाच तन्तुषु व्यावहारिकपटसत्त्वकाले तत्र विद्यमानोऽपि तत्पटात्यन्ताभावो यथा तत्र तत्पटसत्त्वाविरोधी तथा तत्रैव तन्तुषु तत्पटसामग्रीशरीरप्रविष्टस्तत्प्रागभावः स्वयमेव स्वनाशरूपं तमेव पटं न विरुन्ध्यात् । उत्पन्नो वा पटस्तत्रैव तन्तुषु विद्यमानः स्वकाले स्वाभावरूपं प्रागभावं न विरुन्ध्यात् । एवं स एव पटस्तत्रैव तन्तुषु स्वकालेऽपि स्वनाशसहिष्णुश्च स्यात् । नाशो वा स्वकाले तत्र स्वप्रतियोगिभूतपटसहिष्णुश्च स्यात् । क्लृप्तविरोधत्यागस्य दोषत्वेन त्वयानङ्गीकारादित्यर्थः ।

**तुच्छेऽपीति** । यथा अपरोक्षप्रतीत्यन्यथानुपपत्त्या प्रातिभासिकस्य घटादिवत् सस्वरूपत्वं तथा परोक्षप्रतीत्यन्यथानुपपत्त्या धर्माधर्मादिवत् असतोऽपि सस्वरूपत्वं स्यात् । अथैतदप्रयोजकत्वान्न सस्वरूपत्वसाधकमिति चेत्तर्हि अपरोक्षप्रतीतिविषयत्वमपि न सस्वरूपत्वसाधकमप्रयोजकत्वात्, आहार्यापरोक्षस्थले उक्तरीत्या त्वदभिमत सामग्रीबाधात् तद्विषयीभूत रजतादेर्निःस्वरूपत्वस्य दुर्वारत्वात् तत्रापरोक्षप्रतीतिविषयत्वस्य व्यभिचाराच्चेत्यर्थः ।

❖❖❖

## ಸದನಿರ್ವಾಚ್ಯಾನ್ಯತ್ವವು ಅಸತ್ವವಲ್ಲ

**ನಾಪಿ ಸದನಿರ್ವಾಚ್ಯಾಭ್ಯಾಮನ್ಯತ್ವಂ ಅಸತ್ವಂ। ಅನಿರ್ವಾಚ್ಯತ್ವಸ್ಯ ಅಸತ್ವ ನಿರೂಪ್ಯತ್ವೇನ ಅನ್ಯೋನ್ಯಾಶ್ರಯಾತ್। ಲಾಘವೇನ ಸಾರ್ವತ್ರಿಕ ತ್ರೈಕಾಲಿಕ ನಿಷೇಧಾಪ್ರತಿಯೋಗಿ ರೂಪ ಸದನ್ಯಸ್ಯೈವ ತತ್ತ್ವಾಪತ್ತೇ।**

'ಸತ್–ಅನಿರ್ವಾಚ್ಯಗಳಿಗಿಂತ ಅನ್ಯತ್ವವೇ ಅಸತ್ವ'ವೆಂದೂ ಹೇಳಬಾರದು. ಏಕೆಂದರೆ ಅನಿರ್ವಾಚ್ಯತ್ವವೆಂದರೆ 'ಸದ್ವಿಲಕ್ಷಣತ್ವವಿಶಿಷ್ಟ ಅಸದ್ವಿಲಕ್ಷಣತ್ವ' ರೂಪವಾದ್ದರಿಂದ ಅದರೊಳಗೆ ಅಸತ್ವವು ಸೇರಿದೆ. ಅದರಿಂದ ಆ ಅಸತ್ವವನ್ನು ತಿಳಿದರೆ ತದ್ಘಟಿತವಾದ ಅನಿರ್ವಾಚ್ಯತ್ವವನ್ನು ತಿಳಿಯಬಹುದು. ಅನಿರ್ವಾಚ್ಯತ್ವವನ್ನು ತಿಳಿದರೆ ಅನಿರ್ವಾಚ್ಯಾನ್ಯತ್ವರೂಪ ಅಸತ್ವವನ್ನು ತಿಳಿಯಬಹುದು ಎಂದು ಅನ್ಯೋನ್ಯಾಶ್ರಯ.

ಯದ್ಯಪಿ ಈ ಪಕ್ಷದಲ್ಲಿ ಅನಿರ್ವಚನೀಯತ್ವವೆಂದರೆ 'ಸದ್ವಿಲಕ್ಷಣತ್ವೇ ಸತಿ ಅಸದ್ವಿಲಕ್ಷಣತ್ವ'ವೆನ್ನುವುದಿಲ್ಲ. ಸದಸತ್ತ್ವಾನಧಿಕರಣತ್ವವೆನ್ನುವುದೂ ಇಲ್ಲ. ಬಾಧ್ಯತ್ವ, ಅಂದರೆ ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವವೇ ಅನಿರ್ವಚನೀಯತ್ವವೆನ್ನುತ್ತೇನೆ. ಇದರೊಳಗೆ ಅಸತ್ವ ಸೇರಿಲ್ಲ ಎನ್ನಬಹುದು. ಆದರೆ ಅನಿರ್ವಾಚ್ಯತ್ವವನ್ನು ತಿಳಿಯಲು ಬಾಧಾನ್ಯಥಾನುಪಪತ್ತಿಯನ್ನು ಪ್ರಮಾಣವಾಗಿ ಹೇಳುತ್ತಾನೆ ಅದ್ವೈತಿ. ಅದರಿಂದ 'ಬಾಧ್ಯತ್ವವೇ ಅನಿರ್ವಚನೀಯತ್ವ'ವೆಂದು ಹೇಳಲಾಗದು. ಬಾಧ್ಯತ್ವಕ್ಕಿಂತ ಬೇರೆಯೆ ಅದೆಂದು ಹೇಳಬೇಕು. ಅದು ಅಸತ್ವಘಟಿತವಾದ್ದರಿಂದ ಅನ್ಯೋನ್ಯಾಶ್ರಯತ್ವವಿದ್ದೇ ಇದೆ. ಅಥವಾ ಈ ಅಸ್ವಾರಸ್ಯವಿರುವುದರಿಂದ ಬೇರೆ ದೋಷವನ್ನು ಹೇಳುತ್ತಾರೆ— 'ಸಾರ್ವತ್ರಿಕ ತ್ರೈಕಾಲಿಕ ನಿಷೇಧಾಪ್ರತಿಯೋಗಿಯೇ ಸತ್. ತದನ್ಯತ್ವವೆ ಅಸತ್ವವೆಂದು ಹೇಳಿದರೆ ಲಾಘವವಿದೆ. ಅನಿರ್ವಾಚ್ಯ ಭಿನ್ನತ್ವವನ್ನು ಅದರಲ್ಲಿ ಸೇರಿಸಬೇಕಾಗಿಲ್ಲ. ಸೇರಿಸಿದರೆ ಗೌರವ. 'ಅನಿರ್ವಾಚ್ಯದಲ್ಲಿ ಅಸತ್ವ ಬಾರದಂತೆ ಮಾಡಲು ಅಸತ್ವಶರೀರದಲ್ಲಿ ಅನಿರ್ವಾಚ್ಯಭಿನ್ನತ್ವವಿಶೇಷಣ ಸೇರಿಸಲೇಬೇಕು' ಎಂದರೆ, ಅನಿರ್ವಾಚ್ಯತ್ವರೂಪ ತ್ರೈಕಾಲಿಕನಿಷೇಧವು ಸ್ವರೂಪೇಣ ನಿಷೇಧವೆಂದರೆ ಅದು ಅಸತ್ವವೇ ಆಗುತ್ತದೆ. ಅಥವಾ ಅನಿರ್ವಾಚ್ಯಭಿನ್ನತ್ವವನ್ನು ಅಸತ್ವಲಕ್ಷಣದಲ್ಲಿ ಸೇರಿಸೋಣ. ಆಗ ಅಸಂಭವದೋಷ—

**ಅನಿರ್ವಾಚ್ಯಸ್ಯಾಪಿ ಸ್ವರೂಪೇಣ ತ್ರೈಕಾಲಿಕನಿಷೇಧೇ ಅಸತಃ ಅನಿರ್ವಾಚ್ಯಾದನ್ಯತ್ವಾಸಿದ್ಧೇಶ್ಚ ।**

ಅನಿರ್ವಾಚ್ಯವಾದ ವಿಯದಾದಿರೂಪ್ಯಾದಿಗಳಿಗೂ ಸ್ವರೂಪೇಣ ತ್ರೈಕಾಲಿಕನಿಷೇಧವನ್ನು ಅಂಗೀಕರಿಸುವ ಪಕ್ಷದಲ್ಲಿ ಅನಿರ್ವಾಚ್ಯಕ್ಕೂ ಕೂಡ ಅಸತ್ವ ಬರುವುದರಿಂದ ಅಸತ್ತು ಅನಿರ್ವಾಚ್ಯಕ್ಕಿಂತ ಅನ್ಯವೆನಿಸುವುದು ಅಸಂಭವ.

## ಅರ್ಥಕ್ರಿಯಾಭಾವಾದಿ ಅಸತ್ವವಲ್ಲ

**ಅರ್ಥಕ್ರಿಯಾಸಾಮರ್ಥ್ಯಾಭಾವಾದಿಕಂ ಅಸತ್ವಂ ಇತಿ ಅಶಕ್ಯಶಂಕಂ । ಶುಕ್ತಿರೂಪ್ಯಾದೌ ಶುದ್ಧ ಬ್ರಹ್ಮಣಿ ಚ ಸತ್ವಾತ್ ।**

ಅರ್ಥಕ್ರಿಯಾ ಸಾಮರ್ಥ್ಯಾಭಾವ, ಅನುಪಾಯತ್ವ, ನಿಷ್ಫಲತ್ವಗಳನ್ನು ಅಸತ್ವವೆಂದು ಶಂಕಿಸಲೂ ಶಕ್ಯವಿಲ್ಲ. ಏಕೆಂದರೆ ಅವು ಶುಕ್ತಿರೂಪಾದಿಗಳಲ್ಲಿಯೂ ಬ್ರಹ್ಮನಲ್ಲಿಯೂ ಬರುವುದರಿಂದ ಅಲ್ಲಿ ಅತಿವ್ಯಾಪ್ತಿ ಬರುತ್ತದೆ. ಶುಕ್ತಿರೂಪ್ಯವಾಗಲಿ ಬ್ರಹ್ಮವಾಗಲಿ ಅದ್ವೈತಮತದಲ್ಲಿ ಅತ್ಯಂತಾಸತ್ತೆಂದು ಅಂಗೀಕೃತವಾಗಿಲ್ಲ.

ಇಲ್ಲಿ ಅದ್ವೈತಿ ಆಕ್ಷೇಪ ಮಾಡಬಹುದು— 'ಶುಕ್ತಿರೂಪ್ಯಾದಿಗಳಲ್ಲಿ ಅರ್ಥಕ್ರಿಯಾ ಇಲ್ಲ ಎನ್ನಲಾಗುವುದಿಲ್ಲ. ಬಾಧಾನಂತರದಲ್ಲಿ ಶುಕ್ತಿರೂಪ್ಯನಿವೃತ್ತಿಯಾಗುವಾಗ ಶುಕ್ತಿರೂಪ್ಯವು ತನ್ನ ನಿವೃತ್ತಿಗೆ ಪ್ರತಿಯೋಗಿತ್ವೇನ ತಾನೇ ಕಾರಣವಾಗುತ್ತದೆ. ಕಡಗ ಕುಂಡಲಾದಿ ಉಚಿತ ಅರ್ಥಕ್ರಿಯಾ ಇಲ್ಲವೆಂದರೆ,

ಉತ್ಪನ್ನವಿನಷ್ಟ ಸತ್ಯ ರೂಪ್ಯಾದಿಗಳಲ್ಲಿಯೂ ವಿನಶ್ಯದವಸ್ಥೆಯಲ್ಲಿ ಉಂಟಾಗುವ ಕರ್ಮದಲ್ಲಿಯೂ ಉಚಿತಾರ್ಥಕ್ರಿಯಾಕಾರಿತ್ವಾಭಾವವಿದೆ, ಆದರೆ ಅದು ಅಸತ್ತಲ್ಲ. ಹೀಗಾಗಿ ಅರ್ಥಕ್ರಿಯಾಸಾಮರ್ಥ್ಯಾಭಾವವು ಅಸತ್ವಾಪಾದಕವಾಗಲಾರದು. ಶುದ್ಧಬ್ರಹ್ಮನಲ್ಲಿ ಶುದ್ಧತ್ವದಶಾದಲ್ಲಿ ಜನಕತಾವಚ್ಛೇದಕಧರ್ಮವಿಲ್ಲದ್ದರಿಂದ ಅಥವಾ ಸಹಕಾರಿ ಇಲ್ಲದ್ದರಿಂದ ಅದೃಢದಂಡದಂತೆ ಅರ್ಥಕ್ರಿಯಾ ಜನಕವಾಗುವುದಿಲ್ಲ. ಆದರೂ ಜನಕತಾವಚ್ಛೇದಕ ಧರ್ಮ ಮತ್ತು ಸಹಕಾರಿ ಸಂಪತ್ತಿಗಳಿರುವ ದಶಾದಲ್ಲಿ ಶುದ್ಧಬ್ರಹ್ಮ ಅರ್ಥಕ್ರಿಯಾಕಾರಿಯಾಗುತ್ತಾನೆ. ಇವುಗಳಿಗೆ ವಿರೋಧವಿಲ್ಲ'—

ಇದು ಸರಿಯಲ್ಲ. ಬಾಧಾನಂತರದಲ್ಲಿ ನನ್ನ ಶುಕ್ತ್ಯಜ್ಞಾನ ನಾಶವಾಯಿತು, ರೂಪ್ಯಭ್ರಮ ನಾಶವಾಯಿತು ಎಂದು ಅನುಭವ ಹೊರತು ಶುಕ್ತಿರೂಪ್ಯ ಉತ್ಪನ್ನವಾಯಿತು ನಾಶಹೊಂದಿತೆಂದು ಎಂದೂ ಅನುಭವವಿಲ್ಲ. ಅದರಿಂದ ಶುಕ್ತಿರೂಪ್ಯದ ಉತ್ಪತ್ತಿನಾಶಗಳ ವಿಷಯದಲ್ಲಿ ಪ್ರಮಾಣವಿಲ್ಲ. ಶುಕ್ತಿರೂಪ್ಯವು ತನ್ನ ನಿವೃತ್ತಿಗೆ ಪ್ರತಿಯೋಗಿತಯಾ ತಾನು ಕಾರಣವಾಗುವುದು ಎನ್ನುವುದೂ ಶಕ್ಯವಿಲ್ಲ.

'ಶುದ್ಧಬ್ರಹ್ಮವು ಅದೃಢದಂಡದಂತೆ ಜನಕತಾವಚ್ಛೇದಕ ಸಹಕಾರಿಸಂಪತ್ತಿಗಳು ಇಲ್ಲದಿರುವಾಗ ಅರ್ಥಕ್ರಿಯಾಕಾರಿಯಾಗದಿದ್ದರೂ ಇರುವಾಗ ಕಾರ್ಯಕಾರಿಯಾಗುತ್ತದೆ' ಎನ್ನುವುದೂ ಸರಿಯಲ್ಲ. 'ಅಸಂಗೋ ಹ್ಯಯಂ ಪುರುಷಃ' ಎಂಬ ಶ್ರುತಿಯಿಂದ ಕೇವಲ ಅಸಂಗಸ್ವಭಾವದವನಾದ ಶುದ್ಧ ಬ್ರಹ್ಮನಿಗೆ ಅವಚ್ಛೇದಕಧರ್ಮ ಸಹಕಾರಿಗಳ ಸಂಗ ಉಂಟಾದರೆ ಅವನ ಅಸಂಗಸ್ವಭಾವ ನಾಶವಾದೀತು.

'ಔಪಾಧಿಕಸಂಗವನ್ನು ಸ್ವೀಕರಿಸಿದರೆ ಸ್ವಭಾವನಾಶವಾಗುವುದಿಲ್ಲ.' ಎಂದರೆ ಅನಾದಿ ಅವಿದ್ಯಾಸಂಗ ಔಪಾಧಿಕವಾಗಲಾರದು. ಲೋಕದಲ್ಲಾಗಲಿ ವೇದದಲ್ಲಾಗಲಿ ಆಗಂತುಕವಾದ ಉಪಾಧಿಯ ಪ್ರಾಗಭಾವಪ್ರಯುಕ್ತವಾಗಿ ಪ್ರಾಗಭಾವಪ್ರತಿಯೋಗಿಯಾಗುವುದನ್ನೇ ಔಪಾಧಿಕವೆಂದು ವ್ಯವಹರಿಸುವುದು ಕಂಡಿದೆ. ಅನಾದಿ ಉಪಾಧಿ ಸ್ಥಳದಲ್ಲಿ ಹಾಗೆ ವ್ಯವಹಾರವಿರುವುದು ಕಂಡಿಲ್ಲ. ಉಪಾಧಿನಿವೃತ್ತಿಪ್ರಯುಕ್ತ ನಿವೃತ್ತಿ ಪ್ರತಿಯೋಗಿತ್ವಬಂದ ಮಾತ್ರಕ್ಕೆ ಅದನ್ನು ಔಪಾಧಿಕವೆಂದು ಕರೆದರೆ ಅದು ಪರಿಭಾಷಾ ಮಾತ್ರವಾಗುತ್ತದೆ. ಮತ್ತು ಅಪೇಕ್ಷಾಬುದ್ಧಿ ನಿವೃತ್ತಿ ಪ್ರಯುಕ್ತ ನಿವೃತ್ತಿ ಪ್ರತಿಯೋಗಿಯಾದ ದ್ವಿತ್ವಾದಿಯನ್ನು ಅಪೇಕ್ಷಾ ಬುದ್ಧ್ಯ್ಯಪಾಧಿಕವೆಂದು ಕರೆಯುವುದಿಲ್ಲ.

## ನಿಃ ಸ್ವರೂಪತ್ವವೂ ಅಸತ್ವವಲ್ಲ

**ನ ಚ ನಿಸ್ಸ್ವರೂಪತ್ವಂ ಅಸತ್ವಂ । ಮಿಥ್ಯಾಭೂತಂ ತು ಸಸ್ವರೂಪಂ ಇತಿ ವಾಚ್ಯಂ । ಮಿಥ್ಯಾಭೂತಸ್ಯಾಪಿ ಸ್ವರೂಪೇಣೈವ ತ್ರೈಕಾಲಿಕನಿಷೇಧ ಇತಿ ಪಕ್ಷೇ ನಿಸ್ಸ್ವರೂಪತ್ವಸ್ಯ ದುರ್ವಾರತ್ವಾತ್ ।**

ನಿಃಸ್ವರೂಪತ್ವವೇ ಅಸತ್ವ. ಮಿಥ್ಯಾಭೂತವು ಸಸ್ವರೂಪವೆ ಆಗಿರುತ್ತದೆ. ಅದು ಅಸದ್ವಿಲಕ್ಷಣವಾದ ವ್ಯಾವಹಾರಿಕ ಅಥವಾ ಪ್ರಾತಿಭಾಸಿಕ ಸ್ವರೂಪಯುಕ್ತವೇ ಆಗಿರುತ್ತದೆ. ಅದರಿಂದ ಅವುಗಳಲ್ಲಿ

ಅತಿವ್ಯಾಪ್ತಿ ಇಲ್ಲ ಎಂದರೆ, ವಿಯದಾದಿ ರೂಪ್ಯಾದಿ ಅನಿರ್ವಾಚ್ಯಪದಾರ್ಥಕ್ಕೂ ಕೂಡ ಸ್ವರೂಪ ದಿಂದಲೇ ತ್ರೈಕಾಲಿಕ ನಿಷೇಧವೆನ್ನುವ ಪಕ್ಷದಲ್ಲಿ ನಿಃಸ್ವರೂಪತ್ವವನ್ನು ವಾರಣ ಮಾಡಲಾಗುವುದಿಲ್ಲ. ಮಿಥ್ಯಾಭೂತವು ಸಸ್ವರೂಪವಾದರೆ ಅದಕ್ಕೆ ಸ್ವಾತ್ಯಂತಾಭಾವ ಸಾಮಾನಾಧಿಕರಣ್ಯ ಕೂಡುವುದಿಲ್ಲ. ಅತ್ಯಂತಾಭಾವವು ಸ್ವಾಧಿಕರಣದಲ್ಲಿ ಪ್ರತಿಯೋಗಿಸ್ವರೂಪ ಸತ್ವಕ್ಕೆ ವಿರೋಧಿಯಾಗಿರುತ್ತದೆ.

**ನ ಚ ಮಿಥ್ಯಾಭೂತಂ ಸ್ವರೂಪಂ ಮಿಥ್ಯಾತ್ವಾದೇವ ಸ್ವರೂಪೇಣ ತ್ರೈಕಾಲಿಕ ನಿಷೇಧ ಸಾಮಾನಾಧಿಕರಣ್ಯಅವಿರೋಧಿ ಇತಿ ವಾಚ್ಯಂ। ಸ್ವದೇಶಕಾಲಯೋಃ ತತ್ಸ್ವರೂಪ ಸಹಿಷ್ಣೋಃ ತತ್ಸ್ವರೂಪ ಪ್ರತಿಷೇಧತ್ವಸ್ಯ ಪಾರಿಭಾಷಿಕತ್ವಾಪಾತಾತ್। ಅನ್ಯಥಾ ತಂತುಷ್ವಿವ ಅತಂತುಷ್ವಪಿ ವ್ಯಾವಹಾರಿಕ ಪಟ ಸ್ವರೂಪಾಪಾತಾತ್।**

'ಮಿಥ್ಯಾಭೂತವಾದ ಪದಾರ್ಥಕ್ಕೆ ಸ್ವರೂಪವಿದೆ. ಸ್ವರೂಪೇಣ ತ್ರೈಕಾಲಿಕನಿಷೇಧ ಮಾಡಿದರೂ ಸ್ವರೂಪ ಹಾಗೇ ಇರುತ್ತದೆ. ತನ್ನ ನಿಷೇಧಕ್ಕೆ ಸಮಾನಾಧಿಕರಣವಾಗಿಯೇ ಇರುತ್ತದೆ. ಮಿಥ್ಯಾ ಆದ್ದರಿಂದಲೆ ಅದು ಪ್ರತಿಯೋಗಿಯಲ್ಲಿ ಸ್ವರೂಪೇಣತ್ರೈಕಾಲಿಕನಿಷೇಧಸಾಮಾನಾಧಿಕರಣ್ಯವಿರುವುದಕ್ಕೆ ಅವಿರೋಧಿ'—ಹೀಗೆ ಹೇಳುವುದು ಸರಿಯಲ್ಲ. ನಿಷೇಧವು ತನ್ನ ದೇಶಕಾಲಗಳಲ್ಲಿ ಪ್ರತಿಯೋಗಿ ಸ್ವರೂಪವಿರುವುದನ್ನು ಸಹಿಸಿಕೊಂಡರೆ ಅದು ಸ್ವರೂಪೇಣ ನಿಷೇಧವೇ ಆಗುವುದಿಲ್ಲ. ಆಗುತ್ತದೆ ಎಂದರೆ ಪಾರಿಭಾಷಿಕವಾಗುತ್ತದೆ. ಲೋಕದಲ್ಲಿ ತನ್ನ ದೇಶಕಾಲಗಳಲ್ಲಿ ಪ್ರತಿಯೋಗಿಯ ಸ್ವರೂಪವನ್ನು ಉಪಮರ್ದಮಾಡುವ ಅಸಹಿಷ್ಣುವಾದ ಅಭಾವವೇ ಅತ್ಯಂತಾಭಾವವೆನಿಸುತ್ತದೆ. ಅದರಿಂದ ಪ್ರತಿಯೋಗಿಗೆ ವಾಸ್ತವ ಅತ್ಯಂತಾಭಾವ ಸಾಮಾನಾಧಿಕರಣ್ಯವಿರುವುದಿಲ್ಲ. ಕೇವಲ ಪಾರಿಭಾಷಿಕ ಅತ್ಯಂತಾಭಾವ ಸಾಮಾನಾಧಿಕರಣ್ಯವು ಬಂದೀತು. ವಾಸ್ತವ ಸಾಮಾನಾಧಿಕರಣ್ಯ ಬರಬೇಕಾದರೆ ಪ್ರತಿಯೋಗಿ ಸ್ವರೂಪದ ಉಪಮರ್ದವಾಗಿರಬೇಕು. ಅದರಿಂದ ಮಿಥ್ಯಾಭೂತಪದಾರ್ಥವು ನಿಃಸ್ವರೂಪವೆ. ನಿಃಸ್ವರೂಪತ್ವರೂಪ ಅಸತ್ವಲಕ್ಷಣ ಮಿಥ್ಯಾಭೂತ ಪದಾರ್ಥದಲ್ಲಿ ಅತಿವ್ಯಾಪ್ತವಾಯಿತು.

ಪ್ರತಿಯೋಗಿಸ್ವರೂಪಕ್ಕೂ ಸ್ವರೂಪೇಣನಿಷೇಧಕ್ಕೂ ವಿರೋಧವನ್ನೇ ಅಂಗೀಕರಿಸದಿದ್ದರೆ, ತಂತುವಿನಲ್ಲಿ ಸ್ವರೂಪೇಣ ಪಟನಿಷೇಧ ಮಾಡಿದಾಗ ವ್ಯಾವಹಾರಿಕವಾದ ಪಟಸ್ವರೂಪವು ಆ ಉಪಾಧಿ ಯಲ್ಲಿ ಉಪಮರ್ದವಾಗದೆ ಹಾಗೇ ಇರುವಂತೆ, 'ಅತಂತು' ಅಂದರೆ ತಂತುಭಿನ್ನವಾದ ಮೃದಾದಿ ಉಪಾಧಿಗಳಲ್ಲಿಯೂ ಸ್ವರೂಪೇಣ ಪಟ ನಿಷೇಧಮಾಡಿದಾಗ ವ್ಯಾವಹಾರಿಕ ಪಟಸ್ವರೂಪವಿರಬೇಕಾ ದೀತು ಎಂಬ ಆಪತ್ತಿ.

'ಪಟಸ್ವರೂಪ'ವಿರಬೇಕಾದೀತೆಂದು ಮಾತ್ರ ಆಪಾದನೆ ಮಾಡಿದರೆ ಇಷ್ಟಾಪತ್ತಿ, ಪ್ರಾತಿಭಾಸಿಕಪಟಸ್ವರೂಪವಿರಬಹುದು. ಅದಕ್ಕೆ ವ್ಯಾವಹಾರಿಕ ಪಟಸ್ವರೂಪಾಪತ್ತಿ ಮಾಡಿದ್ದಾರೆ. ಅರ್ಥಕ್ರಿಯಾಸಮರ್ಥ ಪಟಸ್ವರೂಪವು ಮೃದಾದಿಗಳಲ್ಲಿ ಇರಬೇಕಾದೀತು ಎಂದರ್ಥ. ಮೃತ್ತಿನಲ್ಲಿ ಪಟವಿಲ್ಲ ಎಂದು ನಿಷೇಧಮಾಡಿದರೂ ಪಟವಿರಬೇಕಾದೀತು ಎಂದು ಆಪತ್ತಿ.

**ಪ್ರಾಗಭಾವಾದಿ ಸಮಾನಕಾಲೀನತ್ವೇನಾಪಿ ಅವಿರೋಧಾಪಾತಾಚ್ಚ ।**

'ಅಭಾವವು ವ್ಯಾವಹಾರಿಕ ಪಟಸ್ವರೂಪ ಸಹಿಷ್ಣುವಾದ ಮಾತ್ರಕ್ಕೆ ಅಭಾವಾಧಿಕರಣದಲ್ಲಿ ಎಲ್ಲಕಡೆ ಪಟಸ್ವರೂಪವಿರಬೇಕಾಗಿಲ್ಲ. ಸ್ವರೂಪಸಹಿಷ್ಣುತ್ವ ಮಾತ್ರವು ಸ್ವರೂಪಾಪಾದಕವಲ್ಲ. ಅದಕ್ಕೆ ಸ್ವರೂಪಸಾಮಗ್ರಿ ಬೇಕು. ಅದು ಕಾರ್ಯಉಳ್ಳ ತಂತುವಿನಲ್ಲಿದೆ, ಎಂದೂ ಕಾರ್ಯವಿಲ್ಲದ ಮೃದಾದಿಗಳಲ್ಲಿ ಇಲ್ಲ. ಆದರಿಂದ ಅಲ್ಲಿ ಪಟಸ್ವರೂಪಾಪಾದನೆ ಯುಕ್ತವಲ್ಲ' ಎಂದರೆ, ಪ್ರಾಗಭಾವ ಧ್ವಂಸ ಸ್ಥಳಗಳಲ್ಲಿ ಸಾಮಗ್ರಿ ಇರುವುದರಿಂದ ಅಲ್ಲಿ ಆಪಾದನೆ ಮಾಡುತ್ತೇವೆ.

ತಂತುವಿನಲ್ಲಿ ವ್ಯಾವಹಾರಿಕ ಪಟವಿರುವ ಕಾಲದಲ್ಲಿಯೇ ಇರುವ ಪಟಾತ್ಯಂತಾಭಾವವು ಪಟಸತ್ವಕ್ಕೆ ಅವಿರೋಧಿಯಾಗಿರುವಂತೆ, ಅದೇ ತಂತುವಿನಲ್ಲಿ ಪಟಸಾಮಗ್ರೀಶರೀರದಲ್ಲಿ ಸೇರಿರುವ ಪಟಪ್ರಾಗಭಾವವು ತನ್ನ ಕಾಲದಲ್ಲಿ ತನ್ನ ನಾಶರೂಪವಾದ ಪ್ರತಿಯೋಗಿ ಪಟವನ್ನು ವಿರೋಧ ಮಾಡಕೂಡದು. ಪಟಪ್ರಾಗಭಾವ ಕಾಲದಲ್ಲಿ ತಂತುವಿನಲ್ಲಿ ಪಟವಿರಬೇಕಾದೀತು. ಪಟವು ಉತ್ಪನ್ನವಾದಾಗ ಅದೂ ಕೂಡ ಅದೇ ತಂತುವಿನಲ್ಲಿ ತನ್ನ ಕಾಲದಲ್ಲಿ ತನ್ನ ಅಭಾವವಾದ ಪ್ರಾಗಭಾವವನ್ನು ವಿರೋಧಿಸಬಾರದು. ಹಾಗೇ ಉತ್ಪನ್ನವಾದ ಪಟವು ತನ್ನ ಕಾಲದಲ್ಲಿ ತನ್ನ ನಾಶವನ್ನು ವಿರೋಧಿಸಬಾರದು. ಸ್ವನಾಶ ಸಹಿಷ್ಣುವಾಗಿರಬೇಕು. ಪ್ರತಿಯೋಗಿ ಕಾಲದಲ್ಲಿಯೂ ತಂತುವಿನಲ್ಲಿ ಪಟನಾಶವಿರಬೇಕು. ಆ ಪಟನಾಶವೂ ಕೂಡ ತನ್ನ ಕಾಲದಲ್ಲಿ ತಂತುವಿನಲ್ಲಿ ತನ್ನ ಪ್ರತಿಯೋಗಿಯಾದ ಪಟವನ್ನು ವಿರೋಧಿಸಬಾರದು, ವಿರೋಧತ್ಯಾಗ ದೋಷವಲ್ಲವೆ? ಎಂದರೆ ಮಿಥ್ಯೆಯಾದ್ದರಿಂದ ನೀನು ಅದನ್ನು ದೋಷವೆಂದು ಒಪ್ಪಿಲ್ಲ ತಾನೆ?

**ತುಚ್ಛೇऽಪಿ ಪರೋಕ್ಷಪ್ರತೀತ್ಯಾದ್ಯನ್ಯಥಾನುಪಪತ್ತ್ಯಾ ಏತಾದೃಶ ಸ್ವರೂಪಸ್ಯಾಪಿ ಸುವಚತ್ವಾಚ್ಚ ।**

'ಪ್ರಾತಿಭಾಸಿಕ ಶುಕ್ತಿರಜತವು ಸಸ್ವರೂಪವಾದ ಘಟದಂತೆಯೇ ಅಪರೋಕ್ಷ ಗೋಚರವಾಗುವುದರಿಂದ ತದನ್ಯಥಾನುಪಪತ್ತಿ ಬಲದಿಂದ, ಘಟದಂತೆಯೇ ಸಸ್ವರೂಪವಾಗಿದೆ ಎಂದು ಸಿದ್ಧವಾಗುತ್ತದೆ' ಎಂದು ಅದ್ವೈತಿ ಹೇಳುತ್ತಾನೆ. 'ಶುಕ್ತಿರಜತವು ನಿಃಸ್ವರೂಪವಾದರೆ ಅಸತ್ತಿನಂತೆಯೇ ಅಪರೋಕ್ಷವಿಷಯವಾಗದೆ ಹೋದೀತು. ಅಪರೋಕ್ಷವಿಷಯವಾಗಿದೆ. ಆದರಿಂದ ನಿಃಸ್ವರೂಪವಾಗಿಲ್ಲ, ಸಸ್ವರೂಪವೇ ಆಗಿದೆ' ಎನ್ನುತ್ತಾನೆ. ಹಾಗಾದರೆ ಅಸತ್ತು ಕೂಡ ಸಸ್ವರೂಪವಾದ ಧರ್ಮಾದಿಗಳಂತೆ ಪರೋಕ್ಷವಿಷಯವಾಗುವುದರಿಂದ, ತದನ್ಯಥಾನುಪಪತ್ತಿಯಿಂದ, ಧರ್ಮಾದಿಗಳಂತೆಯೇ ಸಸ್ವರೂಪವಾಗಿದೆ ಎಂದು ಏಕೆ ಒಪ್ಪಬಾರದು? ಪರೋಕ್ಷ ಪ್ರತೀತಿಯು ಅಸತ್ತಿಗೆ ಸ್ವರೂಪಸಾಧನೆಯಲ್ಲಿ ಅಪ್ರಯೋಜಕವೆನ್ನುವುದಾದರೆ ಅಪರೋಕ್ಷಪ್ರತೀತಿಯೂ ಕೂಡ ಪ್ರಾತಿಭಾಸಿಕಕ್ಕೆ ಸ್ವರೂಪಸಾಧನೆಯಲ್ಲಿ ಅಪ್ರಯೋಜಕವೆ. ಆಹಾರ್ಯ ಅಪರೋಕ್ಷ ಸ್ಥಳದಲ್ಲಿ ಶುಕ್ತಿಯಲ್ಲಿ ರಜತಸತ್ವಕ್ಕೆ ಶುಕ್ತ್ಯಜ್ಞಾನಾದಿ ಸಾಮಗ್ರಿ ಇಲ್ಲದಿರುವುದರಿಂದ ಆ ಅಪರೋಕ್ಷಕ್ಕೆ

ವಿಷಯವಾದ ಶುಕ್ತಿರಜತದಲ್ಲಿ ಸ್ವರೂಪಸತ್ವವಿಲ್ಲ, ನಿಃಸ್ವರೂಪತ್ವವೇ ಬರುತ್ತದೆ. ಹೀಗಾಗಿ ಅಪರೋಕ್ಷ ಪ್ರತೀತಿ ವಿಷಯತ್ವಕ್ಕೆ ಸಸ್ವರೂಪತ್ವದ ವ್ಯಭಿಚಾರವೂ ಬರುತ್ತದೆ.

❖❖❖

**तस्मात् सर्वत्र त्रैकालिक निषेध प्रतियोगित्वमेवात्यन्तासत्त्वम् । तत्र तदानीमसदित्यनेन तत्र तदा निषेध प्रतियोगित्वस्येवात्यन्तासदित्यनेनापि सर्वत्र सदा निषेध प्रतियोगित्वस्यैव प्रतीतेः ।**

**नच मिथ्याभूतस्यापि स्वरूपणैव निषेध इति पक्षे तदभावः सप्रतियोगिकः, तुच्छाभावस्तु निष्प्रतियोगिक इति वा, मिथ्याभूतस्य सदा सर्वत्र सद्वैलक्षण्यमात्रं, तुच्छस्य तु स्वरूपेणैव प्रतिषेध इति वा, वैषम्यं वक्तुं शक्यम् ।**

उपसंहरति **तस्मादिति ।** परिशेषादित्यर्थः । अनुभवबलादपि सर्वत्र त्रैकालिकनिषेधप्रतियोगित्वमेवात्यन्तासत्त्वमित्याह **तत्र तदानीमसदित्यनेनेति । नचेति ।** नच वक्तुं शक्यमिति योजना । तदभावः मिथ्याभूतस्याभावः । कुतो वैषम्यं वक्तुं न शक्यमिति चेत् मिथ्यात्यन्तासत्पदार्थयोरुभयोरप्युक्तरीत्या स्वरूप-विरोध्यभावप्रतियोगित्वस्याविशेषादिति भावः ।

❖❖❖

### ಸರ್ವತ್ರ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವವೇ ಅತ್ಯಂತಾಸತ್ವ

**ತಸ್ಮಾತ್ ಸರ್ವತ್ರ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವಮೇವ ಅತ್ಯಂತಾಸತ್ವಂ । 'ತತ್ರ ತದಾನೀಂ ಅಸದ್' ಇತ್ಯನೇನ ತತ್ರ ತದಾ ನಿಷೇಧ ಪ್ರತಿಯೋಗಿತ್ವಸ್ಯೇವ, 'ಅತ್ಯಂತಾಸತ್' ಇತ್ಯನೇನಾಪಿ ಸರ್ವತ್ರ ಸದಾ ನಿಷೇಧಪ್ರತಿಯೋಗಿತ್ವಸ್ಯೈವ ಪ್ರತೀತೇಃ ।**

'ತಸ್ಮಾತ್' ಈ ಪರಿಶೇಷದಿಂದ ಸರ್ವತ್ರ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವವೇ ಅಸತ್ವವೆಂದು ಸಿದ್ಧವಾಗುವುದು.

ಇಷ್ಟರವರೆಗೆ 'ನಿರುಪಾಖ್ಯತ್ವ–ಅಪರೋಕ್ಷತಃಅಪ್ರತೀಯಮಾನತ್ವ–ಕ್ವಚಿದಪ್ಯುಪಾಧೌ ಸತ್ವೇನ ಅಪ್ರತೀಯಮಾನತ್ವ–ಸದನಿರ್ವಾಚ್ಯಾಭ್ಯಾಮನ್ಯತ್ವ–ಅರ್ಥಕ್ರಿಯಾ ಸಾಮರ್ಥ್ಯಾಭಾವಾದಿ– ಮತ್ತು ನಿಃಸ್ವರೂಪತ್ವ' ಎಂಬ ಆರು ಬಗೆಯ ಅಸತ್ವ ನಿರುಕ್ತಿಯೂ ಅಸಮಂಜಸವೆಂದು ಸಿದ್ಧವಾದ ಬಳಿಕ ಪರಿಶೇಷದಿಂದ 'ಸರ್ವತ್ರ ತ್ರೈಕಾಲಿಕ ನಿಷೇಧಪ್ರತಿಯೋಗಿತ್ವವೇ ಅಸತ್ವ'ವೆಂದು ಸಿದ್ಧವಾಗುವುದು.

ಅನುಭವಬಲದಿಂದಲೂ ಇದು ಸಿದ್ಧವಾಗುವುದು. ಏಕೆಂದರೆ, 'ಸರ್ವತ್ರ ತ್ರೈಕಾಲಿಕನಿಷೇಧ ಪ್ರತಿಯೋಗಿ' ಎಂಬ ಶಬ್ದಕ್ಕೂ 'ಅತ್ಯಂತಾಸತ್' ಎಂಬ ಶಬ್ದಕ್ಕೂ ವ್ಯುತ್ಪತ್ತಿ ಬಲದಿಂದ ತುಲ್ಯಾರ್ಥತ್ವವು ಅನುಭವಸಿದ್ಧವಾದ್ದರಿಂದ ಅದನ್ನು ಒಪ್ಪಬೇಕು. 'ತತ್ರ. ತದಾ ಅಸತ್' ಎಂಬುದರಿಂದ ದೇಶವಿಶೇಷ ಕಾಲವಿಶೇಷಗಳಲ್ಲಿ ನಿಷೇಧಪ್ರತಿಯೋಗಿತ್ವಪ್ರತೀತಿ ಬರುವಂತೆ 'ಅತ್ಯಂತ ಅಸತ್' ಎಂಬ ಶಬ್ದದಿಂದ 'ಅತ್ಯಂತ' ಅಂದರೆ ಸರ್ವದೇಶ ಸರ್ವಕಾಲಗಳಲ್ಲಿ 'ಅಸತ್' ಅಂದರೆ ನಿಷೇಧಪ್ರತಿಯೋಗಿ ಎಂದು ಪ್ರತೀತಿ ಬರುವುದರಿಂದ 'ಸರ್ವತ್ರ' ಸರ್ವದೇಶಗಳಲ್ಲಿ 'ತ್ರೈಕಾಲಿಕ' ಮೂರುಕಾಲಗಳಿಗೆ ಸಂಬಂಧಿಸಿದ ನಿಷೇಧಕ್ಕೆ ಪ್ರತಿಯೋಗಿಯಾಗುವುದೇ ಅತ್ಯಂತಾಸತ್ತ್ವ. ಹೀಗಾಗಿ ಪ್ರಪಂಚಕ್ಕೆ ಸ್ವರೂಪೇಣ ತ್ರೈಕಾಲಿಕನಿಷೇಧಪ್ರತಿಯೋಗಿತ್ವ ಬಂದರೆ ತುಚ್ಛದಂತೆ ಅತ್ಯಂತಾಸತ್ತ್ವ ಅಪರಿಹಾರ್ಯವಾದೀತು.

**ನ ಚ ಮಿಥ್ಯಾಭೂತಸ್ಯಾಪಿ ಸ್ವರೂಪೇಣೈವ ನಿಷೇಧ ಇತಿ ಪಕ್ಷೇ ತದಭಾವಃ ಸಪ್ರತಿಯೋಗಿಕಃ, ತುಚ್ಛಾಭಾವಸ್ತು ನಿಷ್ಪ್ರತಿಯೋಗಿಕ ಇತಿ ವಾ, ಮಿಥ್ಯಾಭೂತಸ್ಯ ಸದಾ ಸರ್ವತ್ರ ಸದ್ ವೈಲಕ್ಷಣ್ಯಮಾತ್ರಂ, ತುಚ್ಛಸ್ಯ ತು ಸ್ವರೂಪೇಣೈವ ಪ್ರತಿಷೇಧ ಇತಿ ವಾ ವೈಷಮ್ಯಂ ವಕ್ತುಂ ಶಕ್ಯಂ ।**

ಮಿಥ್ಯಾಭೂತ ಪದಾರ್ಥಕ್ಕೂ ಕೂಡ ಸ್ವರೂಪದಿಂದಲೇ ನಿಷೇಧ ಎನ್ನುವ ಪಕ್ಷದಲ್ಲಿ ಅದರ ಅಭಾವವು ಸಪ್ರತಿಯೋಗಿಕ, ತುಚ್ಛದ ಅಭಾವ ಮಾತ್ರ ನಿಷ್ಪ್ರತಿಯೋಗಿಕ ಎಂದು ವೈಷಮ್ಯವನ್ನು ಹೇಳಲು ಶಕ್ಯವಾಗುವುದಿಲ್ಲ. ಅಥವಾ ಮಿಥ್ಯಾಭೂತ ಪದಾರ್ಥಕ್ಕೆ ಸದಾ ಸರ್ವತ್ರ ಸದ್ವೈಲಕ್ಷಣ್ಯ ಮಾತ್ರವಿರುತ್ತದೆ. ತುಚ್ಛಕ್ಕೆ ಮಾತ್ರ ಸ್ವರೂಪದಿಂದಲೇ ಪ್ರತಿಷೇಧವಿದೆ ಎಂದು ವೈಷಮ್ಯವನ್ನೂ ಹೇಳಲಾಗುವುದಿಲ್ಲ. ಏಕೆಂದರೆ ಮಿಥ್ಯಾ ತುಚ್ಛಗಳೆರಡಕ್ಕೂ ಹಿಂದೆ ಹೇಳಿದಂತೆ ಸ್ವರೂಪಸತ್ತ್ವವಿರೋಧಿ ಅಭಾವ ಪ್ರತಿಯೋಗಿತ್ವವು ಸಮಾನವೆ, ಏನೂ ವೈಲಕ್ಷಣ್ಯವಿಲ್ಲ.

❖❖❖

**अथ मतम्— असतोऽसत्त्वादेवात्यन्तिकनिषेध प्रतियोगितापि नेति । तन्न । असत्त्वस्योक्तनिषेधप्रतियोगित्वरूपत्वेन हेतोर्विरुद्ध-त्वात् ।**

**असतोऽसत्त्ववत्, सद्वैलक्षण्यवत्, त्वयोच्यमान-प्रतियोगित्वाभाववत्, परोक्षज्ञानव्यवहारौ प्रति विषयत्ववदसद्वैलक्षण्यं प्रति प्रतियोगित्ववच्च निषेधप्रतियोगित्वस्याप्युपपत्तेश्च ।**

**प्रागभावादिदशायामसत एव घटादेस्तत्प्रतियोगित्वदर्शनेन**

**प्रतियोगित्वस्य रूपादिवद्धर्मिसत्तानपेक्षत्वाच्च । कालान्तरे सत्त्वस्य चेदानीमनुपयोगात् । शिष्टमनिर्वाच्यत्वभङ्गे वक्ष्यते ।**

**असत्त्वस्येति ।** असत्त्वस्य स्वरूपेण सार्वत्रिकत्रैकालिकनिषेधप्रतियोगित्वरूपत्वेन तद्रूपहेतुना तादृशनिषेधप्रतियोगित्वाभावसाधने विरोधः स्यादिति स्फुटत्वादित्यर्थः । न केवलमसत्त्वसद्विलक्षण्यादिधर्मविशेषेषु धर्मिसत्त्वनिरपेक्षत्वदर्शनात् तत्प्रतिबन्द्या तद्दृष्टान्तेन वा मया प्रतियोगित्वे धर्मिसत्त्वनिरपेक्षत्वं साध्यते । अपि तु प्रतियोगित्वे तन्निरपेक्षत्वं प्रमाणदृष्टं चेत्याह **प्रागभावादिदशायामिति ।** यो घटो घटिकाद्वयानन्तरमत्रोत्पत्स्यते स इदानीमत्र नास्तीति, पूर्वमत्रोत्पन्नो यो घटः स इदानीमत्रैव मुद्गरपातेन ध्वस्त इति च प्रत्यक्षादित एव तत्र तदानीं स्वरूपेणासति वस्तुतः प्रामाणिकघटे प्रागभावध्वंसप्रतियोगित्वयोरनुभवादित्यर्थः । ननु प्रतियोगी स्वरूपेण कदाचिदस्त्येवेत्यत आह **कालान्तर इति ।** ननु रूपादिवत् प्रागभावप्रतियोगित्वादिकमपि यदाकदाचिद्धर्मिसत्त्वमपेक्षते, नतु स्वसत्ताकालेऽपि । लाघवेन धर्मसत्वे धर्मिसत्वमात्रस्यैव प्रयोजकत्वादित्यत आह **शिष्टमिति ।** एवमसत्त्वस्यापि धर्मतया तद्धर्मिणोऽपि तत्सत्त्वनिर्वाहाय सत्त्वापत्त्या असद्वहिर्भावप्रसङ्ग इत्यादि वक्ष्यत इत्यर्थः ।

❖❖❖

**ಅಥ ಮತಂ, ಅಸತೋಽಸತ್ತ್ವಾದೇವ ಆತ್ಯಂತಿಕ ನಿಷೇಧಪ್ರತಿಯೋಗಿತಾಪಿ ನೇತಿ, ತನ್ನ । ಅಸತ್ತ್ವಸ್ಯ ಉಕ್ತ ನಿಷೇಧ ಪ್ರತಿಯೋಗಿತ್ವರೂಪತ್ವೇನ ಹೇತೋಃ ವಿರುದ್ಧತ್ವಾತ್ ।**

'ಸದ್‌ಭ್ಯಾಂ ಅಧಿಕರಣ ಪ್ರತಿಯೋಗಿಭ್ಯಾಂ ಅಭಾವೋ ನಿರೂಪ್ಯತೇ' ಅಭಾವಕ್ಕೆ ಪ್ರತಿಯೋಗಿ ಮತ್ತು ಅಧಿಕರಣಗಳು ಸತ್ತಾಗಿರಬೇಕು. ಅಸತ್ತಿಗೆ, ಅದು ಅಸತ್ತಾದ್ದರಿಂದಲೆ, ಆತ್ಯಂತಿಕ ನಿಷೇಧಪ್ರತಿಯೋಗಿತ್ವವಿಲ್ಲ'—ಎಂದರೆ, ಅದು ಸರಿಯಲ್ಲ, ಹೇತುವಾಗಿ ಮಾಡಿದ ಅಸತ್ತ್ವವು ಇಷ್ಟರವರೆಗೆ ಹೇಳಿದಂತೆ ಆತ್ಯಂತಿಕ ನಿಷೇಧ ಪ್ರತಿಯೋಗಿತ್ವರೂಪವಾದ್ದರಿಂದ ಹೇತುವು ವಿರುದ್ಧವಾಯಿತು. 'ಪ್ರತಿಯೋಗಿತಾಪಿ ನ' ಎಂದು ಪ್ರತಿಯೋಗಿತ್ವಾಭಾವವು ಸಾಧ್ಯ. 'ಅಸತ್ತ್ವಾತ್' ಅಂದರೆ ನಿಷೇಧಪ್ರತಿಯೋಗಿತ್ವವು, ಹೇತು. ಪ್ರತಿಯೋಗಿತ್ವದಿಂದ ಪ್ರತಿಯೋಗಿತ್ವಾಭಾವವನ್ನು ಸಾಧನೆ ಮಾಡುವುದು ವಿರುದ್ಧ.

ಯದ್ಯಪಿ 'ಸಾಧ್ಯಾಭಾವವ್ಯಾಪ್ತೋ ಹೇತುರ್ವಿರುದ್ಧಃ' ಹೇತುವು ಸಾಧ್ಯಾಭಾವವ್ಯಾಪ್ಯವಾದರೆ

ವಿರುದ್ಧ ಎನಿಸುತ್ತದೆ. ಪ್ರಕೃತ ಪ್ರತಿಯೋಗಿತ್ವಾಭಾವ ಸಾಧ್ಯ. 'ಪ್ರತಿಯೋಗಿತ್ವಾಭಾವಾಭಾವ' ಅಂದರೆ ಪ್ರತಿಯೋಗಿತ್ವವು ಸಾಧ್ಯಾಭಾವ. ಪ್ರತಿಯೋಗಿತ್ವವೆ ಹೇತು. ಹೇತು ತನಗೆ ತಾನೇ ವ್ಯಾಪ್ಯ ಹೇಗೆ? ಎಂದರೆ ಅಭೇದವಿದ್ದರೂ ವ್ಯಾಪ್ತಿ ಇರಲು ಅಡ್ಡಿ ಇಲ್ಲ ಎಂದು ಅಂಗೀಕರಿಸಿ ವ್ಯಾಪ್ತಿ ಇರುವುದರಿಂದ ವಿರುದ್ಧತ್ವವನ್ನು ಹೇಳಬಹುದು.

**ಅಸತಃ ಅಸತ್ವವತ್, ಸದ್‌ವೈಲಕ್ಷಣ್ಯವತ್, ತ್ವಯಾ ಉಚ್ಯಮಾನ ಪ್ರತಿಯೋಗಿತ್ವಾಭಾವವತ್, ಪರೋಕ್ಷ ಜ್ಞಾನ ವ್ಯವಹಾರೌ ಪ್ರತಿ ವಿಷಯತ್ವವತ್, ಅಸದ್ವೈಲಕ್ಷಣ್ಯಂ ಪ್ರತಿ ಪ್ರತಿಯೋಗಿತ್ವವಚ್ಚ ನಿಷೇಧಪ್ರತಿಯೋಗಿತ್ವಸ್ಯಾಪಿ ಉಪಪತ್ತೇಶ್ಚ ।**

'ಅಸತ್ತು ನಿರ್ಧರ್ಮಕವಾದ್ದರಿಂದ ಆತ್ಯಂತಿಕ ನಿಷೇಧ ಪ್ರತಿಯೋಗಿತ್ವ ರೂಪ ಧರ್ಮವಿಲ್ಲ' ಎನ್ನಬಾರದು. ಅಸತ್ತಿನಲ್ಲಿ ಅಸತ್ವರೂಪ ಧರ್ಮವನ್ನು ಸದ್ ವೈಲಕ್ಷಣ್ಯ ರೂಪ ಧರ್ಮವನ್ನು ನೀನು ಒಪ್ಪಿರುವೆ. ಅದರಂತೆ ಪ್ರತಿಯೋಗಿತ್ವರೂಪ ಧರ್ಮವೂ ಇರಬಹುದು. ಅಸತ್ವಹೇತುವಿನಿಂದ ಅಸತ್ತಿನಲ್ಲಿ ನೀನೇ ಪ್ರತಿಯೋಗಿತ್ವಾಭಾವರೂಪ ಧರ್ಮಸಾಧನೆ ಮಾಡುತ್ತಿರುವುದರಿಂದ ಅದರಂತೆ ಪ್ರತಿಯೋಗಿತ್ವವೂ ಇರಬಹುದು. 'ಅಸತ್ವಾದಿ ಅಭಾವಧರ್ಮವನ್ನು ಒಪ್ಪಿದರೂ ಪ್ರತಿಯೋಗಿತ್ವರೂಪ ಭಾವಧರ್ಮ ಅಸತ್ತಿನಲ್ಲಿ ಬರಲಾರದು' ಎಂದರೆ ಪರೋಕ್ಷಜ್ಞಾನವಿಷಯತ್ವ ವ್ಯವಹಾರವಿಷಯತ್ವ ಗಳೆಂಬ ಭಾವಧರ್ಮಗಳನ್ನು ನೀನು ಒಪ್ಪಿರುವುದರಿಂದ ಪ್ರತಿಯೋಗಿತ್ವರೂಪ ಭಾವಧರ್ಮವನ್ನು ಒಪ್ಪಬಹುದು. ಮತ್ತು ಅಸದ್‌ವೈಲಕ್ಷಣ್ಯಪ್ರತಿಯೋಗಿತ್ವವನ್ನು ನೀನೇ ಒಪ್ಪಿರುವುದರಿಂದ ನಿಷೇಧ ಪ್ರತಿಯೋಗಿತ್ವವನ್ನೂ ಒಪ್ಪಬಹುದು.

**ಪ್ರಾಗಭಾವಾದಿ ದಶಾಯಾಂ ಅಸತ ಏವ ಘಟಾದೇಃ ತತ್‌ಪ್ರತಿಯೋಗಿತ್ವ ದರ್ಶನೇನ ಪ್ರತಿಯೋಗಿತ್ವಸ್ಯ ರೂಪಾದಿವತ್ ಧರ್ಮಿಸತ್ತಾನಪೇಕ್ಷತ್ವಾಚ್ಚ । ಕಾಲಾಂತರೇ ಸತ್ವಸ್ಯ ಇದಾನೀಂ ಅನುಪಯೋಗಾತ್ । ಶಿಷ್ಟಂ ಅನಿರ್ವಾಚ್ಯತ್ವಭಂಗೇ ವಕ್ಷ್ಯತೇ ।**

ಪ್ರಾಗಭಾವ ಧ್ವಂಸ ದಶಾಗಳಲ್ಲಿ ಅವಿದ್ಯಮಾನವಾದ ಘಟಾದಿಯೇ ವಿದ್ಯಮಾನಪ್ರಾಗಭಾವಕ್ಕೆ ಧ್ವಂಸಕ್ಕೆ ಪ್ರತಿಯೋಗಿಯಾಗುವುದು ಕಂಡಿರುವುದರಿಂದ ಪ್ರತಿಯೋಗಿತ್ವವು ರೂಪಾದಿಗಳಂತೆ ಧರ್ಮಿಸತ್ತಾಸಾಪೇಕ್ಷವಲ್ಲ. ಆದರಿಂದ ಅಸತ್ತಿನಲ್ಲಿ ನಿಷೇಧ ಪ್ರತಿಯೋಗಿತ್ವವಿರಬಹುದು. 'ಘಟಾದಿರೂಪ ಪ್ರತಿಯೋಗಿಯು ಪ್ರಾಗಭಾವಕಾಲದಲ್ಲಿಲ್ಲದಿದ್ದರೂ ಉತ್ತರಕಾಲದಲ್ಲಿರುವುದರಿಂದ ಪ್ರಾಗಭಾವಪ್ರತಿಯೋಗಿತ್ವವು ಘಟಾದಿಗೆ ಯುಕ್ತ' ಎಂದರೆ ಪ್ರತಿಯೋಗಿಯು ಉತ್ತರಕಾಲದಲ್ಲಿದ್ದರೆ ಪ್ರಾಗಭಾವಕಾಲದಲ್ಲಿ ಪ್ರತಿಯೋಗಿತ್ವಕ್ಕೆ ಅದರಿಂದೇನೂ ಉಪಯೋಗವಿಲ್ಲ.

'ಅಭಾವಕಾಲದಲ್ಲಿ ಪ್ರತಿಯೋಗಿಸತ್ವವು' ಪ್ರತಿಯೋಗಿತ್ವಕ್ಕೆ ಉಪಯೋಗಿಯಲ್ಲ. 'ಪ್ರತಿಯೋಗಿ ಸತ್ವ ಮಾತ್ರವು' ಉಪಯೋಗಿ. ಲಾಘವದಿಂದ ಧರ್ಮಸತ್ವಕ್ಕೆ ಧರ್ಮಿಸತ್ವ ಮಾತ್ರವು ಪ್ರಯೋಜಕ. ಆದರಿಂದ ಘಟಾದಿಗಳು ಪ್ರಾಗಭಾವಧ್ವಂಸಗಳಿಗೆ ಪ್ರತಿಯೋಗಿಯಾಗಬಹುದು' ಎಂದರೆ ಅಸತ್ವವು

ಕೂಡ ಧರ್ಮವಾಗಿರುವುದರಿಂದ ಅದಕ್ಕೆ ಧರ್ಮಿಯಾದ ಅಸತ್ತಿಗೆ ಧರ್ಮಿತ್ವನಿರ್ವಾಹಕವಾಗಿ ಸತ್ತ್ವವನ್ನು ಒಪ್ಪಬೇಕಾಗುವುದು. ಆಗ ಅಸತ್ತು ಅಸತ್ತಲ್ಲವೆಂದಾಗುವುದು ಎಂದು ಮುಂತಾಗಿ ಇನ್ನುಳಿದ ವಿಚಾರಗಳು ಅನಿರ್ವಾಚ್ಯತ್ವ ಭಂಗ ಪ್ರಕರಣದಲ್ಲಿ ಬರುತ್ತವೆ.

❖❖❖

एतेन यदुक्तं मकरन्दे असतोऽप्रसक्तेर्निषेधाप्रतियोगित्वमिति तच्च निरस्तम् । असतोऽप्रसक्त्या ब्रह्मजगतोरसद्वैलक्षण्यस्य नासदासीदिति श्रौतनिषेधस्यासति च सद्वैलक्षण्यस्य प्रतियोगित्वाभावस्य चासिध्यापातात् । तस्यापि प्रतियोगिप्रतीत्यधीनसिद्धिकत्वात् ।

ननु तत्र शब्दाभासादिना बुद्धिपूर्वारोपेण वा प्रसक्तिर्वा, परार्थेन शब्देनाप्रसक्तस्यानिषेधेऽपि शब्दाभासादिमूलके प्रतियोगिस्मृत्यादिके सति प्रत्यक्षेणाप्रसक्तस्यैव वा निषेधो युक्तः । अन्यथा कदापि अंगुल्यग्रे हस्तिशताभावो न सिद्ध्येदिति चेत् समं प्रकृतेऽपि ।

शशशृङ्गं नास्तीत्यबाधितप्रतीतेः । न च तत्रापि बुद्धिपूर्वकमारोपितस्यानिर्वाच्यस्यैव शृंगस्य निषेधः । अनाभासस्यैवारोप्य निषेध इति तार्किकमते आभासस्यानिर्वाच्यस्य प्रसक्त्या अनाभासस्य निषेध इति त्वन्मते चानिर्वाच्यान्यस्यैव शृङ्गस्य निषेद्धव्यत्वात् ।

जगदादावनिर्वाच्यभूताभासासद्वैलक्षण्यमेव न त्वनाभासासद्वैलक्षण्यमित्यापाताच्च ।

**एतेन यदुक्तं मकरन्द इति** । 'तदेव निषेधप्रतियोगि भवति यत् प्रसक्तिमद्भवति । असच्च न प्रसक्तिमदतो न निषेधप्रतियोगि । नच ज्ञानमात्रं प्रसक्तिः तथासत्यप्रसक्तप्रतिषेधत्वस्य क्वापि दोषाभावप्रसङ्गात् । किं तु प्रतियोग्यधिकरणसंसर्गज्ञानम् । नह्यसतः क्वचिदप्यधिकरणे संसर्गज्ञानं संभवति सामग्रीविरहात् ।

अतोऽसति निषेधप्रतियोगित्वं नाङ्गीकारार्हमि'ति यन्मकरन्द उक्तं तदनेन उच्यमानेन दोषेण निरस्तमित्यर्थः । एतेनेत्यनेनोच्यमानदोष एव क इत्यतस्तं निदर्शयति **असतोऽप्रसक्तेरिति ।** यद्यपि नासदासीदित्यत्रासच्छब्देन वाच्याकाशार्थकेन नात्यन्तासत्प्रतिपाद्यत इति तच्छ्रुतिर्न तन्निषेधपरा । तथापि नासदासीदिति श्रुत्यर्थान्यथानुपपत्यानिर्वचनीयाज्ञानसिद्धिमङ्गीकुर्वत्पररीतिमाश्रित्यैवं दूषणाभिधानमिति द्रष्टव्यम् ।

तुल्यन्यायतया असतो निषेधप्रतियोगित्वं दुर्निरसमिति वक्तुकामः सिद्धान्ती परमुखेन तत्र स्वोक्तदूषणोद्धारप्रकारभेदं वाचयति **ननु तत्रेति ।** तत्र ब्रह्मजगतोरसति चेत्यर्थः । प्रसक्तिर्वेति वाशब्दः अप्रसक्तस्यैव वेति अग्रिमवाशब्दोक्तपक्षान्तरापेक्षया पक्षान्तरज्ञापको द्रष्टव्यः । **अन्यथेति ।** कदापि कदाचिदपि तदधिकरणसंबन्धायोग्यत्वेन तत्र प्रसक्तिरहितस्य निषेधानङ्गीकार इत्यर्थः । **सममिति ।** शशशृङ्गं नास्तीति प्रतीत्यन्यथानुपपत्तिस्तुल्येत्यर्थः । ननु शशशृङ्गं नास्तीति प्रतीतेर्नासच्छृङ्गविषयत्वं किन्त्वनिर्वचनीयशृङ्गविषयत्वमेवेत्याशङ्क्य निराकरोति **नच तत्रापीति ।। अनिर्वाच्यान्यस्यैवेति ।।** तार्किकमते विशेषणाभावात् त्वन्मते च विशेष्याभावात् विशिष्टान्यस्य निषेधप्रतियोगित्वमविशिष्टमित्यर्थः । ननु प्रसक्त्या निषेधबुद्धिरित्येवास्माकमभिमतम् । निषेधश्च तार्किकमतेऽनाभासस्यैव, प्रसक्तिरपि तस्यैव । अस्माकं तु प्रसक्तिरप्याभासस्य । निषेधोऽपि तस्यैवेत्यन्यदेतदित्यत आह **जगदादाविति ।** अत्रादिपदेन जगद्ब्रह्मणोरित्यर्थः । न चेष्टापत्तिः । परेण जगद्ब्रह्मणोरनाभासासद्वैलक्षण्यस्याभ्युपगतत्वादिति भावः ।

❖❖❖

**ಏತೇನ ಯದುಕ್ತಂ ಮಕರಂದೇ 'ಅಸತಃ ಅಪ್ರಸಕ್ತೇಃ ನಿಷೇಧಾಪ್ರತಿಯೋಗಿತ್ವಂ' ಇತಿ, ತಚ್ಚ ನಿರಸ್ತಂ। ಅಸತಃ ಅಪ್ರಸಕ್ತ್ಯಾ ಬ್ರಹ್ಮಜಗತೋಃ ಅಸದ್ವೈಲಕ್ಷಣ್ಯಸ್ಯ, ನಾಸದಾಸೀದಿತಿ ಶ್ರೌತನಿಷೇಧಸ್ಯ, ಅಸತಿ ಚ ಸದ್ವೈಲಕ್ಷಣ್ಯಸ್ಯ ಪ್ರತಿಯೋಗಿತ್ವಾಭಾವಸ್ಯ ಚ ಅಸಿದ್ಧ್ಯಾಪಾತಾತ್। ತಸ್ಯಾಪಿ ಪ್ರತಿಯೋಗಿ ಪ್ರತೀತ್ಯಧೀನ ಸಿದ್ಧಿಕತ್ವಾತ್।**

'ಪ್ರಸಕ್ತಿ ಉಳ್ಳದ್ದೇ ನಿಷೇಧಕ್ಕೆ ಪ್ರತಿಯೋಗಿಯಾಗುತ್ತದೆ. ಅಸತ್ತು ಪ್ರಸಕ್ತಿ ಉಳ್ಳದ್ದಲ್ಲ. ಆದರಿಂದ ನಿಷೇಧಕ್ಕೆ ಪ್ರತಿಯೋಗಿಯಾಗುವುದಿಲ್ಲ. ಜ್ಞಾನ ಮಾತ್ರವು ಪ್ರಸಕ್ತಿಯಲ್ಲ, ಹಾಗೆ ಹೇಳಿದರೆ ಅಪ್ರಸಕ್ತ

ಪ್ರತಿಷೇಧತ್ವವೆಲ್ಲಿಯೂ ದೋಷವಾಗದಿದ್ದೀತು. ಪ್ರತಿಯೋಗಿ ಅಧಿಕರಣಗಳ ಸಂಸರ್ಗಜ್ಞಾನವೆ ಪ್ರಸಕ್ತಿ. ಅಸತ್ತಿಗೆ ಎಲ್ಲಿಯೂ ಅಧಿಕರಣ ಸಂಸರ್ಗ ಪ್ರತೀತಿ ಇಲ್ಲ. ಸಾಮಗ್ರಿ ಇಲ್ಲದ್ದರಿಂದ. ಅದರಿಂದ ಅಸತ್ತಿಗೆ ನಿಷೇಧಪ್ರತಿಯೋಗಿತ್ವವು ಅಂಗೀಕಾರಾರ್ಹವಲ್ಲ'ಎಂದು ಅದ್ವೈತಮಕರಂದ ಗ್ರಂಥದಲ್ಲಿ ಅಸತ್ತಿಗೆ ಪ್ರತಿಯೋಗಿತ್ವೇನ ಪ್ರಸಕ್ತಿ ಇಲ್ಲದ್ದರಿಂದ ನಿಷೇಧ ಪ್ರತಿಯೋಗಿತ್ವವಿಲ್ಲವೆಂದಿದೆ. ಅದು ಸರಿಯಲ್ಲ.

ಅಸತ್ತಿಗೆ ಪ್ರಸಕ್ತಿ ಬರುವುದೇ ಇಲ್ಲವೆಂದರೆ ಬ್ರಹ್ಮಜಗತ್ತುಗಳಲ್ಲಿ ಅಸದ್ ವೈಲಕ್ಷಣ್ಯ ಸಿದ್ಧವಾಗದು. 'ನಾಸದಾಸೀತ್' ಎಂದು ಶ್ರುತಿಯಲ್ಲಿ ಅಸತ್ತನ್ನು ನಿಷೇಧ ಮಾಡಿದ್ದು ಯುಕ್ತವಾಗದು.

ಯದ್ಯಪಿ ಈ ಶ್ರುತಿಯಲ್ಲಿ ಅಸತ್ತೆಂದರೆ ತುಚ್ಛವಲ್ಲ, ವಾಯು ಅಂತರಿಕ್ಷಗಳಿಗೆ ಅಸತ್ತೆಂದು ಹೆಸರಿದೆ. ಅವೆ ಇಲ್ಲಿ ಉಕ್ತವಾಗಿವೆ. ಆದರೆ ಈ ಶ್ರುತ್ಯರ್ಥಾನ್ಯಥಾನುಪಪತ್ತಿಯಿಂದ ಅನಿರ್ವಚನೀಯ ಅಜ್ಞಾನ ಸಿದ್ಧವಾಗುವುದೆಂದು ಅದ್ವೈತಿ ಹೇಳುವುದರಿಂದ ಅವನ ರೀತಿಯಿಂದ ಇಲ್ಲಿ ದೋಷವನ್ನು ಹೇಳುತ್ತಿದ್ದಾರೆ.

ಅಸತ್ತಿಗೆ ಅಧಿಕರಣತ್ವೇನ ಪ್ರಸಕ್ತಿ ಇಲ್ಲದ್ದರಿಂದ ಅಸತ್ತಿನಲ್ಲಿ ಸದ್ವೈಲಕ್ಷಣ್ಯವನ್ನು ಹೇಳುವುದೂ ಕೂಡಲಾರದು. ಅಸತ್ತಿನಲ್ಲಿ ಪ್ರತಿಯೋಗಿತ್ವಾಭಾವವನ್ನು ಹೇಳುವುದು ಯುಕ್ತವಾಗದು. ಅದೂ ಕೂಡ ಪ್ರತಿಯೋಗಿ ಪ್ರತೀತಿ ಇದ್ದರೆ ಮಾತ್ರ ಸಿದ್ಧಿಸುವುದು.

**ನನು ತತ್ರ ಶಬ್ದಾಭಾಸಾದಿನಾ ಬುದ್ಧಿಪೂರ್ವಾರೋಪೇಣ ವಾ ಪ್ರಸಕ್ತಿರ್ವಾ, ಪರಾರ್ಥೇನ ಶಬ್ದೇನ ಅಪ್ರಸಕ್ತಸ್ಯ ಅನಿಷೇಧೇಽಪಿ ಶಬ್ದಾಭಾಸಾದಿಮೂಲಕೇ ಪ್ರತಿಯೋಗಿ ಸ್ಮೃತ್ಯಾದಿಕೇ ಸತಿ ಪ್ರತ್ಯಕ್ಷೇಣ ಅಪ್ರಸಕ್ತಸ್ಯೈವ ವಾ ನಿಷೇಧೋ ಯುಕ್ತಃ । ಅನ್ಯಥಾ ಕದಾಪಿ ಅಂಗುಲ್ಯಗ್ರೇ ಹಸ್ತಿಶತಾಭಾವೋ ನ ಸಿಧ್ಯೇತ್ ಇತಿ ಚೇತ್ ಸಮಂ ಪ್ರಕೃತೇಽಪಿ ।**

'ಬ್ರಹ್ಮಜಗತ್ತುಗಳಲ್ಲಿ ಹೇಳುವ ಅಸತ್ತಿನ ವೈಲಕ್ಷಣ್ಯದಲ್ಲಿ 'ಶಶವಿಷಾಣವಿದೆ' ಇತ್ಯಾದಿ ಶಬ್ದಾಭಾಸಾದಿಗಳಿಂದಾಗಲಿ ಬುದ್ಧಿಪೂರ್ವಕ ಆರೋಪದಿಂದಾಗಲಿ ಅಸತ್ತಿಗೆ ಪ್ರಸಕ್ತಿ ಇದೆ ಎನ್ನಬಹುದು. ಅಥವಾ ಪರಾರ್ಥವಾಗಿರುವ ವಾಕ್ಯದಲ್ಲಿ ಅಪ್ರಸಕ್ತವಾದುದರ ನಿಷೇಧ ಕೂಡದಿದ್ದರೂ, ಶಬ್ದಾಭಾಸಾದಿಗಳ ಮೂಲಕ ಪ್ರತಿಯೋಗಿ ಸ್ಮರಣೆ ಬಂದಾಗ ಪ್ರತ್ಯಕ್ಷದಿಂದ ಅಪ್ರಸಕ್ತವಾದ ಅಸತ್ತಿನ ನಿಷೇಧವೂ ಕೂಡಬಹುದು. ಹೀಗೆ ಒಪ್ಪದಿದ್ದರೆ 'ಬೆರಳಿನ ತುದಿಯಲ್ಲಿ ಎಂದೂ ನೂರು ಆನೆಗಳಿಲ್ಲ' ಎಂಬುದು ಸಿದ್ಧವಾಗದೆ ಹೋದೀತು. ಎಂದೂ ಆನೆ ಬೆರಳ ತುದಿಯಲ್ಲಿರ ಲಾರದೆಂದಮೇಲೆ ಇರುವ ಪ್ರಸಕ್ತಿಯೇ ಇಲ್ಲದ್ದರಿಂದ ನಿಷೇಧವನ್ನು ಒಪ್ಪಲಾಗದು ತಾನೆ?' ಎಂದು ಅದ್ವೈತಿ ನಮ್ಮ ಆಕ್ಷೇಪಗಳಿಗೆ ಸಮಾಧಾನ ಕೊಡುವುದಾದರೆ, 'ಶಬ್ದಾಭಾಸದಿಂದ ಪ್ರಸಕ್ತಿ ಬಂದಾಗ, ಅಥವಾ, ಅಪ್ರಸಕ್ತವಾಗಿರುವಾಗಲೇ ಪ್ರತ್ಯಕ್ಷದಿಂದ ಅಸತ್ತಿನಲ್ಲಿ ನಿಷೇಧ ಪ್ರತಿಯೋಗಿತ್ವ ಸಿದ್ಧಿ' ಎಂದು ನಾವೂ ಪ್ರಕೃತದಲ್ಲಿ ಸಮಾಧಾನ ಕೊಡಬಲ್ಲೆವು. 'ಶಶವಿಷಾಣವಿಲ್ಲ' ಎಂಬ ಪ್ರತೀತಿಯ ಅನ್ಯಥಾನುಪಪತ್ತಿ ಉಭಯತ್ರ ಸಮಾನವಾಗಿದೆ.

**ನ ಚ ತತ್ರಾಪಿ ಬುದ್ಧಿಪೂರ್ವಕಮಾರೋಪಿತಸ್ಯ ಅನಿರ್ವಾಚ್ಯಸ್ಯೈವ ಶೃಂಗಸ್ಯ ನಿಷೇಧಃ। ಅನಾಭಾಸಸ್ಯೈವ ಆರೋಪ್ಯ ನಿಷೇಧ ಇತಿ ತಾರ್ಕಿಕಮತೇ, ಆಭಾಸಸ್ಯ ಅನಿರ್ವಾಚ್ಯಸ್ಯ ಪ್ರಸಕ್ತ್ಯಾ ಅನಾಭಾಸಸ್ಯ ನಿಷೇಧ ಇತಿ ತ್ವನ್ಮತೇ ಚ ಅನಿರ್ವಾಚ್ಯಾನ್ಯಸ್ಯೈವ ಶೃಂಗಸ್ಯ ನಿಷೇಧ್ಯತ್ವಾತ್।**

'ಶಶವಿಷಾಣವಿಲ್ಲ' ಎಂಬಲ್ಲಿಯೂ ಬುದ್ಧಿಪೂರ್ವಕ ಆರೋಪಿತವಾದ ಅನಿರ್ವಾಚ್ಯವಾದ ಶಶವಿಷಾಣವೇ ನಿಷೇಧ ಪ್ರತಿಯೋಗಿ'–ಎಂದು ಹೇಳುವುದು ಸರಿಯಲ್ಲ. ಅನ್ಯತ್ರ ಸತ್ತಾಗಿರುವುದನ್ನೇ ಇಲ್ಲಿ ಆರೋಪಿಸಿ ನಿಷೇಧ ಮಾಡುವ ತಾರ್ಕಿಕಮತದಲ್ಲಿ ಅನಿರ್ವಾಚ್ಯಾನ್ಯವಾದ ಸತ್ಯವಾದ ವಿಷಾಣವನ್ನು ಶಶದಲ್ಲಿ ನಿಷೇಧಮಾಡುತ್ತಾರೆ. ಅನಿರ್ವಾಚ್ಯವನ್ನಲ್ಲ. ಸದ್ವಿಲಕ್ಷಣತ್ವೇ ಸತಿ ಅಸದ್ವಿಲಕ್ಷಣತ್ವರೂಪ ಅನಿರ್ವಾಚ್ಯ ನಿರುಕ್ತಿಯಲ್ಲಿ ವಿಶೇಷಣಾಂಶವಾದ ಸದ್‌ವಿಲಕ್ಷಣತ್ವವು ಸತ್ಯವಿಷಾಣದಲ್ಲಿ ಇಲ್ಲದ್ದರಿಂದ ವಿಶಿಷ್ಟ ಅನಿರ್ವಚನೀಯಕ್ಕಿಂತ ಅನ್ಯವು ಸತ್ಯವಾದ ವಿಷಾಣ. ಅದ್ವೈತಮತದಲ್ಲಿಯೂ ಆರೋಪಿತವಾದ ಅನಿರ್ವಾಚ್ಯ ಶಶಶೃಂಗಕ್ಕಿಂತ ಅನ್ಯವಾದ ಅನಾರೋಪಿತವಾದ ಅಸತ್‌ಶಶಶೃಂಗವನ್ನೇ ನಿಷೇಧಮಾಡಬೇಕು. ಅದು ವಿಶೇಷ್ಯಾಂಶವಾದ ಅಸದ್ವಿಲಕ್ಷಣತ್ವಾಭಾವಪ್ರಯುಕ್ತವಾಗಿ ವಿಶಿಷ್ಟ ಅನಿರ್ವಚನೀಯಾನ್ಯವಾಗಿದೆ. ಆದಕ್ಕೇ ನಿಷೇಧ ಪ್ರತಿಯೋಗಿತ್ವ. ಹೀಗಾಗಿ ಅಸತ್‌ಪ್ರತಿಷೇಧಕ್ಕಾಗಿ ಅಸತ್ತಿಗೆ ಪ್ರಸಕ್ತಿಯನ್ನು ಅದ್ವೈತಿ ಹೇಳಲೇಬೇಕು.

**ಜಗದಾದೌ ಅನಿರ್ವಾಚ್ಯಭೂತ ಆಭಾಸ ಅಸದ್‌ವೈಲಕ್ಷಣ್ಯಮೇವ, ನ ತು ಅನಾಭಾಸಾಸದ್‌ವೈಲಕ್ಷಣ್ಯಮಿತಿ ಆಪಾತಾಚ್ಚ।**

ಜಗತ್ತಿನಲ್ಲಿಯೂ ಬ್ರಹ್ಮನಲ್ಲಿಯೂ ಅಸದ್‌ವೈಲಕ್ಷಣ್ಯವು ಉಭಯಸಮ್ಮತ. ಅದ್ವೈತಿಯು 'ಅಸತ್ತಾದ ಶಶವಿಷಾಣಕ್ಕೆ ಪ್ರಸಕ್ತಿಇಲ್ಲದ್ದರಿಂದ ಆರೋಪಿತವಾದ ಅನಿರ್ವಚನೀಯ ಶಶಶೃಂಗಾದಿ ವೈಲಕ್ಷಣ್ಯವನ್ನು ಹೇಳುತ್ತೇನೆ' ಎಂದರೆ, ಅನಾರೋಪಿತವಾದ ತುಚ್ಛವಾದ ಶಶವಿಷಾಣಾದಿಯ ವೈಲಕ್ಷಣ್ಯವು ಜಗತ್ತಿನಲ್ಲಿಯೂ ಬ್ರಹ್ಮನಲ್ಲಿಯೂ ಸಿದ್ಧವಾಗದೆ ಹೋದೀತು. ಆದರಿಂದ ತುಚ್ಛ ಶಶವಿಷಾಣಾದಿ ವೈಲಕ್ಷಣ್ಯವನ್ನೇ ಹೇಳಬೇಕು. ಆಗ ಅಸತ್ತಿನ ಪ್ರತಿಷೇಧಕ್ಕಾಗಿ ಅಸತ್ತಿಗೆ ಪ್ರಸಕ್ತಿಯನ್ನಾಗಲೀ ಪ್ರತೀತಿ ಮಾತ್ರವನ್ನಾಗಲಿ ಒಪ್ಪಲೇಬೇಕು.

❖❖❖

**ननु सदा सर्वत्राविद्यामानत्वमसत्त्वं चेदनाश्रितात्मादिविभुद्रव्यात्यन्ताभावोऽपि केवलान्वयीत्यात्मादिरप्यसन्स्यादिति चेत् तर्हि त्वन्मतेऽपि आत्मा मिथ्या स्यात्। तस्यापि ''स एवाधस्तादि''त्यादिश्रुतिप्रतिपन्नोपाधौ कालत्रयेऽप्यभावात्।**

**अथ विभुत्वेनोर्ध्वाधरीभावहीनोऽप्यात्मा सामान्यादिवत्स्वदेश-**

**कालयोरप्यस्ति, सदा सर्वत्रात्मेत्यबाधितप्रतीतेरिति न तस्य मिथ्यात्वम् । तर्हि तत एव नासत्त्वम् ।**

**देशकालावपि सदा सर्वत्र देशकालावित्यबाधितप्रतीत्या प्रमेयत्वाभिधेयत्ववत्तार्किकाभिमत दिक्कालात्यन्ताभाववच्च स्ववृत्ती अन्योन्यवृत्ती च । अन्यथा त्वन्मतेऽपि तयोः प्रातिभासिकसत्त्वं स्यादिति न कश्चिद्दोषः ।**

**तस्मात्स्वरूपेण त्रैकालिकनिषेधप्रतियोगित्वे अत्यन्तासत्त्वं दुर्वारम् ।**

**तदुक्तम्—**

**''नासीदस्ति भविष्यच्च तदिति ज्ञानमेयता ।**
**यदि बाधस्तदाऽसत्त्वं तेनैवांगीकृतं पुन''रिति ।**

ननु स्वरूपेण सार्वत्रिकत्रैकालिकनिषेधप्रतियोगित्वं नात्यन्तासत्त्वम् । तथासत्यात्मादिद्रव्याणामप्यसत्त्वापत्तिरिति शङ्कते **नन्विति** । ननु प्रतिपन्नोपाधौ त्रैकालिकनिषेधप्रतियोगित्वं मिथ्यात्वम् । न चावृत्तिपदार्थस्यात्मादेः प्रतिपन्नोपाधिरस्तीत्यत आह **तस्यापीति** । आत्मनोऽपीत्यर्थः । यद्यप्यात्मनोऽपि येन रूपेणोपाधिप्रतिपत्तिरस्ति तेन रूपेण मिथ्यात्वमिष्टमेव । नहि विशिष्टाकारेणो-पहिताकारेण वात्मा तात्त्विक इति परेणाभ्युपगम्यते । विशुद्धचैतन्यरूपस्य तस्योपाधिप्रतिपत्तिरेव नास्तीति शङ्कात्र भवति । तथापि येन रूपेण प्रपञ्चस्योपाधिरस्ति तेन रूपेण तस्य मिथ्यात्वमिष्टमेव । प्रपञ्चनिषेधश्रुतेर्विशिष्टा-कारेणोपहिताकारेण वा तद्विषयत्वमङ्गीकृत्याविरोधवर्णनसंभवान्न तद्विरोधशङ्का । शुद्धप्रपञ्चे तूपाधिप्रतिपत्तिरेव नास्तीत्यभ्युपगमापत्त्या परेणोक्तशङ्का नैवंविधविषये कर्तुमर्हा । आत्मसद्रूपत्वावेदकश्रुतिवत् प्रपञ्चसद्रूपत्वावेदकप्रत्यक्षादेरविशेषात् । नेहनानास्तीतिश्रुतेः प्रपञ्चविषयत्ववदात्मविषयत्वस्याप्यविशेषाच्च । नहि घटत्वावच्छिन्नघटो नास्तीति वाक्यमाधारभूतघटविषयं नेत्यस्तीति ।

यद्यपि स एवाधस्तादित्यादिश्रुतिः स एवेदं सर्वमित्युत्तरवाक्यानुसारेण सर्वात्मकत्वपरा । नोपाधिप्रतिपत्त्यर्था । अस्तातिप्रत्ययस्य ''सप्तमीपञ्चमीप्रथमान्तेभ्यो दिग्देशकालेष्वस्तातिरिति'' पाणिनिना सप्तमीपञ्चम्यन्ताभ्यामिव प्रथमान्तादपि स्मरणात् । स एवाधस्तादित्युपक्रमगतास्तातिप्रत्ययान्ताविरोधात् । तथाप्यतद्गुणसंविज्ञानबहुव्रीहिमाश्रित्येत्यादिश्रुतीतिश्रुतिशब्देन तुर्यं तत् सर्वदृक् सदा, सर्वेषु भूतेष्वेतं, अन्तर्बहिश्च तत्सर्वं व्याप्य नारायणः स्थित इत्यादिश्रुतिर्विवक्षितेत्यदोषः । **तर्हीति ।** सकलसंबन्धावच्छिन्नत्रैकालिकनिषेधप्रतियोगित्वमसत्त्वम् । तच्च न यत्किञ्चित्संबन्धवति संभवतीति भावः । नन्वेवं देशकालयोरप्यसत्त्वापत्तिः । तयोरात्माश्रयेण स्ववृत्तित्वासंभवात् । विभुत्वेनान्योन्यवृत्तित्वासंभवाच्चेत्यत आह **देशकालावपीति । अबाधितप्रतीत्येति ।** तथाच देशकालयोः स्ववृत्तित्वाङ्गीकारे नात्माश्रयो दोषः सिद्धविषयत्वादिति भावः । **अन्यथेति ।** प्रतीताधिकरणस्य व्यावहारिकसंबन्धानाश्रयत्व इत्यर्थः । **तयोरिति ।** देशकालयोरित्यर्थः ।

❖❖❖

**ನನು ಸದಾ ಸರ್ವತ್ರ ಅವಿದ್ಯಮಾನತ್ವಂ ಅಸತ್ವಂ ಚೇತ್ ಅನಾಶ್ರಿತಆತ್ಮಾದಿ ವಿಭುದ್ರವ್ಯಾತ್ಯಂತಾಭಾವೋಽಪಿ ಕೇವಲಾನ್ವಯೀತಿ ಆತ್ಮಾದಿರಪಿ ಅಸನ್ ಸ್ಯಾತ್ ಇತಿ ಚೇತ್ ತರ್ಹಿ, ತ್ವನ್ಮತೇಽಪಿ ಆತ್ಮಾ ಮಿಥ್ಯಾ ಸ್ಯಾತ್। ತಸ್ಯಾಪಿ 'ಸ ಏವಾಧಸ್ತಾತ್' ಇತ್ಯಾದಿ ಶ್ರುತಿಪ್ರತಿಪನ್ನಉಪಾಧೌ ಕಾಲತ್ರಯೇಽಪಿ ಅಭಾವಾತ್।**

'ಸದಾ ಸರ್ವತ್ರ ಅವಿದ್ಯಮಾನತ್ವವೇ ಅತ್ಯಂತಾಸತ್ವವೆಂದರೆ ಎಲ್ಲಿಯೂ ಆಶ್ರಯಿಸಿ ಇಲ್ಲದಿರುವ ಆತ್ಮ ಮುಂತಾದ ಅವ್ಯಕ್ತಿ ವಿಭುದ್ರವ್ಯಗಳ ಅತ್ಯಂತಾಭಾವವೂ ಕೂಡ ಕೇವಲಾನ್ವಯಿಯಾದ್ದರಿಂದ ಆತ್ಮಾದಿಗಳೂ ಅಸತ್ತಾಗಬೇಕಾದೀತು. ಆದರಿಂದ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವವು ಅಸತ್ವವಲ್ಲ. ಬೇರೆಯೇ ಹೇಳಬೇಕು. ಅದು ರೂಪ್ಯ ಮತ್ತು ಪ್ರಪಂಚಗಳಲ್ಲಿ ಇಲ್ಲವೆನ್ನುತ್ತೇನೆ' ಎಂದು ಹೇಳಿದರೆ ಪ್ರತಿಬಂದಿಯಿಂದ ಸಮಾಧಾನ ನೀಡಬೇಕು. ಅದು ಹೀಗೆ— ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧಪ್ರತಿಯೋಗಿತ್ವವನ್ನು ಮಿಥ್ಯಾತ್ವವೆಂದರೆ ಅದು ಆತ್ಮನಲ್ಲಿಯೂ ಬರುತ್ತದೆ. ಆತ್ಮನಿಗೂ ಪ್ರತಿಪನ್ನ ಉಪಾಧಿ ಇದೆ. 'ಸ ಏವಾಧಸ್ತಾತ್ ಸ ಏವ ಉಪರಿಷ್ಟಾತ್' ಎಂಬ ಶ್ರುತಿಯು ಭೂಮನಾದ ಆತ್ಮನಿಗೆ ಅಧರಾದಿ ಉಪಾಧಿಯನ್ನು ಹೇಳುತ್ತಿದೆ' ಎಂದು.

ಯದ್ಯಪಿ ಅದ್ವೈತಿ ಇಲ್ಲಿ ಆಕ್ಷೇಪ ಮಾಡಬಹುದು—'ಆತ್ಮನು ವಿಶಿಷ್ಟರೂಪದಿಂದ ಅಧರಾದಿ ದೇಶದಲ್ಲಿದ್ದರೆ ವಿಶಿಷ್ಟರೂಪದಿಂದ ಮಿಥ್ಯೆಯೂ ಆಗಿದ್ದಾನೆ. ವಿಶಿಷ್ಟರೂಪದಿಂದ ಅಥವಾ

ಉಪಹಿತರೂಪದಿಂದ ಆತ್ಮನನ್ನು ತಾತ್ವಿಕನೆಂದು ಅದ್ವೈತಿ ಹೇಳುವುದಿಲ್ಲ. ಶುದ್ಧರೂಪದಿಂದ ಅವನಿಗೆ ಉಪಾಧಿಯು ಪ್ರತಿಪನ್ನವಾದುದು ಇಲ್ಲ' ಎಂದು.

ಇದಕ್ಕೆ ಪ್ರತಿಬಂದಿಯಾಗಿ ನಾವು ಹೇಳಬೇಕು. ವಿಶಿಷ್ಟರೂಪದಿಂದ ಪ್ರಪಂಚಕ್ಕೆ ಉಪಾಧಿ ಇದ್ದರೆ ವಿಶಿಷ್ಟರೂಪದಿಂದ ಅದಕ್ಕೆ ಮಿಥ್ಯಾತ್ವವನ್ನು ಹೇಳುತ್ತೇವೆ. ಶುದ್ಧರೂಪದಿಂದ ಪ್ರಪಂಚಕ್ಕೆ ಉಪಾಧಿ ಪ್ರತಿಪನ್ನವಾಗಿಲ್ಲ. ಅದು ಸತ್ಯವೆ. ಪ್ರಪಂಚ ನಿಷೇಧ ಶ್ರುತಿಯು ವಿಶಿಷ್ಟಾಕಾರೇಣ ಅಥವಾ ಉಪಹಿತ ರೂಪೇಣ ಪ್ರಪಂಚವನ್ನು ನಿಷೇಧಿಸುವುದರಿಂದ ಅದರ ವಿರೋಧವಿಲ್ಲ, ಆತ್ಮನನ್ನು ಸದ್ರೂಪವೆನ್ನುವ ಶ್ರುತಿಯಂತೆ ಪ್ರಪಂಚವನ್ನು ಸದ್ರೂಪವೆಂದು ತಿಳಿಸುವ ಪ್ರತ್ಯಕ್ಷಾದಿ ಪ್ರಮಾಣವಿದೆ. 'ನೇಹನಾನಾಸ್ತಿ' ಶ್ರುತಿಯು ಪ್ರಪಂಚವನ್ನು ನಿಷೇಧ ಮಾಡುವಂತೆ ಆತ್ಮನನ್ನೂ ಅದು ನಿಷೇಧಿಸುತ್ತದೆ ಎನ್ನುತ್ತೇವೆ. 'ಘಟತ್ವಾವಚ್ಛಿನ್ನ ಘಟವಿಲ್ಲ' ಎಂಬ ಮಾತಿಗೆ ವಿಶಿಷ್ಟ ಘಟವು ಮಾತ್ರ ವಿಷಯ ಹೊರತು ವಿಶೇಷ್ಯವಾದ ಶುದ್ಧಘಟವು ವಿಷಯವಲ್ಲ ಎನ್ನಲಾಗದು ತಾನೆ?' ಎಂದು.

ಯದ್ಯಪಿ 'ಸ ಏವಾಧಸ್ತಾತ್' ಇತ್ಯಾದಿ ಶ್ರುತಿಯು 'ಸ ಏವೇದಂ ಸರ್ವಂ' ಎಂಬ ಉತ್ತರವಾಕ್ಯಾನುಸಾರ ಸರ್ವಾತ್ಮಕತ್ವಪರವೇ ಹೊರತು ಉಪಾಧಿಪ್ರತಿಪತ್ತಿಪರವಲ್ಲ. 'ಅಧಸ್ತಾತ್' ಎಂಬ ಶಬ್ದವು 'ಅಧರ' ಶಬ್ದಕ್ಕೆ 'ಅಸ್ತಾತಿ' ಪ್ರತ್ಯಯದಿಂದಾಗಿದೆ. ಅದಕ್ಕೆ 'ಅಧರ ದೇಶದಲ್ಲಿರುವವನು' ಎಂದೇ ಅರ್ಥಹೇಳಬೇಕಾಗಿಲ್ಲ. 'ಅಧರ ದೇಶಾತ್ಮಕನಾಗಿದ್ದಾನೆ' ಎಂದೂ ಅರ್ಥ ಹೇಳಬಹುದು. 'ಸಪ್ತಮೀ ಪಂಚಮೀ ಪ್ರಥಮಾಂತವಾದ ದಿಕ್ ದೇಶಕಾಲ ವಾಚಿ ಶಬ್ದಗಳಿಗೆ ಅಸ್ತಾತಿಪ್ರತ್ಯಯ'ವೆಂದು ಪಾಣಿನಿಸೂತ್ರದಲ್ಲಿ ಸಪ್ತಮ್ಯಂತ ಪಂಚಮ್ಯಂತಗಳಂತೆ ಪ್ರಥಮಾಂತವಾದ ಶಬ್ದಕ್ಕೂ ಅಸ್ತಾತಿ ಪ್ರತ್ಯಯವನ್ನು ಹೇಳಿದ್ದಾನೆ.

ಆದರೂ 'ಸ ಏವಾಧಸ್ತಾದಿತ್ಯಾದಿಶ್ರುತಿ' ಎಂಬಲ್ಲಿ ಅತದ್ಗುಣಸಂವಿಜ್ಞಾನ ಬಹುವ್ರೀಹಿ ಇಟ್ಟುಕೊಂಡು ಉಪಾಧಿಪ್ರತಿಪತ್ತಿ ಬೋಧಕವಾಗಿರುವ 'ತುರ್ಯಂ ತತ್ ಸರ್ವದೃಕ್ ಸದಾ' 'ಸರ್ವೇಷ್ವೇತಂ' 'ಅಂತರ್ಬಹಿಶ್ಚ ತತ್ ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ' ಇತ್ಯಾದಿ ಶ್ರುತಿ ವಿವಕ್ಷಿತವೆನ್ನಬೇಕು. ಅದರಿಂದ ಅನುಪಪತ್ತಿ ಇಲ್ಲ.

**ಅಥ ವಿಭುತ್ವೇನ ಊರ್ಧ್ವಾಧರೀಭಾವ ಹೀನೋಽಪಿ ಆತ್ಮಾ ಸಾಮಾನ್ಯಾದಿವತ್ ಸ್ವದೇಶಕಾಲಯೋರಪಿ ಅಸ್ತಿ, 'ಸದಾ ಸರ್ವತ್ರ ಆತ್ಮಾ' ಇತಿ ಅಬಾಧಿತಪ್ರತೀತೇಃ ಇತಿ ನ ತಸ್ಯ ಮಿಥ್ಯಾತ್ವಂ, ತರ್ಹಿ ತತ ಏವ ನಾಸತ್ವಂ।**

ಆತ್ಮನಿಗೆ ಮಿಥ್ಯಾತ್ವ ಪ್ರಸಕ್ತಿ ಇಲ್ಲ. 'ಸದಾ ಸರ್ವತ್ರ ಆತ್ಮಾ' ಎಂದು ಅಬಾಧಿತ ಪ್ರತೀತಿ ಇರುವುದರಿಂದ ಸರ್ವದೇಶಕಾಲದಲ್ಲಿರುವ ಆತ್ಮನಿಗೆ ಸಾರ್ವದೇಶಿಕ ಸಾರ್ವಕಾಲಿಕ ನಿಷೇಧಪ್ರತಿಯೋಗಿತ್ವರೂಪ ಮಿಥ್ಯಾತ್ವಲಕ್ಷಣ ಬರುವುದಿಲ್ಲ. ಪ್ರತಿಪನ್ನೋಪಾಧಿಯೂ ಆತ್ಮನಿಗೆ ಇಲ್ಲ. 'ಉಪಾಧಿ' ಎಂದು ಊರ್ಧ್ವ ಅಧರ ಭಾವದಿಂದ ಸಂಬದ್ಧವಾದ ಉಪಾಧಿಯೆ ವಿವಕ್ಷಿತ. ಆತ್ಮ

ವಿಭುವಾದ್ದರಿಂದ ಅವನು ಊರ್ಧ್ವ ಅಧರಭಾವದಿಂದ ಎಲ್ಲಿಯೂ ಇರುವುದಿಲ್ಲ. ಮತ್ತೆ ಹೇಗೆ ಇರುತ್ತಾನೆ? ಎಂದರೆ ಸಾಮಾನ್ಯಾದಿಗಳಂತೆ ಇರುತ್ತಾನೆ. ಘಟದಲ್ಲಿ ಘಟತ್ವರೂಪ ಸಾಮಾನ್ಯದಂತೆ ಊರ್ಧ್ವಾಧರ ಭಾವರಹಿತನಾಗಿರುತ್ತಾನೆ' ಎಂದು ಅದ್ವೈತಿ ಹೇಳಿದರೆ ನಾವು ಹೇಳುತ್ತೇವೆ 'ಅತ ಏವ ನ ಅಸತ್ವಂ' 'ಸರ್ವತ್ರ ಆತ್ಮಾ' ಎಂಬ ಪ್ರತೀತಿ ಇರುವುದರಿಂದ ಆತ್ಮನು ಸರ್ವತ್ರ ಇರುವುದರಿಂದ. ಸಕಲ ದೇಶಕಾಲ ಸಂಬದ್ಧನಾಗಿರುವುದರಿಂದ. ಯಾವ ಸಂಬಂಧಾವಚ್ಛಿನ್ನವಾದ ತ್ರೈಕಾಲಿಕ ನಿಷೇಧಕ್ಕೂ ಪ್ರತಿಯೋಗಿಯಾಗದಿರುವುದರಿಂದ ಅಸತ್ತೆನಿಸುವ ಪ್ರಸಂಗವಿಲ್ಲ. ಯತ್ಕಿಂಚಿತ್ ದೇಶಾದಿ ಸಂಬಂಧವಿದ್ದರೂ ಅಸತ್ತೆನಿಸುವುದಿಲ್ಲವೆಂದ ಮೇಲೆ ಸಕಲ ದೇಶಾದಿ ಸಂಬಂಧವಿರುವಾಗ. ಅಸತ್ತೆನಿಸುವುದಿಲ್ಲವೆಂದು ಬೇರೇನು ಹೇಳಬೇಕು?

**ದೇಶಕಾಲಾವಪಿ ಸದಾ ಸರ್ವತ್ರ ದೇಶಕಾಲೌ ಇತಿ ಅಬಾಧಿತ ಪ್ರತೀತ್ಯಾ ಪ್ರಮೇಯತ್ವಾಭಿಧೇಯತ್ವವತ್ ತಾರ್ಕಿಕಾಭಿಮತ ದಿಕ್ಕಾಲಾತ್ಯಂತಾಭಾವವಚ್ಚ ಸ್ವವೃತ್ತೀ ಅನ್ಯೋನ್ಯವೃತ್ತೀ ಚ । ಅನ್ಯಥಾ ತ್ವನ್ಮತೇಽಪಿ ತಯೋಃ ಪ್ರಾತಿಭಾಸಿಕ ಸತ್ವಂ ಸ್ಯಾತ್ ಇತಿ ನ ಕಶ್ಚಿದ್ ದೋಷಃ ।**

'ಅಸತ್ವಲಕ್ಷಣಕ್ಕೆ ದೇಶಕಾಲಗಳಲ್ಲಿ ಅತಿವ್ಯಾಪ್ತಿ. ದೇಶಕಾಲಗಳು ಆತ್ಮಾಶ್ರಯ ದೋಷದಿಂದ ಸ್ವವೃತ್ತಿಯಲ್ಲ, ವಿಭುವಾದ್ದರಿಂದ ದೇಶದಲ್ಲಿ ಕಾಲ, ಕಾಲದಲ್ಲಿ ದೇಶವೆಂದು ಅನ್ಯೋನ್ಯವೃತ್ತಿಯೂ ಅಲ್ಲ. ಸರ್ವದೇಶಕಾಲನಿಷ್ಠ ನಿಷೇಧ ಪ್ರತಿಯೋಗಿತ್ವವಿರುವುದರಿಂದ ದೇಶಕಾಲಗಳಿಗೆ ಅಸತ್ವಾಪತ್ತಿ' ಎಂದರೆ, ಇದು ಸರಿಯಲ್ಲ. ಸದಾ ಸರ್ವತ್ರ ದೇಶಕಾಲಗಳಿವೆ ಎಂದು ಅಬಾಧಿತ ಪ್ರತೀತಿಯಿಂದ ದೇಶಕಾಲಗಳು ಸ್ವವೃತ್ತಿಯೂ ಹೌದು ಅನ್ಯೋನ್ಯವೃತ್ತಿಯೂ ಹೌದು.

ಸಿದ್ಧವಿಷಯವಾದ್ದರಿಂದ ಸ್ವವೃತ್ತಿತ್ವವನ್ನು ಒಪ್ಪಿದರೆ ಆತ್ಮಾಶ್ರಯವು ದೋಷವಾಗುವುದಿಲ್ಲ. ಇದಕ್ಕೆ ಉದಾಹರಣೆ– ಪ್ರಮೇಯತ್ವಾಭಿಧೇಯತ್ವಗಳು ಮತ್ತು ತಾರ್ಕಿಕರಿಗೆ ಅಭಿಮತವಾದ ದಿಕ್ಕಾಲಾತ್ಯಂತಾಭಾವಗಳು. ಪ್ರಮೇಯತ್ವವು ಪ್ರಮೇಯತ್ವದಲ್ಲಿದೆ. ಮತ್ತು ಅಭಿಧೇಯತ್ವವೂ ಅಭಿಧೇಯತ್ವದಲ್ಲಿದೆ. ಪ್ರಮೇಯತ್ವದಲ್ಲಿಯೂ ಇದೆ. ದಿಕ್‌ಕಾಲಗಳ ಅತ್ಯಂತಾಭಾವಗಳೂ ಹೀಗೇ ಸ್ವವೃತ್ತಿ; ಅನ್ಯೋನ್ಯ ವೃತ್ತಿಗಳಾಗಿವೆ. ದಿಗತ್ಯಂತಾಭಾವವು ದಿಗತ್ಯಂತಾಭಾವದಲ್ಲಿಯೂ ಕಾಲಾತ್ಯಂತಾ ಭಾವದಲ್ಲಿಯೂ ಇದೆ. ಕಾಲಾತ್ಯಂತಾಭಾವವೂ ಕೂಡ ಕಾಲಾತ್ಯಂತಾಭಾವದಲ್ಲೂ ದಿಗತ್ಯಂತಾ ಭಾವದಲ್ಲಿಯೂ ಇದೆ.

'ಅನ್ಯಥಾ' ಹೀಗೆ ಒಪ್ಪದಿದ್ದರೆ, ಪ್ರತೀತವಾದ ಅಧಿಕರಣಕ್ಕೆ ವ್ಯಾವಹಾರಿಕ ಸಂಬಂಧವನ್ನು ಒಪ್ಪದಿದ್ದರೆ, ದೇಶಕಾಲಗಳಿಗೆ ಪ್ರಾತಿಭಾಸಿಕಸತ್ವವನ್ನು ಒಪ್ಪಬೇಕಾಯಿತು. ಆದರಿಂದ ದೇಶಕಾಲಗಳಿಗೆ ಸಾರ್ವದೇಶಿಕ ಸಾರ್ವಕಾಲಿಕ ನಿಷೇಧಪ್ರತಿಯೋಗಿತ್ವವಿಲ್ಲದ್ದರಿಂದ ಅವುಗಳಲ್ಲಿ ಅಸತ್ವಲಕ್ಷಣಕ್ಕೆ ಅತಿವ್ಯಾಪ್ತಿ ಇಲ್ಲ.

**ತಸ್ಮಾತ್ ಸ್ವರೂಪೇಣ ತ್ರೈಕಾಲಿಕ ನಿಷೇಧಪ್ರತಿಯೋಗಿತ್ವೇ ಅತ್ಯಂತಾಸತ್ವಂ ದುರ್ವಾರಂ ।**

**ತದುಕ್ತಂ– ನಾಸೀದಸ್ತಿ ಭವಿಷ್ಯಚ್ಚ ತದಿತಿ ಜ್ಞಾನಮೇಯತಾ ।**
**ಯದಿ ಬಾಧಸ್ತದಾಽಸತ್ತ್ವಂ ತೇನೈವಾಂಗೀಕೃತಂ ಪುನಃ ॥ ಇತಿ ॥**

ಆದರಿಂದ ಸ್ವರೂಪೇಣ ತ್ರೈಕಾಲಿಕ ನಿಷೇಧಪ್ರತಿಯೋಗಿತ್ವವು ಪ್ರಪಂಚಕ್ಕೆ ಬಂದರೆ ಅತ್ಯಂತಾಸತ್ತ್ವ ಬರುವುದು ಅಪರಿಹಾರ್ಯ. ಇದನ್ನು ಪೃಥಗಧಿಕರಣ ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ— 'ತತ್' ಇಷ್ಟರವರೆಗೆ ನನಗೆ ಏನು ಕಂಡಿತೋ ಅದು, ಸ್ವರೂಪೇಣ ಹಿಂದೆ ಇರಲಿಲ್ಲ, ಈಗ ಇಲ್ಲ ಮುಂದೆಯೂ ಇರುವುದಿಲ್ಲ ಎಂಬ ಜ್ಞಾನಕ್ಕೆ ವಿಷಯವಾಗುವುದೇ ಬಾಧವಾದರೆ, ಶುಕ್ತಿರಜತಾದಿಗಳಿಗೂ ಇದೇ ಬಾಧವನ್ನು ಅಂಗೀಕರಿಸಿದರೆ, ಅಸದ್ವೈಲಕ್ಷಣ್ಯವನ್ನು ಅಂಗೀಕರಿಸಿರುವ ಆ ಅದ್ವೈತಿ ತಾನೇ ಬೇರೆ ಮಾತಿನಿಂದ ಪುನಃ ಅಸತ್ತ್ವವನ್ನೇ ಅಂಗೀಕರಿಸಿದಂತಾಗುವುದು. ಈ ಸ್ವರೂಪ ನಿಷೇಧಕ್ಕಿಂತ ಬೇರೆ ಅಸತ್ತ್ವವು ಶಶವಿಷಾಣಾದಿಗಳಿಗೆ ಇಲ್ಲ. ಹೀಗಾಗಿ ಅಪಸಿದ್ಧಾಂತಪ್ರಸಂಗಬರುವುದರಿಂದ ಈರೀತಿಯ ಬಾಧವನ್ನು ಅದ್ವೈತಿ ಒಪ್ಪುವುದು ಶಕ್ಯವಿಲ್ಲ' ಎಂದು.

❖❖❖

**नापि पारमार्थिकत्वाकारेण त्रैकालिकनिषेधप्रतियोगित्वमित्यन्त्यः । अबाध्यत्वरूपपारमार्थिकत्वस्य बाध्यत्वरूपमिथ्यात्वनिरूप्यत्वेनान्योन्याश्रयात् ।**

**रूप्यं नास्ति नासीन्न भविष्यतीति नेह नानास्ति किञ्चनेति च स्वरूपेणैव निषेधाच्च । अन्यथा नृशृङ्गादेरपि न स्वरूपेण निषेधः किन्तु सत्त्वेनेति स्यात् ।**

**रूप्यवत् तत्पारमार्थिकत्वस्याप्यपरोक्षप्रतीत्यन्यथानुपपत्त्या धीकाले वर्तमानतया निषेधायोगाच्च । पारमार्थिकत्वस्य पारमार्थिकत्वेन निषेधे त्वनवस्था ।**

**सुखाद्यनुभवरूपस्य ब्रह्मणोऽपि मयि सुखाद्यनुभव इत्यादिप्रत्यक्षेण स एवाधस्तादित्यादिश्रुत्या च प्रतिपन्नोपाधौ निर्धर्मकत्वेन पारमार्थिकत्वाकारेण निषेधेनातिव्याप्त्यापत्तेश्च ।**

**रूप्यं नास्तीति** । तथाच दृष्टान्ते साध्यवैकल्यं पक्षे च बाध इति भावः । **अन्यथेति** । क्लृप्तविषयं परित्यज्य प्रतीतेरन्यविषयकल्पन इत्यर्थः । **किन्तु**

**सत्त्वेनेतीति ।** स्वरूपेण निषेधप्रतीत्यविशेषेऽपि रूप्यादेरपरोक्षप्रतीत्यन्यथानुपपत्त्या स्वरूपमङ्गीकृत्य पारमार्थिकत्वाकारेणैव तस्य त्रैकालिकनिषेधाङ्गीकारे अपरोक्षप्रतीत्यपेक्षया लाघवेन प्रतीतत्वमात्रस्यैव सस्वरूपत्वस्वीकारे तन्त्रत्वापत्त्या नृशृङ्गादेरपि स्वरूपमङ्गीकृत्य न स्वरूपेण निषेधोऽङ्गीकार्यः किन्तु सत्त्वेनैव सोऽगीकार्यः स्यादिति भावः । किञ्च पारमार्थिकत्वस्यापि किं स्वरूपेण निषेधः किं वा पारमार्थिकत्वाकारेणेति विकल्प्याद्ये दोषमाह **रूप्यवदिति ।** द्वितीय आह **पारमार्थिकत्वस्येति ।**

यद्यपि पारमार्थिकत्वरूपव्यधिकरणधर्मावच्छिन्ननिषेधः तदवच्छिन्नप्रतियोगिक एव । न पारमार्थिकत्वधर्मप्रतियोगिक इति तस्य स्वरूपेण पारमार्थिकत्वाकारेण वा निषेधप्रसक्तिरेव नेति नानवस्था । तथापि न विरोधः । लाघवेन प्रतियोगिसत्त्वमात्रस्यैवाभावसत्त्वविरोधितया पारमार्थिकत्वाकारेण रजतनिषेधोऽपि पारमार्थिकत्वनिषेध एव पर्यवस्यति । तथापि विशिष्टाभावो व्यतिरिक्तः सिध्येदिति शक्तिविलयः स्यादिति भावः ।

**सुखाद्यनुभवरूपस्येति ।** नन्विदानीमनुभूयमानसुखस्य तदनुभवस्य च न ब्रह्मरूपत्वं विषयान्वयव्यतिरेकानुविधायित्वेन तज्जन्यत्वावश्यंभावात् तदनुभवस्यापि वृत्तिरूपत्वोपगमाच्च । तथाच ब्रह्मणि नातिव्याप्तिरिति चेन्न । एषोऽस्य परमानन्दः, एषोऽस्य परमा गतिः, एतस्यैवानन्दस्यान्यानि भूतानि मात्रामुपजीवन्ति इति श्रुत्या ब्रह्मानन्दस्यैव विद्वत्परमगतित्वासंकुचितसर्वभूतानन्दत्वयोरावेदनस्य त्वया स्वीकृतत्वेन विषयैरपि स्वरूपसुखमेवाभिव्यज्यते नतु तज्जन्यं सुखमस्तीति विवरणोक्त्या च त्वया ब्रह्मानन्दान्यविषयजन्यसुखस्यानभ्युपेयत्वात् । वृत्तेर्जडत्वेनानुभवरूपत्वस्यानभ्युपगतत्वाच्चेति ।

❖❖❖

ನಾಪಿ ಪಾರಮಾರ್ಥಿಕತ್ವಾಕಾರೇಣ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವಮಿತಿ ಅಂತ್ಯಃ ।
ಅಬಾಧ್ಯತ್ವರೂಪ ಪಾರಮಾರ್ಥಿಕತ್ವಸ್ಯ ಬಾಧ್ಯತ್ವರೂಪ ಮಿಥ್ಯಾತ್ವ ನಿರೂಪ್ಯತ್ವೇನ ಅನ್ಯೋನ್ಯಾಶ್ರಯಾತ್ ।

ಹಿಂದೆ ಪ್ರತಿಪನ್ನೋಪಾಧೌ ನಿಷೇಧಪ್ರತಿಯೋಗಿತ್ವರೂಪ ಮಿಥ್ಯಾತ್ವವನ್ನು ಸ್ವರೂಪೇಣ ನಿಷೇಧ ಪ್ರತಿಯೋಗಿತ್ವವೆ ಅಥವಾ ಅಸದ್‌ವಿಲಕ್ಷಣ ಸ್ವರೂಪದ ಉಪಮರ್ದಮಾಡದೆ ಪಾರಮಾರ್ಥಿಕತ್ವೇನ ನಿಷೇಧ ಪ್ರತಿಯೋಗಿತ್ವವೆ ಎಂದು ವಿಕಲ್ಪ ಮಾಡಿದ್ದಾರೆ, ಇಷ್ಟರವರಗೆ ಸ್ವರೂಪೇಣ ಪ್ರತಿಯೋಗಿತ್ವ ಪಕ್ಷವನ್ನು ಪ್ರಪಂಚಕ್ಕೆ ಅತ್ಯಂತಾಸತ್ತ್ವಾಪತ್ತಿ ಎಂದು ನಿರಾಸಮಾಡಿ ಇದೀಗ ಪಾರಮಾರ್ಥಿಕತ್ವೇನ ನಿಷೇಧಪ್ರತಿಯೋಗಿತ್ವಪಕ್ಷವನ್ನು ನಿರಾಕರಣಮಾಡುತ್ತಿದ್ದಾರೆ.

ಮೊದಲಿಗೆ ಪಾರಮಾರ್ಥಿಕತ್ವ ಘಟಿತವಾದ ಈ ಮಿಥ್ಯಾತ್ವವನ್ನು ಅನ್ಯೋನ್ಯಾಶ್ರಯ ದೋಷದುಷ್ಟವೆನ್ನುತ್ತಿದ್ದಾರೆ. ಮಿಥ್ಯಾತ್ವಜ್ಞಾನವಿಲ್ಲದೆ ಮಿಥ್ಯಾತ್ವಘಟಿತವಾದ ಪಾರಮಾರ್ಥಿಕತ್ವದ ಜ್ಞಾನವಿಲ್ಲ. ಪಾರಮಾರ್ಥಿಕತ್ವಜ್ಞಾನವಿಲ್ಲದೆ ತದ್‌ಘಟಿತ ಮಿಥ್ಯಾತ್ವಜ್ಞಾನವಿಲ್ಲ. ಅಂದರೆ ಪಾರಮಾರ್ಥಿಕತ್ವವು ಅಬಾಧ್ಯತ್ವರೂಪ. ಮಿಥ್ಯಾತ್ವವು ಬಾಧ್ಯತ್ವರೂಪ. ಹೀಗಾಗಿ ಅಬಾಧ್ಯತ್ವರೂಪ ಪಾರಮಾರ್ಥಿಕತ್ವಜ್ಞಾನದಿಂದ ತದ್‌ಘಟಿತವಾದ ಮಿಥ್ಯಾತ್ವಜ್ಞಾನ ಬರಬೇಕು. ಬಾಧ್ಯತ್ವರೂಪ ಮಿಥ್ಯಾತ್ವಜ್ಞಾನದಿಂದ ತದ್‌ಘಟಿತವಾದ ತದಭಾವರೂಪ ಅಬಾಧ್ಯತ್ವರೂಪ ಪಾರಮಾರ್ಥಿಕತ್ವದ ಜ್ಞಾನ ಬರಬೇಕು ಎಂದು ಅನ್ಯೋನ್ಯಾಶ್ರಯ.

**'ರೂಪ್ಯಂ ನಾಸ್ತಿ ನಾಸೀತ್ ನ ಭವಿಷ್ಯತಿ' ಇತಿ 'ನೇಹ ನಾನಾಸ್ತಿ ಕಿಂಚನ' ಇತಿ ಚ ಸ್ವರೂಪೇಣೈವ ನಿಷೇಧಾಚ್ಚ। ಅನ್ಯಥಾ ನೃಶೃಂಗಾದೇರಪಿ ನ ಸ್ವರೂಪೇಣ ನಿಷೇಧಃ, ಕಿಂತು ಸತ್ತ್ವೇನೇತಿ ಸ್ಯಾತ್ ।**

'ಶುಕ್ತಿಯಲ್ಲಿ ಕಂಡ ರಜತವು ವಸ್ತುತಃ ಇಲ್ಲ, ಇರಲಿಲ್ಲ, ಮುಂದೆ ಇರುವುದೂ ಇಲ್ಲ' ಎಂದೂ 'ಬ್ರಹ್ಮನಲ್ಲಿ ಕಾಣುವ ಭೇದಪ್ರಪಂಚವೇನೂ ವಸ್ತುತಃ ಇಲ್ಲ' ಎಂದೂ ಸ್ವರೂಪದಿಂದಲೇ ನಿಷೇಧವು ಲೋಕದಲ್ಲಿಯೂ ವೇದದಲ್ಲಿಯೂ ಕಾಣುತ್ತದೆ. ಅದರಿಂದ ದೃಷ್ಟಾಂತವಾದ ಶುಕ್ತಿರಜತದಲ್ಲಿ ಪಾರಮಾರ್ಥಿಕತ್ವಾಕಾರೇಣ ನಿಷೇಧರೂಪ ಮಿಥ್ಯಾತ್ವವಿಲ್ಲದ್ದರಿಂದ ಸಾಧ್ಯವೈಕಲ್ಯ. ಪಕ್ಷವಾದ ಪ್ರಪಂಚದಲ್ಲಿ ಅದು ಬಾರದಿರುವುದರಿಂದ ಬಾಧ. ನಿಷೇಧ ಪ್ರತೀತಿಗೆ ಕ್ಲಪ್ತವಾದ ಸ್ವರೂಪೇಣ ನಿಷೇಧವಿಷಯಕತ್ವವನ್ನು ಪರಿತ್ಯಾಗ ಮಾಡಿ ಅನ್ಯವಾದ ಪಾರಮಾರ್ಥಿಕತ್ವ ನಿಷೇಧ ವಿಷಯಕತ್ವಕಲ್ಪನೆ ಮಾಡುವುದಾದರೆ, 'ಅನ್ಯಥಾ' 'ನರವಿಷಾಣವಿಲ್ಲ' ಎಂಬ ಪ್ರತೀತಿಗೂ ಕೂಡ ಸ್ವರೂಪೇಣ ನಿಷೇಧವು ವಿಷಯವಲ್ಲ, ಪಾರಮಾರ್ಥಿಕತ್ವಾಕಾರೇಣ ನಿಷೇಧವೇ ವಿಷಯ, ನಿರ್ಧರ್ಮಕ ಬ್ರಹ್ಮದಂತೇ ಸದ್ರೂಪವಾದ ನರವಿಷಾಣಕ್ಕೂ ಸ್ವರೂಪ ಪ್ರತೀತಿ ಉಂಟು, ಸಸ್ವರೂಪತ್ವ ಉಂಟೆಂದು ಹೇಳಬೇಕಾದೀತು. ಸಸ್ವರೂಪತ್ವಕ್ಕೆ ಪ್ರಯೋಜಕವಾಗಿ ಅಪರೋಕ್ಷ ಪ್ರತೀತಿಯೇ ಬೇಕಾಗಿಲ್ಲ. ಲಾಘವದಿಂದ, ಪ್ರತೀತಿ ಇದ್ದರೆ ಸಾಕು.

**ರೂಪ್ಯವತ್ ತತ್‌ಪಾರಮಾರ್ಥಿಕತ್ವಸ್ಯಾಪಿ ಅಪರೋಕ್ಷಪ್ರತೀತ್ಯನ್ಯಥಾನುಪಪತ್ತ್ಯಾ ಧೀ ಕಾಲೇ ವರ್ತಮಾನತಯಾ ನಿಷೇಧಾಯೋಗಾಚ್ಚ। ಪಾರಮಾರ್ಥಿಕತ್ವಸ್ಯ ಪಾರಮಾರ್ಥಿಕತ್ವೇನ ನಿಷೇಧೇ ತು ಅನವಸ್ಥಾ।**

ರೂಪ್ಯವು ಅಪರೋಕ್ಷಪ್ರತೀತ್ಯನ್ಯಥಾನುಪಪತ್ತಿಯಿಂದ ಭ್ರಮಕಾಲದಲ್ಲಿ ಅಸ್ತಿತ್ವದಲ್ಲಿರುವುದರಿಂದ ಅದರ ಸ್ವರೂಪವನ್ನು ಬಾಧಬುದ್ಧಿಯು ನಿಷೇಧಿಸುವುದಿಲ್ಲವೆಂದ ಮೇಲೆ ರೂಪ್ಯದಂತೆಯೇ ಆರೋಪಿತವಾದ ಅದರ ಪಾರಮಾರ್ಥಿಕತ್ವವೂ ಭ್ರಮಕಾಲದಲ್ಲಿ ಇರುವುದರಿಂದ ಅದನ್ನೂ ಸ್ವರೂಪೇಣ ನಿಷೇಧ ಮಾಡಲಾಗುವುದಿಲ್ಲ. ಪಾರಮಾರ್ಥಿಕತ್ವ ನಿಷೇಧ ಕೂಡುವುದಿಲ್ಲ. ಪಾರಮಾರ್ಥಿಕತ್ವವನ್ನು ಕೂಡ ಪಾರಮಾರ್ಥಿಕತ್ವೇನ ನಿಷೇಧ ಮಾಡುವುದಾದರೆ ಆ ಪಾರಮಾರ್ಥಿಕತ್ವವನ್ನೂ ಪಾರಮಾರ್ಥಿಕತ್ವೇನ ನಿಷೇಧ ಮಾಡಬೇಕು ಎಂದು ಅನವಸ್ಥಾ.

ಯದ್ಯಪಿ ಆರೋಪಿತ ರಜತದ ಪಾರಮಾರ್ಥಿಕತ್ವಾಕಾರೇಣ ನಿಷೇಧವೆಂದರೆ ಅನಾರೋಪಿತ ಪಾರಮಾರ್ಥಿಕತ್ವರೂಪ ವ್ಯಧಿಕರಣಧರ್ಮಾವಚ್ಛಿನ್ನ ನಿಷೇಧವೆಂದಿಟ್ಟುಕೊಳ್ಳಬಹುದು. ಆಗ ಪಾರಮಾರ್ಥಿಕತ್ವಾವಚ್ಛಿನ್ನ ನಿಷೇಧವು ಪಾರಮಾರ್ಥಿಕತ್ವಾವಚ್ಛಿನ್ನ ಪ್ರತಿಯೋಗಿಕವಾಯಿತು ಹೊರತು ಪಾರಮಾರ್ಥಿಕತ್ವಧರ್ಮಪ್ರತಿಯೋಗಿಕವಲ್ಲ. ಆದರಿಂದ ಪಾರಮಾರ್ಥಿಕತ್ವ ನಿಷೇಧವು ಸ್ವರೂಪಾವಚ್ಛಿನ್ನಪ್ರತಿಯೋಗಿಕವೋ ಪಾರಮಾರ್ಥಿಕತ್ವಾವಚ್ಛಿನ್ನಪ್ರತಿಯೋಗಿಕವೋ ಎಂಬ ವಿಕಲ್ಪಗಳಿಗೆ ಪ್ರಸಕ್ತಿ ಇಲ್ಲ. ಅನವಸ್ಥಾ ಇಲ್ಲ. ಆದರೂ ಪಾರಮಾರ್ಥಿಕತ್ವಾವಚ್ಛಿನ್ನ ರಜತ ನಿಷೇಧವು ಪಾರಮಾರ್ಥಿಕತ್ವ ನಿಷೇಧದಲ್ಲಿಯೆ ಪರ್ಯವಸಾನ ಹೊಂದುತ್ತದೆ. ವಿಶಿಷ್ಟಾಭಾವ ಅತಿರಿಕ್ತವಲ್ಲ. ಹೀಗಾಗಿ ಪಾರಮಾರ್ಥಿಕತ್ವ ನಿಷೇಧವು ಅನವಸ್ಥಾದೋಷ ದುಷ್ಟವೇ ಆಗುತ್ತದೆ.

ವಿಶಿಷ್ಟಾಭಾವ ಅತಿರಿಕ್ತವೆನ್ನುವ ಪಕ್ಷದಲ್ಲಿ ಈ ಅನವಸ್ಥಾ ದೋಷ ಯದ್ಯಪಿ ಇಲ್ಲ. ಆದರೂ ವಿಶಿಷ್ಟಾಭಾವ ಅತಿರಿಕ್ತವೆಂದರೆ ಉತ್ತೇಜಕಾಭಾವ ವಿಶಿಷ್ಟ ಪ್ರತಿಬಂಧಕಾಭಾವರೂಪ ವಿಶಿಷ್ಟಾಭಾವದಿಂದಲೇ ಕಾರ್ಯವಾಗುವಾಗ ಅದಕ್ಕಾಗಿ ಶಕ್ತಿಯನ್ನು ಬೇರೆಯಾಗಿ ಕಲ್ಪನೆ ಮಾಡಬೇಕಿಕಲ್ಲ ಎಂದಾಗುವುದರಿಂದ ಶಕ್ತಿ ಎಂಬ ಪದಾರ್ಥವಿಲ್ಲವಾದೀತು. ಆದರಿಂದ ವ್ಯಧಿಕರಣ ಧರ್ಮಾವಚ್ಛಿನ್ನಾಭಾವವನ್ನು ಪ್ರಕೃತದಲ್ಲಿ ಇಟ್ಟುಕೊಳ್ಳುವುದು ವ್ಯರ್ಥವಾಗುವುದು.

ವಸ್ತುತಃ ಶುಕ್ತಿಯಲ್ಲಿ ರಜತದಂತೆ ರಜತದಲ್ಲಿ ಪಾರಮಾರ್ಥಿಕತ್ವವೂ ಭ್ರಮಕಾಲದಲ್ಲಿ ಅಪರೋಕ್ಷಪ್ರತೀತಿಸಿದ್ಧವಾಗಿರುವುದರಿಂದ ಅದು ವ್ಯಧಿಕರಣವಲ್ಲ.

**ಸುಖಾದ್ಯನುಭವರೂಪಸ್ಯ ಬ್ರಹ್ಮಣೋಽಪಿ 'ಮಯಿ ಸುಖ್ಯಾದ್ಯನುಭವಃ' ಇತ್ಯಾದಿ ಪ್ರತ್ಯಕ್ಷೇಣ 'ಸ ಏವಾಧಸ್ತಾತ್' ಇತ್ಯಾದಿ ಶ್ರುತ್ಯಾ ಚ ಪ್ರತಿಪನ್ನೋಪಾಧೌ ನಿರ್ಧರ್ಮಕತ್ವೇನ ಪಾರಮಾರ್ಥಿಕತ್ವಾಕಾರೇಣ ನಿಷೇಧೇನ ಅತಿವ್ಯಾಪ್ತೇಶ್ಚ।**

'ನನ್ನಲ್ಲಿ ಸುಖಾದಿ ಅನುಭವವಿದೆ' ಇತ್ಯಾದಿ ಪ್ರತ್ಯಕ್ಷದಿಂದ ಸುಖಾನುಭವರೂಪ ಬ್ರಹ್ಮನಿಗೆ ನಾನು ಉಪಾಧಿ ಎನ್ನುವುದು ಸಿದ್ಧವಾಗಿದೆ. 'ಸ ಏವಾಧಸ್ತಾತ್' ಇತ್ಯಾದಿ ಶ್ರುತಿಯಿಂದ ಅಧರಾದಿ ದೇಶವು ಬ್ರಹ್ಮನಿಗೆ ಉಪಾಧಿಯಾಗಿ ಸಿದ್ಧವಾಗಿದೆ. ನಿರ್ಧರ್ಮಕತ್ವೇನ ಪಾರಮಾರ್ಥಿಕ ಧರ್ಮನಿಷೇಧವೂ ಬ್ರಹ್ಮನಲ್ಲಿ ಯುಕ್ತವೆ. ಹೀಗಾಗಿ ಪ್ರತಿಪನ್ನೋಪಾಧಿಯಲ್ಲಿ ಪಾರಮಾರ್ಥಿಕತ್ವೇನ

ನಿಷೇಧಪ್ರತಿಯೋಗಿತ್ವರೂಪಮಿಥ್ಯಾತ್ವ ಲಕ್ಷಣವು ಬ್ರಹ್ಮನಲ್ಲಿ ಅತಿವ್ಯಾಪ್ತವಾಗಿದೆ. ಪಾರಮಾರ್ಥಿಕತ್ವ ಧರ್ಮವು ನಿರ್ಧರ್ಮಕ ಬ್ರಹ್ಮನಲ್ಲಿ ಇದ್ದರೂ ಅವನ ಪರಮಾರ್ಥಸದ್ರೂಪತ್ವಕ್ಕೆ ಚ್ಯುತಿ ಇಲ್ಲವೆನ್ನಬಾರದು. ಪ್ರಪಂಚಕ್ಕೂ ಹಾಗೇ ನಿರ್ಧರ್ಮಕತ್ವೇನ ಸದ್ರೂಪತ್ವವನ್ನು ಹೇಳಬಹುದು. ಆದರಿಂದ ಪ್ರಪಂಚದಂತೆ ಬ್ರಹ್ಮ ಮಿಥ್ಯಾ ಆಗಬೇಕಾದೀತು.

ಯದ್ಯಪಿ ಅದ್ವೈತಿ ತಾನು ಅನುಭವಿಸುವ ಸುಖವನ್ನಾಗಲಿ ಸುಖಾನುಭವವನ್ನಾಗಲಿ ಬ್ರಹ್ಮರೂಪವೆನ್ನುವುದಿಲ್ಲ. ವಿಷಯಾನ್ವಯ ವ್ಯತಿರೇಕಗಳಿಗೆ ಅನುವಿಧಾಯಿಯಾದ್ದರಿಂದ ಅದನ್ನು ವಿಷಯಜನ್ಯವೆನ್ನುತ್ತಾನೆ, ಮತ್ತು ಆ ಅನುಭವವನ್ನು ವೃತ್ತಿರೂಪವೆನ್ನುತ್ತಾನೆ. ಆದರಿಂದ ಬ್ರಹ್ಮನಲ್ಲಿ ಅತಿವ್ಯಾಪ್ತಿ ಇಲ್ಲ. ಆದರೂ 'ಏಷೋಽಸ್ಯ ಪರಮಾನಂದಃ ಏಷೋಽಸ್ಯ ಪರಮಾ ಗತಿಃ ಏತಸ್ಯೈವ ಆನಂದಸ್ಯ ಅನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ' ಎಂದು ಶ್ರುತಿಯಿಂದ ಬ್ರಹ್ಮಾನಂದವೇ ಜ್ಞಾನಿಗೆ ಪರಗತಿ ಮತ್ತು ಅಸಂಕುಚಿತವಾಗಿ ಸರ್ವಜೀವಿಗಳ ಆನಂದರೂಪವೆಂದು ಅದ್ವೈತಿ ಒಪ್ಪಿದ್ದಾನೆ, ಮತ್ತು ವಿವರಣಗ್ರಂಥದಲ್ಲಿ 'ವಿಷಯಗಳಿಂದಲೂ ಬ್ರಹ್ಮಸ್ವರೂಪಾನಂದವೇ ವ್ಯಕ್ತವಾಗುವುದು ಹೊರತು ವಿಷಯಜನ್ಯವಾದ ಬೇರೊಂದು ಸುಖವಿಲ್ಲ' ಎಂದು ಹೇಳಿರುವುದರಿಂದ ಬ್ರಹ್ಮಾನಂದಾನ್ಯ ವಿಷಯಜನ್ಯ ಸುಖವನ್ನು ಅದ್ವೈತಿ ಒಪ್ಪುವುದು ಶಕ್ಯವಿಲ್ಲ. ವೃತ್ತಿಯೂ ಜಡವಾದ್ದರಿಂದ ಅನುಭವರೂಪವಾಗಿರುವುದು ಶಕ್ಯವಿಲ್ಲ.

❖❖❖

**प्रतिपन्नोपाधिशब्देनाध्यस्ताधिष्ठानविवक्षायां चाध्यस्तत्वस्य निरुच्यमानमिथ्यात्वानतिरेकेणात्माश्रयात् । शेषवैयर्थ्याच्च ।**

**ब्रह्मणः प्रतिपन्नोपाध्यभावेऽपि पारमार्थिकत्वरूपधर्माभावस्य ब्रह्मण्यपरिच्छिन्नसद्रूपत्वाविरोधित्ववत् घटादेः प्रतिपन्नोपाधि-सद्भावेऽपि पारमार्थिकत्वाभावस्य घटादौ परिच्छिन्नसद्रूपत्वा-विरोधित्वोपपत्तेश्च ।**

**नहि ब्रह्मण्यपि स्वरूपातिरिक्तं पारमार्थिकत्वं तत्त्वतोऽस्ति । अद्वैतहानेः । नच सोपाधिकबाधाभावगर्भितं पारमार्थिकत्वं निरुपाधिकब्रह्ममात्रम् ।**

**एवञ्च ब्रह्म कालत्रयेऽपि सत् वियदादि रूप्यादि च कदाचिदेवेति नित्यत्वानित्यत्वाभ्यामेव वैषम्यम् । नतु सत्यत्वमिथ्यात्वाभ्याम् ।**

तथाच–

"स्वरूपेण त्रिकालस्थनिषेधो नास्ति ते मते ।
रूप्यादेस्तात्त्विकत्वेन निषेधस्त्वात्मनोऽपि च" ।।

ननु प्रतिपन्नोपाधिशब्देनाध्यासाधिष्ठानं विवक्षितम् । ब्रह्म तु न क्वाप्यध्यस्तमिति न तत्रातिव्याप्तिरित्यत आह **प्रतिपन्नोपाधिशब्देनेति** । तथाच नाध्यस्ताधिष्ठानं प्रतिपन्नोपाधिशब्दार्थः । किन्त्वाधारत्वेन प्रतीतमात्रमिति ब्रह्मण्यतिव्याप्तिः सुस्थेति भावः ।

नन्वलक्ष्ये लक्षणगमनमतिव्याप्तिः । नचैवं प्रकृते । धर्मविशिष्टस्य ब्रह्मणोऽपि लक्ष्यत्वादित्यत आह **ब्रह्मण इति** । शुद्धस्येत्यर्थः । तथाप्यर्थान्तरं तदवस्थमेवेति भावः ।

यद्यपि घटादेः साधिकरणा सत्ता । तेनान्यत्रासतस्तस्य प्रतिपन्नोपाधि-निष्ठात्यन्ताभावः सत्तासामान्याभावमापादयति । ब्रह्मणस्तु निरधिकरणा सत्ता । अतः पारमार्थिकत्वेनाभावः सर्वत्र विद्यमानोऽपि न ब्रह्मसत्ताविरोधी । अन्यथा त्वन्मतेऽपि अवृत्तिपदार्थोच्छेदापत्तिः । अत एव प्रतिपन्नोपाधिसद्भावाप्रयोजकत्वोपव-वर्णनमप्यसंगतम् । तस्य समानविषयत्वेन प्रतिबध्यप्रतिबन्धकभावसूचनार्थत्वात् इति । तथापि सत्त्वासत्त्वग्राहकप्रमाणयोरुभयोरपि प्रमाणत्वोपपत्त्यर्थमत्रापि निरधिकरण(घट)सत्ताया अभ्युपेयत्वात् । अत एवापरिच्छिन्नसद्रूपत्वाविरोधित्व-वदित्युक्तम् । वस्तुतस्तु प्रपञ्चस्येव ब्रह्मणोऽपि साधिकरणैव सत्ता । आकाशवत् सर्वगतश्च नित्यः । तुर्यं तत्सर्वदृक् सदेत्यादिश्रुतेः । नचासंगत्वानिलयनत्व-श्रुतिविरोधः । ब्रह्मान्याधीनस्थितिकं सङ्गप्रयुक्तलेपवच्च नेत्यर्थपरत्वादिति भावः । ननु ब्रह्मणि पारमार्थिकत्वाभावो नास्त्येवेत्यत आह **नहीति** । नन्वद्वैतं तदा हीयेत यदि ब्रह्मातिरिक्तं पारमार्थिकत्वं स्यादित्यत आह **नचेति** । अनेकपदार्थघटितस्य पारमार्थिकत्वस्य केवलाधिकरणरूपत्वाभावादिति भावः ।

ननु पारमार्थिकत्वं त्रैकालिकनिषेधप्रतियोगित्वाभावः । अभावश्चास्मन्मतेऽधि-

करणात्मैव । तदेव चाधिकरणं प्रतियोगिना निरूप्यते । नतु तद्घटितोऽपि । घटाभावे घटो नेतिवत् । तथाच न ब्रह्मणि पारमार्थिकत्वाभाव इत्याशङ्कामुपसंहारव्याजेन निराकरोति **एवं चेति** । इदमत्राकूतम् । घटादावपि पारमार्थिकत्वं त्रैकालिक-निषेधप्रतियोगित्वाभावः । स चाभावो घटाद्यधिकरणात्मैव । तदेव चाधिकरणं कदाचित्प्रतियोगिना निरूप्यते । नतु तद्घटितोऽपि । अभावाधिकरणकाभाववदेव । इयांस्तु विशेषः । ब्रह्म कालत्रयेऽपि सत् । घटादिकं तु कदाचिदेवेति । तथाचैतादृशवैषम्यं कादाचित्काभावाप्रतियोगित्वतत्प्रतियोगित्वाभ्यामेवोपपादनीयम् । न तु त्वदुक्तसत्यत्वमिथ्यात्वाभ्याम् । त्वदुक्तमिथ्यात्वस्य प्रपञ्चेऽभावादिति ।

❖❖❖

**ಪ್ರತಿಪನ್ನೋಪಾಧಿ ಶಬ್ದೇನ ಅಧ್ಯಸ್ತಾಧಿಷ್ಠಾನ ವಿವಕ್ಷಾಯಾಂ ಚ ಅಧ್ಯಸ್ತತ್ವಸ್ಯ ನಿರುಚ್ಯಮಾನ ಮಿಥ್ಯಾತ್ವ ಅನತಿರೇಕೇಣ ಆತ್ಮಾಶ್ರಯಾತ್ । ಶೇಷ ವೈಯರ್ಥ್ಯಾಚ್ಚ ।**

'ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವಂ' ಎಂಬ ಮಿಥ್ಯಾತ್ವ ಲಕ್ಷಣದಲ್ಲಿ 'ಪ್ರತಿಪನ್ನ ಉಪಾಧಿ' ಎಂಬ ಶಬ್ದದಿಂದ 'ಆಧಾರವಾಗಿ ಕಂಡಿದ್ದು'ಎಂದಿಷ್ಟೇ ವಿವಕ್ಷಿತವಲ್ಲ. 'ಅಧ್ಯಸ್ತಕ್ಕೆ ಅಧಿಷ್ಠಾನವಾಗಿ ಕಂಡಿದ್ದು' ಎಂದು ವಿವಕ್ಷಿತವಾಗಿದೆ. ಬ್ರಹ್ಮ ಎಲ್ಲಿಯೂ ಅಧ್ಯಸ್ತವಾಗಿಲ್ಲ. ಆದರಿಂದ ಅಧ್ಯಸ್ತಾಧಿಷ್ಠಾನ ಘಟಿತವಾದ ಈ ಮಿಥ್ಯಾತ್ವಲಕ್ಷಣ ಬ್ರಹ್ಮನಲ್ಲಿ ಅತಿವ್ಯಾಪ್ತವಲ್ಲ' ಎಂದು ಅದ್ವೈತಿ ಹೇಳಿದರೆ ಅದು ಸರಿಯಲ್ಲ. ಅಧ್ಯಸ್ತತ್ವವು ಮಿಥ್ಯಾತ್ವವೇ ಹೊರತು ಬೇರೆಯಲ್ಲ. ಮಿಥ್ಯಾತ್ವದ ನಿರ್ವಚನವನ್ನು ಈಗ ಮಾಡುತ್ತಿದ್ದಾರಷ್ಟೆ. ಆದರಿಂದ ಅಧ್ಯಸ್ತಾಧಿಷ್ಠಾನತ್ವೇನ ಪ್ರತೀತವಾದ ಆಧಾರದಲ್ಲಿ ನಿಷೇಧಕ್ಕೆ ಪ್ರತಿಯೋಗಿಯಾಗುವುದೇ ಮಿಥ್ಯಾತ್ವವೆಂದು ಮಿಥ್ಯಾತ್ವ ನಿರ್ವಚನದಲ್ಲಿ ಅಧ್ಯಸ್ತತ್ವರೂಪವಾದ ಮಿಥ್ಯಾತ್ವವು ಘಟಕವಾಗಿರುವುದರಿಂದ ಆತ್ಮಾಶ್ರಯ. ಲಕ್ಷಣ ಜ್ಞಾನದಿಂದ ಬಳಿಕ ಲಕ್ಷ್ಯವನ್ನು ತಿಳಿಯಬೇಕು, ಲಕ್ಷಣದಲ್ಲಿ ಲಕ್ಷ್ಯವು ಘಟಕವಾದರೆ ತನ್ನ ಜ್ಞಾನಕ್ಕಿಂತ ಪೂರ್ವದಲ್ಲಿ ತನ್ನ ಜ್ಞಾನ ಬರಬೇಕಾಗುತ್ತದೆ. ಇದು ಜ್ಞಪ್ತಿಯಲ್ಲಿ ಆತ್ಮಾಶ್ರಯ. 'ಅಧ್ಯಸ್ತತ್ವವೆಂದರೆ ಅಸತ್ ಮತ್ತು ಬ್ರಹ್ಮಗಳಿಗಿಂತ ಅನ್ಯತ್ವ ಎನ್ನುತ್ತೇನೆ. ಆಗ ಆತ್ಮಾಶ್ರಯವಿಲ್ಲ' ಎಂದರೆ, ಲಾಘವದಿಂದ ಅಸದ್‌ಬ್ರಹ್ಮಾನ್ಯತ್ವವೇ ಮಿಥ್ಯಾತ್ವ ಎಂದಾಗಲಿ. 'ಹಾಗೆ ಆಗಲಿ' ಎಂದರೆ ಅಷ್ಟೇ ಲಕ್ಷಣ ಸಾಕು. ತದ್ಘಟಿತವಾದ ಗುರುವಾದ ಲಕ್ಷಣ ವ್ಯರ್ಥವಾಗುವುದು. 'ಅದನ್ನು ಬಿಟ್ಟುಬಿಡುತ್ತೇವೆ' ಎಂದರೆ ಅಸದ್‌ಬ್ರಹ್ಮಾನ್ಯತ್ವರೂಪವಾದ ಈ ಮಿಥ್ಯಾತ್ವಲಕ್ಷಣ ಪ್ರಪಂಚದಲ್ಲಿ ಬರುವುದು ನಮಗೆ ಇಷ್ಟವೆ, ಆದರಿಂದ ಸಿದ್ಧಸಾಧನತ್ವ ದೋಷ.

**ಬ್ರಹ್ಮಣಃ ಪ್ರತಿಪನ್ನೋಪಾಧ್ಯಭಾವೇಽಪಿ ಪಾರಮಾರ್ಥಿಕತ್ವರೂಪ ಧರ್ಮಾಭಾವಸ್ಯ ಬ್ರಹ್ಮಣಿ ಅಪರಿಚ್ಛಿನ್ನಸದ್ರೂಪತ್ವ ಅವಿರೋಧಿತ್ವವತ್ ಘಟಾದೇಃ ಪ್ರತಿಪನ್ನೋಪಾಧಿ**

**ಸದ್ಭಾವೇऽಪಿ ಪಾರಮಾರ್ಥಿಕತ್ವಾಭಾವಸ್ಯ ಘಟಾದೌ ಪರಿಚ್ಛಿನ್ನಸದ್ರೂಪತ್ವ ಅವಿರೋಧಿ ತ್ವೋಪಪತ್ತೇಶ್ಚ।**

'ಪ್ರತಿಪನ್ನೋಪಾಧೌ ಪಾರಮಾರ್ಥಿಕತ್ವಾಕಾರೇಣ ನಿಷೇಧಪ್ರತಿಯೋಗಿತ್ವವು ಬ್ರಹ್ಮನಲ್ಲಿ ಅತಿವ್ಯಾಪ್ತವಾಗುವುದಿಲ್ಲ. ಏಕೆಂದರೆ ಬ್ರಹ್ಮನಿಗೆ ಪ್ರತಿಪನ್ನೋಪಾಧಿ ಇಲ್ಲ. 'ನನ್ನಲ್ಲಿ ಸುಖಾನುಭವವಿದೆ' ಎಂಬಲ್ಲಿ ಉಪಾಧಿತ್ವೇನ ಕಾಣುವ ನಾನಾಗಲಿ 'ಸ ಏವಾಧಸ್ತಾತ್' ಎಂದು ಶ್ರುತಿಯ ಹೇಳುವ ಅಧರದೇಶಾದಿಗಳಾಗಲಿ ಎಲ್ಲವೂ ಬ್ರಹ್ಮನಲ್ಲಿ ಅಧ್ಯಸ್ತವೆ ಆಗಿರುವುದರಿಂದ ಅವನಿಗೆ ಆಧಾರವಾಗಲು ಶಕ್ಯವಿಲ್ಲ' ಎಂದರೆ ಹೇಳುತ್ತೇವೆ,

ಮಿಥ್ಯಾತ್ವಲಕ್ಷಣಕ್ಕೆ ಹೀಗೆ ಬ್ರಹ್ಮನಲ್ಲಿ ಅತಿವ್ಯಾಪ್ತಿ ಇಲ್ಲದಿದ್ದರೂ ಮಿಥ್ಯಾತ್ವಾನುಮಾನಕ್ಕೆ ಅರ್ಥಾಂತರತ್ವ ದೋಷವಿದೆ. ಬ್ರಹ್ಮನಿಗೆ ಪ್ರತಿಪನ್ನೋಪಾಧಿ ಇಲ್ಲದಿದ್ದರೂ ಪಾರಮಾರ್ಥಿಕತ್ವರೂಪ ಧರ್ಮಾಭಾವವು ಅವನ ಅಪರಿಚ್ಛಿನ್ನಸದ್ರೂಪತ್ವಕ್ಕೆ ವಿರೋಧಿಯಾಗುವುದಿಲ್ಲ. ಹಾಗೇ ಘಟಾದಿ ಪ್ರಪಂಚಕ್ಕೆ ಪ್ರತಿಪನ್ನೋಪಾಧಿ ಇದ್ದರೂ ಪಾರಮಾರ್ಥಿಕತ್ವಾಭಾವವು ಅದರ ಪರಿಚ್ಛಿನ್ನ ಸದ್ರೂಪತ್ವಕ್ಕೆ ಅವಿರೋಧಿಯಾಗಬಹುದು. ಬ್ರಹ್ಮನಿಗೆ ಪ್ರತಿಪನ್ನೋಪಾಧಿ ಇಲ್ಲದ್ದರಿಂದ ಅಪರಿಚ್ಛಿನ್ನ ಸದ್ರೂಪತ್ವ, ಘಟಾದಿಗೆ ಪ್ರತಿಪನ್ನೋಪಾಧಿ ಇರುವುದರಿಂದ ಪರಿಚ್ಛಿನ್ನ ಸದ್ರೂಪತ್ವ ಎಂದು ವೈಲಕ್ಷಣ್ಯವಿದ್ದರೂ, ಪರಮಾರ್ಥಸದ್ರೂಪತ್ವದಲ್ಲಿ ವೈಲಕ್ಷಣ್ಯಕ್ಕೆ ಅದು ಪ್ರಯೋಜಕವಾಗುವುದಿಲ್ಲ. ಹೀಗಾಗಿ ಪ್ರಪಂಚದಲ್ಲಿ ಮಿಥ್ಯಾತ್ವಲಕ್ಷಣ ಬಂದರೂ ಸತ್ಯತ್ವಕ್ಕೆ ಹಾನಿ ಇಲ್ಲದ್ದರಿಂದ ಅರ್ಥಾಂತರತ್ವವಿದೆ.

ಯದ್ಯಪಿ ಘಟಾದಿ ಪ್ರಪಂಚದ ಸತ್ತಾವು ಸಾಧಿಕರಣವಾಗಿದೆ, ಯತ್‌ಕಿಂಚಿದಧಿಕರಣ ಸಾಪೇಕ್ಷವಾಗಿದೆ. ಘಟವು ಕಪಾಲದಲ್ಲಿ ಸತ್ತಾದರೂ ತಂತುವಿನಲ್ಲಿ ಸತ್ತಲ್ಲ. ಆದರಿಂದ ಅದು ಪರಿಚ್ಛಿನ್ನಸದ್ರೂಪವೆನಿಸಿದೆ. ಹೀಗಾಗಿ ತಂತ್ವಾದಿ ಪರೋಪಾಧಿಗಳಲ್ಲಿ ಇಲ್ಲದ ಘಟವು ಕಪಾಲರೂಪ ಸ್ವೋಪಾಧಿಯಲ್ಲಿಯೂ ಇಲ್ಲವೆಂದರೆ ಎಲ್ಲಿಯೂ ಇಲ್ಲವೆಂದು ಸತ್ತಾಸಾಮಾನ್ಯಾಭಾವ ಸಿದ್ಧ ವಾಗುತ್ತದೆ. ಬ್ರಹ್ಮನಿಗೆ ನಿರಧಿಕರಣಸತ್ತಾ, ಅಪರಿಚ್ಛಿನ್ನಸದ್ರೂಪತ್ವವಿರುವುದರಿಂದ ನಿರ್ಧರ್ಮಕನಾದ ಅವನ ಪಾರಮಾರ್ಥಿಕತ್ವೇನ ಅಭಾವವು ಸರ್ವತ್ರ ಇದ್ದರೂ ಅದು ಸತ್ತಾಸಾಮಾನ್ಯಕ್ಕೆ ವಿರೋಧಿ ಯಾಗುವುದಿಲ್ಲ. ಅವ್ಯಕ್ತಿ ಗಗನಾದಿಗಳ ಅಭಾವವು ಸರ್ವತ್ರ ಇದ್ದರೂ ಅವುಗಳ ಸತ್ತಾ ನಿರಧಿ ಕರಣವಾದ್ದರಿಂದಲೆ ಅವುಗಳ ಸತ್ತಾಸಾಮಾನ್ಯಕ್ಕೆ ಅದು ವಿರೋಧಿಯಾಗುವುದಿಲ್ಲವೆಂದು ತಾರ್ಕಿಕರು ಒಪ್ಪುತ್ತಾರೆ. 'ಘಟಾದಿ ಪ್ರಪಂಚಕ್ಕೆ ಪ್ರತಿಪನ್ನೋಪಾಧಿ ಸದ್ಭಾವವು ಅದರ ಪರಿಚ್ಛಿನ್ನಸತ್ತಾಕ್ಕೆ ವಿರೋಧಿ ಯಲ್ಲ, ಅಪ್ರಯೋಜಕ' ಎಂದುದೂ ಯುಕ್ತವಲ್ಲ. ಪ್ರತಿಪನ್ನೋಪಾಧಿ ಇದ್ದರೆ ಮಾತ್ರ 'ಕಪಾಲದಲ್ಲಿ ಘಟವಿದೆ' 'ಕಪಾಲದಲ್ಲಿ ಘಟವಿಲ್ಲ' ಎಂಬ ಭ್ರಮ ಬಾಧಗಳಿಗೆ ಪ್ರತಿಬಧ್ಯಪ್ರತಿಬಂಧಕಭಾವ ಕೊಡುತ್ತದೆ. ಆದರಿಂದ ಪ್ರತಿಪನ್ನೋಪಾಧಿಯು ಘಟಾದಿ ಸತ್ವಾಸತ್ವ ನಿರ್ಣಯಕ್ಕೆ ಆವಶ್ಯಕವೆ' ಎಂದು ಇಲ್ಲಿ ಅದ್ವೈತಿ ಆಕ್ಷೇಪ ಮಾಡಬಹುದು. ಇದಕ್ಕೆ ಸಮಾಧಾನ—

ಬ್ರಹ್ಮನಿಗೆ ಸತ್ತ್ವವನ್ನೂ ಪ್ರಪಂಚಕ್ಕೆ ಅಸತ್ತ್ವವನ್ನೂ ಹೇಳುವ ಸತ್ಯಜ್ಞಾನಾದಿ ವಾಕ್ಯ, ನೇಹನಾನೇತಿ ವಾಕ್ಯಗಳೆರಡೂ ಪ್ರಮಾಣಗಳಾಗಬೇಕಾದರೆ ಸತ್ಯಜ್ಞಾನಾದಿವಾಕ್ಯದಂತೆ ನೇಹನಾನೇತಿ ವಾಕ್ಯವೂ ಕೂಡ ನಿರಧಿಕರಣ ಸತ್ತಾವಿಷಯಕವೇ ಆಗಬೇಕು. ಇಲ್ಲದಿದ್ದರೆ ಅವೆರಡು ಸತ್ತಾಸತ್ತ್ವವಿಷಯವಾಗಲಾರವು. ಭಿನ್ನವಿಷಯಕವಾಗುವುವು. ಈ ಅಭಿಪ್ರಾಯದಿಂದಲೆ 'ಅಪರಿಚ್ಛಿನ್ನಸದ್ರೂಪತ್ವಾವಿರೋಧಿತ್ವವತ್' ಎಂದು ಎರಡು ವಾಕ್ಯಗಳಿಗೆ ಸಾಮ್ಯವನ್ನು ಹೇಳುತ್ತಿದ್ದಾರೆ. ವಸ್ತುತಸ್ತು ಪ್ರಪಂಚದಂತೆ ಬ್ರಹ್ಮನದೂ ಕೂಡ ಅಪರಿಚ್ಛಿನ್ನಸತ್ತ್ವವೇ ಆದರೂ ಸಾಧಿಕರಣಸತ್ತಾವೇ ಆಗಿದೆ. ಏಕೆಂದರೆ 'ಆಕಾಶವತ್ ಸರ್ವಗತಶ್ಚ ನಿತ್ಯಃ' 'ತುರ್ಯಂ ತತ್ ಸರ್ವದೃಕ್ ಸದಾ' 'ಆಕಾಶದಂತೆಯೇ ಎಲ್ಲಕಡೆ ಬ್ರಹ್ಮವಿದೆ' 'ಬ್ರಹ್ಮವು ಸರ್ವವಿಷಯಕ ಜ್ಞಾನಉಳ್ಳವನು' ಎಂದು, ಆಕಾಶದಂತೆ ಸರ್ವಾಧಿಕರಣಕಸತ್ತ್ವವನ್ನೂ ಸರ್ವವಿಷಯಕ ಜ್ಞಾನವನ್ನೂ ಹೇಳುವುದರಿಂದ ಅಧಿಕರಣ ನಿರಪೇಕ್ಷಸತ್ತ್ವವಿಲ್ಲ, ವಿಷಯನಿರಪೇಕ್ಷ ಜ್ಞಾನತ್ವವಿಲ್ಲ. 'ಅಸಂಗ'ತ್ವವನ್ನು ಹೇಳಿದರೆ ಅದು ಸಂಗ ಪ್ರಯುಕ್ತ ಪುಣ್ಯಪಾಪಲೇಪವಿಲ್ಲ ಎನ್ನುತ್ತಿದೆ. 'ಅನಿಲಯನ'ತ್ವವನ್ನು ಹೇಳಿದರೆ ಬ್ರಹ್ಮಾನ್ಯಾಧೀನವಾದ ಸ್ಥಿತಿ ಇಲ್ಲವೆನ್ನುತ್ತಿದೆ.

**ನಹಿ ಬ್ರಹ್ಮಣ್ಯಪಿ ಸ್ವರೂಪಾತಿರಿಕ್ತಂ ಪಾರಮಾರ್ಥಿಕತ್ವಂ ತತ್ತ್ವತೋಽಸ್ತಿ । ಅದ್ವೈತಹಾನೇಃ । ನ ಚ ಸೋಪಾಧಿಕ ಬಾಧಾಭಾವ ಗರ್ಭಿತಂ ಪಾರಮಾರ್ಥಿಕತ್ವಂ ನಿರುಪಾಧಿಕ ಬ್ರಹ್ಮಮಾತ್ರಂ ।**

'ಪ್ರಪಂಚದಲ್ಲಿ ಪಾರಮಾರ್ಥಿಕತ್ವಾಭಾವವಿದ್ದರೂ ಸದ್ರೂಪವಾಗಬಹುದೆಂದರೆ ಅದು ಯುಕ್ತವಲ್ಲ. ದ್ರವ್ಯತ್ವರಹಿತವಾದ ಗುಣವು ಅದ್ರವ್ಯವೇ ಆಗುವಂತೆ ಪಾರಮಾರ್ಥಿಕತ್ವರಹಿತವಾದ ಪ್ರಪಂಚ ಅಪಾರಮಾರ್ಥಿಕವೇ ಆಗುತ್ತದೆ' ಎಂದರೆ, ಬ್ರಹ್ಮನಲ್ಲಿಯೂ ಸ್ವರೂಪಾತಿರಿಕ್ತವಾದ ಪಾರಮಾರ್ಥಿಕತ್ವ ವಸ್ತುತಃ ಇಲ್ಲ. ಇದ್ದರೆ ಅದ್ವೈತಹಾನಿ. ಆದರೂ ಬ್ರಹ್ಮನು ಪಾರಮಾರ್ಥಿಕ ಸ್ವರೂಪನೆ, ಅಪಾರಮಾರ್ಥಿಕವಲ್ಲ. ಹಾಗೇ ಪ್ರಪಂಚವೂ ಪಾರಮಾರ್ಥಿಕಸ್ವರೂಪ ಏಕಾಗಬಾರದು? 'ಪಾರಮಾರ್ಥಿಕತ್ವ ವಸ್ತುತಃ ಬ್ರಹ್ಮನಲ್ಲಿದ್ದರೂ ಅದು ಬ್ರಹ್ಮಸ್ವರೂಪವೇ ಆಗಿರುವುದರಿಂದ ಅದ್ವೈತಹಾನಿ ಇಲ್ಲ' ಎನ್ನುವುದು ಸರಿಯಲ್ಲ. ಪಾರಮಾರ್ಥಿಕತ್ವವು ಬಾಧಾಭಾವರೂಪ ಅನೇಕ ಉಪಾಧಿಘಟಿತವಾಗಿದೆ. ನಿರುಪಾಧಿಕ ಅಖಂಡ ಬ್ರಹ್ಮಸ್ವರೂಪವಾಗಲಾರದು.

**ಏವಂ ಚ ಬ್ರಹ್ಮ ಕಾಲತ್ರಯೇಽಪಿ ಸತ್, ವಿಯದಾದಿ ರೂಪ್ಯಾದಿ ಚ ಕದಾಚಿದೇವ ಇತಿ ನಿತ್ಯತ್ವ ಅನಿತ್ಯತ್ವಾಭ್ಯಾಮೇವ ವೈಷಮ್ಯಂ । ನ ತು ಸತ್ಯತ್ವಮಿಥ್ಯಾತ್ವಾಭ್ಯಾಂ । ತಥಾಚ—**

**ಸ್ವರೂಪೇಣ ತ್ರಿಕಾಲಸ್ಥನಿಷೇಧೋ ನಾಸ್ತಿ ತೇ ಮತೇ ।**
**ರೂಪ್ಯಾದೇ ಸ್ತಾತ್ವಿಕತ್ವೇನ ನಿಷೇಧಸ್ತಾ ತ್ಮನೋಽಪಿ ಚ ॥**

ಅದ್ವೈತಿಯ ಆಕ್ಷೇಪ— ಬ್ರಹ್ಮನಲಿ ಪಾರಮಾರ್ಥಿಕತ್ವಾಭಾವವಿಲ್ಲ. ಏಕೆಂದರೆ ಪಾರಮಾರ್ಥಿಕತ್ವವೆಂದರೆ ತ್ರೈಕಾಲಿಕ ನಿಷೇಧಪ್ರತಿಯೋಗಿತ್ವಾಭಾವ. ಅಭಾವವು ನಮ್ಮ ಮತದಲ್ಲಿ

ಅಧಿಕರಣ ಸ್ವರೂಪ. ಆ ಅಧಿಕರಣವೇ ಪ್ರತಿಯೋಗಿಯಿಂದ ನಿರೂಪಿತವಾಗುತ್ತದೆ. ಹೊರತು ಪ್ರತಿಯೋಗಿಯು ಅಧಿಕರಣದಲ್ಲಿ ಘಟಕವಾಗಿರುವುದಿಲ್ಲ. 'ಘಟಾಭಾವದಲ್ಲಿ ಘಟವಿಲ್ಲ' ಎಂಬಂತೆ. ಹೀಗಾಗಿ ಬ್ರಹ್ಮನಲ್ಲಿ ಪಾರಮಾರ್ಥಿಕತ್ವಾಭಾವವಿಲ್ಲ' ಎಂದರೆ, ಸಮಾಧಾನ. ಹೀಗೆ— ಬ್ರಹ್ಮ ಕಾಲತ್ರಯದಲ್ಲಿಯೂ ಸತ್, ವಿಯದಾದಿ ಮತ್ತು ರೂಪ್ಯಾದಿ ಕದಾಚಿತ್‌ಸತ್. ಹೀಗೆ ನಿತ್ಯತ್ವ ಅನಿತ್ಯತ್ವಗಳಿಂದಲೆ ಬ್ರಹ್ಮಜಗತ್ತುಗಳಲ್ಲಿ ವೈಷಮ್ಯ ಹೊರತು ಬ್ರಹ್ಮ ಸತ್ಯ, ಜಗತ್ ಮಿಥ್ಯಾ ಎಂದು ವೈಷಮ್ಯವಿಲ್ಲ.

ಇದರ ತಾತ್ಪರ್ಯವಿಷ್ಟು—'ಘಟಾದಿಗಳಲ್ಲಿಯೂ ಪಾರಮಾರ್ಥಿಕತ್ವವು ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವಾಭಾವವೆ. ಆ ಅಭಾವ ಘಟಾದಿ ಅಧಿಕರಣಸ್ವರೂಪ. ಆ ಅಧಿಕರಣವೇ ಕದಾಚಿತ್ ಪ್ರತಿಯೋಗಿಯಿಂದ ನಿರೂಪ್ಯವಾಗುತ್ತದೆ ಹೊರತು ಅದರಿಂದ ಘಟಿತವಾಗುವುದಿಲ್ಲ. ಅಭಾವಾಧಿ ಕರಣ ಅಭಾವದಂತೇ. ಬ್ರಹ್ಮಜಗತ್ತುಗಳಲ್ಲಿ ವೈಷಮ್ಯ ಇಷ್ಟೇ—'ಬ್ರಹ್ಮವು ಕಾಲತ್ರಯದಲ್ಲಿಯೂ ಸತ್. ಘಟಾದಿಗಳು ಮಾತ್ರ ಕದಾಚಿತ್ ಸತ್ತಾಗಿವೆ'. ಬ್ರಹ್ಮನಲ್ಲಿ 'ಕಾದಾಚಿತ್ಕ ಅಭಾವಅಪ್ರತಿಯೋಗಿತ್ವ' ವಿಲ್ಲ. ಎಂದೂ ಬ್ರಹ್ಮವಿಲ್ಲವಾಗುವುದಿಲ್ಲ. ಘಟಾದಿಗಳಲ್ಲಿ 'ಕಾದಾಚಿತ್ಕ ಅಭಾವ ಪ್ರತಿಯೋಗಿತ್ವ'ವಿದೆ. ಕದಾಚಿತ್ ಘಟಾದಿ ಇಲ್ಲವಾಗಿರುತ್ತದೆ ಎಂದು. ಹೀಗೆ ವೈಷಮ್ಯವೇ ಹೊರತು ಬ್ರಹ್ಮವು ಸತ್ಯ, ಜಗತ್ತು ಮಿಥ್ಯಾ ಎಂದು ವೈಷಮ್ಯವಿಲ್ಲ. ಏಕೆಂದರೆ ನೀನು ಹೇಳುವ ಮಿಥ್ಯಾತ್ವವು ಪ್ರಪಂಚದಲ್ಲಿ ಇಲ್ಲ' ಎಂದು.

❖❖❖

## 12. तृतीयमिथ्यात्वनिरुक्तिभङ्गः

नापि ज्ञानत्वेन ज्ञाननिवर्त्यत्वमिति तृतीयः। अतीत-घटादावव्याप्तेः। शुक्तिज्ञानेन रूप्यं नष्टमिति कदाप्यननुभवेन तत्राप्यव्याप्तेश्च। एतावन्तं कालं शुक्त्यज्ञानमासीद्, भ्रम आसीदित्यनुभवेन शुक्तिवत्सत्ये अज्ञानभ्रमादौ शुक्तिज्ञानेन तदज्ञानं नष्टमित्यनुभवेन ज्ञानत्वेन ज्ञाननिवर्त्यत्वस्य सत्त्वेनातिव्याप्तेश्च। अपरोक्षाध्यासं प्रति ज्ञानस्यापरोक्षज्ञानतया निवर्तकत्वेन ज्ञानत्वेनानिवर्तकत्वाच्च।

ज्ञानत्वव्याप्यधर्मेण ज्ञाननिवर्त्यत्वस्य चेच्छाद्यनिवर्त्ये स्मृति-त्वेन स्मृतिनिवर्त्ये संस्कारादावतिव्याप्तेः। अनुभवत्वव्याप्यधर्मेण

**तन्निवर्त्यत्वस्य च यथार्थस्मृतिनिवर्त्यायथार्थस्मृतिविषयेऽव्याप्तेः । भ्रमोत्तरप्रमानिवर्त्यत्वस्य च तत्वज्ञानसंस्कारनिवर्त्याज्ञानसंस्कारे अव्याप्तेः । स्वोपादानाज्ञाननिवर्तकज्ञाननिवर्त्यत्वस्य चानाद्यध्यासेऽभावात् । लाघवेनाज्ञानोपादानकत्वस्यैव लक्षणत्वापाताच्च ।**

**तथाच–**

**विज्ञाननाश्यता मिथ्यारूप्यादौ नानुभूयते ।**
**किन्त्वधिष्ठानवत्सत्ये तदज्ञानेऽनुभूयते ।।**

**अतीतघटादाविति ।** यद्यप्यतीतघटादौ न निवृत्तिः किन्तु प्रविलयमात्रमिति पराभ्युपगमः । तथापि घटो निवृत्त इत्यबाधितानुभवेन निवृत्तिरेवाङ्गीकार्या । अन्यथा विश्वमायानिवृत्तिरिति श्रुतमायानिवृत्तिरपि विलयरूपा स्यादिति भावः । साध्यनिर्वचनरूपत्वे त्वंशतो बाधो दोष इति ध्येयम् । **शुक्ति ज्ञानेनेति ।** साध्यनिर्वचनरूपत्वे दृष्टान्तः साध्यविकल इत्यपि बोध्यम् । **अतिव्याप्तेश्चेति ।** साध्यनिर्वचनरूपत्वेऽर्थान्तरमिति द्रष्टव्यम् । **अपरोक्षज्ञानतयेति ।** तदिन्द्रियजन्यापरोक्षज्ञानतयेत्यर्थः । तेन वंशे चाक्षुषोरगभ्रमस्य त्वाचापरोक्षज्ञानानिवर्त्यत्वादपरोक्षज्ञानत्वमपि न निवर्तकतावच्छेदकमिति शङ्का निरस्ता । ननु संस्कारादेर्न स्मृतित्वेन स्मृतिनिवर्त्यता । किन्तु योग्योत्तरात्मविशेषगुणत्वेनेति शङ्कानिवारणायोक्तम् **इच्छाद्यनिवर्त्य इति ।** संस्कारादावपीत्यादिपदात् सुहृद्दर्शननिवर्त्यदुःखादेः परिग्रहः । **अनुभवत्वेति ।** यत्र प्रमोत्तरजातस्य भ्रमस्य स्वजन्यस्मृतिपर्यन्तं बाधो न जातः, प्रथमप्रमाजनितस्मृत्या भ्रमजनितस्मृतिविषयबाधश्च दृश्यते तत्राव्याप्तिरिति भावः । **तत्त्वज्ञानेति ।** नन्वज्ञानसंस्कारस्यापि तत्त्वज्ञाननिवर्त्यत्वमेव स्वीक्रियते । अतो न तत्राव्याप्तिरिति चेन्न । अज्ञानस्यैवाज्ञानसंस्कारस्याज्ञानत्वाभावेन ज्ञाननिवर्त्यत्वानुपपत्तेः । ज्ञानाज्ञानयोरेव विरोधात् । नचाज्ञानसंस्कारस्याप्यज्ञानोपादानतया तत्वज्ञानेन स्वोपादाननिवृत्तौ स्वस्यापि तद्द्वारा तन्निवर्त्यत्वमविकलमिति वाच्यम् । अज्ञानसंस्कारनिवृत्तौ कर्तव्यायां अज्ञाननिवृत्तेस्तत्व-

ज्ञानद्वारत्वे मानाभावादिति भावः । ननु स्वोपादानाज्ञाननिवर्तकज्ञाननिवर्त्यत्वं विवक्षितम् । अतो न संस्कारादावव्याप्तिरित्याशङ्क्याह **स्वोपादानेति** ।

❖❖❖

## ತೃತೀಯ ಮಿಥ್ಯಾತ್ವನಿರುಕ್ತಿಭಂಗ

**ನಾಪಿ ಜ್ಞಾನತ್ವೇನ ಜ್ಞಾನನಿವರ್ತ್ಯಮಿತಿ ತೃತೀಯಃ ।**

**ಅತೀತ ಘಟಾದೌ ಅವ್ಯಾಪ್ತೇಃ ।**

**'ಶುಕ್ತಿಜ್ಞಾನೇನ ರೂಪ್ಯಂ ನಷ್ಟಂ' ಇತಿ ಕದಾಪಿ ಅನನುಭವೇನ ತತ್ರಾಪಿ ಅವ್ಯಾಪ್ತೇಶ್ಚ।**

ಜ್ಞಾನತ್ವೇನ ಜ್ಞಾನನಿವರ್ತ್ಯತ್ವವು ಮಿಥ್ಯಾತ್ವ ಎಂಬ ಮೂರನೆ ಮಿಥ್ಯಾತ್ವ ನಿರ್ವಚನವೂ ಸರಿಯಲ್ಲ. ಏಕೆಂದರೆ ಅತೀತ ಘಟಾದಿಗಳಲ್ಲಿ ವೇದಾಂತಜನ್ಯಜ್ಞಾನವಿಲ್ಲದೆಯೆ ಮುದ್ಗರ ಪ್ರಹಾರಾದಿಗಳಿಂದ ನಿವೃತ್ತಿ ಕಂಡಿದೆ. ಜ್ಞಾನನಿವರ್ತ್ಯತ್ವರೂಪ ಮಿಥ್ಯಾತ್ವಲಕ್ಷಣಕ್ಕೆ ಅಲ್ಲಿ ಅವ್ಯಾಪ್ತಿ. ಶುಕ್ತಿಜ್ಞಾನದಿಂದ ರೂಪ್ಯವು ನಷ್ಟವಾಯಿತೆಂದು ಎಂದೂ ಅನುಭವವಿಲ್ಲದಿರುವುದರಿಂದ ಶುಕ್ತಿರೂಪ್ಯದಲ್ಲಿಯೂ ಲಕ್ಷಣಕ್ಕೆ ಅವ್ಯಾಪ್ತಿ.

ಯದ್ಯಪಿ ಅತೀತಘಟಾದಿಗಳಿಗೆ ದಂಡಾದಿನಾ ನಿವೃತ್ತಿ ಎಂದು ಅದ್ವೈತಿ ಒಪ್ಪುವುದಿಲ್ಲ. 'ಪ್ರವಿಲಯ ಮಾತ್ರ' ಕಾರ್ಯವು ಕಾರಣದಲ್ಲಿ ಲೀನವಾಗುವುದು ಮಾತ್ರ ಎನ್ನುತ್ತಾನೆ. ಘಟವು ಘಟರೂಪ ಕಾರ್ಯಾವಸ್ಥೆಯನ್ನು ತೊರೆದು ಮೃದ್‌ರೂಪಕಾರಣಾವಸ್ಥೆಯನ್ನು ಹೊಂದುವುದೇ ಹೊರತು ದಂಡದಿಂದ ಘಟವು ನಾಶವಾಗುವುದಿಲ್ಲ ಎನ್ನುತ್ತಾನೆ. ಆದರೆ ಘಟವು ನಿವೃತ್ತವಾಯಿತೆಂದು ಅನುಭವವಿರುವುದರಿಂದ ನಿವೃತ್ತಿಯನ್ನೇ ಒಪ್ಪಬೇಕು. 'ಭೂಯಶ್ಚಾಂತೇ ವಿಶ್ವಮಾಯಾ ನಿವೃತ್ತಿಃ' (ಶ್ವೇತಾಶ್ವತರ ಉಪನಿಷತ್) ಎಂದು ಉಪನಿಷತ್ತು ಹೇಳುವ ಮಾಯಾನಿವೃತ್ತಿಯು ಕೂಡ ಕಾರಣದಲ್ಲಿ ವಿಲಯವೇ ಎನ್ನಬೇಕಾದೀತು. ಮಾಯೆ ಅನಾದಿ, ಅದಕ್ಕೆ ಉಪಾದಾನಕಾರಣವಿಲ್ಲ.

ಈ ಮಿಥ್ಯಾತ್ವನಿರುಕ್ತಿಯು ಲಕ್ಷಣೋಕ್ತಿಪರವೆಂದರೆ ಅವ್ಯಾಪ್ತಿದೋಷ. ಸಾಧ್ಯನಿರ್ವಚನ ಪರವೆಂದರೆ, ಅಂಶತೋಬಾಧವು ದೋಷ. ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವು ದೋಷ.

'ಜ್ಞಾನತ್ವ ಪ್ರಯುಕ್ತ ಅವಸ್ಥಿತಿ ಸಾಮಾನ್ಯ ವಿರಹ ಪ್ರತಿಯೋಗಿತ್ವವೇ ಜ್ಞಾನನಿವರ್ತ್ಯತ್ವ. ದಂಡದಿಂದ ಘಟನಾಶವಾದಾಗ ಘಟಕ್ಕೆ ಸ್ವರೂಪೇಣ ಅವಸ್ಥಿತಿ ಇಲ್ಲವಾದರೂ ಕಾರಣಾತ್ಮನಾ ಅವಸ್ಥಿತಿ ಇದೆ. ಕಾರಣಾತ್ಮನಾ ಅವಸ್ಥಿತಿವಿರಹವು ಜ್ಞಾನದಿಂದಲೇ ಆಗಬೇಕು. ಆದರಿಂದ ಅತೀತ ಘಟದಲ್ಲಿ ಅವ್ಯಾಪ್ತಿಯಿಲ್ಲ. ಉತ್ತರಜ್ಞಾನದಿಂದ ಪೂರ್ವಜ್ಞಾನ ನಾಶವಾದಾಗಲೂ ಅದು ಕಾರಣಾತ್ಮನಾ ಇರುತ್ತದೆ. ಅದು ಜ್ಞಾನದಿಂದಲೇ ನಾಶವಾಗಬೇಕು. ಆದರಿಂದ ಪೂರ್ವಜ್ಞಾನದಲ್ಲಿಯೂ ಅವ್ಯಾಪ್ತಿ ಇಲ್ಲ'–ಎಂದು ಸಿದ್ಧಿಕಾರ ಹೇಳುತ್ತಾನೆ. ಇದು ಸರಿಯಲ್ಲ. ದಂಡದಿಂದ ಸ್ವರೂಪೇಣ ಘಟನಾಶ,

ಜ್ಞಾನದಿಂದ ಕಾರಣಾತ್ಮನಾ ಘಟನಾಶ. ಅವಸ್ಥಿತಿ ಸಾಮಾನ್ಯವಿರಹಕ್ಕೆ ಎರಡೂ ಪ್ರಯೋಜಕವಲ್ಲ. ಅದರಿಂದ ಇದು ಅಸಂಭವಿಲಕ್ಷಣ. ಶುಕ್ತಿರೂಪ್ಯ ಅಸತ್ತಾದ್ದರಿಂದ ಅವಸ್ಥಿತಿಯೇ ಇಲ್ಲ. ಅದರ ಅವಸ್ಥಿತಿ ಸಾಮಾನ್ಯವಿರಹಕ್ಕೆ ಜ್ಞಾನತ್ವ ಪ್ರಯೋಜಕವೆನ್ನಲೂ ಬರುವುದಿಲ್ಲ. ಜ್ಞಾನತ್ವವು ಭ್ರಮದಲ್ಲಿಯೂ ಇರುವುದರಿಂದ ನಿವೃತ್ತಿ ಪ್ರಯೋಜಕವಾಗುವುದೂ ಇಲ್ಲ.

**ಏತಾವಂತಂ ಕಾಲಂ ಶುಕ್ತ್ಯಜ್ಞಾನಮಾಸೀತ್ ಭ್ರಮಃ ಆಸೀತ್ ಇತಿ ಅನುಭವೇನ ಶುಕ್ತಿವತ್ ಸತ್ಯೇ ಅಜ್ಞಾನಭ್ರಮಾದೌ ಶುಕ್ತಿಜ್ಞಾನೇನ ತದಜ್ಞಾನಂ ನಷ್ಟಂ ಇತ್ಯನುಭವೇನ ಜ್ಞಾನತ್ವೇನ ಜ್ಞಾನನಿವರ್ತ್ಯತ್ವಸ್ಯ ಸತ್ವೇನ ಅತಿವ್ಯಾಪ್ತೇಶ್ಚ ।**

'ಇಷ್ಟುಕಾಲ ನನಗೆ ಶುಕ್ತಿಯ ಅಜ್ಞಾನವಿತ್ತು ಭ್ರಮವಿತ್ತು' ಎಂದು ಅನುಭವವಿರುವುದರಿಂದ ಶುಕ್ತಿಯಂತೆಯೇ ಅದರ ಅಜ್ಞಾನ ಭ್ರಮಗಳೂ ಸತ್ಯವೆ. ಶುಕ್ತಿಜ್ಞಾನದಿಂದ ಅಜ್ಞಾನ ನಾಶವಾಯಿತು ಭ್ರಮ ನಾಶವಾಯಿತೆಂದು ಅನುಭವವಿರುವುದರಿಂದ ಜ್ಞಾನತ್ವೇನ ಜ್ಞಾನ ನಿವರ್ತ್ಯತ್ವವು ಸತ್ಯವಾದ ಅಜ್ಞಾನಭ್ರಮಗಳಲ್ಲಿ ಇರುವುದರಿಂದ ಅತಿವ್ಯಾಪ್ತಿಯೂ ಬಂದಿತು.

ಸಾಧ್ಯನಿರ್ವಚನಪರತ್ವಪಕ್ಷದಲ್ಲಿ ಜ್ಞಾನತ್ವೇನಜ್ಞಾನನಿವರ್ತ್ಯತ್ವವು ಸತ್ಯತ್ವವಿದ್ದರೂ ಕೂಡುವುದ ರಿಂದ ಅರ್ಥಾಂತರತ್ವದೋಷ.

**ಅಪರೋಕ್ಷಾಧ್ಯಾಸಂ ಪ್ರತಿ ಜ್ಞಾನಸ್ಯ ಅಪರೋಕ್ಷಜ್ಞಾನತಯಾ ನಿವರ್ತಕತ್ವೇನ ಜ್ಞಾನತ್ವೇನ ಅನಿವರ್ತಕತ್ವಾಚ್ಚ ।**

ಶುಕ್ತಿರಜತಾದಿ ಅಪರೋಕ್ಷ ಅಧ್ಯಾಸಕ್ಕೆ ಅಧಿಷ್ಠಾನತತ್ವಸಾಕ್ಷಾತ್ಕಾರತ್ವೇನ ಜ್ಞಾನವು ನಿವರ್ತಕವಾದ್ದರಿಂದ ಜ್ಞಾನತ್ವೇನ ಅನಿವರ್ತಕವಾದ್ದರಿಂದ ಅವಚ್ಛೇದಕಾವಚ್ಛೇದೇನ ಬಾಧ, ಲಕ್ಷಣಕ್ಕೆ ಅಸಂಭವದೋಷ.

'ಅಪರೋಕ್ಷಜ್ಞಾನತಯಾ ನಿವರ್ತಕತ್ವೇನ' ಎಂಬಲ್ಲಿ, ವಂಶೇ ಚಾಕ್ಷುಷ ಉರಗಭ್ರಮಕ್ಕೆ ತ್ವಾಚ ಅಪರೋಕ್ಷಜ್ಞಾನವು ನಿವರ್ತಕವಾಗದಿರುವುದರಿಂದ, 'ತದಿಂದ್ರಿಯಜನ್ಯ ಅಪರೋಕ್ಷತಯಾ ನಿವರ್ತಕತ್ವೇನ' ಎಂದು ವ್ಯಾಖ್ಯಾನಿಸಬೇಕು.

**ಜ್ಞಾನತ್ವ ವ್ಯಾಪ್ಯಧರ್ಮೇಣ ಜ್ಞಾನನಿವರ್ತ್ಯತ್ವಸ್ಯ ಚ ಇಚ್ಛಾದ್ಯನಿವರ್ತ್ಯೇ ಸ್ಮೃತಿತ್ವೇನ ಸ್ಮೃತಿ ನಿವರ್ತ್ಯೇ ಸಂಸ್ಕಾರಾದೌ ಅತಿವ್ಯಾಪ್ತೇಃ ।**

ಜ್ಞಾನತ್ವ ವ್ಯಾಪ್ಯ ಧರ್ಮದಿಂದ ಜ್ಞಾನನಿವರ್ತ್ಯತ್ವವು ಮಿಥ್ಯಾತ್ವವೆಂದರೆ ಇಚ್ಛಾದಿಗಳಿಂದ ಅನಿವರ್ತ್ಯವಾದ, ಸ್ಮೃತಿತ್ವೇನ ಸ್ಮೃತಿ ನಿವರ್ತ್ಯವಾದ ಸಂಸ್ಕಾರದಲ್ಲಿ ಅತಿವ್ಯಾಪ್ತಿ. 'ಆದಿ'ಪದದಿಂದ ಸುಹೃದ್ದರ್ಶನದಿಂದ ನಿವರ್ತ್ಯವಾದ ದುಃಖಾದಿಗಳಲ್ಲಿ ಅತಿವ್ಯಾಪ್ತಿ. ಸ್ಮೃತಿಯಿಂದ ಯೋಗ್ಯ ಉತ್ತರ ಆತ್ಮವಿಶೇಷಣಗುಣತ್ವೇನ ನಿವರ್ತ್ಯ ಹೊರತು ಸ್ಮೃತಿತ್ವೇನಸ್ಮೃತಿಯಿಂದ ನಿವರ್ತ್ಯವಲ್ಲ ಎಂಬ ಶಂಕೆಗೆ

ಸಮಾಧಾನವಾಗಿ 'ಇಚ್ಛಾದಿ ಅನಿವರ್ತ್ಯೇ' ಎಂದಿದ್ದಾರೆ. ಯೋಗ್ಯ ಉತ್ತರ ಆತ್ಮವಿಶೇಷಗುಣತ್ವೇನ ಸ್ಮೃತಿಯಿಂದ ಸಂಸ್ಕಾರವು ನಿವರ್ತ್ಯವಾಗುವುದಾದರೆ ಯೋಗ್ಯೋತ್ತರಾತ್ಮವಿಶೇಷಗುಣವಾದ ಇಚ್ಛಾದಿಗಳಿಂದಲೂ ಸಂಸ್ಕಾರವು ನಾಶವಾಗುವ ಪ್ರಸಂಗ. ಇಚ್ಛಾದಿಗಳಿಂದ ಸಂಸ್ಕಾರನಾಶವಾಗುವುದಿಲ್ಲ.

**ಅನುಭವತ್ವವ್ಯಾಪ್ಯಧರ್ಮೇಣ ತನ್ನಿವರ್ತ್ಯತ್ವಸ್ಯ ಚ ಯಥಾರ್ಥಸ್ಮೃತಿ ನಿವರ್ತ್ಯ-ಅಯಥಾರ್ಥ ಸ್ಮೃತಿ ವಿಷಯೇ ಅವ್ಯಾಪ್ತೇಃ ।**

ಅನುಭವತ್ವವ್ಯಾಪ್ಯಧರ್ಮದಿಂದ ಜ್ಞಾನನಿವರ್ತ್ಯತ್ವವೆ ಮಿಥ್ಯಾತ್ವ ಎನ್ನುವುದಾದರೆ ಯಥಾರ್ಥಸ್ಮೃತಿಯಿಂದ ನಿವರ್ತ್ಯವಾದ ಅಯಥಾರ್ಥಸ್ಮೃತಿ ವಿಷಯದಲ್ಲಿ ಅವ್ಯಾಪ್ತಿ. ಪ್ರಮೋತ್ತರದಲ್ಲಿ ಭ್ರಮ ಬಂದಿರುತ್ತದೆ. ಆದಕ್ಕೆ ಆದರ ಸ್ಮೃತಿಪರ್ಯಂತ ಬಾಧ ಬಂದಿರುವುದಿಲ್ಲ. ಮೊದಲಿನ ಪ್ರಮಾದಿಂದ ಬಂದ ಸ್ಮೃತಿಯಿಂದ ಭ್ರಮಜನಿತಸ್ಮೃತಿ ವಿಷಯಕ್ಕೆ ಬಾಧ ಬರಬಹುದು. ಅಲ್ಲಿ ಅವ್ಯಾಪ್ತಿ. ಅನುಮಾನದಲ್ಲಿ ಅಂಶೇ ಬಾಧ.

**ಭ್ರಮೋತ್ತರ ಪ್ರಮಾ ನಿವರ್ತ್ಯತ್ವಸ್ಯ ಚ ತತ್ವಜ್ಞಾನಸಂಸ್ಕಾರ ನಿವರ್ತ್ಯ ಅಜ್ಞಾನಸಂಸ್ಕಾರೇ ಅವ್ಯಾಪ್ತೇಃ ।**

'ಭ್ರಮೋತ್ತರ ಪ್ರಮಾ ನಿವರ್ತ್ಯತ್ವ' ಎಂದರೆ, ಭ್ರಮಪೂರ್ವಪ್ರಮಾನಿವರ್ತ್ಯದಲ್ಲಿ ಅವ್ಯಾಪ್ತಿ ಬಂದೀತು. ಆದರಿಂದ 'ಭ್ರಮ ಸಮಾನಾಧಿಕರಣ ವಿಪರೀತ ಪ್ರಮಾ ನಿವರ್ತ್ಯತ್ವ'ವು ವಿವಕ್ಷಿತವಾಗಿದೆ. ಮತ್ತು ಪ್ರಮಾ ಪದದಿಂದಲೂ ಯಥಾರ್ಥಜ್ಞಾನ ಮಾತ್ರ ವಿವಕ್ಷಿತವಾಗಿದೆ. 'ಯಥಾರ್ಥ'ವೆಂದು ವಿಶೇಷಣವಿಲ್ಲದಿದ್ದರೆ ಧಾರಾವಾಹಿಕ ಭ್ರಮಸ್ಥಳದಲ್ಲಿ ಪೂರ್ವಭ್ರಮವಿಷಯದಲ್ಲಿ ಭ್ರಮೋತ್ತರ ಭ್ರಮರೂಪಜ್ಞಾನ ನಿವರ್ತ್ಯತ್ವವಿಲ್ಲದ್ದರಿಂದ ಅವ್ಯಾಪ್ತಿ. ಅಯಥಾರ್ಥಸ್ಮೃತ್ಯನಂತರ ಬರುವ ಯಥಾರ್ಥಸ್ಮೃತಿಯು ಭ್ರಮೋತ್ತರ ಯಥಾರ್ಥಜ್ಞಾನವಾದ್ದರಿಂದ ತನ್ನಿವರ್ತ್ಯತ್ವವು ಯಥಾರ್ಥ ಸ್ಮೃತಿವಿಷಯದಲ್ಲಿ ಇದೆಯಾದ್ದರಿಂದ ಅವ್ಯಾಪ್ತಿ ಇಲ್ಲ.

ಆದರೆ ಹೀಗೆ ಹೇಳಿದರೂ ತತ್ವಜ್ಞಾನ ಸಂಸ್ಕಾರ ನಿವರ್ತ್ಯವಾದ ಅಜ್ಞಾನ ಸಂಸ್ಕಾರದಲ್ಲಿ ಯಥಾರ್ಥಜ್ಞಾನ ನಿವರ್ತ್ಯತ್ವವಿಲ್ಲದ್ದರಿಂದ ಅವ್ಯಾಪ್ತಿ.

ಅಜ್ಞಾನಸಂಸ್ಕಾರವು ತತ್ವಜ್ಞಾನದಿಂದಲೇ ಏಕೆ ನಿವೃತ್ತವಾಗದು ಎಂದರೆ, ಜ್ಞಾನವು ಅಜ್ಞಾನವನ್ನೂ ಅಜ್ಞಾನ ಕಾರ್ಯವನ್ನೂ ನಿವೃತ್ತಿ ಮಾಡುವುದು ಹೊರತು ಅಜ್ಞಾನ ಸಂಸ್ಕಾರವನ್ನು ನಾಶಮಾಡದು. 'ಸಂಸ್ಕಾರವೂ ಅಜ್ಞಾನಕಾರ್ಯವೆ, ಜ್ಞಾನದಿಂದ ನಾಶವಾಗಲಿ' ಎಂದರೆ ಜ್ಞಾನವು ಅಜ್ಞಾನ ನಿವೃತ್ತಿದ್ವಾರಾ ಅಜ್ಞಾನಸಂಸ್ಕಾರನಿವೃತ್ತಿ ಮಾಡುತ್ತದೆ ಎನ್ನುವಲ್ಲಿ ಪ್ರಮಾಣವಿಲ್ಲದ್ದರಿಂದ ಅದನ್ನು ಒಪ್ಪಲಾಗದು. ಅಜ್ಞಾನದ ಸೂಕ್ಷ್ಮರೂಪವಾದ ಸಂಸ್ಕಾರವು ಅಜ್ಞಾನದ ಕಾರ್ಯವಾಗದು.

**ಸ್ವೋಪಾದಾನಾಜ್ಞಾನ ನಿವರ್ತಕ ಜ್ಞಾನನಿವರ್ತ್ಯತ್ವಸ್ಯ ಚ ಅನಾದ್ಯಧ್ಯಾಸೇ ಅಭಾವಾತ್ । ಲಾಘವೇನ ಅಜ್ಞಾನೋಪಾದಾನಕತ್ವಸ್ಯೈವ ಲಕ್ಷಣತ್ವಾಪಾತಾಚ್ಚ ।**

ಜ್ಞಾನದಿಂದ ಕಾರಣಾತ್ಮನಾ ಘಟನಾಶ. ಅವಸ್ಥಿತಿ ಸಾಮಾನ್ಯವಿರಹಕ್ಕೆ ಎರಡೂ ಪ್ರಯೋಜಕವಲ್ಲ. ಆದರಿಂದ ಇದು ಅಸಂಭವಿಲಕ್ಷಣ. ಶುಕ್ತಿರೂಪ್ಯ ಅಸತ್ತಾದ್ದರಿಂದ ಅವಸ್ಥಿತಿಯೇ ಇಲ್ಲ. ಅದರ ಅವಸ್ಥಿತಿ ಸಾಮಾನ್ಯವಿರಹಕ್ಕೆ ಜ್ಞಾನತ್ವ ಪ್ರಯೋಜಕವೆನ್ನಲೂ ಬರುವುದಿಲ್ಲ. ಜ್ಞಾನತ್ವವು ಭ್ರಮದಲ್ಲಿಯೂ ಇರುವುದರಿಂದ ನಿವೃತ್ತಿ ಪ್ರಯೋಜಕವಾಗುವುದೂ ಇಲ್ಲ.

**ಏತಾವಂತಂ ಕಾಲಂ ಶುಕ್ತ್ಯಜ್ಞಾನಮಾಸೀತ್ ಭ್ರಮಃ ಆಸೀತ್ ಇತಿ ಅನುಭವೇನ ಶುಕ್ತಿವತ್ ಸತ್ಯೇ ಅಜ್ಞಾನಭ್ರಮಾದೌ ಶುಕ್ತಿಜ್ಞಾನೇನ ತದಜ್ಞಾನಂ ನಷ್ಟಂ ಇತ್ಯನುಭವೇನ ಜ್ಞಾನತ್ವೇನ ಜ್ಞಾನನಿವರ್ತ್ಯತ್ವಸ್ಯ ಸತ್ವೇನ ಅತಿವ್ಯಾಪ್ತೇಶ್ಚ ।**

'ಇಷ್ಟುಕಾಲ ನನಗೆ ಶುಕ್ತಿಯ ಅಜ್ಞಾನವಿತ್ತು ಭ್ರಮವಿತ್ತು' ಎಂದು ಅನುಭವವಿರುವುದರಿಂದ ಶುಕ್ತಿಯಂತೆಯೇ ಅದರ ಅಜ್ಞಾನ ಭ್ರಮಗಳೂ ಸತ್ಯವೆ. ಶುಕ್ತಿಜ್ಞಾನದಿಂದ ಅಜ್ಞಾನ ನಾಶವಾಯಿತು ಭ್ರಮ ನಾಶವಾಯಿತೆಂದು ಅನುಭವವಿರುವುದರಿಂದ ಜ್ಞಾನತ್ವೇನ ಜ್ಞಾನ ನಿವರ್ತ್ಯತ್ವವು ಸತ್ಯವಾದ ಅಜ್ಞಾನಭ್ರಮಗಳಲ್ಲಿ ಇರುವುದರಿಂದ ಅತಿವ್ಯಾಪ್ತಿಯೂ ಬಂದಿತು.

ಸಾಧ್ಯನಿರ್ವಚನಪರತ್ವಪಕ್ಷದಲ್ಲಿ ಜ್ಞಾನತ್ವೇನಜ್ಞಾನನಿವರ್ತ್ಯತ್ವವು ಸತ್ಯತ್ವವಿದ್ದರೂ ಕೂಡುವುದ ರಿಂದ ಅರ್ಥಾಂತರತ್ವದೋಷ.

**ಅಪರೋಕ್ಷಾಧ್ಯಾಸಂ ಪ್ರತಿ ಜ್ಞಾನಸ್ಯ ಅಪರೋಕ್ಷಜ್ಞಾನತಯಾ ನಿವರ್ತಕತ್ವೇನ ಜ್ಞಾನತ್ವೇನ ಅನಿವರ್ತಕತ್ವಾಚ್ಚ ।**

ಶುಕ್ತಿರಜತಾದಿ ಅಪರೋಕ್ಷ ಅಧ್ಯಾಸಕ್ಕೆ ಅಧಿಷ್ಠಾನತತ್ವಸಾಕ್ಷಾತ್ಕಾರತ್ವೇನ ಜ್ಞಾನವು ನಿವರ್ತಕವಾದ್ದರಿಂದ ಜ್ಞಾನತ್ವೇನ ಅನಿವರ್ತಕವಾದ್ದರಿಂದ ಅವಚ್ಛೇದಕಾವಚ್ಛೇದೇನ ಬಾಧ, ಲಕ್ಷಣಕ್ಕೆ ಅಸಂಭವದೋಷ.

'ಅಪರೋಕ್ಷಜ್ಞಾನತಯಾ ನಿವರ್ತಕತ್ವೇನ' ಎಂಬಲ್ಲಿ, ವಂಶೇ ಚಾಕ್ಷುಷ ಉರಗಭ್ರಮಕ್ಕೆ ತ್ವಾಚ ಅಪರೋಕ್ಷಜ್ಞಾನವು ನಿವರ್ತಕವಾಗದಿರುವುದರಿಂದ, 'ತದಿಂದ್ರಿಯಜನ್ಯ ಅಪರೋಕ್ಷತಯಾ ನಿವರ್ತಕತ್ವೇನ' ಎಂದು ವ್ಯಾಖ್ಯಾನಿಸಬೇಕು.

**ಜ್ಞಾನತ್ವ ವ್ಯಾಪ್ಯಧರ್ಮೇಣ ಜ್ಞಾನನಿವರ್ತ್ಯತ್ವಸ್ಯ ಚ ಇಚ್ಛಾದ್ಯನಿವರ್ತ್ಯೇ ಸ್ಮೃತಿತ್ವೇನ ಸ್ಮೃತಿ ನಿವರ್ತ್ಯೇ ಸಂಸ್ಕಾರಾದೌ ಅತಿವ್ಯಾಪ್ತೇಃ ।**

ಜ್ಞಾನತ್ವ ವ್ಯಾಪ್ಯ ಧರ್ಮದಿಂದ ಜ್ಞಾನನಿವರ್ತ್ಯತ್ವವು ಮಿಥ್ಯಾತ್ವವೆಂದರೆ ಇಚ್ಛಾದಿಗಳಿಂದ ಅನಿವರ್ತ್ಯವಾದ, ಸ್ಮೃತಿತ್ವೇನ ಸ್ಮೃತಿ ನಿವರ್ತ್ಯವಾದ ಸಂಸ್ಕಾರದಲ್ಲಿ ಅತಿವ್ಯಾಪ್ತಿ. 'ಆದಿ'ಪದದಿಂದ ಸುಹೃದ್ದರ್ಶನದಿಂದ ನಿವರ್ತ್ಯವಾದ ದುಃಖಾದಿಗಳಲ್ಲಿ ಅತಿವ್ಯಾಪ್ತಿ. ಸ್ಮೃತಿಯಿಂದ ಯೋಗ್ಯ ಉತ್ತರ ಆತ್ಮವಿಶೇಷಣಗುಣತ್ವೇನ ನಿವರ್ತ್ಯ ಹೊರತು ಸ್ಮೃತಿತ್ವೇನಸ್ಮೃತಿಯಿಂದ ನಿವರ್ತ್ಯವಲ್ಲ ಎಂಬ ಶಂಕೆಗೆಗ

ಸಮಾಧಾನವಾಗಿ 'ಇಚ್ಛಾದಿ ಅನಿವರ್ತ್ಯೇ' ಎಂದಿದ್ದಾರೆ. ಯೋಗ್ಯ ಉತ್ತರ ಆತ್ಮವಿಶೇಷಗುಣತ್ವೇನ ಸ್ಮೃತಿಯಿಂದ ಸಂಸ್ಕಾರವು ನಿವರ್ತ್ಯವಾಗುವುದಾದರೆ ಯೋಗ್ಯೋತ್ತರಾತ್ಮವಿಶೇಷಗುಣವಾದ ಇಚ್ಛಾದಿಗಳಿಂದಲೂ ಸಂಸ್ಕಾರವು ನಾಶವಾಗುವ ಪ್ರಸಂಗ. ಇಚ್ಛಾದಿಗಳಿಂದ ಸಂಸ್ಕಾರನಾಶವಾಗುವುದಿಲ್ಲ.

**ಅನುಭವತ್ವವ್ಯಾಪ್ಯಧರ್ಮೇಣ ತನ್ನಿವರ್ತ್ಯತ್ವಸ್ಯ ಚ ಯಥಾರ್ಥಸ್ಮೃತಿ ನಿವರ್ತ್ಯ-ಅಯಥಾರ್ಥ ಸ್ಮೃತಿ ವಿಷಯೇ ಅವ್ಯಾಪ್ತೇಃ ।**

ಅನುಭವತ್ವವ್ಯಾಪ್ಯಧರ್ಮದಿಂದ ಜ್ಞಾನನಿವರ್ತ್ಯತ್ವವೆ ಮಿಥ್ಯಾತ್ವ ಎನ್ನುವುದಾದರೆ ಯಥಾರ್ಥಸ್ಮೃತಿಯಿಂದ ನಿವರ್ತ್ಯವಾದ ಅಯಥಾರ್ಥಸ್ಮೃತಿ ವಿಷಯದಲ್ಲಿ ಅವ್ಯಾಪ್ತಿ. ಪ್ರಮೋತ್ತರದಲ್ಲಿ ಭ್ರಮ ಬಂದಿರುತ್ತದೆ. ಆದಕ್ಕೆ ಆದರ ಸ್ಮೃತಿಪರ್ಯಂತ ಬಾಧ ಬಂದಿರುವುದಿಲ್ಲ. ಮೊದಲಿನ ಪ್ರಮಾದಿಂದ ಬಂದ ಸ್ಮೃತಿಯಿಂದ ಭ್ರಮಜನಿತಸ್ಮೃತಿ ವಿಷಯಕ್ಕೆ ಬಾಧ ಬರಬಹುದು. ಅಲ್ಲಿ ಅವ್ಯಾಪ್ತಿ. ಅನುಮಾನದಲ್ಲಿ ಅಂಶೇ ಬಾಧ.

**ಭ್ರಮೋತ್ತರ ಪ್ರಮಾ ನಿವರ್ತ್ಯತ್ವಸ್ಯ ಚ ತತ್ವಜ್ಞಾನಸಂಸ್ಕಾರ ನಿವರ್ತ್ಯ ಅಜ್ಞಾನಸಂಸ್ಕಾರೇ ಅವ್ಯಾಪ್ತೇಃ ।**

'ಭ್ರಮೋತ್ತರ ಪ್ರಮಾ ನಿವರ್ತ್ಯತ್ವ' ಎಂದರೆ, ಭ್ರಮಪೂರ್ವಪ್ರಮಾನಿವರ್ತ್ಯದಲ್ಲಿ ಅವ್ಯಾಪ್ತಿ ಬಂದೀತು. ಅದರಿಂದ 'ಭ್ರಮ ಸಮಾನಾಧಿಕರಣ ವಿಪರೀತ ಪ್ರಮಾ ನಿವರ್ತ್ಯತ್ವ'ವು ವಿವಕ್ಷಿತವಾಗಿದೆ. ಮತ್ತು ಪ್ರಮಾ ಪದದಿಂದಲೂ ಯಥಾರ್ಥಜ್ಞಾನ ಮಾತ್ರ ವಿವಕ್ಷಿತವಾಗಿದೆ. 'ಯಥಾರ್ಥ'ವೆಂದು ವಿಶೇಷಣವಿಲ್ಲದಿದ್ದರೆ ಧಾರಾವಾಹಿಕ ಭ್ರಮಸ್ಥಳದಲ್ಲಿ ಪೂರ್ವಭ್ರಮವಿಷಯದಲ್ಲಿ ಭ್ರಮೋತ್ತರ ಭ್ರಮರೂಪಜ್ಞಾನ ನಿವರ್ತ್ಯತ್ವವಿಲ್ಲದ್ದರಿಂದ ಅವ್ಯಾಪ್ತಿ. ಅಯಥಾರ್ಥಸ್ಮೃತ್ಯನಂತರ ಬರುವ ಯಥಾರ್ಥಸ್ಮೃತಿಯು ಭ್ರಮೋತ್ತರ ಯಥಾರ್ಥಜ್ಞಾನವಾದ್ದರಿಂದ ತನ್ನಿವರ್ತ್ಯತ್ವವು ಯಥಾರ್ಥ ಸ್ಮೃತಿವಿಷಯದಲ್ಲಿ ಇದೆಯಾದ್ದರಿಂದ ಅವ್ಯಾಪ್ತಿ ಇಲ್ಲ.

ಆದರೆ ಹೀಗೆ ಹೇಳಿದರೂ ತತ್ವಜ್ಞಾನ ಸಂಸ್ಕಾರ ನಿವರ್ತ್ಯವಾದ ಅಜ್ಞಾನ ಸಂಸ್ಕಾರದಲ್ಲಿ ಯಥಾರ್ಥಜ್ಞಾನ ನಿವರ್ತ್ಯತ್ವವಿಲ್ಲದ್ದರಿಂದ ಅವ್ಯಾಪ್ತಿ.

ಅಜ್ಞಾನಸಂಸ್ಕಾರವು ತತ್ವಜ್ಞಾನದಿಂದಲೇ ಏಕೆ ನಿವೃತ್ತವಾಗದು ಎಂದರೆ, ಜ್ಞಾನವು ಅಜ್ಞಾನವನ್ನೂ ಅಜ್ಞಾನ ಕಾರ್ಯವನ್ನೂ ನಿವೃತ್ತಿ ಮಾಡುವುದು ಹೊರತು ಅಜ್ಞಾನ ಸಂಸ್ಕಾರವನ್ನು ನಾಶಮಾಡದು. 'ಸಂಸ್ಕಾರವೂ ಅಜ್ಞಾನಕಾರ್ಯವೆ, ಜ್ಞಾನದಿಂದ ನಾಶವಾಗಲಿ' ಎಂದರೆ ಜ್ಞಾನವು ಅಜ್ಞಾನ ನಿವೃತ್ತಿದ್ವಾರಾ ಅಜ್ಞಾನಸಂಸ್ಕಾರನಿವೃತ್ತಿ ಮಾಡುತ್ತದೆ ಎನ್ನುವಲ್ಲಿ ಪ್ರಮಾಣವಿಲ್ಲದ್ದರಿಂದ ಅದನ್ನು ಒಪ್ಪಲಾಗದು. ಅಜ್ಞಾನದ ಸೂಕ್ಷ್ಮರೂಪವಾದ ಸಂಸ್ಕಾರವು ಅಜ್ಞಾನದ ಕಾರ್ಯವಾಗದು.

**ಸ್ವೋಪಾದಾನಾಜ್ಞಾನ ನಿವರ್ತಕ ಜ್ಞಾನನಿವರ್ತ್ಯತ್ವಸ್ಯ ಚ ಅನಾದ್ಯಧ್ಯಾಸೇ ಅಭಾವಾತ್ । ಲಾಘವೇನ ಅಜ್ಞಾನೋಪಾದಾನಕತ್ವಸ್ಯೈವ ಲಕ್ಷಣತ್ವಾಪಾತಾಚ್ಚ ।**

'ಸ್ವ' ಎಂದರೆ ಅಜ್ಞಾನಕಾರ್ಯವಾದ ಪ್ರಪಂಚ. ತದುಪಾದಾನವಾದ ಅಜ್ಞಾನಕ್ಕೆ ನಿವರ್ತಕವಾದ ಜ್ಞಾನದಿಂದ ಅಜ್ಞಾನಕಾರ್ಯವಾದ ಪ್ರಪಂಚ ನಿವೃತ್ತವಾಗುತ್ತದೆ. ಯದ್ಯಪಿ ಸ್ವಶಬ್ದದಿಂದ ಅಜ್ಞಾನ ಸಂಸ್ಕಾರವಿಟ್ಟುಕೊಂಡರೆ ತದುಪಾದಾನವಾದ ಅಜ್ಞಾನಕ್ಕೆ ನಿವರ್ತಕವಾದ ಜ್ಞಾನದಿಂದ ಅಜ್ಞಾನಸಂಸ್ಕಾರ ನಿವೃತ್ತವಾಗದಿರುವುದರಿಂದ ಅವ್ಯಾಪ್ತಿಪರಿಹಾರವಾಗಿಲ್ಲ. ಆದರೂ ಜ್ಞಾನದಿಂದ ಅಜ್ಞಾನ ಸಂಸ್ಕಾರ ನಾಶವಾಗುತ್ತದೆ ಎಂದು ಅಭ್ಯುಪಗಮವಾದದಿಂದ ಬೇರೆ ದೋಷವನ್ನು ಹೇಳುತ್ತಾರೆ— ಸ್ವಶಬ್ದದಿಂದ ಅನಾದಿ ಅಧ್ಯಾಸವಿಟ್ಟುಕೊಳ್ಳಬೇಕು. ಅದು ಅನಾದಿ ಯಾದ್ದರಿಂದ ಉಪಾದಾನವಿಲ್ಲ. ಆದರಿಂದ ಸ್ವೋಪಾದಾನಾಜ್ಞಾನ ನಿವರ್ತಕ ಜ್ಞಾನನಿವರ್ತ್ಯತ್ವವು ಅನಾದ್ಯಧ್ಯಾಸಕ್ಕೆ ಬರುವುದಿಲ್ಲವೆಂದು ಅವ್ಯಾಪ್ತಿ.

ಇನ್ನೊಂದು ದೋಷ— ಲಾಘವದಿಂದ 'ಅಜ್ಞಾನೋಪಾದಾನಕತ್ವ'ವೇ ಏಕೆ ಮಿಥ್ಯಾತ್ವ ಲಕ್ಷಣವಾಗಬಾರದು? ಎಂದು.

**ತಥಾಚ — ವಿಜ್ಞಾನನಾಶ್ಯತಾ ಮಿಥ್ಯಾರೂಪ್ಯಾದೌ ನಾನುಭೂಯತೇ ।**
**ಕಿಂತ್ವಧಿಷ್ಠಾನವತ್ ಸತ್ಯೇ ತದಜ್ಞಾನೇಽನುಭೂಯತೇ ॥**

ತಥಾಚ ಜ್ಞಾನನಿವರ್ತ್ಯತ್ವವೆಂಬ ಮಿಥ್ಯಾತ್ವಲಕ್ಷಣವು ಮಿಥ್ಯಾರೂಪ್ಯಾದಿಗಳಲ್ಲಿ ಅನುಭೂತ ವಾಗುತ್ತಿಲ್ಲ. ಅದಕ್ಕೆ ವ್ಯತಿರಿಕ್ತವಾಗಿ ಅಧಿಷ್ಠಾನದಂತೆ ಸತ್ಯವೇ ಆದ ಅಧಿಷ್ಠಾನಾಜ್ಞಾನದಲ್ಲಿ ಅನುಭೂತವಾಗುತ್ತಿದೆ.

❖❖❖

## 13. चतुर्थमिथ्यात्वनिरुक्तिभङ्गः

**एतेन स्वात्यन्ताभावाधिकरण एव प्रतीयमानत्वं मिथ्यात्वमिति चतुर्थोऽपि निरस्तः । अत्यन्ताभावस्य तात्त्विकत्वे प्रातिभासिकत्वे व्यावहारिकत्वे च दोषस्योक्तत्वात् । अत्यन्ताभावप्रतियोगित्वं स्वरूपेणेति पक्षे पारमार्थिकत्वाकारणेति च पक्षे दोषस्योक्तत्वाच्च ।**

❖❖❖

## ಚತುರ್ಥಮಿತ್ಯಾಥ್ವ ನಿರುಕ್ತಿಭಂಗಃ

ಏತೇನ ಸ್ವಾತ್ಯಂತಾಭಾವಾಧಿಕರಣ ಏವ ಪ್ರತೀಯಾಮಾನತ್ವಂ ಮಿಥ್ಯಾತ್ವಮಿತಿ ಚತುರ್ಥೋಽಪಿ ನಿರಸ್ತಃ । ಅತ್ಯಂತಾಭಾವಸ್ಯ ತಾತ್ತ್ವಿಕತ್ವೇ ಪ್ರಾತಿಭಾಸಿಕತ್ವೇ ವ್ಯಾವಹಾರಿಕತ್ವೇ

**ಚ ದೋಷಸ್ಯ ಉಕ್ತತ್ವಾತ್। ಅತ್ಯಂತಾಭಾವಪ್ರತಿಯೋಗಿತ್ವಂ ಸ್ವರೂಪೇಣೇತಿ ಪಕ್ಷೇ ಪಾರಮಾರ್ಥಿಕತ್ವಾಕಾರೇಣ ಇತಿ ಚ ಪಕ್ಷೇ ದೋಷಸ್ಯ ಉಕ್ತತ್ವಾಚ್ಚ।**

'ಸ್ವಾತ್ಯಂತಾಭಾವಾಧಿಕರಣದಲ್ಲಿಯೇ ಪ್ರತೀಯಮಾನವಾಗುವುದು ಮಿಥ್ಯಾತ್ವ' ಎಂಬ ನಾಲ್ಕನೆ ನಿರುಕ್ತಿಯೂ ಅಯುಕ್ತ. ಏಕೆಂದರೆ ಇಲ್ಲಿ ಹೇಳಿದ ಅತ್ಯಂತಾಭಾವವನ್ನು ತಾತ್ವಿಕವೆಂದರೂ ಪ್ರಾತಿಭಾಸಿಕವೆಂದರೂ ವ್ಯಾವಹಾರಿಕವೆಂದರೂ ದೋಷ ಉಂಟೆಂದು ಹೇಳಿದ್ದೇವೆ. ಮತ್ತು ಅತ್ಯಂತಾಭಾವ ಪ್ರತಿಯೋಗಿತ್ವವು ಸ್ವರೂಪೇಣ ಎಂಬ ಪಕ್ಷದಲ್ಲಿಯೂ ಪಾರಮಾರ್ಥಿಕತ್ವಾಕಾರೇಣ ಎನ್ನುವ ಪಕ್ಷದಲ್ಲಿಯೂ ದೋಷವನ್ನು ಹೇಳಿದ್ದೇವೆ.

❖❖❖

## 14. पंचममिथ्यात्वनिरुक्तिभङ्गः

पञ्चमेऽपि सत्किं सत्ताजातिमद्विवक्षितं अबाध्यं वा ब्रह्म वा । नाद्यः । त्वन्मते घटादौ जातेस्सत्त्वात् । द्वितीये बाध्यत्वं मिथ्यात्वमिति स्यात् । तच्च निरस्तम् । न तृतीयः । सिद्धसाधनात् । नृशृङ्गादावपि सद्रूपत्वाभावादन्यस्यासत्त्वस्याभावेनात्यन्तासत्त्वापाताच्च । मन्मते अबाध्यत्वादिरूपस्य सत्त्वस्याभिधेयत्वादिवत् स्वाश्रितत्वेन ब्रह्मणि सत्त्वाभावे सद्रूपत्वासिद्धेश्च । तस्मात् ।

अनिर्वाच्येऽप्रसिद्ध्यादिः प्रतीते प्रतिषेध्यता ।
स्वाश्रयेऽत्यन्तविरहः सद्विलक्षणता तथा ।
इति पक्षत्रयेऽत्यन्तासत्त्वं स्यादनिवारितम् ।
धीनाश्यत्वे त्वनित्यत्वमेव स्यान्न मृषात्मता ।
मम त्वत्यन्तासत्त्वमेव मिथ्यात्वमिति नास्मत्प्रतिबन्दी ।।

पञ्चमेऽपीति । सद्विविक्तत्वं मिथ्यात्वमिति पक्षेऽपीत्यर्थः । साधारणदूषणेनापि दूषयति नृशृङ्गादाविति । अन्यस्येति । प्रपञ्चव्यावृत्तस्येति शेषः । ननु त्वन्मतेऽपि सत्त्वमेव सद्रूपत्वं चेत् सत्त्वं सद्रूपं न स्यात् । स्वस्मिन्

स्वस्यावृत्तेरित्यत आह **मन्मत इति** । ननु तव भ्रमविषयीभूतार्थे यदेव मिथ्यात्वं तदेव ममापीत्यत आह **मम त्विति** । तथाङ्गीकारे तवापसिद्धान्तः स्यादिति भावः ॥

॥ इति मिथ्यात्वनिरुक्तिभङ्गः ॥

❖❖❖

## ಪಂಚಮ ಮಿಥ್ಯಾತ್ವ ನಿರುಕ್ತಿಭಂಗಃ

**ಪಂಚಮೇಽಪಿ ಸತ್ ಕಿಂ ಸತ್ತಾಜಾತಿಮದ್ ವಿವಕ್ಷಿತಂ, ಅಬಾಧ್ಯಂ ವಾ, ಬ್ರಹ್ಮ ವಾ ? ನಾದ್ಯಃ । ತ್ವನ್ಮತೇಽಪಿ ಘಟಾದೌ ಜಾತೇಃ ಸತ್ತ್ವಾತ್ । ದ್ವಿತೀಯೇ ಬಾಧ್ಯತ್ವಂ ಮಿಥ್ಯಾತ್ವಂ ಇತಿ ಸ್ಯಾತ್ । ತಚ್ಚ ನಿರಸ್ತಂ । ನ ತೃತೀಯಃ । ಸಿದ್ಧಸಾಧನಾತ್ । ನೃಶೃಂಗಾದಾವಪಿ ಸದ್ರೂಪತ್ವಾಭಾವಾತ್ ಅನ್ಯಸ್ಯ ಅಸತ್ವಸ್ಯ ಅಭಾವೇನ ಅತ್ಯಂತಾಸತ್ತ್ವಾಪಾತಾಚ್ಚ । ಮನ್ಮತೇ ಅಬಾಧ್ಯತ್ವಾದಿರೂಪಸ್ಯ ಸತ್ವಸ್ಯ ಅಭಿಧೇಯತ್ವಾದಿವತ್ ಸ್ವಾಶ್ರಿತತ್ವೇನ ಬ್ರಹ್ಮಣಿ ಸತ್ವಾಭಾವೇ ಸದ್ರೂಪತ್ವಾಸಿದ್ಧೇಶ್ಚ ।**

'ಸದ್‌ವಿವಿಕ್ತತ್ವಂ ಮಿಥ್ಯಾತ್ವಂ' ಎಂಬ ಐದನೇ ಪಕ್ಷದಲ್ಲಿ ಸತ್ ಎಂದರೆ ವಿವಕ್ಷಿತವು ಸತ್ತಾಜಾತಿಮತ್ತೆ? ಅಬಾಧ್ಯವೇ? ಬ್ರಹ್ಮವೆ? ಮೊದಲನೆಯ ಪಕ್ಷದಲ್ಲಿ ನಿನ್ನ ಮತದಲ್ಲಿಯೂ ಘಟಾದಿಪ್ರಪಂಚದಲ್ಲಿ ಸತ್ತಾಜಾತಿಮದ್ರೂಪತ್ವದ ಅತ್ಯಂತಾಭಾವವಿಲ್ಲ. ಸತ್ತಾಜಾತಿಯೆ ಇದೆ. ಲಕ್ಷಣಕ್ಕೆ ಅಸಂಭವದೋಷ.

ಎರಡನೆ ಪಕ್ಷದಲ್ಲಿ ಸತ್ ಎಂದರೆ ಅಬಾಧ್ಯವಾದ್ದರಿಂದ ಸದ್ವಿವಿಕ್ತತ್ವವು ಬಾಧ್ಯತ್ವ ರೂಪವಾಯಿತು. ಬಾಧ್ಯತ್ವವು ಮಿಥ್ಯಾತ್ವವೆಂಬುದನ್ನು ಹಿಂದೆ ನಿರಾಸಮಾಡಿದ್ದೇವೆ.

ಮೂರನೆ ಪಕ್ಷದಲ್ಲಿ ಸತ್ ಎಂದರೆ ಬ್ರಹ್ಮ. ಬ್ರಹ್ಮವೈಲಕ್ಷಣ್ಯರೂಪ ಸದ್ ವಿವಿಕ್ತತ್ವವನ್ನು ಪ್ರಪಂಚದಲ್ಲಿ ನಾವು ಅಂಗೀಕರಿಸಿರುವುದರಿಂದ ಸಿದ್ಧಸಾಧನತ್ವವು ದೋಷ.

ಮೂರುಪಕ್ಷಗಳಿಗೆ ಸಾಧಾರಣ ದೋಷಗಳು ಇವು—ನರವಿಷಾಣಾದಿಗಳಲ್ಲಿಯೂ ಸದ್ರೂಪತ್ವಾಭಾವಕ್ಕಿಂತ ಬೇರೆಯಾದ ಪ್ರಪಂಚವ್ಯಾವೃತ್ತವಾದ ಅಸತ್ವವಿಲ್ಲ. ಸದ್ರೂಪತ್ವಾಭಾವವೇ ಅಸತ್ವ ಆಗಿರುವುದರಿಂದ ಅದು ಪ್ರಪಂಚದಲ್ಲಿರುವುದಾದರೆ ಪ್ರಪಂಚವು ನರವಿಷಾಣಾದಿಗಳಂತೆಯೇ ಅತ್ಯಂತ ಸತ್ತಾಗಬೇಕಾದೀತು. ಆದರಿಂದ ಅಪಸಿದ್ಧಾಂತದೋಷ. ಬ್ರಹ್ಮನಲ್ಲಿ ಸತ್ವಾಭಾವವಿರುವುದ ರಿಂದ ಸದ್ರೂಪತ್ವಾಭಾವರೂಪ ಸದ್‌ವಿವಿಕ್ತತ್ವವು ಅತಿವ್ಯಾಪ್ತ. ಏಕೆಂದರೆ ನನ್ನ ಮತದಲ್ಲಿ ಸತ್ವವು ಅಬಾಧ್ಯತ್ವಾದಿರೂಪವಾದುದು ಅಭಿಧೇಯತ್ವಾದಿಗಳಂತೆ ಸ್ವಾಶ್ರಿತವಾಗಿಯೇ ಪ್ರಮಿತವಾದ್ದರಿಂದ ಸತ್ವದಲ್ಲಿ ಸತ್ವವಿದೆ. ಸತ್ವಾಭಾವವಿಲ್ಲ. ಆದರಿಂದ ಅದರಲ್ಲಿ ಸದ್ರೂಪತ್ವವೇ ಇದೆ. ಬ್ರಹ್ಮನಲ್ಲಿ ಸತ್ವಾಭಾವವಿರುವುದರಿಂದ ಸದ್ರೂಪತ್ವ ಸಿದ್ಧವಾಗದು.

ಸಿದ್ಧಿಕಾರನು ಇಲ್ಲಿ ಸತ್ವವೆಂದರೆ 'ಪ್ರಮಾಣಸಿದ್ಧತ್ವ' ಎನ್ನುತ್ತಾನೆ. ಸತ್ತಾಭಾವರೂಪ ಲಕ್ಷಣಕ್ಕೆ ನಿರ್ಧರ್ಮಕ ಬ್ರಹ್ಮ ಅಸತ್ತುಗಳಲ್ಲಿ ಅತಿವ್ಯಾಪ್ತಿ ಎಂದರೆ ಪರಿಹಾರಕ್ಕೆ 'ಸತ್ವೇನ ಪ್ರತೀಯಮಾನತ್ವ'ವೆಂದು ವಿಶೇಷಣ ನೀಡುತ್ತಾನೆ. ಆದರೆ 'ತತ್ ಸತ್ಯಂ' ಎಂದು ಬ್ರಹ್ಮವೂ, 'ತದ್ಧೈಕ ಆಹುರಸದೇವೇದಮಗ್ರ ಆಸೀತ್' ಎಂದು ಅಸತ್ತೂ ಸತ್ವೇನಪ್ರತೀಯಮಾನವೇ ಆಗಿದೆ. ಪ್ರಮಾಣಸಿದ್ಧತ್ವರಹಿತವೂ ಆಗಿದೆ. ಅದರಿಂದ ಅತಿವ್ಯಾಪ್ತಿ ಪರಿಹಾರವಾಗಿಲ್ಲ. 'ಸತ್ವಪ್ರಕಾರಕ ಪ್ರಮಿತಿ ವಿಷಯತ್ವ'ವು ವಿಶೇಷಣವೆಂದರೆ ಶುಕ್ತಿರೂಪ್ಯದಲ್ಲಿ ಈ ವಿಶೇಷಣ ಬಾರದಿರುವುದರಿಂದ ಲಕ್ಷಣಕ್ಕೆ ಅವ್ಯಾಪ್ತಿದೋಷ ಅಪರಿಹಾರ್ಯ. ಈ ವಿಶೇಷಣ ವಿಶೇಷ್ಯಗಳು ಪರಸ್ಪರ ವಿರುದ್ಧವಾದ್ದರಿಂದ ಸ್ವವ್ಯಾಹತವೂ ಆಗಿದೆ ಈ ಲಕ್ಷಣ.

**ತಸ್ಮಾತ್, ಅನಿರ್ವಾಚ್ಯೇಽಪ್ರಸಿದ್ಧ್ಯಾದಿಃ, ಪ್ರತೀತೇ ಪ್ರತಿಷೇಧ್ಯತಾ,**
**ಸ್ವಾಶ್ರಯೇಽತ್ಯಂತ ವಿರಹಃ, ಸದ್ವಿಲಕ್ಷಣತಾ ತಥಾ ।**
**ಇತಿ ಪಕ್ಷತ್ರಯೇಽತ್ಯಂತಾಸತ್ವಂ ಸ್ಯಾದ್ ಅನಿವಾರಿತಂ ।**
**ಧೀ ನಾಶ್ಯತ್ವೇ ತ್ವನಿತ್ಯತ್ವಮೇವ ಸ್ಯಾನ್ನ ಮೃಷಾತ್ಮತಾ ॥**
**ಮಮ ತ್ವತ್ಯಂತಾಸತ್ವಮೇವ ಮಿಥ್ಯಾತ್ವಮಿತಿ ನಾಸ್ಮತ್ಪ್ರತಿಬಂದೀ ॥**

ಅದರಿಂದ, ಅನಿರ್ವಾಚ್ಯತ್ವವೆ ಮಿಥ್ಯಾತ್ವ ಎನ್ನುವ ಪ್ರಥಮ ಮಿಥ್ಯಾತ್ವನಿರ್ವಚನ ಪಕ್ಷದಲ್ಲಿ ಅಪ್ರಸಿದ್ಧ್ಯಾದಿದೋಷ. ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧಪ್ರತಿಯೋಗಿತ್ವರೂಪ ದ್ವಿತೀಯ ನಿರ್ವಚನ, ಸ್ವಾತ್ಯಂತಾಭಾವಾಧಿಕರಣ ಏವ ಪ್ರತೀಯಮಾನತ್ವರೂಪ ಚತುರ್ಥನಿರ್ವಚನ ಮತ್ತು ಸದ್ವಿವಿಕ್ತತ್ವರೂಪ ಪಂಚಮ ನಿರ್ವಚನ– ಈ ಮೂರು ಪಕ್ಷಗಳಲ್ಲಿಯೂ ಅತ್ಯಂತಾಸತ್ವವು ಅಪರಿಹಾರ್ಯವಾಗುವುದು. ಜ್ಞಾನತ್ವೇನ ಜ್ಞಾನನಿವರ್ತ್ಯತ್ವರೂಪ ತೃತೀಯ ನಿರ್ವಚನ ಪಕ್ಷದಲ್ಲಿ ಪ್ರಪಂಚಕ್ಕೆ ಅನಿತ್ಯತ್ವವೇ ಪ್ರಾಪ್ತವಾಗುವುದು ಹೊರತು ಮಿಥ್ಯಾತ್ವ ಪ್ರಾಪ್ತವಾಗುವುದಿಲ್ಲ.

'ನಿಮ್ಮ ಮತದಲ್ಲಿಯೂ ಶುಕ್ತಿರಜತವು ಮಿಥ್ಯೆಯೆ ಆಗಿರುವುದರಿಂದ ನೀನೂ ಮಿಥ್ಯಾತ್ವವನ್ನು ನಿರ್ವಚನ ಮಾಡಲೇಬೇಕು' ಎಂದರೆ ನಾನು ಅತ್ಯಂತಾಸತ್ವವೇ ಮಿಥ್ಯಾತ್ವವೆನ್ನುತ್ತೇನೆ. ನನ್ನ ಈ ಮಿಥ್ಯಾತ್ವವನ್ನು ನೀನು ಪ್ರಪಂಚದಲ್ಲಿ ಅಂಗೀಕರಿಸಲಾರೆ. ನೀನು ಅಸದ್‌ವೈಲಕ್ಷಣ್ಯವನ್ನು ಅಂಗೀಕರಿಸುವುದರಿಂದ ಅತ್ಯಂತಾಸತ್ವವನ್ನು ಹೇಳಿದರೆ ಅಪಸಿದ್ಧಾಂತದೋಷ ಬರುತ್ತದೆ. ಅದರಿಂದ ನಮಗೆ ಪ್ರತಿಬಂದಿ ಇಲ್ಲ.

❖❖❖

## 15. सामान्यतो मिथ्यात्वभङ्गः

**अस्तु वा मिथ्यात्वं यत्किंचित् । तथापि मिथ्यात्वमबाध्यं बाध्यं**

**वा । आद्ये अद्वैतहानिः । न हि प्रपञ्चोपाधिकं भ्रमकालानिश्चितं तन्मिथ्यात्वं निरुपाधिकभ्रमकालनिश्चिताधिष्ठानब्रह्ममात्रम् । तस्य मां प्रत्यपि सिद्धत्वात् । दृश्यत्वादेर्मिथ्यात्व एव व्यभिचारश्च । मिथ्यात्वस्य चादृश्यत्वेऽनुमानवैयर्थ्यम् । तस्य साध्यज्ञाप्त्यर्थत्वात् ।**

**अन्त्ये सिद्धसाधनम् अद्वैतश्रुतेरतत्त्वावेदकत्वं च स्यात् । जगच्च सत्यं स्यात् । आत्मवत् । नचात्मत्वमुपाधिः । सत्यत्वं विना तद्विरुद्धस्य मिथ्यात्वस्य मिथ्यात्वे व्याघातवदज्ञातृत्वादि-रूपानात्मत्वस्यासत्यत्वं विना व्याघाताभावेनोपाधेरप्रयोजकत्वात् ।**

अबाध्यमिति पक्षेऽपि तत् ब्रह्मणोऽतिरिक्तं न वेति द्वेधा विकल्प्याद्ये दोषमाह **आद्य इति** । द्वितीय आह **नहीति** । प्रपञ्चघटितत्वभ्रमकालानिश्चितत्वाभ्यां विशिष्टस्य तद्रहितब्रह्माभिन्नत्वं बाधितमित्यर्थः । यद्यपि प्रपञ्चसत्यत्ववादिनो मते वेदैकसमधिगम्यस्य ब्रह्मणः भ्रमकालनिश्चिताधिष्ठानत्वमनुपपन्नम् । तथापि पराभ्युपगमानुसारेणैवमुक्तमिति ध्येयम् । किञ्च तथाभूतब्रह्मणो मिथ्यात्वरूपत्वे जगन्मिथ्येति परप्रतिज्ञाया जगद् ब्रह्मसंबन्धीत्यर्थः स्यात् । एवञ्च सिद्धसाधनमित्याह **तस्येति** । किञ्चाबाध्यत्वेन स्वीकृतं मिथ्यात्वं दृश्यं न वेति विकल्प्याद्ये दोषमाह **दृश्यत्वादेरिति** । द्वितीय आह **मिथ्यात्वस्य चेति** । **अनुमानवैयर्थ्यम्** दृश्यत्वाद्यनुमानवैयर्थ्यम् । **अन्त्य इति** । बाध्यमिथ्यात्वस्य सत्ये जगत्यपि सत्त्वादिति भावः । **अद्वैतश्रुतेरिति** । यद्यप्यद्वैतश्रुतेरखण्डब्रह्मचैतन्यमात्रपरत्वेन नातत्त्वावेदकत्वम् । तथापि जगन्मिथ्यात्वमङ्गीकुर्वता तत्सिद्ध्यर्थं तत्रापि तच्छ्रुतेस्तात्पर्यं वाच्यम् । अन्यथा तदसिद्धिप्रसङ्गात् । तात्पर्यलिङ्गसत्त्वे तत्र तात्पर्यस्य दुर्वारत्वाच्च । मानान्तराविरोधमात्रेण तत्सिद्ध्यङ्गीकारे त्वदभिमत-ब्रह्मणोऽपि तन्मात्रेण सिध्युपपत्तौ वेदान्तानां ब्रह्मण्यपि तात्पर्याभावापत्तेरिति भावः । किञ्च मिथ्याभूतमिथ्यात्वस्य साध्यत्वे तथा साधयतः परस्य नेष्टसिद्धिः । प्रत्युत ममैवेष्टसिद्धिरित्याह **जगच्चेति** । जगत्सत्यं भवितुमर्हति मिथ्याभूतमिथ्यात्वा (कत्वा)दात्मवदित्यनुमानादित्यर्थः । **सत्यत्वं विनेति** । उपाधेः साध्यव्यापकताग्रहे

सत्प्रतिपक्षाद्युन्नायकत्वं वाच्यम् । साध्यव्यापकताग्रहश्च न संभवति । अनुकूलतर्काभावात् । हेतौ च साध्यव्याप्यताग्रहे तत्सत्त्वेन साध्यव्याप्यहेत्व-व्यापकत्वेनोपाधेः साध्याव्यापकत्वादित्यर्थः ।

❖❖❖

## ಸಾಮಾನ್ಯತಃ ಮಿಥ್ಯಾತ್ವಭಂಗಃ

### ಮಿಥ್ಯಾತ್ವವು ಬ್ರಹ್ಮಸ್ವರೂಪವಲ್ಲ

**ಅಸ್ತು ವಾ ಮಿಥ್ಯಾತ್ವಂ ಯತ್ಕಿಂಚಿತ್ । ತಥಾಪಿ ಮಿಥ್ಯಾತ್ವಂ ಅಬಾಧ್ಯಂ? ಬಾಧ್ಯಂ ವಾ? ಆದ್ಯೇ ಅದ್ವೈತಹಾನಿಃ । ನಹಿ ಪ್ರಪಂಚೋಪಾಧಿಕಂ ಭ್ರಮಕಾಲಾನಿಶ್ಚಿತಂ ತತ್ ಮಿಥ್ಯಾತ್ವಂ ನಿರುಪಾಧಿಕ-ಭ್ರಮಕಾಲನಿಶ್ಚಿತ-ಅಧಿಷ್ಠಾನಬ್ರಹ್ಮಮಾತ್ರಂ । ತಸ್ಯ ಮಾಂ ಪ್ರತ್ಯಪಿ ಸಿದ್ಧತ್ವಾತ್ । ದೃಶ್ಯತ್ವಾದೇಃ ಮಿಥ್ಯಾತ್ವ ಏವ ವ್ಯಭಿಚಾರಶ್ಚ । ಮಿಥ್ಯಾತ್ವಸ್ಯ ಚ ಅದೃಶ್ಯತ್ವೇ ಅನುಮಾನ ವೈಯರ್ಥ್ಯಂ । ತಸ್ಯ ಸಾಧ್ಯಜ್ಞಪ್ತ್ಯರ್ಥತ್ವಾತ್ ।**

ಮಿಥ್ಯಾತ್ವವು ಹಿಂದೆ ಹೇಳಿದ ಐದು ವಿಧಗಳಲ್ಲಿ ಯಾವದೇ ಇರಲಿ, ಆದರೂ ಸಾಮಾನ್ಯತಃ ಮಿಥ್ಯಾತ್ವವು ಅಬಾಧ್ಯವೆ, ಬಾಧ್ಯವೆ? ಅಬಾಧ್ಯ ಎನ್ನುವ ಮೊದಲನೆ ಪಕ್ಷದಲ್ಲಿ ಅದ್ವೈತಹಾನಿ. ಬ್ರಹ್ಮ ಒಂದು ಅಬಾಧ್ಯ, ಮಿಥ್ಯಾತ್ವವು ಇನ್ನೊಂದು ಅಬಾಧ್ಯ ಎಂದು ದ್ವೈತವೆ ಪ್ರಾಪ್ತವಾಗುತ್ತದೆ. ಮಿಥ್ಯಾತ್ವವು ಬ್ರಹ್ಮಸ್ವರೂಪವೆ, ಆದರಿಂದ ಅದ್ವೈತಕ್ಕೆ ಹಾನಿ ಇಲ್ಲ ಎಂದರೆ, ಮಿಥ್ಯಾತ್ವವು ಪ್ರಪಂಚೋಪಾಧಿಕವಾಗಿದೆ, ಅಂದರೆ, ಪ್ರತಿಪನ್ನೋಪಾಧಿ ಎಂದು ಮುಂತಾಗಿ ಪ್ರಪಂಚದ ಅನೇಕ ಪದಾರ್ಥಗಳಿಂದ ಘಟಿತವಾಗಿದೆ. ರಜತಭ್ರಮಕಾಲದಲ್ಲಿ ರಜತದ ಮಿಥ್ಯಾತ್ವ ನಿಶ್ಚಿತವಾಗಿರುವುದಿಲ್ಲ. ನಿಶ್ಚಿತವಾಗಿದ್ದರೆ ರಜತದಲ್ಲಿ ಪ್ರವೃತ್ತಿ ಕೂಡಲಾರದು. ಆದರೆ ಬ್ರಹ್ಮವು ಅಖಂಡ, ಪ್ರಪಂಚೋಪಾಧಿಕ ವಲ್ಲ, ಪ್ರಪಂಚಭ್ರಮಕಾಲದಲ್ಲಿ 'ಇದಂತ್ವೇನ' ಅಧಿಷ್ಠಾನವಾದ ಬ್ರಹ್ಮವು ನಿಶ್ಚಿತವಾಗಿರುತ್ತದೆ ಎಂದು ಅದ್ವೈತಿ ಒಪ್ಪಿದ್ದಾನೆ. ಹೀಗೆ ವಿರುದ್ಧಧರ್ಮಗಳಿರುವುದರಿಂದ ಮಿಥ್ಯಾತ್ವವು ಬ್ರಹ್ಮಸ್ವರೂಪ ವೆನಿಸಲಾರದು. ಮಿಥ್ಯಾತ್ವ ಮತ್ತು ಬ್ರಹ್ಮಗಳಿಗೆ ಅಭೇದವು ಬಾಧಿತ.

ಯದ್ಯಪಿ ಪ್ರಪಂಚ ಸತ್ಯವೆನ್ನುವ ಸಿದ್ಧಾಂತದಲ್ಲಿ ಪ್ರಪಂಚಭ್ರಮಕಾಲದಲ್ಲಿ ಅಧಿಷ್ಠಾನ ಬ್ರಹ್ಮವನ್ನು ಅಧಿಷ್ಠಾನವೆಂದು ನಿಶ್ಚಿತವೆನ್ನಲಾಗದು. ಬ್ರಹ್ಮವು ವೇದೈಕವೇದ್ಯ. ಆದರೆ ಅದ್ವೈತಮತಾನುಸಾರವಾಗಿ ಅದ್ವೈತಿಗೆ ನಾವು ಹೀಗೆ ಹೇಳುತ್ತಿದ್ದೇವೆ.

ಮಿಥ್ಯಾತ್ವವನ್ನು ಬ್ರಹ್ಮಸ್ವರೂಪವೆಂದರೆ ಪ್ರಪಂಚವನ್ನು 'ಮಿಥ್ಯಾ' ಎನ್ನುವಾಗ 'ಮಿಥ್ಯಾತ್ವ ರೂಪನಾದ ಬ್ರಹ್ಮನಿಂದ ಯುಕ್ತ' ಎಂದು ಹೇಳಿದಂತಾಗುತ್ತದೆ. ಅದು ನನಗೂ ಸಿದ್ಧವೆ. ಪ್ರಪಂಚವು ಬ್ರಹ್ಮಯುಕ್ತವೆಂದು ನಾನೂ ಒಪ್ಪಿದ್ದೇನೆ. ಆದರಿಂದ ಪ್ರಪಂಚವನ್ನು ಮಿಥ್ಯಾ ಎಂದು ಸಾಧನೆ

ಮಾಡಿದರೆ ಸಿದ್ಧಸಾಧನ. ಮಿಥ್ಯಾತ್ವಸಾಧನೆಗೆ ಹೇಳಿದ ದೃಶ್ಯತ್ವಾದಿ ಹೇತುಗಳಿಗೆ ಬ್ರಹ್ಮಸ್ವರೂಪವಾದ ಸತ್ಯವಾದ ಮಿಥ್ಯಾತ್ವದಲ್ಲಿಯೆ ವ್ಯಭಿಚಾರವೂ ಬರುತ್ತದೆ.

ಮಿಥ್ಯಾತ್ವದಲ್ಲಿ ದೃಶ್ಯತ್ವವಿಲ್ಲ. ಆದರಿಂದ ವ್ಯಭಿಚಾರವಿಲ್ಲ ಎನ್ನಕೂಡದು. ಮಿಥ್ಯಾತ್ವದಲ್ಲಿ ದೃಶ್ಯತ್ವವಿಲ್ಲ, ಜ್ಞಾನವಿಷಯತ್ವವೇ ಇಲ್ಲ ಎಂದರೆ ಮಿಥ್ಯಾತ್ವವಿಷಯದಲ್ಲಿ ಜ್ಞಾನ ಬರುವುದಕ್ಕಾಗಿಯೇ ಹೇಳುವ ದೃಶ್ಯತ್ವಹೇತು ವ್ಯರ್ಥವಾಗುವುದು. ದೃಶ್ಯತ್ವಾನುಮಾನವು ಹೊರಟಿರುವುದೇ ಮಿಥ್ಯಾತ್ವದ ಜ್ಞಾನಕ್ಕಾಗಿ. ಜ್ಞಾನಬರುವುದೇ ಇಲ್ಲವೆಂದರೆ ಅನುಮಾನ ವ್ಯರ್ಥವೇ ಆಗುವುದು.

## ಮಿಥ್ಯಾತ್ವವು ಮಿಥ್ಯಾ ಅಲ್ಲ

**ಅಂತ್ಯೇ ಸಿದ್ಧಸಾಧನಂ । ಅದ್ವೈತಶ್ರುತೇಃ ಅತತ್ತ್ವಾವೇದಕತ್ವಂ ಚ ಸ್ಯಾತ್ । ಜಗಚ್ಚ ಸತ್ಯಂ ಸ್ಯಾತ್ । ಆತ್ಮವತ್ । ನಚ ಆತ್ಮತ್ವಂ ಉಪಾಧಿಃ । ಸತ್ಯತ್ವಂ ವಿನಾ ತದ್‌ವಿರುದ್ಧಸ್ಯ ಮಿಥ್ಯಾತ್ವಸ್ಯ ಮಿಥ್ಯಾತ್ವೇ ವ್ಯಾಘಾತವತ್ ಅಜ್ಞಾತ್ಯತ್ವಾದಿರೂಪ ಅನಾತ್ಮತ್ವಸ್ಯ ಅಸತ್ಯತ್ವಂ ವಿನಾ ವ್ಯಾಘಾತಾಭಾವೇನ ಉಪಾಧೇಃ ಅಪ್ರಯೋಜಕತ್ವಾತ್ ।**

ಪ್ರಪಂಚಮಿಥ್ಯಾತ್ವವು ಬ್ರಹ್ಮಾತಿರಿಕ್ತವೇ ಆಗಿದ್ದು ಬಾಧ್ಯವೇ ಆಗಿದೆ ಎನ್ನುವ ಎರಡನೆ ಪಕ್ಷದಲ್ಲಿ ಸಿದ್ಧಸಾಧನದೋಷ. 'ಮಿಥ್ಯಾತ್ವವು ಮಿಥ್ಯಾ' ಎನ್ನುವುದು ನಮಗೆ ಸಿದ್ಧವೇ ಆಗಿದೆ. ಈ ಪಕ್ಷದಲ್ಲಿ ಪ್ರಪಂಚ ಮಿಥ್ಯಾತ್ವವನ್ನು ಹೇಳುವ ಅದ್ವೈತ ಶ್ರುತಿಯು ಅತತ್ವವಾದ ಮಿಥ್ಯಾತ್ವವನ್ನು ತಿಳಿಸುವುದರಿಂದ ಅತತ್ತ್ವಾವೇದಕವೆನಿಸೀತು.

ಯದ್ಯಪಿ ಅದ್ವೈತ ಶ್ರುತಿಯು ಅಖಂಡ ಬ್ರಹ್ಮಚೈತನ್ಯ ಮಾತ್ರವನ್ನು ಹೇಳುವುದರಿಂದ ಅತತ್ತ್ವಾವೇದಕವೆನಿಸಲಾರದು. ಆದರೆ ಜಗನ್ಮಿಥ್ಯಾತ್ವವನ್ನು ಒಪ್ಪುವ ಅದ್ವೈತಿಯು ಅದರ ಸಿದ್ಧಿಗಾಗಿ ಶ್ರುತಿಗೆ ಅದರಲ್ಲಿ ಅವಾಂತರ ತಾತ್ಪರ್ಯವನ್ನು ಒಪ್ಪಲೇಬೇಕು. ಮಿಥ್ಯಾತ್ವ ತಾತ್ಪರ್ಯ ಲಿಂಗಗಳಿರುವುದರಿಂದ ಮಿಥ್ಯಾತ್ವ ತಾತ್ಪರ್ಯವನ್ನು ಒಪ್ಪದಿರುವುದೂ ಶಕ್ಯವಿಲ್ಲ. ಬೇರೆ ಪ್ರಮಾಣ ವಿರೋಧವಿಲ್ಲದಿದ್ದ ಮಾತ್ರಕ್ಕೇ ಮಿಥ್ಯಾತ್ವಸಿದ್ಧಿಯಾಗುವುದಿಲ್ಲ. ಅದು ಸಿದ್ಧವಾಗುವುದಾದರೆ ಬ್ರಹ್ಮವೂ ಹಾಗೇ ಸಿದ್ಧವಾಗಬಹುದಾದ್ದರಿಂದ ವೇದಾಂತ ವಾಕ್ಯಗಳಿಗೆ ಬ್ರಹ್ಮನಲ್ಲಿ ತಾತ್ಪರ್ಯ ಅನಾವಶ್ಯಕವಾದ್ದರಿಂದ ಇಲ್ಲವೆಂದಾದೀತು. ಹೀಗಾಗಿ ಮಿಥ್ಯಾಭೂತ ಮಿಥ್ಯಾತ್ವದಲ್ಲಿ ಅದ್ವೈತಶ್ರುತಿಗೆ ತಾತ್ಪರ್ಯವಿದೆ ಎಂದು ಒಪ್ಪಿದಾಗ ಅದಕ್ಕೆ ಅತತ್ತ್ವಾವೇದಕತ್ವಾಪತ್ತಿ ಅಪರಿಹಾರ್ಯ.

ಜಗತ್ತೂ ಸತ್ಯವಾದೀತು ಆತ್ಮದಂತೆ. ಪ್ರಪಂಚಮಿಥ್ಯಾತ್ವವು ಮಿಥ್ಯಾ ಎಂದರೆ ಪ್ರಪಂಚ ಸತ್ಯತ್ವವು ಸತ್ಯವಾಗಲೇಬೇಕು. ಇದು ನನಗೇ ಇಷ್ಟ. ಅದ್ವೈತಿಗೆ ಅನಿಷ್ಟ.

'ಪ್ರಪಂಚದಲ್ಲಿ ಸತ್ಯತ್ವವು ಸತ್ಯ, ಏಕೆಂದರೆ ಮಿಥ್ಯಾತ್ವವು ಮಿಥ್ಯಾ' ಎಂಬ ನಿಮ್ಮ ಅನುಮಾನಕ್ಕೆ ಆತ್ಮತ್ವವು ಉಪಾಧಿ ಎನ್ನುತ್ತೇನೆ. ಸಾಧ್ಯವಾದ ಸತ್ಯತ್ವಕ್ಕೆ ವ್ಯಾಪಕವಾದ ಆತ್ಮತ್ವವು ಸಾಧನಉಳ್ಳ ಪ್ರಪಂಚದಲ್ಲಿಲ್ಲ, ಸಾಧನಾವ್ಯಾಪಕವಾಗಿದೆ. ವ್ಯಾಪಕವಾದ ಆತ್ಮತ್ವವಿಲ್ಲದ್ದರಿಂದ ವ್ಯಾಪ್ಯವಾದ ಸತ್ಯತ್ವವು ಪ್ರಪಂಚದಲ್ಲಿಲ್ಲ ಎನ್ನುತ್ತೇನೆ' ಎಂದರೆ, ಅದು ಸರಿಯಲ್ಲ.

ಆತ್ಮತ್ವದ ವ್ಯಾಪ್ತಿ ಸತ್ಯತ್ವದಲ್ಲಿಲ್ಲ. ಸತ್ಯತ್ವಕ್ಕೆ ಆತ್ಮತ್ವವು ಅಪ್ರಯೋಜಕ. ಆತ್ಮತ್ವವಿಲ್ಲದಿದ್ದರೆ ಸತ್ಯತ್ವವಿರಲಾರದು ಎನ್ನುವಂತಿಲ್ಲ. ಆತ್ಮತ್ವವಿಲ್ಲದ ಘಟಾದಿಗಳಲ್ಲಿ ಸತ್ಯತ್ವವಿದೆ. ಆದರೆ ಸತ್ಯತ್ವವು ಮಿಥ್ಯಾತ್ವ ಮಿಥ್ಯಾತ್ವಕ್ಕೆ ಪ್ರಯೋಜಕವಾಗಿದೆ. ಸತ್ಯತ್ವವಿಲ್ಲದೆ, ಅದಕ್ಕೆ ವಿರುದ್ಧವಾದ ಮಿಥ್ಯಾತ್ವಕ್ಕೆ ಮಿಥ್ಯಾತ್ವವೆಂದರೆ ವ್ಯಾಘಾತ ಬರುತ್ತದೆ. ಹಾಗೇ 'ಆತ್ಮತ್ವವಿಲ್ಲದೆ, ಅಜ್ಞಾತ್ವತ್ವಾದಿರೂಪ ಅನಾತ್ಮತ್ವವಿದ್ದರೆ, ಅಸತ್ಯತ್ವವಿಲ್ಲ' ಎನ್ನುವಾಗ ವ್ಯಾಘಾತವೇನೂ ಬರುವುದಿಲ್ಲ. ಆದರಿಂದ ಆತ್ಮತ್ವರೂಪ ಉಪಾಧಿಯು ಸತ್ಯತ್ವಕ್ಕೆ ಪ್ರಯೋಜಕವಲ್ಲ. ಮತ್ತು ಹೇತುವಿಗೆ ಸಾಧ್ಯವ್ಯಾಪ್ಯತ್ವಗ್ರಹಕ್ಕೆ ಅನುಕೂಲತರ್ಕವಿರುವುದರಿಂದ ಹೇತು ಸಾಧ್ಯವ್ಯಾಪ್ಯವಾಗಿದೆ. ಅದಕ್ಕೆ ಉಪಾಧಿ ಅವ್ಯಾಪಕವಾದ್ದರಿಂದ ಸಾಧ್ಯಕ್ಕೆ ಅವ್ಯಾಪಕವೇ ಆಗಿದೆ. ಅನುಕೂಲ ತರ್ಕವಿಲ್ಲದ್ದರಿಂದಲೂ ಉಪಾಧಿ ಸಾಧ್ಯವ್ಯಾಪಕವಲ್ಲ. ಆದರಿಂದ ಪ್ರತಿಪಕ್ಷೋನ್ನಾಯಕವಾಗುವುದಿಲ್ಲ, ಅಪ್ರಯೋಜಕ.

❖❖❖

**नच मिथ्यात्वं न ब्रह्ममात्रं किन्तु द्वितीयाभावोपलक्षितं ब्रह्मेति वाच्यम् । उपलक्षणे द्वितीयाभाव एव बाध्याबाध्यविकल्पात् । द्वितीयाभावाधिकरणतयाऽविद्याधिष्ठानतया तत्साक्षितया च भासमान-चिदन्यस्योपलक्ष्यस्याभावेन द्वितीयाभावस्योपलक्षणत्वायोगाच्च ।**

ननु मिथ्यात्वं ब्रह्मानतिरिक्तमेव । नच सोपाधिकस्य निरुपाधिकब्रह्माभेदायोगः सिद्धसाधनं चेति वाच्यम् । द्वितीयाभावोपलक्षित ब्रह्ममात्रत्वाभ्युपगमादित्याशङ्क्य निराकरोति **नचेति । बाध्याबाध्यविकल्पादिति ।** उपलक्षणीभूतद्वितीयाभावस्य बाध्यत्वे जगन्मिथ्येत्युक्ते बाध्यद्वितीयाभावोपलक्षितब्रह्मसंबन्धीत्यर्थः स्यात् । तथाच सिद्धसाधनम् । अबाध्यत्वेऽपि ब्रह्मानतिरिक्तत्वे उपलक्षणत्वायोगः । अतिरिक्तत्वे चाद्वैतहानिरिति भावः । अत्र द्वितीयाभावस्योपलक्षणत्वं न मिथ्यात्वशरीरा-नन्तर्भूतत्वम् । तथा सति तस्य शुद्धब्रह्मरूपत्वेनोक्तसिद्धसाधनतादवस्थ्यात् । एवं चोपलक्षणत्वमुपलक्ष्यगतान्यधर्मोपस्थापकत्वमेव द्वितीयाभावस्य वाच्यं काकादिवत् । तच्च न संभवति स्वाधिकरणान्योपलक्ष्यसत्त्व एव तथात्वादित्याह **द्वितीयाभावाधिकरणतयेति ।** यद्वा द्वितीयाभावरूपोपलक्षणोपस्थाप्यविशेषस्य भासमानचिदन्यस्याभावात् न द्वितीयाभावस्योपलक्षणत्वोक्तिर्युक्तेत्याह **द्वितीया-भावाधिकरणतयेति ।**

**ನ ಚ 'ಮಿಥ್ಯಾತ್ವಂ ನ ಬ್ರಹ್ಮಮಾತ್ರಂ। ಕಿಂತು ದ್ವಿತೀಯಾಭಾವೋಪಲಕ್ಷಿತಂ ಬ್ರಹ್ಮ' ಇತಿ ವಾಚ್ಯಂ। ಉಪಲಕ್ಷಣೇ ದ್ವಿತೀಯಾಭಾವ ಏವ ಬಾಧ್ಯಾಬಾಧ್ಯ ವಿಕಲ್ಪಾತ್।**

'ಮಿಥ್ಯಾತ್ವವನ್ನು ನಾವು ಕೇವಲ ಬ್ರಹ್ಮಸ್ವರೂಪವೆನ್ನುತ್ತಿಲ್ಲ. ದ್ವಿತೀಯಾಭಾವದಿಂದ ಉಪಲಕ್ಷಿತವಾದ ಬ್ರಹ್ಮನ ಸ್ವರೂಪವೆನ್ನುತ್ತೇವೆ. ಆದರಿಂದ ಕೇವಲ ಬ್ರಹ್ಮಸ್ವರೂಪತ್ವ ಪಕ್ಷದಲ್ಲಿ ಬರುವ ದೋಷಗಳು ಈಗ ಇಲ್ಲ.' ಎಂದರೆ ಅದೂ ಸರಿಯಲ್ಲ. ಈಗ ಉಪಲಕ್ಷಣವಾದ ದ್ವಿತೀಯಾಭಾವವನ್ನೇ 'ಬಾಧ್ಯವೆ, ಅಭಾಧ್ಯವೆ?' ಎಂದು ವಿಕಲ್ಪ ಮಾಡುತ್ತೇವೆ. ಆಗ ಹಿಂದಿನ ಪಕ್ಷಕ್ಕೆ ಹೇಳಿದ ದೋಷಗಳೆಲ್ಲ ಈ ಪಕ್ಷಕ್ಕೂ ಬರುತ್ತವೆ.

ಉಪಲಕ್ಷಣವಾದ ದ್ವಿತೀಯಾಭಾವವು ಬಾಧ್ಯವೆಂದರೆ, ಸಿದ್ಧಸಾಧನ. ಏಕೆಂದರೆ 'ಪ್ರಪಂಚವು ಮಿಥ್ಯಾ' ಎಂದರೆ, ಬಾಧ್ಯದ್ವಿತೀಯಾಭಾವೋಪಲಕ್ಷಿತ ಬ್ರಹ್ಮಸ್ವರೂಪವಾದ ಮಿಥ್ಯಾತ್ವವುಳ್ಳದ್ದು ಪ್ರಪಂಚ, ಎಂದಾಗುತ್ತದೆ. ಹಾಗೆ ಸಾಧನೆ ಮಾಡಿದರೆ ದ್ವಿತೀಯಾಭಾವವು ಬಾಧ್ಯವೆನ್ನುವುದೂ ನಮಗೆ ಇಷ್ಟ. ಬ್ರಹ್ಮಸ್ವರೂಪವಾದ ಮಿಥ್ಯಾತ್ವವು ಪ್ರಪಂಚದಲ್ಲಿರುವುದೂ ಇಷ್ಟ. ಬಾಧ್ಯವಾದ ದ್ವಿತೀಯಾಭಾವವನ್ನೇ ಅದ್ವೈತಶ್ರುತಿ ಹೇಳುತ್ತಿದೆ ಎಂದಾಗುವುದರಿಂದ ಶ್ರುತಿಯು ಅತತ್ವಾವೇದಕವೆನಿಸುವುದು ಅದ್ವೈತಿಗೇ ಅನಿಷ್ಟ. ಮತ್ತು ದ್ವಿತೀಯಾಭಾವ ಬಾಧ್ಯವೆಂದರೆ ದ್ವಿತೀಯವಾದ ಪ್ರಪಂಚವೆಲ್ಲವೂ ಅಬಾಧ್ಯವೆಂದಾಗುವುದರಿಂದ ಅದೂ ನಮಗೆ ಇಷ್ಟವೆ.

ಉಪಲಕ್ಷಣವಾದ ದ್ವಿತೀಯಾಭಾವವು ಅಬಾಧ್ಯವೆನ್ನುವ ಎರಡನೆಪಕ್ಷದಲ್ಲಿ ಅದು ಬ್ರಹ್ಮಾತಿರಿಕ್ತ ವಾಗಿದ್ದಲ್ಲಿ ಅದ್ವೈತಹಾನಿ. ಅದರಲ್ಲಿ ದೃಶ್ಯತ್ವ ಹೇತು ಬರುವುದರಿಂದ ವ್ಯಭಿಚಾರ. ಬ್ರಹ್ಮನಿಗೆ ಅನತಿರಿಕ್ತವಾಗಿದ್ದಲ್ಲಿ ಅದು ಅವನಿಗೆ ಉಪಲಕ್ಷಣವೇ ಆಗುವುದಿಲ್ಲ. ಕಾಗೆಯು ದೇವದತ್ತಗೃಹಕ್ಕೆ ಉಪಲಕ್ಷಣವಾಗಬೇಕಾದರೆ ಗೃಹದಲ್ಲಿ ಅದು ಗೃಹಾತಿರಿಕ್ತವಾದ ಉತ್ತೃಣತ್ವಾದಿರೂಪ ಉಪಲಕ್ಷ್ಯಾಕಾರವನ್ನು ಉಪಸ್ಥಾಪನ ಮಾಡಬೇಕು. ಹಾಗೇ ದ್ವಿತೀಯಾಭಾವವೂ ಬ್ರಹ್ಮನಲ್ಲಿ ಸ್ವಾಧಿಕರಣಾತಿರಿಕ್ತವಾದ ಉಪಲಕ್ಷ್ಯಾಕಾರವನ್ನು ಉಪಸ್ಥಾಪನ ಮಾಡಬೇಕು. ಆದರೆ ಬ್ರಹ್ಮವು ದ್ವಿತೀಯಾಭಾವಾಧಿಕರಣವಾದ್ದರಿಂದ ಅವನಲ್ಲಿ ದ್ವಿತೀಯವಾದ ಉಪಲಕ್ಷ್ಯಾಕಾರ ಬರಲು ಶಕ್ಯವಿಲ್ಲ. ಅದಕ್ಕೆ ಬ್ರಹ್ಮಸ್ವರೂಪವೇ ಉಪಲಕ್ಷ್ಯವೆನ್ನಲೂ ಬರುವುದಿಲ್ಲ. ಬ್ರಹ್ಮಸ್ವರೂಪವು ಮೊದಲಿಗೆ ಅಭಾಸಮಾನವಾಗಿದ್ದು ಉಪಲಕ್ಷಣ ಸಂಬಂಧಪ್ರಯುಕ್ತ ಭಾಸಮಾನವಾಗುವಂಥದ್ದಲ್ಲ. ಅದು ಸ್ವತಃ ದ್ವಿತೀಯಾಭಾವಕ್ಕೆ ಅಧಿಕರಣವಾಗಿ ಅವಿದ್ಯಾಕ್ಕೆ ಅಧಿಷ್ಠಾನವಾಗಿ ಆದಕ್ಕೆ ಸಾಕ್ಷಿಯಾಗಿ ನಿತ್ಯಸಿದ್ಧವೇ ಆಗಿದೆ, ಭಾಸಮಾನವೇ ಆಗಿದೆ. ಅದಕ್ಕಿಂತ ಬೇರೆ ಅಭಾಸಮಾನವಾದ ಉಪಲಕ್ಷ್ಯಾಕಾರವೂ ಅದರಲ್ಲಿ ಇಲ್ಲ—

**ದ್ವಿತೀಯಾಭಾವಾಧಿಕರಣತಯಾ ಅವಿದ್ಯಾಧಿಷ್ಠಾನತಯಾ ತತ್ಸಾಕ್ಷಿತಯಾ ಚ ಭಾಸಮಾನ ಚಿದನ್ಯಸ್ಯ ಉಪಲಕ್ಷ್ಯಸ್ಯ ಅಭಾವೇನ ದ್ವಿತೀಯಾಭಾವಸ್ಯ ಉಪಲಕ್ಷಣತ್ವಾ ಯೋಗಾಚ್ಚ।**

'ದ್ವಿತೀಯಾಭಾವವು ಉಪಲಕ್ಷಣ'ವೆಂದರೆ ಮಿಥ್ಯಾತ್ವಶರೀರಾನಂತರ್ಗತವೆಂದರ್ಥವಲ್ಲ. ಅದು ಮಿಥ್ಯಾತ್ವ ಶರೀರಾಂತರ್ಗತವಾಗದೆ ಇದ್ದರೆ, ಮಿಥ್ಯಾತ್ವವು ಶುದ್ಧಬ್ರಹ್ಮಸ್ವರೂಪವೆ ಆಗಿದೆ ಎಂದರೆ, ಶುದ್ಧಬ್ರಹ್ಮಸ್ವರೂಪ ಸಿದ್ಧವೇ ಇರುವುದರಿಂದ ಹಿಂದೆ ಹೇಳಿದ ಸಿದ್ಧಸಾಧನತಾದೋಷ ಪರಿಹಾರವಾಗದು. ಆದರಿಂದ ಉಪಲಕ್ಷ್ಯದಲ್ಲಿ ಅನ್ಯಧರ್ಮ ಉಪಸ್ಥಾಪನ ಮಾಡಬೇಕು. ಅನ್ಯಧರ್ಮವಿಲ್ಲದ್ದರಿಂದ ಅದೂ ಶಕ್ಯವಿಲ್ಲ.

ದ್ವಿತೀಯಾಭಾವವು ಉಪಲಕ್ಷಣವಾಗಬೇಕಾದರೆ ಅದು ಮೊದಲಿಗೆ ಜ್ಞಾತವಾಗಬೇಕು. ಆಗ ಅದರ ಸಂಬಂಧದಿಂದ ಉಪಲಕ್ಷ್ಯದ ಜ್ಞಾನ ಬರುತ್ತದೆ. ಆದರೆ ಪ್ರಕೃತ ಉಪಲಕ್ಷಣವಾಗಿರುವುದು ದ್ವಿತೀಯಾಭಾವವೆಂಬ ಒಂದು ಅಭಾವ. ಅಭಾವಜ್ಞಾನವು ಅಧಿಕರಣಜ್ಞಾನಸಾಪೇಕ್ಷ. ಅಧಿಕರಣವು ಪ್ರಕೃತದಲ್ಲಿ ಉಪಲಕ್ಷ್ಯವಾಗಿದೆ. ಹೀಗಾಗಿ ಉಪಲಕ್ಷ್ಯಬ್ರಹ್ಮಜ್ಞಾನದಿಂದಲೇ ಉಪಲಕ್ಷಣ ದ್ವಿತೀಯಾಭಾವಜ್ಞಾನ ಬರಬೇಕು, ಹೊರತು, ಉಪಲಕ್ಷಣ ದ್ವಿತೀಯಾಭಾವ ಜ್ಞಾನದಿಂದ ಉಪಲಕ್ಷ್ಯ ಬ್ರಹ್ಮಜ್ಞಾನವಲ್ಲ. ಉಪಲಕ್ಷ್ಯಬ್ರಹ್ಮಸ್ವರೂಪವು ಅವಿದ್ಯಾಧಿಷ್ಠಾನವಾಗಿ ಮತ್ತು ಅವಿದ್ಯಾಸಾಕ್ಷಿಯಾಗಿ ಜ್ಞಾತವಾಗಿಯೆ ಇರುತ್ತದೆ. ಹೀಗಾಗಿ ಮೊದಲೇ ಜ್ಞಾತವಾಗಿರುವ ಉಪಲಕ್ಷ್ಯಕ್ಕೆ ದ್ವಿತೀಯಾಭಾವವು ಉಪಲಕ್ಷಣವಾಗುವುದೂ ವ್ಯರ್ಥ.

❖❖❖

**ननु रूप्यधर्मो मिथ्यात्वमपि मिथ्यैव । नच तथात्वे रूप्यस्य सत्यत्वं सत्यं स्यादिति वाच्यम् । धर्मिणो मिथ्यात्वे विरुद्धयोरपि धर्मयोर्मिथ्यात्वात् । परस्परविरुद्धयोरेकस्याभावेऽन्यस्य सत्त्वनियमस्तु यत्र धर्मी सन् तत्रैव । नहि वन्ध्यासुतस्य श्यामत्वाद्यभावे गौरत्वं सत्यम् । न वा स्वप्ने ज्ञातस्य गजस्य मिथ्यात्वे तत्रैव ज्ञातस्तदभावस्सत्य इति चेन्न ।**

**प्रतिपन्नोपाधौ त्रैकालिकनिषेधप्रतियोगित्वं हि मिथ्यात्वम् । नच प्रतियोगित्वं धर्मान्तरवद्धर्मिसत्तासापेक्षमित्यनिर्वाच्यत्वभङ्गे वक्ष्यते । धर्म्यसत्त्वे धर्मासत्त्वं तु धर्मिसत्तासापेक्षधर्मविषयाम् । मिथ्यात्वं तु तत्प्रतिकूलम् । अन्यथा सिद्धसाधनात् ।**

मिथ्याभूतमिथ्यात्वकत्वहेतोरप्रयोजकत्वं शङ्कते **ननु रूप्यधर्म इति** । **धर्मिणो मिथ्यात्वे** इत्यनेन विमतं मिथ्यात्वं मिथ्या मिथ्याभूतधर्मिकत्वात्

वन्ध्यासुतश्यामत्ववदित्यनुमानं विवक्षितमिति बोध्यम् । विरुद्धयोरपीत्युक्ति-रविरुद्धयोः सुतरामिति सूचयति । ननु परस्परविरुद्धधर्ममात्रे नैवं नियमः । गोत्वाश्वत्वोभयरहितस्य गजादेरपि सत्त्वात् । किन्तु परस्पराभावसमनियतधर्ममात्रे । तथाच तादृशयोर्धर्मयोर्मध्ये यत्रैकस्तत्र नापर इति नियमः । एवं च यदि रूप्यं असत्तर्हि तन्मिथ्यात्वं सत् । मिथ्यात्वमसच्चेत् रूप्यं सदिति केनापि दुर्निरसम् । नचैवं प्रकृते । अधिकरणस्य वंध्यासुतस्य अभावात्, धर्मयोः परस्पराभावसमनियतत्वाभावात् इत्यत आह **न वेति** । वक्ष्यमाणोपाधौ साधनव्यापकत्वमाशङ्क्याह **नचेति** । मिथ्याभूतधर्मिकत्वादित्युक्तानुमाने तमेवोपाधिमाह **धर्म्यसत्व इति** । धर्मिसत्त्वसापेक्षधर्मत्वमुपाधिरिति निर्गलितोऽर्थः । **मिथ्यात्वं त्विति** । तस्य धर्मिस्वरूपापहाररूपाभावघटितमूर्तित्वादिति भावः । **अन्यथेति** । तदघटितमूर्तित्व इत्यर्थः ।

❖❖❖

## ಮಿಥ್ಯಾದಲ್ಲಿ ಮಿಥ್ಯಾತ್ವವು ಮಿಥ್ಯಾ ಅಲ್ಲ

**ನನು 'ರೂಪ್ಯಧರ್ಮೋ ಮಿಥ್ಯಾತ್ವಮಪಿ ಮಿಥ್ಯೈವ । ನ ಚ ತಥಾತ್ವೇ ರೂಪ್ಯಸ್ಯ ಸತ್ಯತ್ವಂ ಸತ್ಯಂ ಸ್ಯಾದಿತಿ ವಾಚ್ಯಂ । ಧರ್ಮಿಣೋ ಮಿಥ್ಯಾತ್ವೇ ವಿರುದ್ಧಯೋರಪಿ ಧರ್ಮಯೋಃ ಮಿಥ್ಯಾತ್ವಾತ್ । ಪರಸ್ಪರ ವಿರುದ್ಧಯೋಃ ಏಕಸ್ಯ ಅಭಾವೇ ಅನ್ಯಸ್ಯ ಸತ್ವನಿಯಮಸ್ತು, ಯತ್ರ ಧರ್ಮೀ ಸನ್, ತತ್ರೈವ । ನಹಿ ವಂಧ್ಯಾಸುತಸ್ಯ ಶ್ಯಾಮತ್ವಾದ್ಯಭಾವೇ ಗೌರತ್ವಂ ಸತ್ಯಂ । ನ ವಾ ಸ್ವಪ್ನೇ ಜ್ಞಾತಸ್ಯ ಗಜಸ್ಯ ಮಿಥ್ಯಾತ್ವೇ ತತ್ರೈವ ಜ್ಞಾತಃ ತದಭಾವಃ ಸತ್ಯಃ' ಇತಿ ಚೇನ್ನ ।**

'ಜಗತ್ತು ಸತ್ಯ, ಮಿಥ್ಯಾಭೂತಮಿಥ್ಯಾತ್ವಕವಾದ್ದರಿಂದ, ಆತ್ಮದಂತೆ' ಎಂಬ ನಮ್ಮ ಅನುಮಾನಕ್ಕೆ ಅಪ್ರಯೋಜಕತ್ವವನ್ನು ಅದ್ವೈತಿಯು ಸಮರ್ಥಿಸುತ್ತಾನೆ. ಅನೇಕ ಉದಾಹರಣೆಗಳನ್ನು ತೋರಿಸುತ್ತಾನೆ.

'ವಸ್ತುವಿನ ಮಿಥ್ಯಾತ್ವವು ಮಿಥ್ಯಾ ಆದ ಮಾತ್ರಕ್ಕೆ ವಸ್ತು ಸತ್ಯವಾಗಬೇಕಿಲ್ಲ. ಉದಾ: ಶುಕ್ತಿರಜತವು ಮಿಥ್ಯಾ. ಅದರ ಮಿಥ್ಯಾತ್ವವೂ ಮಿಥ್ಯಾ. ಅದು ಸಂಬಂಧಿಯಾದ ವಸ್ತು. ಸಂಬಂಧಿಯು ಸಂಬಂಧಿಗೆ ಸಮಸತ್ತಾಕವಾಗಿರುತ್ತದೆ. ಸಂಬಂಧಿ ಮಿಥ್ಯಾ ಆದರೆ ಅದರ ಸಂಬಂಧಿಯಾದ ಎರಡು ಧರ್ಮಗಳು ವಿರುದ್ಧವಾದರೂ ಎರಡೂ ಧರ್ಮಗಳೂ ಮಿಥ್ಯಾ ಆಗುತ್ತವೆ. ಪರಸ್ಪರ ವಿರುದ್ಧವಾದ

ಧರ್ಮಗಳಲ್ಲಿ ಒಂದಿಲ್ಲದಿದ್ದರೆ ಇನ್ನೊಂದಿರುತ್ತದೆ ಎಂಬ ನಿಯಮವು ಸಂಬಂಧಿಯು ಸತ್ಯವಾಗಿರುವ ಕಡೆ ಮಾತ್ರ. ಏಕೆಂದರೆ ಬಂಜೆಯ ಮಗನು ಕಪ್ಪಗಿರುವುದು ಸುಳ್ಳಾದ ಮಾತ್ರಕ್ಕೆ ಅವನು ಬೆಳ್ಳಗಿರುವುದು ನಿಜವಾಗಿರುವುದಿಲ್ಲ.

'ಎರಡು ಧರ್ಮಗಳು ಪರಸ್ಪರ ವಿರುದ್ಧವಾದ ಮಾತ್ರಕ್ಕೆ ಒಂದಿಲ್ಲದಿದ್ದರೆ ಇನ್ನೊಂದಿರಬೇಕೆಂಬ ನಿಯಮವಿಲ್ಲ. ಗೋತ್ವ ಅಶ್ವತ್ವಗಳು ಪರಸ್ಪರ ವಿರುದ್ಧವಾದರೂ ಗೋತ್ವವಿಲ್ಲದಿದ್ದಲ್ಲಿ ಅಶ್ವತ್ವವಿದೆ ಎಂದಿಲ್ಲ. ಎರಡೂ ಇಲ್ಲದೆ ಮೂರನೆಯ ಗಜತ್ವವಿರಬಹುದು. ಪರಸ್ಪರ ವಿರಹ ಸಮನಿಯತವಾದ ಎರಡು ಧರ್ಮಗಳಲ್ಲಿ ಒಂದಿಲ್ಲದಿದ್ದರೆ ಇನ್ನೊಂದು ಇರುವ ನಿಯಮವಿದೆ. ಆದರಿಂದ ರೂಪ್ಯ ಅಸತ್ಯವಾದರೆ ಅದರ ಮಿಥ್ಯಾತ್ವ ಸತ್. ಮಿಥ್ಯಾತ್ವ ಅಸತ್ತಾದರೆ ರೂಪ್ಯ ಸತ್. ಇದನ್ನು ಯಾರೂ ಕಡೆಗಣಿಸುವಂತಿಲ್ಲ.

ಪ್ರಕೃತ ವಂಧ್ಯಾಸುತನ ದೃಷ್ಟಾಂತದಲ್ಲಿ ಧರ್ಮಿ ಅಸತ್ತಾದ್ದರಿಂದ ಇಲ್ಲ, ಮಾತ್ರವಲ್ಲ. ಅವನ ಧರ್ಮಗಳಾದ ಶ್ಯಾಮತ್ವ ಗೌರತ್ವಗಳು ಪರಸ್ಪರ ವಿರಹ ಸಮನಿಯತಧರ್ಮಗಳೂ ಆಗಿಲ್ಲ. ಆದರೂ ಸ್ವಾಪ್ನಗಜ ತದಭಾವ ದೃಷ್ಟಾಂತವನ್ನಿಟ್ಟುಕೊಳ್ಳಬಹುದು. ಸ್ವಪ್ನದಲ್ಲಿ ಕಂಡ ಪ್ರದೇಶವು ಪ್ರಾತಿಭಾಸಿಕ ಸತ್ಯವಾದ್ದರಿಂದ ಧರ್ಮಿ ಇದೆ. ಅದರಲ್ಲಿ ಕಂಡ ಗಜವೂ ಮಿಥ್ಯಾ. ಗಜಾಭಾವವೂ ಮಿಥ್ಯಾ'. 'ಇತಿ ಚೇನ್ನ।' ಹೀಗೆ ಹೇಳಬಾರದು.

> **ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವಂ ಹಿ ಮಿಥ್ಯಾತ್ವಂ। ನ ಚ ಪ್ರತಿಯೋಗಿತ್ವಂ ಧರ್ಮಾಂತರವತ್ ಧರ್ಮಿಸತ್ತಾಸಾಪೇಕ್ಷಂ ಇತ್ಯನಿರ್ವಾಚ್ಯತ್ವಭಂಗೇ ವಕ್ಷ್ಯತೇ। ಧರ್ಮ್ಯಸತ್ವೇ ಧರ್ಮಾಸತ್ವಂ ತು ಧರ್ಮಿಸತ್ತಾಸಾಪೇಕ್ಷ ಧರ್ಮಿವಿಷಯಂ। ಮಿಥ್ಯಾತ್ವಂ ತು ತತ್‌ಪ್ರತಿಕೂಲಂ। ಅನ್ಯಥಾ ಸಿದ್ಧಸಾಧನಾತ್।**

ಹೀಗೆ ಏಕೆ ಹೇಳಬಾರದು ಎಂದರೆ— ಒಂದು ವಸ್ತು ಅದಕ್ಕೆ ಆಶ್ರಯವಾಗಿ ಕಂಡ ಸ್ಥಳದಲ್ಲಿಯೇ ಮೂರೂ ಕಾಲದಲ್ಲಿ ಇಲ್ಲದಿರುವುದು ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವವು ಆ ವಸ್ತುವಿನ ಮಿಥ್ಯಾತ್ವ. 'ಪ್ರತಿಯೋಗಿತ್ವ' ಎಂಬ ಈ ಧರ್ಮವು ಬೇರೆ ರೂಪಾದಿ ಧರ್ಮಗಳಂತೆ ಧರ್ಮಿಸತ್ವಸಾಪೇಕ್ಷವಲ್ಲ. ಎಂದು ಅನಿರ್ವಾಚ್ಯತ್ವ ಭಂಗ ಪ್ರಕರಣದಲ್ಲಿ ಹೇಳುತ್ತೇವೆ. ಧರ್ಮಿ ಇಲ್ಲದಿದ್ದರೆ ಧರ್ಮ ಇಲ್ಲ ಎಂಬ ನಿಯಮವು ಧರ್ಮಿಸತ್ತಾಸಾಪೇಕ್ಷ ಧರ್ಮ ವಿಷಯದಲ್ಲಿ ಮಾತ್ರ ಅನ್ವಯಿಸುತ್ತದೆ. ಮಿಥ್ಯಾತ್ವವೆಂಬ ಧರ್ಮವು ಧರ್ಮಿಸತ್ವಕ್ಕೆ ಪ್ರತಿಕೂಲವೇ ಹೊರತು ಧರ್ಮಿಸತ್ವಸಾಪೇಕ್ಷವಲ್ಲ. 'ತ್ರೈಕಾಲಿಕ ಅಭಾವಪ್ರತಿಯೋಗಿತ್ವ' ರೂಪ ಮಿಥ್ಯಾತ್ವಶರೀರದಲ್ಲಿ ಸೇರಿರುವ 'ಅಭಾವ'ವು ಧರ್ಮಿಸ್ವರೂಪಾಪಹಾರರೂಪವೇ ಆಗಿದೆ. ಅಭಾವವು ಮಿಥ್ಯಾತ್ವಶರೀರದಲ್ಲಿ ಸೇರಿಕೊಂಡಿಲ್ಲದಿದ್ದರೆ ಅಂಥ ಪಾರಿಭಾಷಿಕವಾದ ಬ್ರಹ್ಮಭಿನ್ನತ್ವಾದಿರೂಪ ಮಿಥ್ಯಾತ್ವ ಸಾಧನೆ ಮಾಡಿದರೆ ಅದು ಸತ್ಯತ್ವವಾದಿಗಳಿಗೆ ಸಿದ್ಧಸಾಧನವಾಗುತ್ತದೆ.

वन्ध्यासुतश्यामत्ववदित्यनुमानं विवक्षितमिति बोध्यम् । विरुद्धयोरपीत्युक्ति-रविरुद्धयोः सुतरामिति सूचयति । ननु परस्परविरुद्धधर्ममात्रे नैवं नियमः । गोत्वाश्वत्वोभयरहितस्य गजादेरपि सत्त्वात् । किन्तु परस्पराभावसमनियतधर्ममात्रे । तथाच तादृशयोर्धर्मयोर्मध्ये यत्रैकस्तत्र नापर इति नियमः । एवं च यदि रूप्यं असत्तर्हि तन्मिथ्यात्वं सत् । मिथ्यात्वमसच्चेत् रूप्यं सदिति केनापि दुर्निरसम् । नचैवं प्रकृते । अधिकरणस्य वंध्यासुतस्य अभावात्, धर्मयोः परस्पराभावसमनियतत्वाभावात् इत्यत आह **न वेति** । वक्ष्यमाणोपाधौ साधनव्यापकत्वमाशङ्क्याह **नचेति** । मिथ्याभूतधर्मिकत्वादित्युक्तानुमाने तमेवोपाधिमाह **धर्म्यसत्व इति** । धर्मिसत्त्वसापेक्षधर्मत्वमुपाधिरिति निर्गलितोऽर्थः । **मिथ्यात्वं त्विति** । तस्य धर्मिस्वरूपापहाररूपाभावघटितमूर्तित्वादिति भावः । **अन्यथेति** । तदघटितमूर्तित्व इत्यर्थः ।

❖❖❖

## ಮಿಥ್ಯಾದಲ್ಲಿ ಮಿಥ್ಯಾತ್ವವು ಮಿಥ್ಯಾ ಅಲ್ಲ

**ನನು 'ರೂಪ್ಯಧರ್ಮೋ ಮಿಥ್ಯಾತ್ವಮಪಿ ಮಿಥ್ಯೈವ । ನ ಚ ತಥಾತ್ವೇ ರೂಪ್ಯಸ್ಯ ಸತ್ಯತ್ವಂ ಸತ್ಯಂ ಸ್ಯಾದಿತಿ ವಾಚ್ಯಂ । ಧರ್ಮಿಣೋ ಮಿಥ್ಯಾತ್ವೇ ವಿರುದ್ಧಯೋರಪಿ ಧರ್ಮಯೋಃ ಮಿಥ್ಯಾತ್ವಾತ್ । ಪರಸ್ಪರ ವಿರುದ್ಧಯೋಃ ಏಕಸ್ಯ ಅಭಾವೇ ಅನ್ಯಸ್ಯ ಸತ್ವನಿಯಮಸ್ತು, ಯತ್ರ ಧರ್ಮೀ ಸನ್, ತತ್ರೈವ । ನಹಿ ವಂಧ್ಯಾಸುತಸ್ಯ ಶ್ಯಾಮತ್ವಾದ್ಯಭಾವೇ ಗೌರತ್ವಂ ಸತ್ಯಂ । ನ ವಾ ಸ್ವಪ್ನೇ ಜ್ಞಾತಸ್ಯ ಗಜಸ್ಯ ಮಿಥ್ಯಾತ್ವೇ ತತ್ರೈವ ಜ್ಞಾತಃ ತದಭಾವಃ ಸತ್ಯಃ' ಇತಿ ಚೇನ್ನ ।**

'ಜಗತ್ತು ಸತ್ಯ, ಮಿಥ್ಯಾಭೂತಮಿಥ್ಯಾತ್ವಕವಾದ್ದರಿಂದ, ಆತ್ಮದಂತೆ' ಎಂಬ ನಮ್ಮ ಅನುಮಾನಕ್ಕೆ ಅಪ್ರಯೋಜಕತ್ವವನ್ನು ಅದ್ವೈತಿಯು ಸಮರ್ಥಿಸುತ್ತಾನೆ. ಅನೇಕ ಉದಾಹರಣೆಗಳನ್ನು ತೋರಿಸುತ್ತಾನೆ.

'ವಸ್ತುವಿನ ಮಿಥ್ಯಾತ್ವವು ಮಿಥ್ಯಾ ಆದ ಮಾತ್ರಕ್ಕೆ ವಸ್ತು ಸತ್ಯವಾಗಬೇಕಿಲ್ಲ. ಉದಾ: ಶುಕ್ತಿರಜತವು ಮಿಥ್ಯಾ. ಅದರ ಮಿಥ್ಯಾತ್ವವೂ ಮಿಥ್ಯಾ. ಅದು ಸಂಬಂಧಿಯಾದ ವಸ್ತು. ಸಂಬಂಧಿಯು ಸಂಬಂಧಿಗೆ ಸಮಸತ್ತಾಕವಾಗಿರುತ್ತದೆ. ಸಂಬಂಧಿ ಮಿಥ್ಯಾ ಆದರೆ ಅದರ ಸಂಬಂಧಿಯಾದ ಎರಡು ಧರ್ಮಗಳು ವಿರುದ್ಧವಾದರೂ ಎರಡೂ ಧರ್ಮಗಳೂ ಮಿಥ್ಯಾ ಆಗುತ್ತವೆ. ಪರಸ್ಪರ ವಿರುದ್ಧವಾದ

ಧರ್ಮಗಳಲ್ಲಿ ಒಂದಿಲ್ಲದಿದ್ದರೆ ಇನ್ನೊಂದಿರುತ್ತದೆ ಎಂಬ ನಿಯಮವು ಸಂಬಂಧಿಯು ಸತ್ಯವಾಗಿರುವ ಕಡೆ ಮಾತ್ರ. ಏಕೆಂದರೆ ಬಂಜೆಯ ಮಗನು ಕಪ್ಪಗಿರುವುದು ಸುಳ್ಳಾದ ಮಾತ್ರಕ್ಕೆ ಅವನು ಬೆಳ್ಳಗಿರುವುದು ನಿಜವಾಗಿರುವುದಿಲ್ಲ.

'ಎರಡು ಧರ್ಮಗಳು ಪರಸ್ಪರ ವಿರುದ್ಧವಾದ ಮಾತ್ರಕ್ಕೆ ಒಂದಿಲ್ಲದಿದ್ದರೆ ಇನ್ನೊಂದಿರಬೇಕೆಂಬ ನಿಯಮವಿಲ್ಲ. ಗೋತ್ವ ಅಶ್ವತ್ವಗಳು ಪರಸ್ಪರ ವಿರುದ್ಧವಾದರೂ ಗೋತ್ವವಿಲ್ಲದಿದ್ದಲ್ಲಿ ಅಶ್ವತ್ವವಿದೆ ಎಂದಿಲ್ಲ. ಎರಡೂ ಇಲ್ಲದೆ ಮೂರನೆಯ ಗಜತ್ವವಿರಬಹುದು. ಪರಸ್ಪರ ವಿರಹ ಸಮನಿಯತವಾದ ಎರಡು ಧರ್ಮಗಳಲ್ಲಿ ಒಂದಿಲ್ಲದಿದ್ದರೆ ಇನ್ನೊಂದು ಇರುವ ನಿಯಮವಿದೆ. ಆದರಿಂದ ರೂಪ್ಯ ಅಸತ್ಯವಾದರೆ ಅದರ ಮಿಥ್ಯಾತ್ವ ಸತ್. ಮಿಥ್ಯಾತ್ವ ಅಸತ್ತಾದರೆ ರೂಪ್ಯ ಸತ್. ಇದನ್ನು ಯಾರೂ ಕಡೆಗಣಿಸುವಂತಿಲ್ಲ.

ಪ್ರಕೃತ ವಂಧ್ಯಾಸುತನ ದೃಷ್ಟಾಂತದಲ್ಲಿ ಧರ್ಮಿ ಅಸತ್ತಾದ್ದರಿಂದ ಇಲ್ಲ, ಮಾತ್ರವಲ್ಲ, ಅವನ ಧರ್ಮಗಳಾದ ಶ್ಯಾಮತ್ವ ಗೌರತ್ವಗಳು ಪರಸ್ಪರ ವಿರಹ ಸಮನಿಯತಧರ್ಮಗಳೂ ಆಗಿಲ್ಲ. ಆದರೂ ಸ್ವಾಪ್ನಗಜ ತದಭಾವ ದೃಷ್ಟಾಂತವನ್ನಿಟ್ಟುಕೊಳ್ಳಬಹುದು. ಸ್ವಪ್ನದಲ್ಲಿ ಕಂಡ ಪ್ರದೇಶವು ಪ್ರಾತಿಭಾಸಿಕ ಸತ್ಯವಾದ್ದರಿಂದ ಧರ್ಮಿ ಇದೆ. ಆದರಲ್ಲಿ ಕಂಡ ಗಜವೂ ಮಿಥ್ಯಾ. ಗಜಾಭಾವವೂ ಮಿಥ್ಯಾ'. 'ಇತಿ ಚೇನ್ನ।' ಹೀಗೆ ಹೇಳಬಾರದು.

**ಪ್ರತಿಪನ್ನೋಪಾಧೌ ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವಂ ಹಿ ಮಿಥ್ಯಾತ್ವಂ। ನ ಚ ಪ್ರತಿಯೋಗಿತ್ವಂ ಧರ್ಮಾಂತರವತ್ ಧರ್ಮಿಸತ್ತಾಸಾಪೇಕ್ಷಂ ಇತ್ಯನಿರ್ವಾಚ್ಯತ್ವಭಂಗೇ ವಕ್ಷ್ಯತೇ। ಧರ್ಮ್ಯಸತ್ವೇ ಧರ್ಮಾಸತ್ವಂ ತು ಧರ್ಮಿಸತ್ತಾಸಾಪೇಕ್ಷ ಧರ್ಮಿವಿಷಯಂ। ಮಿಥ್ಯಾತ್ವಂ ತು ತತ್ಪ್ರತಿಕೂಲಂ। ಅನ್ಯಥಾ ಸಿದ್ಧಸಾಧನಾತ್।**

ಹೀಗೆ ಏಕೆ ಹೇಳಬಾರದು ಎಂದರೆ— ಒಂದು ವಸ್ತು ಅದಕ್ಕೆ ಆಶ್ರಯವಾಗಿ ಕಂಡ ಸ್ಥಳದಲ್ಲಿಯೇ ಮೂರೂ ಕಾಲದಲ್ಲಿ ಇಲ್ಲದಿರುವುದು ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವವು ಆ ವಸ್ತುವಿನ ಮಿಥ್ಯಾತ್ವ. 'ಪ್ರತಿಯೋಗಿತ್ವ' ಎಂಬ ಈ ಧರ್ಮವು ಬೇರೆ ರೂಪಾದಿ ಧರ್ಮಗಳಂತೆ ಧರ್ಮಿಸತ್ವಸಾಪೇಕ್ಷವಲ್ಲ. ಎಂದು ಅನಿರ್ವಾಚ್ಯತ್ವ ಭಂಗ ಪ್ರಕರಣದಲ್ಲಿ ಹೇಳುತ್ತೇವೆ. ಧರ್ಮಿ ಇಲ್ಲದಿದ್ದರೆ ಧರ್ಮ ಇಲ್ಲ ಎಂಬ ನಿಯಮವು ಧರ್ಮಿಸತ್ತಾಸಾಪೇಕ್ಷ ಧರ್ಮ ವಿಷಯದಲ್ಲಿ ಮಾತ್ರ ಅನ್ವಯಿಸುತ್ತದೆ. ಮಿಥ್ಯಾತ್ವವೆಂಬ ಧರ್ಮವು ಧರ್ಮಿಸತ್ವಕ್ಕೆ ಪ್ರತಿಕೂಲವೇ ಹೊರತು ಧರ್ಮಿಸತ್ವಸಾಪೇಕ್ಷವಲ್ಲ. 'ತ್ರೈಕಾಲಿಕ ಅಭಾವಪ್ರತಿಯೋಗಿತ್ವ' ರೂಪ ಮಿಥ್ಯಾತ್ವಶರೀರದಲ್ಲಿ ಸೇರಿರುವ 'ಅಭಾವ'ವು ಧರ್ಮಿಸ್ವರೂಪಾಪಹಾರರೂಪವೇ ಆಗಿದೆ. ಅಭಾವವು ಮಿಥ್ಯಾತ್ವಶರೀರದಲ್ಲಿ ಸೇರಿಕೊಂಡಿಲ್ಲದಿದ್ದರೆ ಅಂಥ ಪಾರಿಭಾಷಿಕವಾದ ಬ್ರಹ್ಮಭಿನ್ನತ್ವಾದಿರೂಪ ಮಿಥ್ಯಾತ್ವ ಸಾಧನೆ ಮಾಡಿದರೆ ಅದು ಸತ್ಯತ್ವವಾದಿಗಳಿಗೆ ಸಿದ್ಧಸಾಧನವಾಗುತ್ತದೆ.

ಹೀಗೆ 'ರೂಪ್ಯದಂತೆ ರೂಪ್ಯದ ಮಿಥ್ಯಾತ್ವವು ಕೂಡ ಮಿಥ್ಯಾ, ಮಿಥ್ಯಾತ್ವೋಪೇತ ಅಧಿಕರಣಕವಾದ್ದರಿಂದ ಅಂದರೆ, ಅಧಿಕರಣವಾದ ರೂಪ್ಯವು ಮಿಥ್ಯಾ ಆದ್ದರಿಂದ. ವಂಧ್ಯಾಸುತನ ಶ್ಯಾಮತ್ವದಂತೆ' ಎಂದು ಅದ್ವೈತಿ ಅನುಮಾನ ಪ್ರಯೋಗ ಮಾಡಿದರೆ, ಧರ್ಮಿಸತ್ವಸಾಪೇಕ್ಷ ಧರ್ಮತ್ವವು ಉಪಾಧಿ ಎಂದು ದೋಷವನ್ನು ಹೇಳಬೇಕು. ತ್ರೈಕಾಲಿಕ ನಿಷೇಧ ಪ್ರತಿಯೋಗಿತ್ವ ರೂಪವಾದ ಮಿಥ್ಯಾತ್ವವೆಂಬ ಪಕ್ಷದಲ್ಲಿ ಈ ಉಪಾಧಿಯು ಸಾಧನವ್ಯಾಪಕವಾಗಿಲ್ಲ. ಏಕೆಂದರೆ ರೂಪಾದಿ ಬೇರೆ ಧರ್ಮಗಳಂತೆ ಪ್ರತಿಯೋಗಿತ್ವವು ಧರ್ಮಿಸತ್ವ ಸಾಪೇಕ್ಷವಲ್ಲವೆಂದು ಅನಿರ್ವಾಚ್ಯತ್ವ ಭಂಗ ಪ್ರಕರಣದಲ್ಲಿ ಹೇಳುತ್ತೇವೆ. ಮತ್ತು ಧರ್ಮಿಸತ್ವಕ್ಕೆ ನಿಷೇಧ ಪ್ರತಿಯೋಗಿತ್ವರೂಪ ಮಿಥ್ಯಾತ್ವವು ಪ್ರತಿಕೂಲವೇ ಆದ್ದರಿಂದ ಈ ಉಪಾಧಿಯು ಸಾಧನಾವ್ಯಾಪಕವೇ ಆಗಿದೆ. ಮಿಥ್ಯಾತ್ವವು ಧರ್ಮಿಸತ್ವಕ್ಕೆ ಪ್ರತಿಕೂಲವಲ್ಲದಿದ್ದರೆ ಅಂಥಮಿಥ್ಯಾತ್ವವು ತತ್ವವಾದಿಗೆ ಇಷ್ಟವೇ ಆಗುವುದರಿಂದ ಅದನ್ನು ಸಾಧನೆ ಮಾಡಿದರೆ ಸಿದ್ಧಸಾಧನವಾದೀತು.

❖❖❖

**किञ्च प्रतिपन्नोपाधावनिषिद्धं प्रत्युत बाधकज्ञानेन विहितमपि रूप्यमिथ्यात्वं यदि प्रातिभासिकरूप्यसम्बन्धमात्रेण प्रातिभासिकं तर्हि सति ब्रह्मणि निषिद्धा अपि धर्मास्सन्तः स्युः । रूप्याधिष्ठानशुक्तिरपि प्रातिभासिकी स्यात् । रूप्ये प्रपञ्चे च सद्वैलक्षण्यं च सत्स्यात् । असद्वैलक्षण्यं चासत्स्यात् । असति च सद्वैलक्षण्यमसत्स्यात् ।**

**रूप्यतन्मिथ्यात्वयोर्मिथ्यात्वे भ्रान्तिबाधव्यवस्था च न स्यात् । त्वदुक्तेन धर्मिणो मिथ्यात्वेन हेतुना साध्यस्य मिथ्यात्व-मिथ्यात्वस्यापि प्रातिभासिकत्वापत्त्या हेतोरत्यन्ताप्रामाण्यं च स्यात् ।**

**हेतूकृतस्य धर्मिमिथ्यात्वस्य मिथ्यात्वे घटरूपादौ व्यभिचारापत्त्या सत्यत्वावश्यंभावाद्विरोधश्च स्यात् ।**

**प्रातिभासिकरूप्यसंबन्धमात्रेणेति ।** साक्षात्परम्परा साधारण संबन्ध-मात्रेणेत्यर्थः । **मिथ्यात्व इति ।** प्रातिभासिकत्व इत्यर्थः । **भ्रान्तिबाधेति ।** विषयप्रयुक्तविशेषाभावेन वैपरीत्यं च स्यादिति भावः । **हेतोरिति ।** मिथ्याभूत-धर्मिकत्वरूपहेतोः । शुक्तिरूप्यमस्तीति वाक्यस्येव व्यावहारिकमपि प्रामाण्यं न

स्यादिति भावः । **हेतूकृतस्येति** । मिथ्यात्वं मिथ्या मिथ्याभूतमिथ्यात्वाश्रय धर्मिकत्वादित्यनुमाने मिथ्याभूतमिथ्यात्वाश्रय घटधर्मिक रूपादौ व्यभिचारापत्त्येत्यर्थः । तन्मिथ्यात्वस्याद्याप्यसिद्धेरिति भावः । **विरोध इति** । सतोऽसत्त्वायोगरूप इत्यर्थः ।

❖❖❖

**ಕಿಂಚ ಪ್ರತಿಪನ್ನೋಪಾಧೌ ಅನಿಷಿದ್ಧಂ ಪ್ರತ್ಯುತ ಬಾಧಕಜ್ಞಾನೇನ ವಿಹಿತಮಪಿ ರೂಪ್ಯ ಮಿಥ್ಯಾತ್ವಂ ಯದಿ ಪ್ರಾತಿಭಾಸಿಕ ರೂಪ್ಯಸಂಬಂಧಮಾತ್ರೇಣ ಪ್ರಾತಿಭಾಸಿಕಂ ತರ್ಹಿ ಸತಿ ಬ್ರಹ್ಮಣಿ ನಿಷಿದ್ಧಾ ಅಪಿ ಧರ್ಮಾಃ ಸಂತಃ ಸ್ಯುಃ। ರೂಪ್ಯಾಧಿಷ್ಠಾನ ಶುಕ್ತಿರಪಿ ಪ್ರಾತಿಭಾಸಿಕೀ ಸ್ಯಾತ್। ರೂಪ್ಯೇ ಪ್ರಪಂಚೇ ಚ ಸದ್ವೈಲಕ್ಷಣ್ಯಂ ಚ ಸತ್ ಸ್ಯಾತ್, ಅಸದ್ವೈಲಕ್ಷಣ್ಯಂ ಅಸತ್ ಸ್ಯಾತ್। ಅಸತಿ ಚ ಸದ್ವೈಲಕ್ಷಣ್ಯಂ ಅಸತ್‌ಸ್ಯಾತ್।**

ಪ್ರತಿಪನ್ನೋಪಾಧಿಯಲ್ಲಿ ರೂಪ್ಯಮಿಥ್ಯಾತ್ವವು ನಿಷಿದ್ಧವಾಗಿಲ್ಲ ಮಾತ್ರವಲ್ಲ, 'ಮಿಥ್ಯೈವ ರಜತಂ ಪ್ರತ್ಯಭಾತ್' ಎಂದು ಬಾಧಕಜ್ಞಾನದಲ್ಲಿ ರೂಪ್ಯಮಿಥ್ಯಾತ್ವವು ವಿಹಿತವೇ ಆಗಿದೆ. ಇಂಥ ರೂಪ್ಯ ಮಿಥ್ಯಾತ್ವವು ಪ್ರಾತಿಭಾಸಿಕರೂಪ್ಯಸಂಬಂಧಮಾತ್ರದಿಂದಲೇ ಪ್ರಾತಿಭಾಸಿಕವಾಗುವುದಾದರೆ ತುಲ್ಯನ್ಯಾಯದಿಂದ ಸತ್ಯವಾದ ಬ್ರಹ್ಮದಲ್ಲಿ ನಿಷಿದ್ಧವಾದ ಸಾರ್ವಜ್ಞಾದಿ ಧರ್ಮವು ಸತ್ಯಬ್ರಹ್ಮನ ಸಂಬಂಧದಿಂದ ಸತ್ಯವಾಗಬೇಕಾದೀತು ಎಂದು ಅತಿಪ್ರಸಕ್ತಿ. ಸತ್ಯವಾದ ಬ್ರಹ್ಮನ ಸಂಬಂಧವು ಸಾಕ್ಷಾತ್ತಾಗಿ ಧರ್ಮನಿಷೇಧದಲ್ಲಿಯೇ ಇದ್ದರೂ ನಿಷೇಧ ದ್ವಾರಾ ಧರ್ಮದಲ್ಲಿಯೂ ಇದೆ. ಸಾಕ್ಷಾತ್ ಪರಂಪರಾ ಸಾಧಾರಣ ಸಂಬಂಧವು ಇಲ್ಲಿ ವಿವಕ್ಷಿತವಾಗಿದೆ. ಹೀಗೇ ಇದೇರೀತಿ ಇನ್ನೂ ಬೇರೆ ಅತಿಪ್ರಸಕ್ತಿಗಳೂ ಇವೆ. ಅಧಿಷ್ಠಾನವಾಗಿದ್ದು ಸತ್ಯವಾದ ಶುಕ್ತಿಯು ಮಿಥ್ಯಾರಜತಸಂಬಂಧದಿಂದ ಮಿಥ್ಯಾ ಆಗಬೇಕಾದೀತು. ಶುಕ್ತಿರಜತದಲ್ಲಿಯೂ ಘಟಾದಿಗಳಲ್ಲಿಯೂ ಸದಸದ್ವೈಲಕ್ಷಣ್ಯ ವಿರುವುದರಿಂದ ಸದ್ವೈಲಕ್ಷಣ್ಯವು ಸತ್‌ಪ್ರತಿಯೋಗಿಕವಾದ್ದರಿಂದ ಸತ್‌ಸಂಬಂಧದಿಂದ ಸತ್ತಾಗಬೇಕಾದೀತು. ಅಸದ್ವೈಲಕ್ಷಣ್ಯವು ಅಸತ್‌ಸಂಬಂಧದಿಂದ ಅಸತ್ತಾಗಬೇಕಾದೀತು.

**ರೂಪ್ಯ ತನ್ಮಿಥ್ಯಾತ್ವಯೋಃ ಮಿಥ್ಯಾತ್ವೇ ಭ್ರಾಂತಿ ಬಾಧ ವ್ಯವಸ್ಥಾ ಚ ನ ಸ್ಯಾತ್। ತ್ವದುಕ್ತೇನ ಧರ್ಮಿಣಃ ಮಿಥ್ಯಾತ್ವೇನ ಹೇತುನಾ ಸಾಧ್ಯಸ್ಯ ಮಿಥ್ಯಾತ್ವಮಿಥ್ಯಾತ್ವಸ್ಯಾಪಿ ಪ್ರಾತಿಭಾಸಿಕತ್ವಾಪತ್ತ್ಯಾ ಹೇತೋಃ ಅತ್ಯಂತಾಪ್ರಾಮಾಣ್ಯಂ ಚ ಸ್ಯಾತ್।**

ಶುಕ್ತಿರಜತವೂ ಮಿಥ್ಯಾ, ಅದರ ಮಿಥ್ಯಾತ್ವವೂ ಮಿಥ್ಯಾ ಎಂದರೆ ಮಿಥ್ಯಾವಿಷಯಕತ್ವ ಸತ್ಯವಿಷಯಕತ್ವ ವ್ಯವಸ್ಥೆಯನ್ನೇ ಅಪಲಾಪ ಮಾಡಿದಂತಾಗುವುದರಿಂದ, ವಿಷಯಪ್ರಯುಕ್ತವಾದ ವೈಲಕ್ಷಣ್ಯವು ಭ್ರಾಂತಿ ಬಾಧಗಳಲ್ಲಿದ್ದರೂ ಅದನ್ನು ಅಪಲಾಪಮಾಡಿ ಭ್ರಾಂತಿಯನ್ನು ಬಾಧವೆಂದೂ ಬಾಧವನ್ನು ಭ್ರಾಂತಿಯೆಂದೂ ಹೇಳುವ ಪ್ರಸಂಗ ಬರುತ್ತದೆ. ಏಕೆಂದರೆ ಈಗ ಭ್ರಾಂತಿ

ಬಾಧಗಳೆರಡರಲ್ಲಿಯೂ ಮಿಥ್ಯಾಭೂತಾರ್ಥವಿಷಯಕತ್ವವು ಸಮಾನವೆ ತಾನೆ? ನೀನು ಹೇಳಿದ ಧರ್ಮಿಮಿಥ್ಯಾತ್ವಹೇತುವಿನಿಂದಲೆ ನಿನ್ನ ಸಾಧ್ಯವಾದ ಮಿಥ್ಯಾತ್ವಮಿಥ್ಯಾತ್ವಕ್ಕೂ ಕೂಡ ಮಿಥ್ಯಾತ್ವವನ್ನು ಅಂದರೆ ಪ್ರಾತಿಭಾಸಿಕತ್ವವನ್ನು ಸಾಧನೆ ಮಾಡಲು ಬರುತ್ತದೆ. ಆದರಿಂದ ನೀನು ಹೇಳುವ ಹೇತು ಅತ್ಯಂತ ಅಪ್ರಮಾಣವಾಗುತ್ತದೆ—'ರೂಪ್ಯ ನಿಷ್ಠ ಮಿಥ್ಯಾತ್ವ ಮಿಥ್ಯಾತ್ವವು ಕೂಡ ಮಿಥ್ಯಾ, ಪ್ರಾತಿಭಾಸಿಕ, ಮಿಥ್ಯಾಭೂತರೂಪ್ಯ ಮಿಥ್ಯಾತ್ವಧರ್ಮಿಕವಾದ್ದರಿಂದ' ಎಂದು ನಾವು ಸಾಧನೆ ಮಾಡುತ್ತೇವೆ.

'ಎಲ್ಲವೂ ಬ್ರಹ್ಮಜ್ಞಾನಬಾಧ್ಯವೆಂದು ಅಂಗೀಕರಿಸಿರುವ ನನಗೆ ನನ್ನ ಅನುಮಾನವು ನನ್ನ ಹೇತುವಿನಿಂದಲೇ ಬಾಧಿತವಾದರೆ ಏನೂ ದುಃಖವಿಲ್ಲ, ಅದೂ ಇಷ್ಟವೆ' ಎಂದರೆ, ಬ್ರಹ್ಮಜ್ಞಾನವು ಮೋಕ್ಷದಶಾದಲ್ಲಿ ಎಲ್ಲವನ್ನು ಬಾಧಿಸಿದರೂ ಈ ಹೇತು ವ್ಯವಹಾರದಶಾದಲ್ಲಿಯೇ ಬಾಧಿಸುವುದರಿಂದ ವ್ಯಾವಹಾರಿಕಪ್ರಾಮಾಣ್ಯವೂ ಇಲ್ಲದಂತೆ ಮಾಡಿ ಬಾಧಿತವಾಗಿ ಸ್ವವ್ಯಾಹತವಾಗಿ ಅತ್ಯಂತ ಅಪ್ರಮಾಣವಾಗುವುದರಿಂದ ದುಃಖಪಡಲೇಬೇಕು ಎನ್ನುತ್ತಾರೆ.

**ಹೇತೂಕೃತಸ್ಯ ಧರ್ಮಿಮಿಥ್ಯಾತ್ವಸ್ಯ ಮಿಥ್ಯಾತ್ವೇ ಘಟರೂಪಾದೌ ವ್ಯಭಿಚಾರಾಪತ್ತ್ಯಾ ಸತ್ಯತ್ವಾವಶ್ಯಂಭಾವಾತ್ ವಿರೋಧಶ್ಚ ಸ್ಯಾತ್ ।**

'ರೂಪ್ಯಮಿಥ್ಯಾತ್ವವು ಮಿಥ್ಯಾ, ಮಿಥ್ಯಾಭೂತಮಿಥ್ಯಾತ್ವಾಶ್ರಯ ಧರ್ಮಿಕವಾದ್ದರಿಂದ' ಎಂಬ ಅನುಮಾನದಲ್ಲಿ ನೀನು ಹೇತುಮಾಡಿರುವ 'ಧರ್ಮಿಮಿಥ್ಯಾತ್ವ' ಅಂದರೆ ಮಿಥ್ಯಾಭೂತ ಮಿಥ್ಯಾತ್ವಾಶ್ರಯ ಧರ್ಮಿಕತ್ವವು ಕೂಡ 'ಮಿಥ್ಯಾ', ಮಿಥ್ಯಾತ್ವರೂಪ ವಿಶೇಷಣಯುಕ್ತವೆ ಎಂದರೆ, ಘಟರೂಪಾದಿಗಳಲ್ಲಿ ವ್ಯಭಿಚಾರ ಬಂದೀತು. ಘಟರೂಪವು ಮಿಥ್ಯಾ ಎಂದು ಇನ್ನೂ ಸಿದ್ಧವಾಗಿಲ್ಲ, ಶುಕ್ತಿರೂಪ್ಯಮಿಥ್ಯಾತ್ವ ಸಿದ್ಧವಾದ ಬಳಿಕ ಆ ದೃಷ್ಟಾಂತದಿಂದ ದೃಶ್ಯತ್ವಹೇತುವಿನಿಂದ ಸಾಧಿಸಬೇಕಷ್ಟೆ. ಆದರಿಂದ ಮಿಥ್ಯಾತ್ವಾಭಾವರೂಪ ಸಾಧ್ಯಾಭಾವ ಉಳ್ಳದ್ದು ಘಟರೂಪ. ಅದರಲ್ಲಿ ಹೇತುವಾದ ಮಿಥ್ಯಾಭೂತಮಿಥ್ಯಾತ್ವಾಶ್ರಯ ಘಟಧರ್ಮಿಕತ್ವವಿರುವುದರಿಂದ ವ್ಯಭಿಚಾರ ಬಂದೀತು. ಆದರಿಂದ ಹೇತುವಿನಲ್ಲಿ 'ಮಿಥ್ಯಾಭೂತ' ಎಂಬ ಮಿಥ್ಯಾತ್ವವಿಶೇಷಣದ ಸ್ಥಾನದಲ್ಲಿ 'ಸತ್ಯಭೂತ' ಎಂಬ ವಿಶೇಷಣ ಹಾಕಬೇಕು. ಆಗ ಸತ್ಯಭೂತ ಮಿಥ್ಯಾತ್ವೋಪೇತ ಧರ್ಮಿಕತ್ವ ಎಂಬ ಹೇತುವಿನಿಂದ ಶುಕ್ತಿರೂಪ್ಯಮಿಥ್ಯಾತ್ವವನ್ನು ಮಿಥ್ಯಾ ಎಂದು ಸಾಧನೆ ಮಾಡಿದರೆ 'ಮಿಥ್ಯಾತ್ವವು, ಸತ್ಯವಾದ್ದರಿಂದಲೇ ಮಿಥ್ಯಾ' ಎಂದಂತಾಗುವುದರಿಂದ ವಿರೋಧ ಉಂಟಾದೀತು.

❖❖❖

**नच त्वन्मते रूप्यादिकं वियदादिकं वा बन्ध्यासुतवन्निः स्वरूपम् । शून्यवादापातात् । स्वाप्नगजस्यापि कल्पितत्वेन**

**तद्ध्वंसादेर्मिथ्यात्वेऽपि तन्मिथ्यात्वं स्वप्ने प्रतीतमपि आत्मवदबाधात्सत्यमेव ।**

**नच मिथ्यात्वं प्रपञ्चसमसत्ताकम् । एवञ्च न तात्त्विकाद्वैतहानिः । नापि सिद्धसाधनम् । त्वन्मते प्रपञ्चे स्वसमसत्ताकमिथ्यात्वासिद्धेरिति वाच्यम् । मिथ्यात्वस्य व्यावहारिकत्वे तद्विरोधिनोऽप्रातिभासिकस्यानपोदित स्वतःप्रामाण्य-प्रत्यक्षादिसिद्धस्य च विश्वसत्यत्वस्य पारमार्थिकत्वापातात् ।**

किञ्च मिथ्याधर्मिकत्वादिति कोऽर्थः किं निःस्वरूपधर्मिकत्वादिति किंवा सस्वरूपबाध्यधर्मिकत्वादिति । तत्र नाद्य इत्याह **नचेति ।** तथाच हेतोः पक्षेऽसिद्धिरिति भावः । नापि द्वितीय इत्याह **स्वाप्नगजस्यापीति ।** तथाच दृष्टान्ते साध्यवैकल्यमिति भावः । यद्यपि स्वाप्नगज तद्ध्वंसादेरपि मन्मते सत्यत्वेन दृष्टान्तः साधनविकलः इति शक्यते वक्तुम् । तथापि पररीत्या साध्यवैकल्यमेवोक्तमिति ध्येयम् । ननु मिथ्यात्वं मिथ्यैवेति पक्ष उक्तदूषणोद्धारमाशङ्क्य निराकरोति **नचेति । मिथ्यात्वस्येति ।** तद्विरोधिन इत्यस्यानन्तरं व्यावहारिकसत्त्वाभ्युपगमायोगेनेति शेषः । तथाच प्रपञ्चे सत्त्वस्य व्यावहारिकत्वायोगात् प्रातिभासिकत्वस्य च त्वयैवानभ्युपगमात् अनपोदितस्वतःप्रामाण्यप्रत्यक्षादिप्रमाणसिद्धत्वाच्च तस्य सत्त्वं ब्रह्मसत्त्ववत् पारमार्थिकमेव स्यादित्यर्थः ।

इदमुक्तं भवति । प्रपञ्चे मिथ्यात्वं व्यावहारिकमित्यङ्गीकुर्वाणेन परेण तत्राङ्गीकृतसत्यत्वमपि न व्यावहारिकमङ्गीकर्तुं शक्यम् । तथासति तयोस्तुल्यसत्व-प्रयुक्तविरोधापत्त्या तत्रान्यतरसत्त्वमेव स्यात् । न तूभयसत्त्वम् । अस्ति चोभयसत्त्वम् । एवञ्च तदविरोधेनैवोपपादनीयम् । अविरोधश्च सत्यत्वस्य पारमार्थिकत्वेन वा प्रातिभासिकत्वेन वा संभवति । प्रातिभासिकत्वं च त्वयैव नेष्यत इति तत्पारमार्थिकत्वं वज्रलेपायितमिति ।

❖❖❖

**ನ ಚ ತ್ವನ್ಮತೇ ರೂಪ್ಯಾದಿಕಂ ವಿಯದಾದಿಕಂ ವಾ ವಂಧ್ಯಾಸುತವತ್ ನಿಸ್ಸ್ವರೂಪಂ। ಶೂನ್ಯವಾದಾಪಾತಾತ್।**

ನಿನ್ನ ಮತದಲ್ಲಿ ರೂಪ್ಯಾದಿಗಳೂ ವಿಯದಾದಿಗಳಂತೆ ಸಸ್ವರೂಪವೆ ಹೊರತು ವಂಧ್ಯಾಸುತನಂತೆ ನಿಃಸ್ವರೂಪವಲ್ಲ, ನಿಃಸ್ವರೂಪವೆಂದರೆ ಶೂನ್ಯವಾದಾಪತ್ತಿ. ಆದರಿಂದ ನೀನು ಹೇತುಮಾಡಿದ 'ಮಿಥ್ಯಾಧರ್ಮಿಕತ್ವ'ದಲ್ಲಿ 'ಮಿಥ್ಯಾ' ಎಂದು ನಿಃಸ್ವರೂಪತ್ವವಿವಕ್ಷೆ ಮಾಡಿದರೆ ಹೇತ್ವಸಿದ್ಧಿ. ನಿಃಸ್ವರೂಪಧರ್ಮಿಕತ್ವ ಹೇತುವು ರೂಪ್ಯಮಿಥ್ಯಾತ್ವರೂಪ ಪಕ್ಷದಲ್ಲಿಲ್ಲದಿರುವುದರಿಂದ ಸ್ವರೂಪಾಸಿದ್ಧಿ.

**ಸ್ವಾಪ್ನಗಜಸ್ಯಾಪಿ ಕಲ್ಪಿತತ್ವೇನ ತದ್ಧ್ವಂಸಾದೇಃ ಮಿಥ್ಯಾತ್ವೇಽಪಿ ತನ್ಮಿಥ್ಯಾತ್ವಂ ಸ್ವಪ್ನೇ ಪ್ರತೀತಮಪಿ ಆತ್ಮವತ್ ಅಬಾಧಾತ್ ಸತ್ಯಮೇವ।**

'ಮಿಥ್ಯಾಧರ್ಮಿಕತ್ವ' ಹೇತುವಿನಲ್ಲಿ 'ಮಿಥ್ಯಾ' ಎಂದರೆ 'ಸ ಸ್ವರೂಪ ಬಾಧ್ಯ' ಎಂದು ವಿವಕ್ಷೆ ಮಾಡಿದರೆ ರೂಪ್ಯಮಿಥ್ಯಾತ್ವವೆಂಬ ಪಕ್ಷದಲ್ಲಿ ಹೇತುವಿಗೆ ಅಸಿದ್ಧಿ ಇಲ್ಲ. ಆದರೆ ಸ್ವಾಪ್ನಗಜಮಿಥ್ಯಾತ್ವ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಬರುತ್ತದೆ.

ಯದ್ಯಪಿ ಸಾಧನವೈಕಲ್ಯವೂ ಇದೆ. ಏಕೆಂದರೆ ನನ್ನ ಮತದಲ್ಲಿ ಸ್ವಾಪ್ನಗಜ ತದ್ಧ್ವಂಸಗಳೆರಡೂ ಸತ್ಯ. ಆದರೂ ಅದ್ವೈತಮತದಲ್ಲಿ ಎರಡೂ ಕಲ್ಪಿತವಾದ್ದರಿಂದ ಮಿಥ್ಯಾ. ಹೀಗಾಗಿ ಅದ್ವೈತ ರೀತಿಯಿಂದ ಸಸ್ವರೂಪಬಾಧ್ಯಧರ್ಮಿಕತ್ವರೂಪ ಹೇತುವು ಆ ದೃಷ್ಟಾಂತದಲ್ಲಿ ಬರುವುದರಿಂದ ಸಾಧನವೈಕಲ್ಯವಿಲ್ಲ. ಪಕ್ಷವಾದ ರೂಪ್ಯಮಿಥ್ಯಾತ್ವದಲ್ಲಿ ಬರುವುದರಿಂದ ಹೇತ್ವಸಿದ್ಧಿ ಇಲ್ಲದಿದ್ದರೂ ಸ್ವಾಪ್ನಗಜಮಿಥ್ಯಾತ್ವವು ಸತ್ಯವೇ ಆದ್ದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಮಾತ್ರವಿದೆ.

ಯದ್ಯಪಿ ಸ್ವಾಪ್ನಗಜದಂತೆಯೆ ಅದರ ಮಿಥ್ಯಾತ್ವ ಅಂದರೆ ಅಭಾವ ಸ್ವಪ್ನದೃಷ್ಟವೇ ಆಗಿದೆ. ಆದರೂ ಅಬಾಧ್ಯವಾದ್ದರಿಂದ ಸತ್ಯವೆ. ಸ್ವಪ್ನದೃಷ್ಟವಾದ ಮಾತ್ರಕ್ಕೇ ಮಿಥ್ಯಾ ಎನ್ನುವುದಾದರೆ ಸ್ವಪ್ನದೃಷ್ಟವಾದ ಆತ್ಮವೂ ಮಿಥ್ಯಾ ಆಗಬೇಕಾದೀತು. ಅದರಿಂದ ಆತ್ಮದಂತೆಯೇ ಸ್ವಪ್ನದೃಷ್ಟವಾದ ಗಜಾಭಾವವೂ ಅಬಾಧಿತವಾಗಿದ್ದು ಸತ್ಯವಾದ್ದರಿಂದ ಸಾಧ್ಯವಾದ ಮಿಥ್ಯಾತ್ವ ಬರುವುದಿಲ್ಲವಾದ್ದರಿಂದ ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ.

**ನಚ— ಮಿಥ್ಯಾತ್ವಂ ಪ್ರಪಂಚಸಮಸತ್ತಾಕಂ। ಏವಂಚ ನ ತಾತ್ವಿಕಾದ್ವೈತ ಹಾನಿಃ। ನಾಪಿ ಸಿದ್ಧಸಾಧನಂ। ತ್ವನ್ಮತೇ ಪ್ರಪಂಚೇ ಸ್ವಸಮಸತ್ತಾಕ ಮಿಥ್ಯಾತ್ವಾಸಿದ್ಧೇಃ— ಇತಿ ವಾಚ್ಯಂ। ಮಿಥ್ಯಾತ್ವಸ್ಯ ವ್ಯಾವಹಾರಿಕತ್ವೇ ತದ್ವಿರೋಧಿನಃ ಅಪ್ರಾತಿಭಾಸಿಕಸ್ಯ ಅನಪೋದಿತ ಸ್ವತಃಪ್ರಾಮಾಣ್ಯ ಪ್ರತ್ಯಕ್ಷಾದಿ ಸಿದ್ಧಸ್ಯ ಚ ವಿಶ್ವಸತ್ಯತ್ವಸ್ಯ ಪಾರಮಾರ್ಥಿಕತ್ವಾಪಾತಾತ್।**

ಅದ್ವೈತಿ ಹೇಳುತ್ತಾನೆ. 'ನಾನು ಮಿಥ್ಯಾತ್ವವನ್ನು ಅಬಾಧ್ಯ ಎನ್ನುವುದಿಲ್ಲ. ಅದರಿಂದ ತಾತ್ವಿಕ ಅದ್ವೈತಹಾನಿ ಇಲ್ಲ. ಬಾಧ್ಯ ಎಂದೂ ಹೇಳುವುದಿಲ್ಲ. ಅದರಿಂದ ಸಿದ್ಧಸಾಧನವೂ ಇಲ್ಲ. 'ಪ್ರಪಂಚ ಸಮಸತ್ತಾಕ' ಎನ್ನುತ್ತೇನೆ. ತತ್ವವಾದಿ ಮತದಲ್ಲಿ ಪ್ರಪಂಚದಲ್ಲಿ ಪ್ರಪಂಚ ಸಮಸತ್ತಾಕವಾದ ಮಿಥ್ಯಾತ್ವ ಅಂಗೀಕೃತವಾಗಿಲ್ಲದ್ದರಿಂದ ಅದನ್ನು ಸಾಧನೆ ಮಾಡುತ್ತೇನೆ. ಅದರಿಂದ ಸಿದ್ಧಸಾಧನತ್ವವಿಲ್ಲ' ಎಂದು.

ಇದು ಸರಿಯಲ್ಲ. ಅದ್ವೈತಮತದಲ್ಲಿ ಪ್ರಪಂಚ ವ್ಯಾವಹಾರಿಕವಾದ್ದರಿಂದ ತತ್ಸಮಸತ್ತಾಕವಾದ ಮಿಥ್ಯಾತ್ವವು ವ್ಯಾವಹಾರಿಕವೆಂದಾಗುವುದು. ಮಿಥ್ಯಾತ್ವವು ವ್ಯಾವಹಾರಿಕವೆಂದರೆ ಅದಕ್ಕೆ ವಿರೋಧಿಯಾದ ಸತ್ಯತ್ವವನ್ನು ವ್ಯಾವಹಾರಿಕ ಎನ್ನಬಾರದು. ಅದು ಪ್ರಾತಿಭಾಸಿಕವೋ ಪಾರಮಾರ್ಥಿಕವೋ ಆಗಬೇಕು. ಪ್ರಾತಿಭಾಸಿಕವೆನ್ನುವಂತಿಲ್ಲ. ಪ್ರಾತಿಭಾಸಿಕವೆಂದು ಅದ್ವೈತಿಯೇ ಒಪ್ಪುವುದೂ ಇಲ್ಲ. ಅದರಿಂದ ಅನಪೋದಿತವಾದ ಅಪವಾದರಹಿತವಾದ ಸ್ವತಃ ಪ್ರಾಮಾಣ್ಯಉಳ್ಳ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾದ ಸತ್ಯತ್ವವನ್ನು ಬ್ರಹ್ಮಸತ್ವದಂತೆ ಪಾರಮಾರ್ಥಿಕವೆಂದೇ ಹೇಳಬೇಕಾಗುತ್ತದೆ.

ಇದರ ಅಭಿಪ್ರಾಯವಿಷ್ಟು—'ಪ್ರಪಂಚದಲ್ಲಿ ಮಿಥ್ಯಾತ್ವವನ್ನು ವ್ಯಾವಹಾರಿಕವೆಂದು ಒಪ್ಪುವ ಅದ್ವೈತಿಯು ಪ್ರಪಂಚದಲ್ಲಿ ಅವನು ಒಪ್ಪಿರುವ ಸತ್ಯತ್ವವನ್ನೂ ಕೂಡ ವ್ಯಾವಹಾರಿಕವೆನ್ನುವುದು ಶಕ್ಯವಿಲ್ಲ. ಏಕೆಂದರೆ ಎರಡಕ್ಕೂ ತುಲ್ಯಸತ್ತಾವನ್ನು ಒಪ್ಪುವುದರಿಂದ ಅವುಗಳಿಗೆ ವಿರೋಧ ಉಂಟಾಗುವುದು. ಎರಡರಲ್ಲಿ ಯಾವುದಾದರೊಂದೇ ಸತ್ಯವಾಗಿರಬೇಕಾಗುವುದು. ಆದರೆ ಎರಡೂ ಸತ್ಯವೆ. ಇದನ್ನು ವಿರೋಧಬಾರದ ಹಾಗೆ ಮಾಡಿಯೇ ಕೂಡಿಸಬೇಕು. ವಿರೋಧಬಾರದಿರಬೇಕಾದರೆ ಸತ್ಯತ್ವವನ್ನು ವ್ಯಾವಹಾರಿಕವೆನ್ನದೆ ಪಾರಮಾರ್ಥಿಕವೆಂದೋ ಪ್ರಾತಿಭಾಸಿಕವೆಂದೋ ಹೇಳಬೇಕು. ಪ್ರಾತಿಭಾಸಿಕವೆಂದು ಹೇಳುವುದು ಅದ್ವೈತಿಗೆ ಇಷ್ಟವಿಲ್ಲ. ಅದರಿಂದ ಪಾರಮಾರ್ಥಿಕವೆನ್ನುವ ಪ್ರಸಂಗ ಅವನಿಗೆ ವಜ್ರಲೇಪದಂತೆ ಅಪರಿಹಾರ್ಯವೇ ಆಗುವುದು. ಅದರಿಂದ ಸಿದ್ಧಸಾಧನವೆ' ಎಂದು.

❖❖❖

द्वैताद्वैतप्रमाणयोर्व्यावहारिकपारमार्थिकविषयत्वेन व्यवस्थोक्त्ययोगाच्च । मिथ्यात्वस्य प्रातिभासिके व्यावहारिकतया व्यावहारिके च प्रातिभासिकतया च दृष्टत्वेन तयोस्तुल्यसत्ताकत्वायोगाच्च । अन्यथा प्रपञ्चे सत्यत्वमिथ्यात्वयोर्विधिसमुच्चयो वा निषेधसमुच्चयो वा स्यात् । तथा च–

''मिथ्यात्वं यद्यबाध्यं स्यात्सदद्वैतमतक्षतिः ।
मिथ्यात्वं यदि बाध्यं स्याज्जगत्सत्यत्वमापतेत् ।''

नच मिथ्यात्वस्य सत्यत्व-मिथ्यात्वाभ्यां दूषणं नित्यसमा जातिः । स्वव्याघातादेरभावात् । उक्तं हि–

''मिथ्यात्वस्य हि मिथ्यात्वे मिथ्यात्वं बाधितं भवेत् ।
सत्यत्वस्य च सत्यत्वे सत्यत्वं स्थापितं भवे''दिति ।

**किञ्च–**

**''धर्मस्य तदतद्रूपविकल्पानुपपत्तितः ।**
**धर्मिणस्तद्विशिष्टत्वभङ्गो नित्यसमो भवे''दिति**

**तल्लक्षणम् । नचात्र मिथ्यात्वस्य सत्यत्वे धर्मिणो मिथ्यात्ववैशिष्ट्यभङ्ग उक्तः । किन्तु अद्वैतहानिः । प्रत्युत भेदः किं भिन्ने उताभिन्ने स्यादिति त्वदुक्तिरेवाभिन्नादिरूपविशिष्टमात्र-निरासकत्वेन स्वव्याघातापाताज्जातिः । उक्तं हि ।**

**''एतामेव जातिमवष्टभ्य शुष्कतर्कवादिनां**
**बौद्धचार्वाकवेदान्तिनां बालव्यामोहहेतवः**
**कण्ठकोलाहला'' इति ।।**

ननु प्रपञ्चे सत्यत्वमिथ्यात्वयोर्व्यावहारिकत्वेऽप्यविरोधोऽङ्गीक्रियत इत्यत आह **द्वैताद्वैतेति** । प्रपञ्चसत्यत्वतन्मिथ्यात्वयोरिव द्वैताद्वैतयो: समानसत्ताकत्वेऽप्य-विरोधोपपत्तेरिति भाव: । **अन्यथेति** । प्रपञ्चसत्यत्वतन्मिथ्यात्वयोस्तुल्यसत्त्वा-ङ्गीकार इत्यर्थ: । **स्वव्याघातादेरिति** । स्वव्याघातकोत्तरस्य जातित्वादिति भाव: । ननु विशेषलक्षणसत्त्वे स्वव्याघातकोत्तरत्वरूपसामान्यलक्षणस्यासत्त्वं न दोष: । तत्साधारणसामान्यलक्षणान्तरस्यापि संभवादित्यत आह **किञ्चेति** ।

ननु मिथ्यात्वमबाध्यं बाध्यं वेति विकल्प्य दूषणाभिधानं नित्यसमा जातिरेव । मिथ्यात्वस्य बाध्यत्वे प्रपञ्चस्य मिथ्यात्ववैशिष्ट्यभङ्गात् । अबाध्यत्वेऽपि प्रपञ्चान्त:प्रविष्टमिथ्यात्वस्य मिथ्यात्वासिध्या सर्वप्रपञ्चमिथ्यात्वासिद्धेरिति पक्षद्वयेऽपि मिथ्यात्ववैशिष्ट्यभङ्गस्याविशिष्टत्वादित्याशङ्क्य निराकरोति **नचेति** । **अद्वैतहानिरिति** । यद्यप्यद्वैतहान्युद्भावनस्यापि बाधकतर्करूपतया विपर्यये पर्यवसानस्यावश्यकत्वेन मिथ्यात्ववैशिष्ट्यभङ्ग एव पर्यवसानात् जातित्वं दुर्वारम् । तथापि तदुद्भावनस्यापसिद्धान्त एव तात्पर्यं न मिथ्यात्ववैशिष्ट्यभङ्ग इति न जातित्वमिति ध्येयम् । **प्रत्युतेति** । यद्यपि तत्र धर्मिण एव विकल्पितत्वेन

धर्मस्याविकल्पितत्वान्न जातिः । धर्मस्य विकल्प्य दूषण एव तथात्वात् । तथापि विमतो भिन्नो मुक्तत्वादित्यनुमानप्रतिज्ञाविषयीभूतभेदविषयतया प्रवृत्तविकल्पपूर्वकपरोक्तदूषणविषयत्वादस्य ग्रन्थस्येति जातित्वं दुर्वारमिति ध्येयम् । **स्वव्याघातापातादिति** । त्वदभिमतभेदेऽप्येवं विकल्प्य दूषणाभिधानसंभवादिति भावः । **सामान्यत इति** । मिथ्यात्वशरीरघटकोपाध्यविचारेणेत्यर्थः ।

**।। इति सामान्यतो मिथ्यात्वभङ्गः ।।**

❖❖❖

**ದ್ವೈತಾದ್ವೈತಪ್ರಮಾಣಯೋಃ ವ್ಯಾವಹಾರಿಕ ಪಾರಮಾರ್ಥಿಕ ವಿಷಯತ್ವೇನ ವ್ಯವಸ್ಥೋಕ್ತ್ಯಯೋಗಾಚ್ಚ ।**

ಪ್ರಪಂಚದಲ್ಲಿ ಸತ್ಯತ್ವ ಮಿಥ್ಯಾತ್ವಗಳೆರಡಕ್ಕೂ ವ್ಯಾವಹಾರಿಕತ್ವವನ್ನು ಒಪ್ಪಿಯೇ ಅವುಗಳಿಗೆ ವಿರೋಧವಿಲ್ಲವೆನ್ನುತ್ತೇನೆ ಎಂದರೆ ದ್ವೈತಪ್ರಮಾಣ ಮತ್ತು ಅದ್ವೈತಪ್ರಮಾಣಗಳಿಗೆ ವ್ಯಾವಹಾರಿಕ ಮತ್ತು ಪಾರಮಾರ್ಥಿಕ ವಿಷಯತ್ವಗಳೆಂದು ನೀನು ವ್ಯವಸ್ಥೆ ಮಾಡಿದ್ದು ಕೂಡಲಾರದು. ಎರಡಕ್ಕೂ ವ್ಯಾವಹಾರಿಕ ವಿಷಯತ್ವವನ್ನೇ ಒಪ್ಪಿ ವಿರೋಧವಿಲ್ಲ ಎನ್ನಬಹುದಿತ್ತು.

ಬ್ರಹ್ಮಜ್ಞಾನ ಒಂದೇ ಪ್ರಪಂಚಕ್ಕೂ ಮಿಥ್ಯಾತ್ವಕ್ಕೂ ಬಾಧಕವಾದ್ದರಿಂದ ಸಿದ್ಧಿಕಾರ ಹೇಳುವಂತೆ ಎರಡರಲ್ಲಿಯೂ ನಿಷೇಧ್ಯ ತಾವಚ್ಛೇದಕವು ದೃಶ್ಯತ್ವ ಒಂದೇ ಆಗಿರುವುದರಿಂದ ಏಕಬಾಧಕ ಬಾಧ್ಯತ್ವವು ಏಕನಿಷೇಧ್ಯತಾವಚ್ಛೇದಕಾವಚ್ಛಿನ್ನತ್ವವು ತುಲ್ಯಸತ್ತಾಕತ್ವಕ್ಕೆ ನಿಯಾಮಕವಾದ್ದರಿಂದ ಮಿಥ್ಯಾತ್ವಕ್ಕೆ ಪ್ರಪಂಚ ಸಮಸತ್ತಾಕತ್ವವನ್ನು ಹೇಳಿ ಸತ್ಯತ್ವಮಿಥ್ಯಾತ್ವಗಳಿಗೆ ಎರಡಕ್ಕೂ ವ್ಯಾವಹಾರಿಕತ್ವವನ್ನೇ ಒಪ್ಪಿ ವಿರೋಧವಿಲ್ಲ ಎನ್ನುವುದಾದರೆ ದ್ವೈತಾದ್ವೈತಪ್ರಮಾಣಗಳಿಗೂ ಏಕಬಾಧಕ ಬಾಧ್ಯತ್ವವನ್ನು ಹೇಳಿ ಎರಡೂ ವ್ಯಾವಹಾರಿಕ ವಿಷಯಕ ಎಂದಾಗಲಿ ಎರಡೂ ಪಾರಮಾರ್ಥಿಕ ವಿಷಯ ಎಂದಾಗಲಿ ಹೇಳಿ ಎರಡಕ್ಕೂ ವಿರೋಧವಿಲ್ಲ ಎನ್ನಬಹುದಿತ್ತು. ವ್ಯಾವಹಾರಿಕ ಪಾರಮಾರ್ಥಿಕರೂಪ ಭಿನ್ನವಿಷಯತ್ವೇನ ವಿರೋಧ ಪರಿಹಾರವನ್ನು ಮಾಡಬೇಕಾಗಿರಲಿಲ್ಲ ಮಾಡಿದ್ದಾನೆ, ಅದು ಕೂಡುವುದಿಲ್ಲ. ದೃಶ್ಯತ್ವವು ತುಚ್ಛಬ್ರಹ್ಮಗಳಲ್ಲಿಯೂ ಇರುವುದರಿಂದ ಅದು ನಿಷೇಧ್ಯತಾವಚ್ಛೇದಕವಾಗುವುದೂ ಇಲ್ಲ. ಪರಸ್ಪರ ವಿರಹರೂಪವಾದ ಎರಡರಲ್ಲಿ ಒಂದು ನಿಷೇಧ್ಯತಾವಚ್ಛೇದಕವಿರುವುದೂ ಎಲ್ಲಿಯೂ ಕಂಡಿಲ್ಲ.

**ಮಿಥ್ಯಾತ್ವಸ್ಯ ಪ್ರಾತಿಭಾಸಿಕೇ ವ್ಯಾವಹಾರಿಕತಯಾ ವ್ಯಾವಹಾರಿಕೇ ಪ್ರಾತಿಭಾಸಿಕತಯಾ ಚ ದೃಷ್ಟತ್ವೇನ ತಯೋಃ ತುಲ್ಯಸತ್ತಾಕತ್ವಾಯೋಗಾಚ್ಚ। ಅನ್ಯಥಾ ಪ್ರಪಂಚೇ ಸತ್ಯತ್ವಮಿಥ್ಯಾತ್ವಯೋಃ ವಿಧಿ ಸಮುಚ್ಚಯೋ ವಾ ನಿಷೇಧ ಸಮುಚ್ಚಯೋ ವಾ ಸ್ಯಾತ್ ।**

ಪ್ರಾತಿಭಾಸಿಕ ಶುಕ್ತಿರಜತಾದಿಗಳಲ್ಲಿ ಮಿಥ್ಯಾತ್ವವು ವ್ಯಾವಹಾರಿಕವಾಗಿಯೇ ಕಂಡಿದೆ. ವ್ಯಾವಹಾರಿಕ ಘಟಾದಿಗಳಲ್ಲಿ ಒಪ್ಪಿರುವ ಮಿಥ್ಯಾತ್ವವು ಪಾರಮಾರ್ಥಿಕವೆಂದರೆ ಅದ್ವೈತಹಾನಿಪ್ರಸಂಗವಿರುವುದರಿಂದ ಪ್ರಾತಿಭಾಸಿಕವಾಗಿಯೇ ಕಂಡಿದೆ. ಆದರಿಂದ ಪ್ರಪಂಚ ಮತ್ತು ಅದರ ಮಿಥ್ಯಾತ್ವಗಳು ತುಲ್ಯಸತ್ತಾಕಗಳೆನ್ನುವುದು ಯುಕ್ತವಲ್ಲ. ಆದರಿಂದ ಪ್ರಪಂಚ ಸಮಸತ್ತಾಕವಾದ ಮಿಥ್ಯಾತ್ವವನ್ನು ಪ್ರಪಂಚದಲ್ಲಿ ಸಾಧಿಸುತ್ತೇನೆ ಎಂದು ಅದ್ವೈತಿಯು ಹೇಳುವುದು ಯುಕ್ತವಲ್ಲ. ವಿರುದ್ಧಗಳಿಗೆ ಏಕತ್ರ ಸಮಸತ್ತಾಕತ್ವವನ್ನು ಅಂಗೀಕರಿಸುವುದಾದರೆ ಪ್ರಪಂಚಲ್ಲಿ ವಿರುದ್ಧವಾದ ತಾತ್ವಿಕಸತ್ಯತ್ವ ಮತ್ತು ತಾತ್ವಿಕಮಿಥ್ಯಾತ್ವಗಳೆರಡೂ ಇರಲಿ, ಅಥವಾ ತಾತ್ವಿಕವಾದ ಅವುಗಳ ಅಭಾವಗಳೆರಡೂ ಇರಲಿ ಎಂದು ಅತಿಪ್ರಸಂಗ ಬರುತ್ತದೆ. 'ಕಲ್ಪಿತವಾದ ಉಭಯ ಮತ್ತು ತಾತ್ವಿಕವಾದ ಉಭಯಾಭಾವವೆಂದು ನನಗೆ ಇಷ್ಟಾಪತ್ತಿ' ಎಂದರೆ ರೂಪ್ಯದಲ್ಲಿ ಕಲ್ಪಿತವಾದ ಸತ್ವಾಸತ್ವ ಉಭಯವಿರಲಿ. ಉಭಯಾಭಾವವೇಕೆ?

**ತಥಾಚ– ಮಿಥ್ಯಾತ್ವಂ ಯದ್ಯಬಾಧ್ಯಂ ಸ್ಯಾತ್ ಸದದ್ವೈತಮತಕ್ಷತಿಃ ।**
**ಮಿಥ್ಯಾತ್ವಂ ಯದಿ ಬಾಧ್ಯಂ ಸ್ಯಾತ್ ಜಗತ್ಸತ್ಯತ್ವಂ ಆಪತೇತ್ ॥**

**ನಚ ಮಿಥ್ಯಾತ್ವಸ್ಯ ಸತ್ಯತ್ವ ಮಿಥ್ಯಾತ್ವಾಭ್ಯಾಂ ದೂಷಣಂ ನಿತ್ಯಸಮಾ ಜಾತಿಃ । ಸ್ವವ್ಯಾಘಾತಾದೇಃ ಅಭಾವಾತ್ । ಉಕ್ತಂ ಹಿ—**

**ಮಿಥ್ಯಾತ್ವಸ್ಯ ಹಿ ಮಿಥ್ಯಾತ್ವೇ ಮಿಥ್ಯಾತ್ವಂ ಬಾಧಿತಂ ಭವೇತ್ ।**
**ಸತ್ಯತ್ವಸ್ಯ ಚ ಸತ್ಯತ್ವೇ ಸತ್ಯತ್ವಂ ಸ್ಥಾಪಿತಂ ಭವೇತ್ । ಇತಿ ॥**

ಹೀಗಾಗಿ ಮಿಥ್ಯಾತ್ವವು ಅಬಾಧ್ಯವೆಂದರೆ ಅಬಾಧ್ಯವು ಬ್ರಹ್ಮ ಒಂದೇ ಎಂಬ ಮತಕ್ಕೆ ಹಾನಿ. ಮಿಥ್ಯಾತ್ವವು ಬಾಧ್ಯವೆಂದರೆ ಜಗತ್ಸತ್ಯತ್ವವು ಸತ್ಯವೆಂದಾದೀತು' ಎಂದು ಇಷ್ಟರವರೆಗೆ ಹೇಳಿದಂತಾಯಿತು.

ಯದ್ಯಪಿ ಸಾಧ್ಯದಲ್ಲಿ ಸಾಧ್ಯವಿದ್ದರೂ ದೋಷ, ಸಾಧ್ಯವಿಲ್ಲದಿದ್ದರೂ ದೋಷ ! ಎನ್ನುವುದು 'ನಿತ್ಯಸಮಾ' ಎಂಬ ಜಾತ್ಯುತ್ತರ. ಪ್ರಕೃತದಲ್ಲಿ ಮಿಥ್ಯಾತ್ವರೂಪ ಸಾಧ್ಯದಲ್ಲಿ, ಮಿಥ್ಯಾತ್ವರೂಪ ಸಾಧ್ಯವಿದ್ದರೆ ಜಗತ್ ಸತ್ಯತಾಪತ್ತಿ, ಮಿಥ್ಯಾತ್ವರೂಪ ಸಾಧ್ಯವಿಲ್ಲದಿದ್ದರೆ ಅದು ಸತ್ಯವಾಗುವುದರಿಂದ ಸತ್ಯವು ಬ್ರಹ್ಮ ಒಂದೇ ಎಂಬ ಮತಕ್ಕೆ ಹಾನಿ ಎಂದು ದೋಷಗಳನ್ನು ಹೇಳುವುದರಿಂದ ಇದು ನಿತ್ಯಸಮಾ ಎಂಬ ಜಾತ್ಯುತ್ತರವಾಗುತ್ತದೆ ಎಂದು ಆಕ್ಷೇಪಕ್ಕೆ ಅವಕಾಶವಿದೆ.

ಆದರೆ ಜಾತಿವಿಶೇಷಲಕ್ಷಣ ಬಂದ ಮಾತ್ರಕ್ಕೆ ಅದು ಜಾತ್ಯುತ್ತರವಾಗುವುದಿಲ್ಲ. ಜಾತಿಬೀಜವಾದ ಸ್ವವ್ಯಾಘಾತ ಯುಕ್ತಾಂಗಹಾನಿ ಅಯುಕ್ತಾಂಗಾಧಿಕ್ಯ ಮುಂತಾದ ಜಾತಿ ಸಾಮಾನ್ಯಲಕ್ಷಣಗಳೂ ಇರಬೇಕು. ಅವು ನಮ್ಮ ಉತ್ತರದಲ್ಲಿಲ್ಲ. 'ಸ್ವವ್ಯಾಘಾತ' ಎಂದರೆ, ಪ್ರತಿವಾದಿಗೆ ಹೇಗೋ ಹಾಗೇ ತನಗೂ ಅನಿಷ್ಟ. ತನಗೂ ಅನಿಷ್ಟಾಪಾದಕವಾದ ಉತ್ತರವು 'ಸ್ವ-ವ್ಯಾಘಾತಕ'ವೆನಿಸುತ್ತದೆ. ಈ ಲಕ್ಷಣ ನಮ್ಮ ಉತ್ತರದಲ್ಲಿಲ್ಲ.

ವಾದರತ್ನಾವಲಿಯಲ್ಲಿ ವಿಷ್ಣುದಾಸಾಚಾರ್ಯರು ಹೇಳಿದ್ದಾರೆ— 'ಮಿಥ್ಯಾತ್ವಕ್ಕೆ ಮಿಥ್ಯಾತ್ವ ಬಂದರೆ ಮಿಥ್ಯಾತ್ವ ಬಾಧಿತವೆನಿಸುತ್ತದೆ. ಸತ್ಯತ್ವಕ್ಕೆ ಸತ್ಯತ್ವ ಬಂದರೆ ಸತ್ಯತ್ವವು ಸ್ಥಾಪಿತವಾಗುತ್ತದೆ.' ಅದರಿಂದ ನಮ್ಮ ಉತ್ತರ ಸ್ವವ್ಯಾಘಾತಕವಲ್ಲ.

ಮತ್ತು 'ನಿತ್ಯಸಮಾ' ಜಾತಿಯ ವಿಶೇಷಲಕ್ಷಣವೂ ನಮ್ಮ ಉತ್ತರದಲ್ಲಿಲ್ಲ. ಏಕೆಂದರೆ, ಮಿಥ್ಯಾತ್ವರೂಪ ಸಾಧ್ಯದಲ್ಲಿ ಮಿಥ್ಯಾತ್ವವಿದ್ದರೆ ಪ್ರಪಂಚದಲ್ಲಿ ಮಿಥ್ಯಾತ್ವಕ್ಕೆ ಭಂಗ ಬರುತ್ತದೆ ಎಂದು ಪ್ರತಿವಾದಿಯಾದ ಅದ್ವೈತಿಗೆ ಅನಿಷ್ಟಾಪಾದನ ಮಾಡುತ್ತೇವೆ. ಆದರೆ ಮಿಥ್ಯಾತ್ವರೂಪ ಸಾಧ್ಯದಲ್ಲಿ ಮಿಥ್ಯಾತ್ವವಿಲ್ಲದಿದ್ದರೆ, ಅಂದರೆ ಸತ್ಯತ್ವವೇ ಇದ್ದರೆ 'ಮಿಥ್ಯಾತ್ವಕ್ಕೆ'ಭಂಗ ಎನ್ನುವುದಿಲ್ಲ. ಮಿಥ್ಯಾತ್ವವು ಇದೆ, ಅದು ಸತ್ಯವಾಗಿಯೇ ಇದೆ, ಎಂದಿಟ್ಟುಕೊಂಡು, 'ಅದ್ವೈತಹಾನಿ' ರೂಪದೋಷವನ್ನು ಪ್ರತಿವಾದಿಗೆ ಆಪಾದನೆ ಮಾಡುತ್ತೇವೆ ಹೊರತು ಮಿಥ್ಯಾತ್ವಕ್ಕೆ ಭಂಗ ಬರುತ್ತದೆ ಎಂದು ಆಪಾದಿಸುವುದಿಲ್ಲ-

**ಕಿಂಚ— ಧರ್ಮಸ್ಯ ತದತದ್‌ರೂಪ ವಿಕಲ್ಪಾನುಪಪತ್ತಿತಃ ।**
**ಧರ್ಮಿಣಸ್ತದ್‌ವಿಶಿಷ್ಟತ್ವ ಭಂಗೋ ನಿತ್ಯಸಮೋ ಭವೇತ್ ॥**

**ಇತಿ ತಲ್ಲಕ್ಷಣಂ। ನ ಚಾತ್ರ ಮಿಥ್ಯಾತ್ವಸ್ಯ ಸತ್ಯತ್ವೇ ಧರ್ಮಿಣೋ ಮಿಥ್ಯಾತ್ವ ವೈಶಿಷ್ಟ್ಯಭಂಗಃ ಉಕ್ತಃ। ಕಿಂತು ಅದ್ವೈತ ಹಾನಿಃ।**

ಸಾಧ್ಯಧರ್ಮವನ್ನು ತದ್ರೂಪವೆ ಅತದ್ರೂಪವೆ ಎಂದು ವಿಕಲ್ಪಮಾಡಿ ದೋಷಹೇಳಿ ಧರ್ಮಿಯಲ್ಲಿ ಸಾಧ್ಯಧರ್ಮವೈಶಿಷ್ಟ್ಯಕ್ಕೆ ಭಂಗ ಬಂದಿತೆಂದು ಹೇಳಿದರೆ ಅದು ನಿತ್ಯಸಮಾ ಜಾತಿಯೆನಿಸುವುದು. ಉದಾ: 'ಶಬ್ದವು ಅನಿತ್ಯ' ಎಂದು ಸಾಧನೆ ಮಾಡುವಾಗ ಪ್ರತಿವಾದಿಯು 'ಅನಿತ್ಯತ್ವರೂಪ ಸಾಧ್ಯಧರ್ಮವು ಅನಿತ್ಯವೆ, ನಿತ್ಯವೆ? ಅನಿತ್ಯವೆಂದರೆ ಕದಾಚಿತ್ ಅನಿತ್ಯತ್ವ ಇಲ್ಲದಾದಾಗ ಶಬ್ದವು ನಿತ್ಯವಾದೀತು. ನಿತ್ಯವೆಂದರೆ ನಿತ್ಯವಾದ ಆ ಧರ್ಮಉಳ್ಳ ಶಬ್ದವೂ ನಿತ್ಯವಾದೀತು, ಶಬ್ದವು ಅನಿತ್ಯವಾದರೆ ಅನಿತ್ಯತ್ವರೂಪ ನಿತ್ಯಧರ್ಮಕ್ಕೆ ಆಶ್ರಯವಿಲ್ಲವಂತಾದೀತು. ಅದರಿಂದ ಶಬ್ದವನ್ನು ನಿತ್ಯವೆಂದೇ ಹೇಳಬೇಕು. ಆಗ ಶಬ್ದಕ್ಕೆ ಅನಿತ್ಯತ್ವ ಧರ್ಮಭಂಗವಾಗುವುದು' ಎಂದು.

ಯದ್ಯಪಿ ಇದೇರೀತಿ ಪ್ರಕೃತ ಸಾಧ್ಯಧರ್ಮವಾದ ಮಿಥ್ಯಾತ್ವವು ಮಿಥ್ಯಾ ಆದರೆ ಜಗತ್ತಿಗೆ ಮಿಥ್ಯಾತ್ವವಿಲ್ಲ, ಸತ್ಯತ್ವವೆ ಇದೆ ಎಂದು ಮಿಥ್ಯಾತ್ವಭಂಗ. ಮಿಥ್ಯಾತ್ವವು ಮಿಥ್ಯಾ ಅಲ್ಲದಿದ್ದರೆ ಅಂದರೆ ಅಬಾಧ್ಯವಾದರೆ, ಜಗತ್ತಿನಲ್ಲಿ ಸೇರಿರುವ ಈ ಮಿಥ್ಯಾತ್ವಕ್ಕೇ ಮಿಥ್ಯಾತ್ವಭಂಗ. ಹೀಗೆ ನಿತ್ಯಸಮಾಜಾತಿ ಲಕ್ಷಣ ಕೂಡುತ್ತದೆ. ಆದರೂ ಮಿಥ್ಯಾತ್ವವು ಮಿಥ್ಯಾ ಅಲ್ಲದಿದ್ದರೆ, ಅಬಾಧ್ಯವಾದರೆ ಅದ್ವೈತಹಾನಿ ಎಂದು ಬೇರೆಯೆ ದೋಷವನ್ನು ನಾವು ಹೇಳುವುದರಿಂದ ಇದು ನಿತ್ಯಸಮಾಜಾತಿ ಎನಿಸುವುದಿಲ್ಲ.

ಯದ್ಯಪಿ 'ಮಿಥ್ಯಾತ್ವವು ಅಬಾಧ್ಯ ಎಂದಾದರೆ ಅದ್ವೈತಹಾನಿಯಾದೀತು' ಎಂಬ ತರ್ಕಕ್ಕೇ 'ಅದ್ವೈತಹಾನಿಯಾಗಬಾರದು. ಅದರಿಂದ ಮಿಥ್ಯಾತ್ವವು ಬಾಧ್ಯ' ಎಂದು ವಿಪರ್ಯಯ

ಪರ್ಯವಸಾನ ಮಾಡಿದಾಗ 'ಮಿಥ್ಯಾತ್ವವು ಬಾಧ್ಯ'ವೆಂದು ಮಿಥ್ಯಾತ್ವಭಂಗವೇ ದೋಷವೆನಿಸುತ್ತದೆ. ಆದರಿಂದ ನಿತ್ಯಸಮಾಜಾತಿ ಲಕ್ಷಣ ಬರುತ್ತದೆ. ಆದರೂ ಅದ್ವೈತಹಾನ್ಯಾಪಾದನೆಗೆ ವಿಪರ್ಯಯಪರ್ಯವಸಾನ ಮಾಡಿ ಮಿಥ್ಯಾತ್ವ ಭಂಗವನ್ನು ನಾವು ಹೇಳುವುದಿಲ್ಲ, ಹೇಳುವ ತಾತ್ಪರ್ಯ ನಮಗೆ ಇಲ್ಲ. ಆದ್ದರಿಂದ ನಿತ್ಯಸಮಾಜಾತಿ ಲಕ್ಷಣವಿಲ್ಲವಾಗುತ್ತದೆ.

**ಪ್ರತ್ಯುತ 'ಭೇದಃ ಕಿಂ ಭಿನ್ನೇ, ಉತ ಅಭಿನ್ನೇ ಸ್ಯಾದಿ'ತಿ ತ್ವದುಕ್ತಿರೇವ ಅಭಿನ್ನಾದಿರೂಪ ವಿಶಿಷ್ಟ ಮಾತ್ರ ನಿರಾಸಕತ್ವೇನ ಸ್ವವ್ಯಾಘಾತಾಪಾತಾತ್ ಜಾತಿಃ। ಉಕ್ತಂ ಹಿ 'ಏತಾಮೇವ ಜಾತಿಂ ಅವಷ್ಟಭ್ಯ ಶುಷ್ಕತರ್ಕವಾದಿನಾಂ ಬೌದ್ಧ ಚಾರ್ವಾಕ ವೇದಾಂತಿನಾಂ ಬಾಲವ್ಯಾಮೋಹ ಹೇತವಃ ಕಂಠಕೋಲಾಹಲಾಃ' ಇತಿ ॥**

ನಿಜ ಹೇಳಬೇಕೆಂದರೆ, ಭೇದವು ಭಿನ್ನದಲ್ಲಿರುವುದೆ ಅಭಿನ್ನದಲ್ಲಿರುವುದೆ ಎಂದು ಅದ್ವೈತಿಯು ವಿಕಲ್ಪಮಾಡಿ 'ಭೇದವು ಭಿನ್ನದಲ್ಲಿರುವುದಾದರೆ ಆ ಭೇದವೂ ಭಿನ್ನದಲ್ಲಿರಬೇಕೆಂದು ಅನವಸ್ಥಾ. ಅಭಿನ್ನದಲ್ಲಿರುವುದಾದರೆ ಭೇದ-ಅಭೇದಗಳಿಗೆ ಪರಸ್ಪರವಿರೋಧ' ಎಂದು ಖಂಡಿಸುವುದೇ ತನಗೂ ಸಮ್ಮತವಾಗಿರುವ ಅಭಿನ್ನಭಿನ್ನ ಇತ್ಯಾದಿ ವಿಶಿಷ್ಟಗಳನ್ನೆಲ್ಲವನ್ನೂ ನಿರಾಸಮಾಡುತ್ತದೆ. 'ಅಭಿನ್ನಂ ಬ್ರಹ್ಮ' ಎಂಬಲ್ಲಿ ಅಭೇದವು ಭಿನ್ನದಲ್ಲಿರುವುದೆ, ಅಭಿನ್ನದಲ್ಲೇ? ಎಂದು ನಿರಾಸಮಾಡುವುದರಿಂದ ಸ್ವವ್ಯಾಹತಿಗೆ ಕಾರಣವಾಗುವುದರಿಂದ ಜಾತ್ಯುತ್ತರವೆನಿಸುತ್ತದೆ.

ಬೌದ್ಧಧಿಕ್ಕಾರ ಗ್ರಂಥದಲ್ಲಿ ಉದಯನನು ಕೂಡ ಹೇಳಿದ್ದಾನೆ— 'ಇದೇ ಬಗೆಯ ಜಾತ್ಯುತ್ತರವನ್ನು ಆಶ್ರಯಿಸಿಯೆ ಶುಷ್ಕತರ್ಕವಾದಿಗಳಾದ ಬೌದ್ಧರು ಚಾರ್ವಾಕರು ಮತ್ತು ವೇದದ ಅಂತ್ಯ ಮಾಡಲೆಂದೇ ಹೊರಟಿರುವ 'ವೇದಾಂತಿ' ಅದ್ವೈತಿಗಳೂ ಅಜ್ಞರನ್ನು ದಿಗ್ಭ್ರಮೆಗೊಳಿಸು ವಂತೆ ದೊಡ್ಡಧ್ವನಿಯಿಂದ ಕೋಲಾಹಲ ಮಾಡುತ್ತಾರೆ' ಎಂದು.

ಯದ್ಯಪಿ 'ಭೇದವು ಭಿನ್ನದಲ್ಲಿರುವುದೆ, ಅಭಿನ್ನದಲ್ಲಿರುವುದೆ?' ಎನ್ನುವಲ್ಲಿ ಭೇದರೂಪ ಧರ್ಮಿಯ ವಿಷಯದಲ್ಲಿ ವಿಕಲ್ಪ ಮಾಡಿದೆ ಹೊರತು ಸಾಧ್ಯಧರ್ಮವಿಷಯದಲ್ಲಿ ಭಿನ್ನವೆ ಅಭಿನ್ನವೆ ಎಂದು ಧರ್ಮವಿಕಲ್ಪ ಮಾಡಿಲ್ಲ. ಆದರಿಂದ ಅದು ನಿತ್ಯಸಮಾ ಜಾತಿಯಾಗಲಾರದು. ಸಾಧ್ಯಧರ್ಮವಿಷಯದಲ್ಲಿ ಧರ್ಮವಿಕಲ್ಪ ಮಾಡಿ ದೋಷ ಹೇಳಿದರೆ ಮಾತ್ರ ಅದು ಜಾತಿಯಾಗುವುದು. ಆದರೂ 'ವಿಮತನಾದ ಜೀವನು ಭಿನ್ನ, ಮುಕ್ತನಾಗಿರುವುದರಿಂದ', ಎಂಬ ನಮ್ಮ ಅನುಮಾನದಲ್ಲಿ ಸಾಧ್ಯ ಧರ್ಮವಾದ ಭೇದದ ವಿಷಯದಲ್ಲಿಯೇ ಅದ್ವೈತಿಗಳು ಹೀಗೆ ವಿಕಲ್ಪಮಾಡಿ ದೋಷವನ್ನು ಹೇಳಿದ್ದಾರೆ. ಸ್ವವ್ಯಾಹತವಾದ್ದರಿಂದ ಇದು ಜಾತಿ ಹೌದು, ಎಂದು ಹೇಳುವ ತಾತ್ಪರ್ಯ ಎಂದಿಟ್ಟುಕೊಳ್ಳಬೇಕು.

❖❖❖

## 16. दृश्यत्वहेतुभङ्गः

दृश्यत्वहेतूक्तिरपि

''स्तम्भादिप्रत्ययो मिथ्या प्रत्ययत्वात्तथाहि यः ।
प्रत्ययस्स मृषा दृष्टः स्वप्नादिप्रत्ययो यथे''ति

बौद्धोक्तयुक्तिच्छर्दिमात्रम् । इयांस्तु विशेषः । बौद्धमते ह्यप्रामाण्यस्य स्वतस्त्वाद्युक्तम् । त्वन्मते तु प्रामाण्यस्य स्वतस्त्वात्तदयुक्तमिति ।

किञ्चेदं दृश्यत्वं वृत्तिव्याप्यत्वं फलव्याप्यत्वं वा साधारणं वा कदाचित्कथञ्चिद्विषयत्वं वा स्वव्यवहारे स्वातिरेकिसंविदपेक्षा-नियतिर्वा अस्वप्रकाशत्वं वा ?

नाद्यः । आत्मनोऽपि वेदान्त जनितवृत्तिव्याप्यत्वात् । अन्यथा ब्रह्मपराणां वेदान्तानां ब्रह्मज्ञानार्थं श्रवणादिविधेश्च वैयर्थ्यम् । ब्रह्म विचारयतोर्गुरुशिष्ययोर्मौनं मौढ्यं च स्यात् ।

बौद्धोक्तेति । नतु स्वकल्पनेत्यर्थः । ननु तत्कल्पनापि दूषणसमर्था चेत् का नो हानिरित्यत आह इयांस्तु भेद इति । तदयुक्तमिति । प्रामाण्यस्या-बाधितार्थकत्वरूपस्य बाध्यत्वरूपमिथ्यात्वासहिष्णुत्वादित्यर्थः । स्वव्यवहार इति । अत्र नियतिपदं स्वप्रकाशत्वादिविशिष्टात्मव्यवहारे स्वातिरेकिसंविदपेक्षासत्त्वात् तत्र व्यभिचारवारणाय । मौनमिति । गुरोः स्वीयशब्दात् शिष्यस्य ब्रह्मप्रतीत्यभाव-निश्चयात् शब्दाप्रयोग इत्यर्थः ।

❖❖❖

# ದೃಶ್ಯತ್ವ ಹೇತು ಭಂಗಃ

## ದೃಶ್ಯತ್ವವು ಬೌದ್ಧನು ಹೇಳಿದ ಯುಕ್ತಿ

**ದೃಶ್ಯತ್ವ ಹೇತೂಕ್ತಿರಪಿ—**
**ಸ್ತಂಭಾದಿ ಪ್ರತ್ಯಯೋ ಮಿಥ್ಯಾ ಪ್ರತ್ಯಯತ್ವಾತ್ ತಥಾ ಹಿ ಯಃ ।**
**ಪ್ರತ್ಯಯಃ ಸ ಮೃಷಾ ದೃಷ್ಟಃ ಸ್ವಪ್ನಾದಿ ಪ್ರತ್ಯಯೋ ಯಥಾ ॥**

**ಇತಿ ಬೌದ್ಧೋಕ್ತಯುಕ್ತಿ ಛರ್ದಿಮಾತ್ರಂ । ಇಯಾಂಸ್ತು ವಿಶೇಷಃ । ಬೌದ್ಧಮತೇ ಹಿ ಅಪ್ರಾಮಾಣ್ಯಸ್ಯ ಸ್ವತಸ್ತ್ವಾದ್ ಯುಕ್ತಂ । ತ್ವನ್ಮತೇ ತು ಪ್ರಾಮಾಣ್ಯಸ್ಯ ಸ್ವತಸ್ತ್ವಾತ್ ತತ್ ಅಯುಕ್ತಂ ಇತಿ ।**

'ವಿಮತಂ ಮಿಥ್ಯಾ ದೃಶ್ಯತ್ವಾತ್ ಶುಕ್ತಿರಜತವತ್' ಎಂದು ಮಿಥ್ಯಾತ್ವಾನುಮಾನದಲ್ಲಿ ನೀನು 'ದೃಶ್ಯತ್ವಾತ್' ಎಂದು ದೃಶ್ಯತ್ವವನ್ನು ಹೇತುವಾಗಿ ಹೇಳಿದ್ದು ನಿನ್ನ ಸ್ವಂತಕಲ್ಪನೆಯಲ್ಲ. 'ಸ್ತಂಭಾದಿ ವಿಷಯದಲ್ಲಿ ಬರುವ ಜ್ಞಾನವು ಮಿಥ್ಯಾ ಅಪ್ರಮಾಣ, ಅಸದ್ವಿಷಯಕ, ಏಕೆಂದರೆ ಅದು ಜ್ಞಾನವಾಗಿರುವುದರಿಂದ. ಅದು ಹೇಗೆ ಎಂದರೆ ಹೇಳುತ್ತೇನೆ, ಯಾವುದು ಜ್ಞಾನವೋ ಅದು ಅಪ್ರಮಾಣವಾಗಿರುವುದು ಕಂಡಿದೆ, ಸ್ವಪ್ನಾದಿಜ್ಞಾನದಂತೆ' ಎಂದು ಬೌದ್ಧನು ಹೇಳಿದ್ದರ ವಾಂತಿ, ಯಥಾವತ್ತಾದ ಅನುವಾದಮಾತ್ರ.

'ಬೌದ್ಧನ ಕಲ್ಪನೆ ಇದೆನ್ನುವುದಾದರೆ ಏನು ದೋಷ? ಅದು ಅವನಿಗೆ ಪ್ರಪಂಚಸತ್ಯತ್ವ ನಿರಾಸಕ್ಕೆ ಸಮರ್ಥವಾಗಿರುವುದಾದರೆ ನಾನು ಅದನ್ನು ವಾಂತಿ ಮಾಡಿದರೆ ಅದರಿಂದ ನನಗೇನೂ ನಷ್ಟವಿಲ್ಲ' ಎಂದರೆ, ನಿಮ್ಮಿಬ್ಬರಲ್ಲಿ ಇಷ್ಟು ವ್ಯತ್ಯಾಸವಿದೆ—ಬೌದ್ಧಮತದಲ್ಲಿ ಜ್ಞಾನಗಳಲ್ಲಿ ಅಪ್ರಾಮಾಣ್ಯವೆ ಸ್ವಾಭಾವಿಕ, ಸ್ವತಃ ಗೃಹೀತವಾಗುತ್ತದೆ. ಆದರಿಂದ ಸ್ತಂಭಾದಿಜ್ಞಾನವೆಲ್ಲವೂ ಉತ್ಸರ್ಗತಃ ಅಸದ್ವಿಷಯಕವೆಂದು ಜ್ಞಾನಗ್ರಾಹಕದಿಂದಲೇ ಗೃಹೀತವಾಗಿರುವುದರಿಂದ ಸ್ತಂಭಾದಿಜ್ಞಾನವು ಅಸದ್ವಿಷಯಕವಾಗಿರುವುದು ಯುಕ್ತವೆಂದು, ದೃಶ್ಯತ್ವಹೇತುವಿಗೆ ಅನುಕೂಲತರ್ಕವಿದೆ. ಅದರಿಂದ ಅವನಿಗೆ ಅಸದ್ವಿಷಯಕತ್ವವನ್ನು ಅದು ಸಾಧಿಸಬಲ್ಲುದು. ಆದರೆ ಜ್ಞಾನಗಳಿಗೆ ಪ್ರಾಮಾಣ್ಯ, ಅಬಾಧಿತಾರ್ಥಕತ್ವವೇ ನಿನ್ನ ಮತದಲ್ಲಿ ಸ್ವಾಭಾವಿಕ, ಸ್ವತಃ ಗೃಹೀತವಾಗುತ್ತದೆ. ಅದು ಬಾಧಿತಾರ್ಥಕತ್ವರೂಪ ಮಿಥ್ಯಾತ್ವಕ್ಕೆ ವಿರೋಧಿಯಾಗಿದೆ. ಅದು ಪ್ರತಿಕೂಲತರ್ಕವಾಗಿ ನಿನ್ನ ಮಿಥ್ಯಾತ್ವಾನುಮಾನವನ್ನು ಅಸಾಧಕವನ್ನಾಗಿ ಮಾಡುತ್ತದೆ.

**ಕಿಂ ಚೇದಂ ದೃಶ್ಯತ್ವಂ? ವೃತ್ತಿವ್ಯಾಪ್ಯತ್ವಂ? ಫಲವ್ಯಾಪ್ಯತ್ವಂ ವಾ? ಸಾಧಾರಣಂ ವಾ? ಕದಾಚಿತ್ ಕಥಂಚಿತ್ ಚಿತ್‌ವಿಷಯತ್ವಂ ವಾ? ಸ್ವವ್ಯವಹಾರೇ ಸ್ವಾತಿರೇಕಿ ಸಂವಿದಪೇಕ್ಷಾ ನಿಯತಿರ್ವಾ? ಅಸ್ವಪ್ರಕಾಶತ್ವಂ ವಾ?**

ಮಿಥ್ಯಾತ್ವಸಾಧನೆಗೆ ನೀನು ಹೇತುಮಾಡಿರುವ ದೃಶ್ಯತ್ವದ ನಿರ್ವಚನವೇನು? ಇಂದ್ರಿಯಾರ್ಥ ಸನ್ನಿಕರ್ಷದಿಂದ ಅಂತಃಕರಣದಲ್ಲಿ ಉಂಟಾಗುವ ವಿಷಯಾಕಾರ ಪರಿಣಾಮರೂಪವೃತ್ತಿಯ ಸಂಬಂಧ ವಿಶೇಷವೆ? ಅಥವಾ ವೃತ್ತಿಯಲ್ಲಿ ಪ್ರತಿಫಲಿತವಾದ ಜ್ಞಾತೃಚೈತನ್ಯದ ಅಥವಾ ಅದರಿಂದ ಅಭಿವ್ಯಕ್ತವಾದ ವಿಷಯಾಧಿಷ್ಠಾನ ಚೈತನ್ಯದ ಸಂಬಂಧವೆ? ಅಥವಾ ಈ ವೃತ್ತಿವ್ಯಾಪ್ಯತ್ವ ಫಲವ್ಯಾಪ್ಯತ್ವಗಳಲ್ಲಿ ಅನುಗತವಾದ ದೃಶ್ಯತ್ವ ಮಾತ್ರವೆ? ಅಥವಾ ಕದಾಚಿತ್ ಕಥಂಚಿತ್ ಚಿದ್‌ವಿಷಯತ್ವವೆ? ಅಥವಾ ಸ್ವವ್ಯವಹಾರದಲ್ಲಿ ಸ್ವಾತಿರಿಕ್ತ ಜ್ಞಾನಾಪೇಕ್ಷ ನಿಯಮೇನ ಇರುವುದೆ? ಅಥವಾ ಅಸ್ವಪ್ರಕಾಶತ್ವವೆ?

## ವೃತ್ತಿವ್ಯಾಪ್ಯತ್ವವು ದೃಶ್ಯತ್ವವಲ್ಲ

ನಾದ್ಯಃ। ಆತ್ಮನೋಽಪಿ ವೇದಾಂತಜನಿತ ವೃತ್ತಿವ್ಯಾಪ್ಯತ್ವಾತ್। ಅನ್ಯಥಾ ಬ್ರಹ್ಮಪರಾಣಾಂ ವೇದಾಂತಾನಾಂ ಬ್ರಹ್ಮಜ್ಞಾನಾರ್ಥಂ ಶ್ರವಣಾದಿವಿಧೇಶ್ಚ ವೈಯರ್ಥ್ಯಾತ್। ಬ್ರಹ್ಮ ವಿಚಾರಯತೋಃ ಗುರುಶಿಷ್ಯಯೋಃ ಮೌನಂ ಮೌಢ್ಯಂ ಚ ಸ್ಯಾತ್।

ದೃಶ್ಯತ್ವವೆಂದರೆ ವೃತ್ತಿ ವ್ಯಾಪ್ಯತ್ವವೆಂಬ ಮೊದಲನೆ ನಿರ್ವಚನ ಸರಿಯಲ್ಲ. ಏಕೆಂದರೆ ಈ ದೃಶ್ಯತ್ವಹೇತು ಸತ್ಯನಾದ ಆತ್ಮನಲ್ಲಿ ಕೂಡ ಇರುವುದರಿಂದ ವ್ಯಭಿಚಾರ. ವೇದಾಂತಾಧ್ಯಯನದಿಂದ ಬ್ರಹ್ಮಜ್ಞಾನ ಬರುತ್ತದೆ. ಇದು ಅಂತಃಕರಣವೃತ್ತಿ. ಅದು ಬ್ರಹ್ಮಾಕಾರವಾಗಿ ಬರುವುದರಿಂದ ವೃತ್ತಿವ್ಯಾಪ್ತತ್ವ ಬ್ರಹ್ಮನಲ್ಲಿದೆ. ವೇದಾಂತ ಜನಿತವೃತ್ತಿಗೆ ಆತ್ಮನು ವಿಷಯನಾಗುವುದಿಲ್ಲ ಎಂದರೆ ಬ್ರಹ್ಮಜ್ಞಾನಕ್ಕಾಗಿಯೇ ಇರುವ ವೇದಾಂತ ವ್ಯರ್ಥವಾಗುವುದು. ವೇದಾಂತದ ಶ್ರವಣಾದಿಗಳನ್ನು ಮಾಡಬೇಕೆನ್ನುವ ವಿಧಿಯೂ ಬ್ರಹ್ಮಜ್ಞಾನರೂಪ ಫಲಾಭಾವದಿಂದ ವ್ಯರ್ಥವಾಗುವುದು. ಬ್ರಹ್ಮವಿಚಾರಕ್ಕೆ ಕುಳಿತ ಗುರುಶಿಷ್ಯರಲ್ಲಿ ಗುರು ತಾನೆಷ್ಟು ಹೇಳಿದರೂ ಶಿಷ್ಯನಿಗೆ ಅದರಿಂದ ಬ್ರಹ್ಮಜ್ಞಾನ ಬರುವ ಸಾಧ್ಯತೆ ಇಲ್ಲ ತಾನೆ? ಎಂದುಕೊಂಡು ಮೌನ ತಾಳುತ್ತಾನೆ. ಬ್ರಹ್ಮನ ಬಗ್ಗೆ ಏನೂ ಹೇಳುವುದಿಲ್ಲ. ಶಿಷ್ಯನು ಏನೂ ತಿಳಿಯುವುದಿಲ್ಲ ಎಂದಾದೀತು.

❖❖❖

किञ्च ब्रह्मजिज्ञासा ब्रह्मज्ञानमित्यादौ कर्मणि षष्ठी, तमेव धीरो विज्ञायेत्यादौ द्वितीया, दृश्यते त्वग्र्यया बुद्ध्येत्यादौ तिङ्, आत्मा वा अरे द्रष्टव्य इत्यादौ तव्यादिप्रत्ययश्च न स्यात् । दृशोऽज्ञाने दृग्विषयत्व-रूपदृश्यत्वज्ञानं च न स्यात् ।

''सर्वप्रत्ययवेद्ये च ब्रह्मरूपे व्यवस्थित''

इत्यादिस्ववचनविरोधश्च स्यात् ।

**नच विपक्षे धर्मिसमसत्त्वस्य हेतोर्वृत्तिर्व्यभिचारः, न त्वारोपितस्य, अतिप्रसङ्गात् । दृश्यत्वं च व्यावहारिके जगतीव पारमार्थिकात्मन्यपि व्यावहारिकमेवेति न व्यभिचार इति वाच्यम् । ब्रह्मजगतोः पारमार्थिकत्वव्यावहारिकत्व विभागस्याद्याप्यसिद्धेः ।**

**द्वितीयेति** । तमित्यत्र कर्मणि द्वितीया, दृश्यत इत्यत्र भावकर्मणोः, द्रष्टव्य इत्यत्र तयोरेव कृत्यक्तखलर्था इति पाणिनिना कर्मणि द्वितीयातव्यादिप्रत्ययानां स्मरणादिति भावः । **दृशोऽज्ञान इति** । ब्रह्मणो वृत्तिविषयत्वानङ्गीकारे तस्य भासा सर्वमिदं विभातीति श्रुतिप्रतिपन्नस्य दृक्शब्दितचैतन्यविषयत्वस्य प्रपञ्चे दुर्ज्ञानत्वप्रसङ्गः । अननुसंहितोपाधेरुपहितप्रत्ययायोगादित्यर्थः । यद्वा मिथ्यात्वे साध्ये (वृत्ति) दृग्व्याप्यत्ववत् दृक्शब्दितचिद्घटित चिद्विषयत्वादेरपि त्वया हेतूकरणात् घटकपदार्थज्ञानं विना तद्घटितमूर्ति हेतुज्ञानासंभवात् तदर्थं दृक्शब्दित-हेतुशरीरघटकचितोऽपि वृत्तिरूपज्ञानविषयत्वरूपवृत्तिव्याप्यत्वं दुर्निवारमिति चैतन्ये व्यभिचारः सर्वथास्मिन् पक्षे दुर्निवार इत्यर्थः । ननु विपक्षे आरोपितानारोपितसाधारणहेतुसत्त्वमात्रं व्यभिचारित्वे तन्त्रम् । अन्यथा गौरवादित्याशङ्क्याह **नचेति** । **अतिप्रसङ्गादिति** । धूमादेरपि विपक्षे आरोपितसत्त्वसंभवेन व्यभिचारित्वप्रसङ्गात् । तथाच गौरवमप्रामाणिकमिति भावः ।

❖❖❖

**'ಬ್ರಹ್ಮಜಿಜ್ಞಾಸಾ' 'ಬ್ರಹ್ಮಜ್ಞಾನಂ' ಇತ್ಯಾದೌ ಕರ್ಮಣಿ ಷಷ್ಠೀ, 'ತಮೇವ ಧೀರೋ ವಿಜ್ಞಾಯ' ಇತ್ಯಾದೌ ದ್ವಿತೀಯಾ, 'ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ' ಇತ್ಯಾದೌ ತಿಙ್, 'ಆತ್ಮಾ ವಾ ಅರೇ ದ್ರಷ್ಟವ್ಯಃ' ಇತ್ಯಾದೌ ತವ್ಯಾದಿ ಪ್ರತ್ಯಯಶ್ಚ ನ ಸ್ಯಾತ್ ।**

'ಬ್ರಹ್ಮನ ಜಿಜ್ಞಾಸೆ' 'ಬ್ರಹ್ಮನ ಜ್ಞಾನ' ಎಂದು ಮುಂತಾಗಿ ಬ್ರಹ್ಮಶಬ್ದಕ್ಕೆ ಕರ್ಮಾರ್ಥದಲ್ಲಿ ಷಷ್ಠೀವಿಭಕ್ತಿ ಬಂದಿದೆ. ಕರ್ಮ ಎಂದರೆ ಇಲ್ಲಿ ವಿಷಯ. ಬ್ರಹ್ಮನು ಜ್ಞಾನಕ್ಕೆ ವಿಷಯನಲ್ಲವೆಂದರೆ ಕರ್ಮಾರ್ಥಕ ಷಷ್ಠೀವಿಭಕ್ತಿ ಬರಲಾರದು. 'ಆ ಪರಮಾತ್ಮನನ್ನೇ ಜ್ಞಾನಿಯು ತಿಳಿಯುತ್ತಾನೆ' ಎಂದು ವಿಷಯಾರ್ಥಕ ದ್ವಿತೀಯಾ ವಿಭಕ್ತಿಯೂ ಬರಲಾರದು. 'ಉತ್ತಮ ಬುದ್ಧಿಯಿಂದ ಅವನು ತಿಳಿಯಲ್ಪಡುತ್ತಾನೆ' ಎಂದು ವಿಷಯಾರ್ಥಕ ತಿಙ್‌ಪ್ರತ್ಯಯ ಬರಲಾರದು. 'ಆತ್ಮನು ದ್ರಷ್ಟವ್ಯ' 'ಆತ್ಮನನ್ನು ಕಾಣಬೇಕು' ಎಂಬಲ್ಲಿ 'ದ್ರಷ್ಟವ್ಯಃ' ಎಂದು ತವ್ಯಪ್ರತಯವೂ ಬರಲಾರದು. ವಸ್ತುತಃ 'ಕರ್ಮಣಿ ದ್ವಿತೀಯಾ' ಎಂದು ಕರ್ಮಾರ್ಥದಲ್ಲಿ ದ್ವಿತೀಯಾ, 'ಭಾವಕರ್ಮಣೋಃ' ಎಂದು

ಕರ್ಮಾರ್ಥದಲ್ಲಿ ತಿಜ್ ಮತ್ತು 'ತಯೋರೇವ ಕೃತ್ಯ ಕ್ತ ಖಲರ್ಥಾಃ' ಎಂದು ಕರ್ಮಾರ್ಥದಲ್ಲಿ ಕೃತ್ಯ ಸಂಜ್ಞಕವಾದ ತವ್ಯಾದಿ ಪ್ರತ್ಯಯಗಳನ್ನು ಪಾಣಿನಿ ವಿಧಾನ ಮಾಡಿದ್ದಾನೆ.

**ದೃಶೋಽಜ್ಞಾನೇ ದೃಗ್‌ವಿಷಯತ್ವರೂಪ ದೃಶ್ಯತ್ವಜ್ಞಾನಂ ಚ ನ ಸ್ಯಾತ್ ।**

ದೃಕ್ಕಿನ, ಅಂದರೆ ಬ್ರಹ್ಮಚೈತನ್ಯರೂಪಜ್ಞಾನದ ವೃತ್ತಿಜ್ಞಾನ ಬರುವುದೇ ಇಲ್ಲವೆಂದರೆ ದೃಕ್ಕಿನಿಂದ ಘಟಿತವಾದ ದೃಗ್ ವಿಷಯತ್ವರೂಪ ದೃಶ್ಯತ್ವದ ಜ್ಞಾನವಿಲ್ಲವೆಂದಾಗುವುದು. ಈ ದೃಶ್ಯತ್ವವೂ ಕೂಡ ಪ್ರಪಂಚಾಂತರ್ಗತ ವಾಗಿ ಪಕ್ಷದಲ್ಲಿ ಸೇರಿದೆಯಾದ್ದರಿಂದ ಅದರ ಜ್ಞಾನ ಬಾರದಿದ್ದರೆ ಅದರಲ್ಲಿ ಹೇತುವಿಗೆ ಭಾಗದಲ್ಲಿ ಅಜ್ಞಾನಾಸಿದ್ಧಿಯಿಂದ ಮಿಥ್ಯಾತ್ವ ಸಿದ್ಧಿಯಾಗದು. 'ತಸ್ಯಭಾಸಾ ಸರ್ವಮಿದಂ ವಿಭಾತಿ' ಎಂಬ ಶ್ರುತಿಯಿಂದ ದೃಗಧ್ಯಸ್ತತ್ವರೂಪ ಚೈತನ್ಯವಿಷಯತ್ವವು ಪ್ರಪಂಚದಲ್ಲಿ ಉಕ್ತವಾಗುತ್ತಿದ್ದರೂ ಚೈತನ್ಯವು ವೃತ್ತಿವಿಷಯವಾಗದಿದ್ದಲ್ಲಿ ಈ ಚೈತನ್ಯ ವಿಷಯತ್ವವನ್ನು ಪ್ರಪಂಚದಲ್ಲಿ ತಿಳಿಯುವುದೂ ಅಶಕ್ಯವಾದೀತು. ಚೈತನ್ಯವಿಷಯತ್ವರೂಪ ದೃಗ್‌ವಿಷಯತ್ವವನ್ನು ಕೂಡ ಫಲವ್ಯಾಪ್ಯತ್ವಪಕ್ಷದಲ್ಲಿ ನೀನು ಮಿಥ್ಯಾತ್ವಸಾಧನೆಗೆ ಹೇತುವಾಗಿ ಮಾಡಿರುವುದರಿಂದ ಅದರ ಜ್ಞಾನವೂ ಆವಶ್ಯಕವೆಂದಮೇಲೆ ಅದಕ್ಕಾಗಿ ಚೈತನ್ಯ ವಿಷಯದಲ್ಲಿ ವೃತ್ತಿಜ್ಞಾನ ಬರುತ್ತದೆ ಎಂದು ಒಪ್ಪಲೇಬೇಕು. ಆಗ ವೃತ್ತಿವ್ಯಾಪ್ಯತ್ವರೂಪದೃಶ್ಯತ್ವವು ಚೈತನ್ಯದಲ್ಲಿ ಇದೆ ಎಂದಾಗುವುದರಿಂದ ವ್ಯಭಿಚಾರ ಈ ವೃತ್ತಿವ್ಯಾಪ್ಯತ್ವಪಕ್ಷದಲ್ಲಿ ಅಪರಿಹಾರ್ಯವೂ ಆಗುವುದು.

**'ಸರ್ವಪ್ರತ್ಯಯ ವೇದ್ಯೇ ಚ ಬ್ರಹ್ಮರೂಪೇ ವ್ಯವಸ್ಥಿತೇ'**
**ಇತ್ಯಾದಿ ಸ್ವವಚನ ವಿರೋಧಶ್ಚ ಸ್ಯಾತ್ ।**

ಸರ್ವಪ್ರತ್ಯಯವೇದ್ಯೇ ಚ ಬ್ರಹ್ಮರೂಪೇ ವ್ಯವಸ್ಥಿತೇ ।
ಪ್ರಪಂಚಸ್ಯ ಪ್ರವಿಲಯಃ ಶಬ್ದೇನ ಪ್ರತಿಪಾದ್ಯತೇ ॥

'ಸರ್ವ ಅಪರೋಕ್ಷವೃತ್ತಿವೇದ್ಯವಾದ 'ವ್ಯವಸ್ಥಿತ'ವಾದ ಅಂದರೆ ವ್ಯಾಪಕವಾದ ಬ್ರಹ್ಮನ ಶುದ್ಧರೂಪದಲ್ಲಿಯೆ ಪ್ರಪಂಚಲಯವೆಂದು ಶ್ರುತಿಯು ಪ್ರತಿಪಾದಿಸುತ್ತದೆ' ಎಂಬ ಮಂಡನಮಿಶ್ರ ವಚನವು ಪೂರ್ವಾಚಾರ್ಯ ವಚನವಾದ್ದರಿಂದ ನಿನ್ನ ಸ್ವವಚನವೇ ಆಗಿದೆ. ಸರ್ವಅಪರೋಕ್ಷವೇದ್ಯವು ಉಪಹಿತ ಚೈತನ್ಯವಲ್ಲ. ಉಪಹಿತ ಚೈತನ್ಯವು ವ್ಯಾಪಕವಲ್ಲ. ಪ್ರಪಂಚಪ್ರವಿಲಯಾಧಿಷ್ಠಾನವೂ ಅಲ್ಲ. ಅದರಿಂದ ಶುದ್ಧಚೈತನ್ಯವೇ ಶಬ್ದದಿಂದ ಪ್ರತಿಪಾದ್ಯವಾಗಿ ವೃತ್ತಿವ್ಯಾಪ್ಯವೇ ಆಗಿದೆ ಎಂದು ಸ್ವವಚನವೇ ಹೇಳುವಾಗ ನೀನು ಶುದ್ಧಕ್ಕೆ ವೃತ್ತಿವ್ಯಾಪ್ಯತ್ವರೂಪ ದೃಶ್ಯತ್ವವಿಲ್ಲವೆಂದರೆ ಸ್ವವಚನ ವಿರೋಧ ಉಂಟಾದೀತು.

**ನ ಚ —ವಿಪಕ್ಷೇ ಧರ್ಮಿಸಮಸತ್ತಸ್ಯ ಹೇತೋರ್ ವೃತ್ತಿಃ ವ್ಯಭಿಚಾರಃ, ನ ತು ಆರೋಪಿತಸ್ಯ, ಅತಿಪ್ರಸಂಗಾತ್ । ದೃಶ್ಯತ್ವಂ ಚ ವ್ಯಾವಹಾರಿಕೇ ಜಗತಿ ಇವ ಪಾರಮಾರ್ಥಿಕಾತ್ಮನ್ಯಪಿ ವ್ಯಾವಹಾರಿಕಮೇವೇತಿ ನ ವ್ಯಭಿಚಾರಃ—ಇತಿ ವಾಚ್ಯಂ । ಬ್ರಹ್ಮಜಗತೋಃ ಪಾರಮಾರ್ಥಿಕತ್ವ-ವ್ಯಾವಹಾರಿಕತ್ವ ವಿಭಾಗಸ್ಯ ಅದ್ಯಾಪಿ ಅಸಿದ್ಧೇಃ ।**

'ಸಾಧ್ಯಾಭಾವ ಉಳ್ಳ ಸ್ಥಳದಲ್ಲಿ, ಆರೋಪಿತ–ಅನಾರೋಪಿತ ಎಂಬ ಭೇದವಿಲ್ಲದೆ ಉಭಯ ಸಾಧಾರಣವಾದ ಹೇತುಸತ್ತ್ವಮಾತ್ರವೆ ವ್ಯಭಿಚಾರಿತ್ವಕ್ಕೆ ಪ್ರಯೋಜಕ, ಅನಾರೋಪಿತ ಹೇತುಸತ್ತ್ವವು ಪ್ರಯೋಜಕವೆಂದರೆ ಗೌರವ.' ಹೀಗೆ ಹೇಳುವುದು ಸರಿಯಲ್ಲ. ಧೂಮಾದಿಹೇತುವನ್ನು ಸಾಧ್ಯಾಭಾವ ಉಳ್ಳ ಹ್ರದದಲ್ಲಿ ಆರೋಪಿಸುವ ಸಂಭವವಿರುವುದರಿಂದ ಅದು ವ್ಯಭಿಚಾರಿ ಎನಿಸೀತು. ಆದರಿಂದ ಧರ್ಮಿಸಮಸತ್ತಾಕವಾದ ಹೇತುವು ಸಾಧ್ಯಾಭಾವಉಳ್ಳ ಸ್ಥಳದಲ್ಲಿ ಇದ್ದರೆ ಮಾತ್ರ ವ್ಯಭಿಚಾರ ಎನ್ನಬೇಕು. ದೃಶ್ಯತ್ವ ಹೇತುವು ವ್ಯಾವಹಾರಿಕವಾದ ಪ್ರಪಂಚದಲ್ಲಿ ಹೇಗೋ ಹಾಗೇ ಪಾರಮಾರ್ಥಿಕ ಬ್ರಹ್ಮಚೈತನ್ಯದಲ್ಲಿಯೂ ವ್ಯಾವಹಾರಿಕವೆ ಆಗಿರುವುದರಿಂದ ಧರ್ಮಿಯಂತೆ ಪಾರಮಾರ್ಥಿಕವಲ್ಲದ್ದರಿಂದ ಪಾರಮಾರ್ಥಿಕ ಸತ್ತಾಕವಾದ ದೃಶ್ಯತ್ವವು ಸಾಧ್ಯಮಿಥ್ಯಾತ್ವಾಭಾವ ಉಳ್ಳ ಬ್ರಹ್ಮಚೈತನ್ಯದಲ್ಲಿ ಬಾರದಿರುವುದರಿಂದ ವ್ಯಭಿಚಾರವಿಲ್ಲ'—ಹೀಗೆ ಅದ್ವೈತಿ ಹೇಳುತ್ತಾನೆ.

ಆದರೆ, ಬ್ರಹ್ಮ ಮಾತ್ರ ಪಾರಮಾರ್ಥಿಕ, ಜಗತ್ತು ವ್ಯಾವಹಾರಿಕ ಎಂಬ ವಿಭಾಗವಿನ್ನೂ ಮಿಥ್ಯಾತ್ವಾನುಮಾನದಿಂದ ಸಿದ್ಧವಾಗಬೇಕಷ್ಟೆ. ಆದಕ್ಕೆ ಮೊದಲೇ 'ಧರ್ಮಿಸಮಸತ್ತಾಕಹೇತುಸತ್ತ್ವವು ವ್ಯಭಿಚಾರಕ್ಕೆ ಪ್ರಯೋಜಕ' ಎನ್ನುವುದು ಅಸಂಗತವಾಗುತ್ತದೆ.

❖❖❖

**किञ्च पक्षे धर्मिसमसत्त्वस्य साध्यस्याभावो बाधः । पक्षे हेतोर्धर्मिसमसत्ताकस्य सत्त्वं च सिद्धिः, तदभावोऽसिद्धिः । तथाचात्मनि तात्त्विकधर्महीने स्वप्रकाशत्वादिरूपसाध्यस्य बाधः । तत्साधकानुभूतित्वादेश्चासिद्धिः । एवं विपक्षे धर्मिसमसत्ताकः साधनस्याभावोऽव्यभिचारित्वम् । तथाच दृश्यत्वादीनां आत्मनि व्यभिचार इति च स्यात् । तस्माद्यथात्मनः पक्षत्वे तत्र व्यावहारिकस्य हेतोस्सत्वान्नासिद्धिः, तथा तस्य विपक्षत्वेऽपि व्यावहारिकस्य हेतोस्सत्वाद् व्यभिचारः ।**

**किञ्चेति** । अन्यथारोपितसाध्यसाधनाभावमादाय सदनुमानेऽपि बाधासिद्धिप्रसङ्ग इति भावः । **एवमिति** । अन्यथा वह्नेरपि आरोपितवह्न्यभावमादाय धूमाभाववन्निष्ठाभावप्रतियोगित्वसंभवेन धूमाव्यभिचारित्वं स्यादिति भावः । **तथाचेति** । एवञ्च धर्मिसमसत्ताकहेतुसत्त्वादिकं न व्यभिचारादिप्रयोजकमिति भावः । उक्तबाधकमुपसंहारव्याजेनोद्धरति **तस्मादिति** । दृश्यत्वहेतोरित्यर्थः ।

❖❖❖

**ಕಿಂಚ ಪಕ್ಷೇ ಧರ್ಮಿಸಮಸತ್ವಸ್ಯ ಸಾಧ್ಯಸ್ಯ ಅಭಾವೋ ಬಾಧಃ । ಪಕ್ಷೇ ಹೇತೋಃ ಧರ್ಮಿಸಮಸತ್ತಾಕಸ್ಯ ಸತ್ವಂ ಚ ಸಿದ್ಧಿಃ । ತದಭಾವಃ ಅಸಿದ್ಧಿಃ । ತಥಾಚ ಆತ್ಮನಿ ತಾತ್ವಿಕ ಧರ್ಮಹೀನೇ ಸ್ವಪ್ರಕಾಶತ್ವಾದಿ ಸಾಧ್ಯಸ್ಯ ಬಾಧಃ । ತತ್ ಸಾಧಕ ಅನುಭೂತಿತ್ವಾದೇಶ್ಚ ಅಸಿದ್ಧಿಃ । ಏವಂ ವಿಪಕ್ಷೇ ಧರ್ಮಿಸಮಸತ್ತಾಕಃ ಸಾಧನಸ್ಯ ಅಭಾವಃ ಅವ್ಯಭಿಚಾರಿತ್ವಂ । ತಥಾಚ ದೃಶ್ಯತ್ವಾದೀನಾಂ ಆತ್ಮನಿ ವ್ಯಭಿಚಾರಃ ಇತಿ ಚ ಸ್ಯಾತ್ ।**

'ವಿಪಕ್ಷದಲ್ಲಿ ಧರ್ಮಿಸಮಸತ್ತಾಕ ಹೇತುವಿದ್ದರೆ ಮಾತ್ರ ವ್ಯಭಿಚಾರ' ಎಂದು ನೀನು ಹೇಳುವಿಯಾದರೆ ನಿನಗೇ ಅನಿಷ್ಟಾಪತ್ತಿ—ಪಕ್ಷದಲ್ಲಿ ಧರ್ಮಿಸಮಸತ್ತಾಕವಾದ ಸಾಧ್ಯದ ಅಭಾವವಿದ್ದರೆ ಮಾತ್ರ ಬಾಧ ಎನ್ನಬೇಕಾಗುತ್ತದೆ. ಮತ್ತು ಪಕ್ಷದಲ್ಲಿ ಧರ್ಮಿಸಮಸತ್ತಾಕಹೇತುವಿದ್ದರೆ ಮಾತ್ರ ಸಿದ್ಧಿ. ಅದರ ಅಭಾವವಿದ್ದರೆ ಮಾತ್ರ ಅಸಿದ್ಧಿ ಎನ್ನಬೇಕಾಗುತ್ತದೆ. ಹೀಗೆ ಹೇಳದಿದ್ದರೆ ಸದ್ಧೇತು ಸ್ಥಳದಲ್ಲಿಯೂ ಆರೋಪಿತಸಾಧ್ಯದ ಅಭಾವವಿಟ್ಟುಕೊಂಡು ಬಾಧವನ್ನೂ ಆರೋಪಿತ ಸಾಧನದ ಅಭಾವವಿಟ್ಟುಕೊಂಡು ಅಸಿದ್ಧಿಯನ್ನೂ ಹೇಳುವ ಪ್ರಸಂಗ. ಹೀಗಾಗಿ ಆತ್ಮನಲ್ಲಿ ತಾತ್ವಿಕಧರ್ಮ ವಿಲ್ಲದ್ದರಿಂದ ಸ್ವಪ್ರಕಾಶತ್ವಾದಿ ಸಾಧ್ಯಕ್ಕೆ ಬಾಧ, ಅದಕ್ಕೆ ಹೇತುವಾಗಿ ಮಾಡಿದ ಅನುಭೂತಿತ್ವಾದಿಗಳಿಗೆ ಅಸಿದ್ಧಿ, ಇವು ಅಪರಿಹಾರ್ಯ. ಹೀಗೇ ವಿಪಕ್ಷದಲ್ಲಿ ಸಾಧ್ಯಾಭಾವಉಳ್ಳ ಸ್ಥಳದಲ್ಲಿ ಧರ್ಮಿಸಮಸತ್ತಾಕ ವಾದ ಸಾಧನಾಭಾವವಿದ್ದರೆ ಮಾತ್ರ ಅವ್ಯಭಿಚಾರವೆನ್ನಬೇಕು. ಇಲ್ಲದಿದ್ದರೆ ವಹ್ನಿಗೂ ಕೂಡ, ಆರೋಪಿತವಾದ ವಹ್ನಿಅಭಾವವು ಧೂಮಾಭಾವಉಳ್ಳ ಅಯೋಗೋಲಕದಲ್ಲಿದೆ ಎಂದು ಧೂಮಾವ್ಯಭಿಚಾರಿತ್ವವನ್ನು ಹೇಳುವ ಪ್ರಸಂಗ. ಹೀಗಾಗಿ ವಿಪಕ್ಷನಾದ ಆತ್ಮನಲ್ಲಿ ಧರ್ಮಿಸಮಸತ್ತಾಕವಾದ ದೃಶ್ಯತ್ವಾಭಾವ ಬಾರದಿರುವುದರಿಂದ ದೃಶ್ಯತ್ವವು ಅವ್ಯಭಿಚಾರಿಯಲ್ಲ, ವ್ಯಭಿಚಾರಿಯೆ ಎಂದಾಗುತ್ತದೆ.

**ತಸ್ಮಾತ್ ಯಥಾ ಆತ್ಮನಃ ಪಕ್ಷತ್ವೇ ತತ್ರ ವ್ಯಾವಹಾರಿಕಸ್ಯ ಹೇತೋಃ ಸತ್ವಾತ್ ನ ಅಸಿದ್ಧಿಃ, ತಥಾ ತಸ್ಯವಿಪಕ್ಷತ್ವೇऽಪಿ ವ್ಯಾವಹಾರಿಕಸ್ಯ ಹೇತೋಃ ಸತ್ವಾತ್ ವ್ಯಭಿಚಾರಃ ।**

ಹೀಗೆ ಹೇತು ಧರ್ಮಿಸಮಸತ್ತಾಕವಾಗಿರಬೇಕೆಂದರೆ ನಿನಗೇ ಅನಿಷ್ಟಾಪತ್ತಿ ಇರುವುದರಿಂದ, ಆತ್ಮನು ಸ್ವಪ್ರಕಾಶತ್ವ ಸಾಧನೆಯಲ್ಲಿ ಪಕ್ಷವಾಗಿರುವಾಗ ಅವನಲ್ಲಿ ವ್ಯಾವಹಾರಿಕವಾದ ಅನುಭೂತಿತ್ವ ಹೇತುವಿರುವುದರಿಂದ ಅಸಿದ್ಧಿ ಹೇಗೆ ಇಲ್ಲವೋ ಹಾಗೇ ಆತ್ಮನು ಮಿಥ್ಯಾತ್ವಾನುಮಾನದಲ್ಲಿ ವಿಪಕ್ಷವಾಗಿರುವಾಗ ವ್ಯಾವಹಾರಿಕವಾದ ದೃಶ್ಯತ್ವಹೇತು ಇರುವುದರಿಂದ ವ್ಯಭಿಚಾರ ಅಪರಿಹಾರ್ಯ ಎಂದೂ ಒಪ್ಪಿಕೊಳ್ಳಬೇಕು.

❖❖❖

**अथ धर्मिसमसत्त्वं हेतुविशेषणम् । तर्ह्यात्मन्येवंविध धर्मस्य कस्याप्यभावाद्विषयत्वादिरेव मिथ्यात्वे हेतुः स्यात् । मम रीत्या आत्मनि व्यभिचारश्च । दृष्टान्तस्य साधनवैकल्यं च ।**

ननु शुद्धं ब्रह्म न दृश्यं किन्तु विशिष्टमेव, दृश्यत्वश्रुतयोऽपि तद्विषयाः । अन्यथा यत्तदद्रेश्यमित्यादि श्रुतिविरोधादिति चेन्न । स्वतः-सिद्धेर्निराकरिष्यमाणत्वेन शुद्धासिद्धिप्रसङ्गात् । अज्ञाते धर्मिणि कस्यचिद्धर्मस्य विधातुं निषेद्धुं वा अशक्यत्वेन शुद्धे दृश्यत्वं निषेधता शुद्धस्य ज्ञेयत्वाच्च ।

नच स्वप्रकाशत्वेन स्वतःसिद्धे शुद्धे वृत्त्या दृश्यत्वनिषेधधीः । शुद्धं स्वप्रकाशमिति शब्दजन्यविशिष्टवृत्तौ शुद्धाप्रकाशे तस्य स्वप्रकाशत्वासिद्धेः । लाघवेन स्फुरणमात्रमेव मिथ्यात्वे तन्त्रमिति स्वतः स्फुरदपि ब्रह्म मिथ्यैव । तत्सत्यत्वश्रुतिस्तु जगत्सत्यत्व-श्रुतिवदनुमानादिविरोधेनासद्वैलक्षण्यपरेत्यापाताच्च ।

शुद्धं न दृश्यत इत्यत्र शुद्धशब्दस्याभिधया लक्षणया वा शुद्धा-बोधकत्वे तत्प्रयोगवैयर्थ्याच्च । विशिष्टे मिथ्यात्वदृश्यत्वयोर्व्यतिरेका-सम्भवेन शुद्धनिष्ठव्यतिरेकज्ञानाय शुद्धस्य ज्ञेयत्वाच्च । विशिष्टज्ञाने विशेष्यस्यापि भानेन विशिष्टस्य दृश्यत्वेनैव शुद्धस्यापि दृश्यत्वसिद्धेश्च ।

**अथेति** । अतो नात्मनि व्यभिचार इति भावः । **एवंविध धर्मस्येति** । धर्मिसमसत्ताकधर्मस्येत्यर्थः । **विषयत्वादिरेवेति** । धर्मिसमसत्ताकविषयत्वादि-रेवेत्यर्थः । ननु विषयत्वमिव दृश्यत्वमपि हेतुतया प्रयोक्तुं शक्यम् । नच दृक्पदवैयर्थ्यम्, तन्निष्ठेतिन्यायेन तस्य सार्थक्यात् । अन्यथा प्रमेयत्वादिहेतौ का गतिरित्यस्वरसादाह **मम रीत्येति** । **दृष्टान्तस्येति** । परमते प्रातिभासिके दृश्यत्वस्य व्यावहारिकतया सिद्धान्ते चासति शुक्तिरूप्ये दृश्यत्वस्य सत्यतया विवक्षितहेतोस्तत्राभावादिति भावः । यथाश्रुतहेतोर्व्यभिचारोद्धारं शङ्कते **नन्विति** । शुद्धे हेत्वभावात् विशिष्टे साध्यस्यापि सत्त्वान्न व्यभिचार इति भावः । दृश्यत्वश्रुतयो दृश्यते त्वग्रयया बुद्ध्येत्यादिश्रुतयः । **स्वतःसिद्धेरिति** । अवेद्यत्वलक्षण-स्वप्रकाशत्वस्येत्यर्थः । **शुद्धासिद्धिप्रसङ्गादिति** । तथाच शुद्धसिद्धिमिच्छता तस्य

वृत्तिव्याप्यत्वं वक्तव्यमिति तत्र व्यभिचार एवेति भावः । ननु शुद्धे न दृश्यत्वनिषेधायोगः तस्य स्वविषयप्रकाशत्वलक्षणस्वप्रकाशत्वेन धर्मिज्ञानरूपतया वृत्तिविषयतानावश्यकत्वात् । अतो न व्यभिचारो न वा शुद्धासिद्धिरित्याशङ्क्य निराकरोति **न चेति । लाघवेनेति** । मिथ्यात्वे स्फुरणमात्रमेव तन्त्रं लाघवात् । न त्वन्यतः स्फुरणं स्वतः स्फुरणं वा गौरवात् । स्फुरणमात्रं च स्वतः स्फुरत्यपि ब्रह्मण्यविशिष्टमिति जगद्वत् ब्रह्मापि मिथ्यैव स्यादित्यर्थः । यद्वा **लाघवेनेति** । उपस्थितिलाघवेनेत्यर्थः । चैतन्यस्य स्फुरणाव्यभिचारित्वेन वृत्तेस्तु तदधीन-प्रकाशत्वादिति ।। **तत्सत्यत्वश्रुतिः** ।। सत्यं ज्ञानमनन्तं ब्रह्मेति श्रुतिः ।। **जगत्सत्यत्वश्रुतिवदिति** ।। विश्वं सत्यं, यच्चिकेत सत्यमिदित्यादिश्रुतिवदित्यर्थः ।। **विशिष्टज्ञान इति** ।। विशिष्टस्य विशेषणादित्रितयात्मकत्वादित्यर्थः ।

❖❖❖

**ಅಥ ಧರ್ಮಿಸಮಸತ್ತ್ವಂ ಹೇತುವಿಶೇಷಣಂ । ತರ್ಹಿ ಆತ್ಮನಿ ಏವಂವಿಧಸ್ಯ ಧರ್ಮಸ್ಯ ಕಸ್ಯಾಪಿ ಅಭಾವಾತ್ ವಿಷಯತ್ವಾದಿರೇವ ಮಿಥ್ಯಾತ್ವೇ ಹೇತುಃ ಸ್ಯಾತ್ । ಮಮ ರೀತ್ಯಾ ಆತ್ಮನಿ ವ್ಯಭಿಚಾರಶ್ಚ, ದೃಷ್ಟಾಂತಸ್ಯ ಸಾಧನವೈಕಲ್ಯಂ ಚ ।**

ವ್ಯಭಿಚಾರಲಕ್ಷಣದೊಳಗೆ ಹೇತುವಿಗೆ ಧರ್ಮಿಸತ್ತಾಕತ್ವವಿಶೇಷಣ ವಿಷಯದಲ್ಲಿ ಸಾಧಕಬಾಧಕವಿಚಾರ ಮಾಡಿ ಈಗ ನ್ಯಾಯವಾಕ್ಯಾಂತರ್ಗತವಾದ ಹೇತ್ವವಯವದಲ್ಲಿ ಅದೇ ವಿಶೇಷಣ ಹಾಕುವ ಪ್ರಸ್ತಾವ ಮಾಡುತ್ತಾನೆ ಅದ್ವೈತಿ. ಮತ್ತು ಹಿಂದೆ ಸ್ವರೂಪಸತ್ತಾಗಿ ವಿಶೇಷಣವಿವಕ್ಷೆ. ಇದೀಗ ಜ್ಞಾತತಯಾ ವಿಶೇಷಣವಿವಕ್ಷೆ. ಅದರಿಂದ ಪುನರುಕ್ತಿ ಇಲ್ಲ.

ಇದಕ್ಕೆ ಉತ್ತರ ಹೀಗೆ— ಹೇತುವಿಗೆ ಧರ್ಮಿಸಮಸತ್ತಾಕತ್ವ ವಿಶೇಷಣ ಹಾಕುವ ಪಕ್ಷದಲ್ಲಿ ವೃತ್ತಿವ್ಯಾಪ್ಯತ್ವಹೇತುವಿಗೆ ಆತ್ಮನಲ್ಲಿ ವ್ಯಭಿಚಾರ ಪರಿಹಾರವಾದರೂ 'ವೃತ್ತಿವ್ಯಾಪ್ಯತ್ವ' ಶರೀರದಲ್ಲಿ 'ವೃತ್ತಿ' ಎಂಬ ಅಂಶ ವ್ಯರ್ಥ. ವೃತ್ತಿ ನಿರೂಪಿತತ್ವ ವಿಶಿಷ್ಟ ವಿಷಯತ್ವವೇ ವೃತ್ತಿವ್ಯಾಪ್ಯತ್ವ ವಾಗಿರುವುದರಿಂದ ವೃತ್ತಿ ನಿರೂಪಿತತ್ವ ಎಂಬ ಅಂಶವನ್ನು ಬಿಟ್ಟು ಕೇವಲ ವಿಷಯತ್ವ ಮಾತ್ರವನ್ನೇ ಹೇತುವಾಗಿ ಮಾಡು. ಧರ್ಮಿಸಮಸತ್ತಾಕವಾದ ಯಾವ ಧರ್ಮವೂ ಆತ್ಮನಲ್ಲಿಲ್ಲವೆಂದಮೇಲೆ ಧರ್ಮಿಸಮಸತ್ತಾಕವಾದ ವಿಷಯತ್ವ ಮಾತ್ರವನ್ನು ಹೇತುಮಾಡಿದರೂ ಅದು ಆತ್ಮನಲ್ಲಿ ಬಾರದಿರುವುದರಿಂದ ವ್ಯಭಿಚಾರಪ್ರಸಕ್ತಿ ಇಲ್ಲ. ಸ್ವಸಮಾನಾಧಿಕರಣವ್ಯಾಪ್ಯತಾವಚ್ಛೇದಕ ಲಘುಭೂತ ವಿಷಯತ್ವತ್ವ ಘಟಿತವಾದ ವೃತ್ತಿವ್ಯಾಪ್ಯತ್ವವನ್ನು ಗೌರವ ಬರುವುದರಿಂದ ಹೇತುಮಾಡುವುದು ಅಯುಕ್ತವಾಗುವುದು. 'ಹಾಗಾದರೆ ಕೇವಲ ಧರ್ಮಿಸಮಸತ್ತಾಕ ವಿಷಯತ್ವವನ್ನೇ

ಹೇತುಮಾಡುತ್ತೇನೆ' ಎಂದು ಅವನು ಹೇಳಿದರೆ ಆತ್ಮನಲ್ಲಿ ಧರ್ಮಿಸಮಸತ್ತಾಕವಾದ ಯಾವ ಧರ್ಮವೂ ಇಲ್ಲದಿರುವಾಗ 'ಧರ್ಮಿಸಮಸತ್ತಾಕ' ಎಂಬ ವಿಶೇಷಣಕ್ಕೆ ಕೃತ್ಯವಿಲ್ಲದ್ದರಿಂದ ಹೇತುವಿನಲ್ಲಿ ಅಂಥ ವಿಶೇಷಣವನ್ನು ನೀಡುವುದು ಅಶಕ್ಯ. ವಿಶೇಷಣ ನೀಡದಿದ್ದರೆ ವ್ಯಾವಹಾರಿಕವಾದ ವಿಷಯತ್ವವನ್ನು ಇಟ್ಟುಕೊಂಡು ವ್ಯಭಿಚಾರವನ್ನು ಹೇಳುತ್ತೇವೆ. ಹೀಗೆ ಇದು ಅದ್ವೈತಿಗೆ ಉಭಯತಃ ಪಾಶಾ ರಜ್ಜು.

ಯದ್ಯಪಿ 'ವೃತ್ತಿವ್ಯಾಪ್ಯತ್ವವು ಬೇರೆಯೆ ಒಂದು ಅಖಂಡ ಧರ್ಮ. ವಿಷಯತ್ವದಂತೆಯೆ ಅದನ್ನೂ ಹೇತು ಮಾಡಬಹುದು. ಅದರಲ್ಲಿ ವಿಷಯತ್ವತ್ವ ಘಟಕವಾಗಿಲ್ಲ. ಇಲ್ಲದಿದ್ದರೆ, ಪ್ರಮೇಯತ್ವಾದಿ ಹೇತುವೂ ವಿಷಯತ್ವತ್ವ ಘಟಿತವೆಂದು ವ್ಯರ್ಥ ವಿಶೇಷಣತ್ವ ಬಂದೀತು' ಎನ್ನಬಹುದು. ಈ ಅಸ್ವಾರಸ್ಯ ವಿರುವುದರಿಂದ ವ್ಯಭಿಚಾರ ಮತ್ತು ದೃಷ್ಟಾಂತದ ಸಾಧನವೈಕಲ್ಯವೆಂಬ ಬೇರೆ ದೋಷಗಳನ್ನು ಹೇಳುತ್ತಾರೆ.

ಧರ್ಮಿಸಮಸತ್ತಾಕತ್ವವಿಶೇಷಣ ಹಾಕಿದರೂ ನನ್ನ ಮತದಲ್ಲಿ ಬ್ರಹ್ಮನಲ್ಲಿ ತಾತ್ವಿಕ ಧರ್ಮವನ್ನು ಒಪ್ಪಿದ್ದರಿಂದ ಧರ್ಮಿಸಮಸತ್ತಾಕವಾದ ವೃತ್ತಿವಿಷಯತ್ವ ಬರುತ್ತದೆ ಎಂದು ವ್ಯಭಿಚಾರ. ಅದ್ವೈತ ಮತದಲ್ಲಿ ಶುಕ್ತಿರಜತದಲ್ಲಿ ದೃಶ್ಯತ್ವ ವ್ಯಾವಹಾರಿಕವಾದ್ದರಿಂದ ಧರ್ಮಿಸಮಸತ್ತಾಕ ಪ್ರಾತಿಭಾಸಿಕ ದೃಶ್ಯತ್ವವಿಲ್ಲದ್ದರಿಂದ ದೃಷ್ಟಾಂತದಲ್ಲಿ ಸಾಧನವೈಕಲ್ಯ. ನಮ್ಮ ಮತದಲ್ಲಿ ಅಸತ್ತಾದ ಶುಕ್ತಿರಜತದಲ್ಲಿ ದೃಶ್ಯತ್ವ ಸತ್ಯವಾದ್ದರಿಂದ ಧರ್ಮಿಸಮಸತ್ತಾಕವಾದ ಅಸತ್ತಾದ ದೃಶ್ಯತ್ವವಿಲ್ಲದ್ದರಿಂದ ಸಾಧನ ವೈಕಲ್ಯ. ಅಥವಾ, 'ವೃತ್ತಿ'ಯು ಅಪರೋಕ್ಷ ವೃತ್ತಿ ವಿವಕ್ಷಿತವಾಗಿದ್ದಲ್ಲಿ ದೃಷ್ಟಾಂತವಾದ ಶುಕ್ತಿರಜತದಲ್ಲಿ ಅಪರೋಕ್ಷವೃತ್ತಿ ವಿಷಯತ್ವವಿಲ್ಲ. 'ಇದಂ ರಜತಂ' ಎಂಬಲ್ಲಿ ಇದಮಂಶವು ಅಪರೋಕ್ಷ ಅಂತಃಕರಣ ವೃತ್ತಿವಿಷಯವಾದರೂ ರಜತರೂಪ ಅಧ್ಯಸ್ತಾಂಶವು ಮಾತ್ರ ಸಾಕ್ಷಿಚೈತನ್ಯಕ್ಕೇ ವಿಷಯವಾಗಿದೆ. ಅದರಿಂದ ದೃಷ್ಟಾಂತಕ್ಕೆ ಸಾಧನವೈಕಲ್ಯದೋಷ ಬರುತ್ತದೆ. 'ವೃತ್ತಿ' ಪರೋಕ್ಷವಾಗಿದ್ದಲ್ಲಿ ತುಚ್ಛಬ್ರಹ್ಮ ಗಳಲ್ಲಿ ವ್ಯಭಿಚಾರ.

**ನನು ಶುದ್ಧಂ ಬ್ರಹ್ಮ ನ ದೃಶ್ಯಂ। ಕಿಂತು ವಿಶಿಷ್ಟಮೇವ। ದೃಶ್ಯತ್ವ ಶ್ರುತಯೋಽಪಿ ತದ್ವಿಷಯಾಃ। ಅನ್ಯಥಾ 'ಯತ್ತತ್ ಅದ್ರೇಶ್ಯಂ' ಇತ್ಯಾದಿ ಶ್ರುತಿವಿರೋಧಾತ್ ಇತಿ ಚೇನ್ನ। ಸ್ವತಃ ಸಿದ್ಧೇಃ ನಿರಾಕರಿಷ್ಯಮಾಣತ್ವೇನ ಶುದ್ಧಾಸಿದ್ಧಿಪ್ರಸಂಗಾತ್। ಅಜ್ಞಾತೇ ಧರ್ಮಿಣಿ ಕಸ್ಯಚಿತ್‌ಧರ್ಮಸ್ಯ ವಿಧಾತುಂ ನಿಷೇದ್ಧುಂ ವಾ ಅಶಕ್ಯತ್ವೇನ ಶುದ್ಧೇ ದೃಶ್ಯತ್ವಂ ನಿಷೇಧತಾ ಶುದ್ಧಸ್ಯ ಜ್ಞೇಯತ್ವಾಚ್ಚ।**

'ಶುದ್ಧ ಬ್ರಹ್ಮವು ದೃಶ್ಯವಲ್ಲ. ವಿಶಿಷ್ಟವೇ ದೃಶ್ಯವಾಗುವುದು. ಹೀಗೆ ಹೇಳದಿದ್ದರೆ ಶ್ರುತಿವಿರೋಧ ಬಂದೀತು. 'ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ' ಇತ್ಯಾದಿ ದೃಶ್ಯತ್ವಶ್ರುತಿಗಳು ಕೂಡ ವಿಶಿಷ್ಟ ವಿಷಯಕವಾಗಿವೆ. ಆದರಿಂದ ಯಥಾಶ್ರುತವಾದ ವೃತ್ತಿವ್ಯಾಪ್ಯತ್ವರೂಪ ದೃಶ್ಯತ್ವವೇ ಹೇತು. ಅದಕ್ಕೆ ವ್ಯಭಿಚಾರವಿಲ್ಲ. ಶುದ್ಧದಲ್ಲಿ ಮಿಥ್ಯಾತ್ವರೂಪ ಸಾಧ್ಯವಿಲ್ಲದಿದ್ದರೂ ದೃಶ್ಯತ್ವಹೇತುವಿಲ್ಲ. ವಿಶಿಷ್ಟದಲ್ಲಿ

ದೃಶ್ಯತ್ವಹೇತುವಿದ್ದರೂ ಮಿಥ್ಯಾತ್ವರೂಪ ಸಾಧ್ಯವೂ ಇರುವುದರಿಂದ ವ್ಯಭಿಚಾರವಿಲ್ಲ'—ಎಂದರೆ ಇದೂ ಸರಿಯಲ್ಲ.

ಶುದ್ಧಕ್ಕೆ ಸ್ವತಃ ಸಿದ್ಧಿಯನ್ನು, ಅಂದರೆ, ಅವೇದ್ಯತ್ವರೂಪ ಸ್ವಪ್ರಕಾಶತ್ವವನ್ನು ಮುಂದೆ ನಿರಾಕರಿಸುವುದರಿಂದ, ವೃತ್ತಿವ್ಯಾಪ್ಯತ್ವವೂ ಇಲ್ಲವೆಂದರೆ, ಶುದ್ಧವೆಂಬ ಪದಾರ್ಥ ಇದೆ ಎಂಬುದೇ ಸಿದ್ಧವಾಗಲಾರದು ಎನ್ನುವ ಪ್ರಸಂಗವಿದೆ. ಆದರಿಂದ ಶುದ್ಧಸಿದ್ಧಿಗಾಗಿ ವೃತ್ತಿವ್ಯಾಪ್ಯತ್ವರೂಪ ದೃಶ್ಯತ್ವವನ್ನು ಒಪ್ಪಿದರೆ ವ್ಯಭಿಚಾರ ಬಂದೇ ಬರುತ್ತದೆ. ಮತ್ತು ದೃಶ್ಯತ್ವವನ್ನು ಶುದ್ಧಕ್ಕೆ ಒಪ್ಪುವುದಿಲ್ಲ ಎನ್ನುವುದು ಸ್ವವ್ಯಾಹತವೂ ಆಗುತ್ತದೆ. ಧರ್ಮಿ ಅಜ್ಞಾತವಾಗಿದ್ದರೆ ಅದರಲ್ಲಿ ಯಾವುದೇ ಧರ್ಮವನ್ನು ವಿಧಾನ ಮಾಡುವುದಾಗಲಿ ನಿಷೇಧ ಮಾಡುವುದಾಗಲಿ ಶಕ್ಯವಿಲ್ಲದ್ದರಿಂದ 'ಶುದ್ಧದಲ್ಲಿ ದೃಶ್ಯತ್ವವಿಲ್ಲ' ಎನ್ನುವ ನೀನು 'ಶುದ್ಧ'ವನ್ನು ಮೊದಲಿಗೆ ತಿಳಿದಿರಲೇಬೇಕು. ಶುದ್ಧಕ್ಕೆ ದೃಶ್ಯತ್ವವನ್ನು ಒಪ್ಪಿಯೇ ಇರಬೇಕು ಎಂದಮೇಲೆ 'ಶುದ್ಧದಲ್ಲಿ ದೃಶ್ಯತ್ವವಿಲ್ಲ' ಎಂದರೆ ಸ್ವವ್ಯಾಘಾತ.

**ನ ಚ ಸ್ವಪ್ರಕಾಶತ್ವೇನ ಸ್ವತಃಸಿದ್ಧೇ ಶುದ್ಧೇ ವೃತ್ತ್ಯಾ ದೃಶ್ಯತ್ವ ನಿಷೇಧಧೀಃ । ಶುದ್ಧಂ ಸ್ವಪ್ರಕಾಶಂ' ಇತಿ ಶಬ್ದಜನ್ಯ ವಿಶಿಷ್ಟವೃತ್ತೌ ಶುದ್ಧಾಪ್ರಕಾಶೇ ತಸ್ಯ ಸ್ವಪ್ರಕಾಶತ್ವಾಸಿದ್ಧೇಃ ।**

ನಾನು ಶುದ್ಧದಲ್ಲಿ ದೃಶ್ಯತ್ವನಿಷೇಧ ಮಾಡುವುದು ಅಯುಕ್ತವಲ್ಲ. ಏಕೆಂದರೆ ಶುದ್ಧವು ಸ್ವವಿಷಯಪ್ರಕಾಶತ್ವರೂಪ ಸ್ವಪ್ರಕಾಶತ್ವೇನ ಸ್ವತಃಸಿದ್ಧವಾಗಿದೆ. ಆದರಿಂದ ಧರ್ಮಿಜ್ಞಾನ ವಿರುವುದರಿಂದ, ವೃತ್ತಿವಿಷಯತ್ವರೂಪದೃಶ್ಯತ್ವವು ಶುದ್ಧದಲ್ಲಿ ದೃಶ್ಯತ್ವನಿಷೇಧಮಾಡಲು ಅನಾವಶ್ಯಕ. ಆದರಿಂದ ನಿಷೇಧಿಸುತ್ತೇನೆ' ಎಂದು ಅದ್ವೈತಿ ಹೇಳಿದರೆ ನಾವು ಹೇಳಬೇಕು—'ಶುದ್ಧವು ಸ್ವಪ್ರಕಾಶವಾಗಿದೆ' ಎಂಬ ವಾಕ್ಯದಿಂದ ಬರುವ ಸ್ವಪ್ರಕಾಶತ್ವ ವಿಶಿಷ್ಟ ಬುದ್ಧಿಯಲ್ಲಿ ಸ್ವಪ್ರಕಾಶತ್ವೇನ ಶುದ್ಧ ಕಾಣುವುದಿಲ್ಲವೆಂದರೆ ಶುದ್ಧಕ್ಕೆ ಸ್ವಪ್ರಕಾಶತ್ವವು ಸಿದ್ಧವಾಗಲಾರದು. ಆದರಿಂದ ಶುದ್ಧವು ಸ್ವಪ್ರಕಾಶತ್ವ ವಿಶಿಷ್ಟವಿಷಯಕ ವೃತ್ತಿಯಲ್ಲಿ ಕಾಣುವುದರಿಂದಲೇ ದೃಶ್ಯತ್ವವಿರುವುದರಿಂದ ವ್ಯಭಿಚಾರ.

**ಲಾಘವೇನ ಸ್ಫುರಣ ಮಾತ್ರಮೇವ ಮಿಥ್ಯಾತ್ವೇ ತಂತ್ರಂ ಇತಿ ಸ್ವತಃ ಸ್ಫುರದಪಿ ಬ್ರಹ್ಮ ಮಿಥ್ಯೈವ । ತತ್‌ಸತ್ಯತ್ವ ಶ್ರುತಿಸ್ತು ಜಗತ್‌ಸತ್ಯತ್ವಶ್ರುತಿವತ್ ಅನುಮಾನಾದಿ ವಿರೋಧೇನ ಅಸದ್‌ವೈಲಕ್ಷಣ್ಯಪರಾ ಇತ್ಯಾಪಾತಾಚ್ಚ ।**

ಮಿಥ್ಯಾತ್ವಕ್ಕೆ ಪ್ರಯೋಜಕ ದೃಶ್ಯತ್ವ ಅದು ಬ್ರಹ್ಮನಲ್ಲಿಲ್ಲ ಎಂದು ಸಾಧಿಸಲು ಅದ್ವೈತಿ ಪ್ರಯಾಸಪಡುತ್ತಾನೆ. ಆದರೆ, ವಸ್ತುತಃ ಮಿಥ್ಯಾತ್ವಕ್ಕೆ ಲಾಘವದಿಂದ ಸ್ಫುರಣಮಾತ್ರವೆ ಪ್ರಯೋಜಕವೆನ್ನಬೇಕು ಹೊರತು ಸ್ವತಃ ಸ್ಫುರಣವಾಗಲಿ ಅನ್ಯತಃ ಸ್ಫುರಣವಾಗಲಿ ಪ್ರಯೋಜಕವಲ್ಲ, ಗೌರವ ಬರುವುದರಿಂದ. ಸ್ಫುರಣಮಾತ್ರವು ಸ್ವತಃ ಸ್ಫುರಿಸುವ ಬ್ರಹ್ಮನಲ್ಲಿಯೂ ಇವೆಯಾದ್ದರಿಂದ, ಜಗತ್ತಿನಂತೆ ಬ್ರಹ್ಮವೂ ಮಿಥ್ಯೆಯೆ. ಜಗತ್ತು ಬ್ರಹ್ಮಗಳಿಗೆ ಇಷ್ಟೇ ವ್ಯತ್ಯಾಸ—'ಜಗತ್ತು ಪ್ರಮಾಣದಿಂದ ಸ್ಫುರಿಸುತ್ತದೆ, ಬ್ರಹ್ಮವು ಸ್ವತಃ ಸ್ಫುರಿಸುತ್ತದೆ' ಎಂದು.

ಅಥವಾ ಮಿಥ್ಯಾತ್ವಕ್ಕೆ ಏನು ಪ್ರಯೋಜಕವೆಂದು ಜಿಜ್ಞಾಸೆ ಬಂದಾಗ ಚೈತನ್ಯವು ಸ್ಫುರಣದಿಂದ ಅವ್ಯಭಿಚಾರಿಯಾದ್ದರಿಂದ ಸ್ಫುರಣವೇ ಮೊದಲಿಗೆ ಉಪಸ್ಥಿತವಾಗುವುದು. ವೃತ್ತಿಯು ಚೈತನ್ಯ ಸ್ಫುರಣಾಧೀನ ಸ್ಫುರಣವಿಷಯವಾಗಿರುವುದರಿಂದ ಅದು ವಿಲಂಬೇನ ಉಪಸ್ಥಿತವಾಗುವುದು ಹೀಗಾಗಿ ಶರೀರಲಾಘವದ ಜೊತೆಗೆ ಉಪಸ್ಥಿತಿಲಾಘವವೂ ಇರುವುದರಿಂದ ಸ್ಫುರಣವಿಷಯತ್ವವೆ ಮಿಥ್ಯಾತ್ವಪ್ರಯೋಜಕ. ವೃತ್ತಿವ್ಯಾಪ್ಯತ್ವವಲ್ಲ. ಘಟವು ಸ್ಫುರಿಸುತ್ತದೆ. ಶುಕ್ತಿರಜತವು ಸ್ಫುರಿಸುತ್ತದೆ ಬ್ರಹ್ಮವೂ ಸ್ವತಃ ಸ್ಫುರಿಸುತ್ತದೆ. ಎಂದು ಅನುಭವ ವಿರುವುದರಿಂದ ಮಿಥ್ಯಾತ್ವಪ್ರಯೋಜಕವಾದ ಸ್ಫುರಣವಿಷಯತ್ವವು ಸರ್ವತ್ರ ಇರುವುದರಿಂದ ಸರ್ವವೂ ಮಿಥ್ಯಾ ಎಂದಾಗುತ್ತದೆ. ಅದ್ವೈತವಾದದಲ್ಲಿ ಶೂನ್ಯವಾದದಿಂದ ಏನೂ ವೈಲಕ್ಷಣ್ಯ ವಿಲ್ಲವಾಗುತ್ತದೆ.

ಬ್ರಹ್ಮ ಸ್ಫುರಣರೂಪವಾದರೂ ಕಲ್ಪಿತಭೇದೇನ ಸ್ಫುರಣವಿಷಯವೂ ಆಗುತ್ತದೆ.

'ಆತ್ಮನೂ ಮಿಥ್ಯಾ ಆದರೆ 'ಸತ್ಯಂ ಜ್ಞಾನ ಮನಂತಂ ಬ್ರಹ್ಮ' 'ತತ್ ಸತ್ಯಂ ಸ ಆತ್ಮಾ' ಇತ್ಯಾದಿ ಶ್ರುತಿವಿರೋಧ'ವೆಂದರೆ, 'ಜಗತ್ತು ಮಿಥ್ಯಾ ಆದರೂ 'ವಿಶ್ವಂ ಸತ್ಯಂ' 'ಯಚ್ಚಿಕೇತ ಸತ್ಯಮಿತ್' ಇತ್ಯಾದಿ ಶ್ರುತಿವಿರೋಧ ಸಮಾನ. ಜಗತ್‌ಸತ್ಯತ್ವಶ್ರುತಿ 'ವಿಮತಂ ಮಿಥ್ಯಾ ದೃಶ್ಯತ್ವಾತ್' ಎಂಬ ಅನುಮಾನ ವಿರೋಧದಿಂದ ಅಸದ್‌ವೈಲಕ್ಷಣ್ಯಪರ ಎನ್ನುವುದಾದರೆ ಬ್ರಹ್ಮಸತ್ಯತ್ವ ಶ್ರುತಿಯೂ 'ಬ್ರಹ್ಮವು ಮಿಥ್ಯಾ, ಸ್ಫುರಿಸುವುದರಿಂದ' ಎಂಬ ಅನುಮಾನದ ವಿರೋಧದಿಂದ ಅಸದ್‌ವೈಲಕ್ಷಣ್ಯ ಪರವೆನ್ನಬಹುದು ಎಂಬ ಆಪತ್ತಿ ಬರುತ್ತದೆ.

**ಶುದ್ಧಂ ನ ದೃಶ್ಯತೇ ಇತ್ಯತ್ರ ಶುದ್ಧಶಬ್ದಸ್ಯ ಅಭಿಧಯಾ ಲಕ್ಷಣಯಾ ವಾ ಶುದ್ಧಾಬೋಧಕತ್ವೇ ತತ್ ಪ್ರಯೋಗ ವೈಯರ್ಥ್ಯಾಚ್ಚ ।**

'ಶುದ್ಧದಲ್ಲಿ ದೃಶ್ಯತ್ವವಿಲ್ಲ' ಎಂಬ ವಾಕ್ಯದಲ್ಲಿ 'ಶುದ್ಧ' ಎಂಬ ಶಬ್ದವು ಶಕ್ತಿಯಿಂದಾಗಲಿ ಲಕ್ಷಣೆಯಿಂದಾಗಲಿ ಶುದ್ಧವನ್ನು ಬೋಧಿಸದಿದ್ದರೆ 'ಶುದ್ಧ' ಪದಪ್ರಯೋಗಕ್ಕೆ ಅರ್ಥಬೋಧನರೂಪ ಪ್ರಯೋಜನವಿಲ್ಲದ್ದರಿಂದ ವ್ಯರ್ಥವಾದೀತು. ಶುದ್ಧವನ್ನು ಬೋಧಿಸಿದರೆ ಶುದ್ಧದಲ್ಲಿ ದೃಶ್ಯತ್ವ ಬರುವುದರಿಂದ ವ್ಯಭಿಚಾರ.

**ವಿಶಿಷ್ಟೇ ಮಿಥ್ಯಾತ್ವ ದೃಶ್ಯತ್ವಯೋಃ ವ್ಯತಿರೇಕಾಸಂಭವೇನ ಶುದ್ಧನಿಷ್ಠವ್ಯತಿರೇಕ ಜ್ಞಾನಾಯ ಶುದ್ಧಸ್ಯ ಜ್ಞೇಯತ್ವಾಚ್ಚ । ವಿಶಿಷ್ಟಜ್ಞಾನೇ ವಿಶೇಷ್ಯಸ್ಯಾಪಿ ಭಾನೇನ ವಿಶಿಷ್ಟಸ್ಯ ದೃಶ್ಯತ್ವೇನೈವ ಶುದ್ಧಸ್ಯಾಪಿ ದೃಶ್ಯತ್ವ ಸಿದ್ಧೇಶ್ಚ ।**

ದೃಶ್ಯತ್ವ ಹೇತುವು ಅನ್ವಯವ್ಯತಿರೇಕಿಯಾದ್ದರಿಂದ ವ್ಯತಿರೇಕವ್ಯಾಪ್ತಿಯನ್ನು ಶುದ್ಧದಲ್ಲಿಯೇ ಗ್ರಹಿಸಬೇಕಾಗುತ್ತದೆ. ವಿಶಿಷ್ಟದಲ್ಲಿ ಮಿಥ್ಯಾತ್ವದೃಶ್ಯತ್ವಗಳೇ ಇವೆ ಹೊರತು ಅವುಗಳ ವ್ಯತಿರೇಕಗಳಿಲ್ಲ. ಆದರಿಂದ ಶುದ್ಧದಲ್ಲಿ ವ್ಯತಿರೇಕಗ್ರಹಣ ಮಾಡಬೇಕೆಂದರೆ ಶುದ್ಧವನ್ನು ತಿಳಿಯಲೇಬೇಕು. ಶುದ್ಧದಲ್ಲಿ ದೃಶ್ಯತ್ವವನ್ನು ಅಂಗೀಕರಿಸಲೇಬೇಕು.

ವಿಶಿಷ್ಟವು ವಿಶೇಷಣ ವಿಶೇಷ್ಯ ತತ್ಸಂಬಂಧ ತ್ರಿತಯರೂಪವಾದ್ದರಿಂದ ವಿಶಿಷ್ಟಜ್ಞಾನದಲ್ಲಿ ವಿಶೇಷ್ಯವಾದ ಶುದ್ಧವೂ ಕಾಣಲೇಬೇಕು. ಹೀಗಾಗಿ ವಿಶಿಷ್ಟವು ದೃಶ್ಯವಾದ್ದರಿಂದಲೇ ಶುದ್ಧವೂ ದೃಶ್ಯವೆಂದು ಸಿದ್ಧಿಸುವುದು.

❖❖❖

**नच विष्णवे शिपिविष्टायेत्यादौ देवतात्ववत् विषयत्वमपि विशिष्ट एव नतु विशेष्येऽपीति युक्तम् । देवतात्ववदेव विषयत्वस्यापि बिशेषणेऽप्यभावेन भागासिद्धेः । घटत्वविशिष्ट एव दृश्यत्वं, नतु विशेष्ये घट इत्यापाताच्च । विशिष्टे ज्ञातेऽपि कदाचिद्विशेष्ये अज्ञानाद्यापाताच्च । दण्डी चैत्र इति ज्ञानेनैव चैत्रोऽपि ज्ञात इत्यनुभवाच्च ।**

**एतेनानुभवविरोधादिनैवाग्नीषोमयोर्देवतात्ववद्विषयत्वमपि व्यासज्यवृत्तीति न विशेष्ये तदिति निरस्तम् ।**

**अत एवादृश्यत्वश्रुतिस्साकल्येनादृश्यत्वपरा । अन्यथा यत्तद्द्रेश्यमित्यादौ यच्छब्दायोगात् ।**

शिपिविष्टाय रश्मिभिराविष्टाय । एतेनेत्यस्य विवरणम् **अनुभवविरोधादिनैवेति** । एतच्चोपलक्षणम् । विषयत्वस्य द्वित्वादिवदेकैकत्र पर्याप्त्यभावेऽपि विशेष्यवृत्तित्वानपायात् । विशेषणादित्रितयपर्याप्ताधिकरणताकदृग्विषयत्वस्य हेतूकरणे च भागासिद्धितादवस्थ्यमिति ध्येयम् । **अत एवेति** । विशेष्ये ज्ञानाविषयत्वस्यानुभवबाधितत्वादेवेत्यर्थः । **यत्तदिति** । तयोः सर्वनामत्वेन बुद्धिस्थपरामर्शकत्वादिति भावः ।

❖❖❖

ನ ಚ—'ವಿಷ್ಣವೇ ಶಿಪಿವಿಷ್ಟಾಯ' ಇತ್ಯಾದೌ ದೇವತಾತ್ವವತ್ ವಿಷಯತ್ವಮಪಿ ವಿಶಿಷ್ಟೇ ಏವ, ನತು ವಿಶೇಷ್ಯೇಽಪಿ–ಇತಿ ಯುಕ್ತಂ। ದೇವತಾತ್ವವದೇವ ವಿಷಯತ್ವಸ್ಯಾಪಿ ವಿಶೇಷಣೇಽಪ್ಯಭಾವೇನ ಭಾಗಾಸಿದ್ಧೇಃ। ಘಟತ್ವವಿಶಿಷ್ಟೇ ಏವ ದೃಶ್ಯತ್ವಂ, ನ ತು ವಿಶೇಷ್ಯೇ ಘಟೇ ಇತ್ಯಾಪಾತಾಚ್ಚ। ವಿಶಿಷ್ಟೇ ಜ್ಞಾತೇಽಪಿ ಕದಾಚಿತ್ ವಿಶೇಷ್ಯೇ ಅಜ್ಞಾನಾದ್ಯಾಪಾತಾಚ್ಚ। ದಂಡೀ ಚೈತ್ರ ಇತಿ ಜ್ಞಾನೇನೈವ ಚೈತ್ರೋಽಪಿ ಜ್ಞಾತ ಇತಿ ಅನುಭವಾಚ್ಚ।

'ಶಿಪಿ–ವಿಷ್ಣು' ಅಂದರೆ ಪ್ರಕಾಶಗಳಿಂದ ವ್ಯಾಪ್ತ ಎಂದರ್ಥ. 'ಶಿಪಿ ವಿಷ್ಣತ್ವರೂಪ ವಿಶೇಷಣ ವಿಶಿಷ್ಟನಾದ ವಿಷ್ಣುವಿಗೆ ಹವಿಸ್ಸನ್ನು ಅರ್ಪಿಸಿದರು' 'ಪುರೋಡಾಶಂ ನಿರವಪನ್ ಶಿಪಿವಿಷ್ಟಾಯ ವಿಷ್ಣವೇ' (ಭಾಗ.4.12.35) ಎಂದು ಶಿಪಿವಿಷ್ಟತ್ವ ವಿಶೇಷಣ ವಿಶಿಷ್ಟವಿಷ್ಣುವಿನಲ್ಲಿ ದೇವತಾತ್ವವಿದೆ ಹೊರತು ಕೇವಲ ವಿಶೇಷಣದಲ್ಲಿಯಾಗಲಿ ಕೇವಲ ವಿಶೇಷ್ಯದಲ್ಲಾಗಲಿ ದೇವತಾತ್ವ ಇಲ್ಲ. ಆದ್ದರಿಂದ ದೃಶ್ಯತ್ವವೂ ಕೂಡ ವಿಶಿಷ್ಟ ಚೈತನ್ಯದಲ್ಲಿಯೆ ಹೊರತು ವಿಶೇಷ್ಯವಾದ ಶುದ್ಧದಲ್ಲಿ ಇಲ್ಲ' —ಎಂದರೆ, ಇದು ಸರಿಯಲ್ಲ, ದೇವತಾತ್ವವು ಹೇಗೆ ಕೇವಲ ವಿಶೇಷ್ಯದಲ್ಲಿಲ್ಲವೋ ಹಾಗೇ ದೃಶ್ಯತ್ವವೂ ವಿಶೇಷಣದಲ್ಲಿಲ್ಲದ್ದರಿಂದ ವಿಶೇಷಣದಲ್ಲಿ ಭಾಗಾಸಿದ್ಧಿ ಎನ್ನಬೇಕಾದೀತು. ಕೇವಲ ವಿಶೇಷ್ಯದಲ್ಲಿ ದೇವತಾತ್ವಪರ್ಯಾಪ್ತಿ 'ಇಲ್ಲದದ್ದರೂ ದೇವತಾತ್ವವಿದೆ. ಹಾಗೇ ದೃಶ್ಯತ್ವವೂ ಇರುವುದರಿಂದ ವ್ಯಭಿಚಾರ. ಪರ್ಯಾಪ್ತಿಯನ್ನೇ ಹೇತುಮಾಡಿದರೆ ಭಾಗಾಸಿದ್ಧಿ. ಘಟತ್ವ ವಿಶಿಷ್ಟದಲ್ಲಿಯೇ ದೃಶ್ಯತ್ವ ಪರ್ಯಾಪ್ತಿ ಹೊರತು ವಿಶೇಷ್ಯವಾದ ಘಟದಲ್ಲಿ ಪರ್ಯಾಪ್ತಿ ಇಲ್ಲವೆಂದು ಭಾಗಾಸಿದ್ಧಿ ಎನ್ನಬೇಕಾದೀತು. ವಿಶಿಷ್ಟ ಜ್ಞಾತವಾದರೂ ಕದಾಚಿತ್ ವಿಶೇಷ್ಯದಲ್ಲಿ ಅಜ್ಞಾನ ಸಂಶಯಾದಿಗಳಿರಬೇಕಾದೀತು. 'ದಂಡೀ ಚೈತ್ರಃ' ಎಂದು ತಿಳಿದರೆ ಚೈತ್ರನೂ ಜ್ಞಾತನೆ ಆಗುತ್ತಾನೆ ಎಂದು ಅನುಭವವೂ ಇದೆ. ಆದರಿಂದ ಶುದ್ಧ ಚೈತನ್ಯದಲ್ಲಿ ದೃಶ್ಯತ್ವ ಹೇತುವಿಗೆ ವ್ಯಭಿಚಾರ ಅಪರಿಹಾರ್ಯ.

**ಏತೇನ— ಅನುಭವ ವಿರೋಧಾದಿನೈವ ಅಗ್ನೀಷೋಮಯೋಃ ದೇವತಾತ್ವವತ್ ವಿಷಯತ್ವಮಪಿ ವ್ಯಾಸಜ್ಯವೃತ್ತಿ ಇತಿ ನ ವಿಶೇಷ್ಯೇ ತತ್–ಇತಿ ನಿರಸ್ತಂ।**

ಈ ಅನುಭವ ವಿರೋಧಾದಿಗಳು ಬರುವುದರಿಂದಲೇ, 'ಅಗ್ನಿ–ಸೋಮ ಎಂಬ ದೇವತಾದ್ವಂದ್ವದಲ್ಲಿ ದೇವತಾತ್ವವು ಪರ್ಯಾಪ್ತಿ ಸಂಬಂಧದಿಂದಿರುವುದರಿಂದ ವ್ಯಾಸಜ್ಯವೃತ್ತಿ ಎನಿಸಿದೆ, ಅದು ಪ್ರತ್ಯೇಕವಾಗಿ ಅಗ್ನಿಯಲ್ಲಾಗಲಿ ಸೋಮದಲ್ಲಾಗಲಿ ಇರುವುದಿಲ್ಲ. ಹಾಗೇ ವಿಷಯತ್ವವೂ ಕೂಡ ವಿಶೇಷಣವಿಶೇಷ್ಯ ದ್ವಂದದಲ್ಲಿ ವ್ಯಾಸಜ್ಯವೃತ್ತಿಯಾಗಿ ಇದೆ ಹೊರತು ವಿಶೇಷ್ಯದಲ್ಲಿ ಇಲ್ಲ' ಎನ್ನುವುದನ್ನೂ ನಿರಾಸಮಾಡಿದಂತಾಯಿತು.

ಇದು ಉಪಲಕ್ಷಣ. ವಿಷಯತ್ವಕ್ಕೆ ದ್ವಿತ್ವಾದಿಗಳಂತೆ ವಿಶೇಷಣವಿಶೇಷ್ಯಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಪರ್ಯಾಪ್ತಿ ಇಲ್ಲದಿದ್ದರೂ ವಿಶೇಷ್ಯವೃತ್ತಿತ್ವ ವಿಲ್ಲವೆನ್ನುವಂತಿಲ್ಲ.

'ವಿಶೇಷಣ ವಿಶೇಷ್ಯ ತತ್ಸಂಬಂಧರೂಪ ತ್ರಿತಯಪರ್ಯಾಪ್ತ ಅಧಿಕರಣತಾಕ ದೃಗ್‌ವಿಷಯತ್ವ'ವನ್ನೆ ಹೇತು ಮಾಡಿದರೆ ಪ್ರತ್ಯೇಕವಾಗಿ ವಿಶೇಷಣಾದಿಗಳಲ್ಲಿ ಹೇತು ಬಾರದಿರುವುದರಿಂದ ಅವುಗಳಲ್ಲಿ ಭಾಗಾಸಿದ್ಧಿ ಪರಿಹಾರವಾಗುವುದಿಲ್ಲ.

**ಅತ ಏವ ಅದೃಶ್ಯತ್ವಶ್ರುತಿಃ ಸಾಕಲ್ಯೇನ ಅದೃಶ್ಯತ್ವಪರಾ। ಅನ್ಯಥಾ 'ಯತ್‌ತತ್ ಅದ್ರೇಶ್ಯಂ' ಇತ್ಯಾದೌ 'ಯತ್' ಶಬ್ದಾಯೋಗಾತ್।**

ವಿಶಿಷ್ಟ ಜ್ಞಾನ ಬಂದಾಗಲೂ ವಿಶೇಷ್ಯವು ಅಜ್ಞಾತವಾಗಿರುವುದು ಅನುಭವದಿಂದ ಬಾಧಿತವಾದ್ದರಿಂದಲೇ 'ಯತ್ ತತ್ ಅದ್ರೇಶ್ಯಂ' 'ಆ ಬ್ರಹ್ಮಚೈತನ್ಯವು 'ಅದ್ರೇಶ್ಯ'ವಾಗಿದೆ, ಅಂದರೆ 'ಅದೃಶ್ಯ'ವಾಗಿದೆ' ಎನ್ನುವ ಶ್ರುತಿಯು 'ಪೂರ್ತಿ ತಿಳಿಯಲಾಗದುದು, ಬ್ರಹ್ಮಚೈತನ್ಯ' ಎನ್ನುವ ಅಭಿಪ್ರಾಯದ್ದು ಎಂದು ಅಬಾಧಿತವಾದ ಅರ್ಥಾಂತರವನ್ನು ಅಂಗೀಕರಿಸಬೇಕು. ಇಲ್ಲದಿದ್ದರೆ 'ಯತ್‌ತತ್ ಅದ್ರೇಶ್ಯಂ' ಎಂಬಲ್ಲಿ 'ಯತ್' ಎಂಬ ಶಬ್ದಪ್ರಯೋಗ ಮಾಡಿದ್ದು ಅಯುಕ್ತವಾದೀತು. ಏಕೆಂದರೆ 'ಯತ್‌ತತ್' ಶಬ್ದಗಳು ಸರ್ವನಾಮ ಸಂಜ್ಞಕವಾದ್ದರಿಂದ ಬುದ್ಧಿಸ್ಥ ಪರಾಮರ್ಶ ಮಾಡುವಂಥವುಗಳು. ಏನೂ ತಿಳಿಯದೇ ಇದ್ದ ವಿಷಯವು ಬುದ್ಧಿಸ್ಥವಾಗದು. ಬುದ್ಧಿಸ್ಥವಾಗಿದೆ ಎಂದರೆ ಅದು ತಿಳಿದಿದೆ. ತಿಳಿದರೂ ಪೂರ್ತಿ ತಿಳಿಯಲಿಲ್ಲ. ತಿಳಿಯಲಾಗುವುದಿಲ್ಲ ಎನ್ನುವ ಅಭಿಪ್ರಾಯದಿಂದಲೇ 'ಅದ್ರೇಶ್ಯ' ಶಬ್ದದಿಂದ 'ತಿಳಿಯಲಾಗದು' ಎಂದು ಶ್ರುತಿಯು ಹೇಳುತ್ತಿದೆ ಎಂದು ಅಂಗೀಕರಿಸಬೇಕು.

'ದೃಶ್' ಧಾತುವಿನ ಉಪಧಾಕ್ಷರಕ್ಕೆ ಆರ್ಷವಾಗಿ 'ಏಕ್' ಆಗಮ ಬಂದಿರುವುದರಿಂದ 'ದೃಶ್ಯ' ಎಂಬುದು 'ದ್ರೇಶ್ಯ' ಎಂದಾಗಿದೆ 'ಅದೃಶ್ಯ' 'ಅದ್ರೇಶ್ಯ'ವಾಗಿದೆ.

❖❖❖

**एतेन चरमवृत्त्युपहितस्यैवात्मनस्तद्विषयत्वात्तस्य च मिथ्यात्वान्न व्यभिचार इति निरस्तम् । चरमवृत्तेः स्वविषयान्तर्भावे तस्याः स्वप्रकाशत्वस्याप्रमात्वस्य चापातात् ।**

**'वृत्त्युपरागोऽत्र सत्तयोपयुज्यते, नतु भास्यतये'ति कल्पतरुविरोधाच्च ।**

**बहिर्भावे च विषयस्य सत्यत्वेन व्यभिचारानुद्धारात् । नच स्वरूपेण दृश्यत्वं हेतुः । ब्रह्म तु विशिष्टरूपेणैव दृश्यमिति वाच्यम् । निर्विकल्पकाभावपक्षे घटादेरपि, तत्सद्भावपक्षे नित्यातीन्द्रियस्यापि विशिष्टरूपेणैव दृश्यत्वेनासिद्धेः । नहि लिङ्गादिना निर्विकल्पकधीः । वेदान्तानां कल्पितविशिष्टपरत्वे तत्वावेदकत्वायोगाच्च । ''तरति शोकमात्मवि''दित्यादौ मोक्षसाधनशुद्धरूपप्रमोक्तेश्च ।**

**अप्रमात्वस्य चेति ।** मिथ्या(भूतस्व)विषयकत्वादिति भावः । यद्यप्यप्रमात्वस्य वृत्तिरूपविषयांशे आपादनमिष्टमेव । ब्रह्मचैतन्यरूपविषयांशे त्वापादकाभावः. तस्य

सत्यत्वात् । तथापि तत्त्वावेदकाद्वैतागमजन्यायाश्चरमवृत्तेर्न बाध्यविषयत्वमङ्गीकर्तव्यम् । अन्यथा प्रत्यक्षादिजन्यवृत्त्यविशेषापातः, वृत्तिमात्रस्य त्वया चैतन्यविषयत्वस्वीकारादिति । यद्वा एतदस्वरसादेवाह **वृत्त्युपराग इति ।** वृत्त्युपहितस्यात्मनस्तद्विषयत्वमित्यत्र वृत्तेः स्वविषयान्तर्भावोऽस्ति न वेति विकल्प्याद्यं निरस्य द्वितीयं निराह **बहिर्भावे चेति । स्वरूपेणेति ।** वैशिष्ट्यप्रतियोग्यनुयोगिभावानापन्नतयेत्यर्थः । **कल्पितविशिष्टपरत्वे इति ।** नच शब्दस्वाभाव्यात् कल्पितविशिष्टप्रत्यायकत्वेऽपि वेदान्तानां तत्र तात्पर्याभावात् चिन्मात्र एव तात्पर्याच्च न तत्त्वावेदकत्वायोग इति वाच्यम् । अपूर्वतादिरूपतात्पर्यलिङ्गसत्त्वेन वेदान्तानां कल्पितविशिष्टे तात्पर्यस्य दुर्निवारत्वात् । अन्यथा तात्पर्यव्यभिचारित्वेन तस्यातल्लिङ्गत्वप्रसङ्ग इति भावः ।

**शुद्धरूपेति ।।** शुद्धेन रूप्यते निरूप्यते इति व्युत्पत्त्या शुद्धविषयकप्रमोक्तेरिति भावः ।

❖❖❖

**ಏತೇನ 'ಚರಮವೃತ್ತ್ಯುಪಹಿತಸ್ಯೈವ ಆತ್ಮನಃ ತದ್ವಿಷಯತ್ವಾತ್ ತಸ್ಯ ಚ ಮಿಥ್ಯಾತ್ವಾತ್ ನ ವ್ಯಭಿಚಾರಃ' ಇತಿ ನಿರಸ್ತಂ। ಚರಮ ವೃತ್ತೇಃ ಸ್ವವಿಷಯಾಂತರ್ಭಾವೇ ತಸ್ಯಾಃ ಸ್ವಪ್ರಕಾಶತ್ವಸ್ಯ ಅಪ್ರಮಾತ್ವಸ್ಯ ಚ ಆಪಾತಾತ್।**

ಯದ್ಯಪಿ ಚರಮವೃತ್ತಿಯಲ್ಲಿ ಶುದ್ಧಚೈತನ್ಯ ಮಾತ್ರವೇ ವಿಷಯವೆಂದು ಅದ್ವೈತಸಿದ್ಧಾಂತ ವಿದೆ. ಅದನ್ನು ಮರೆತು, ವ್ಯಭಿಚಾರಪರಿಹಾರಕ್ಕಾಗಿ 'ಚರಮವೃತ್ತಿಯು ತಾನೂ ಅದರಲ್ಲಿ ವಿಷಯವಾಗದೆ, ಚರಮ ವೃತ್ತ್ಯುಪಹಿತವಾದ ಚೈತನ್ಯವನ್ನೇ ವಿಷಯೀಕರಿಸುತ್ತದೆ. ಅದು ಮಿಥ್ಯಾ ಆಗಿರುವುದರಿಂದ ವ್ಯಭಿಚಾರವಿಲ್ಲ' ಎಂದೂ ಹೇಳಬಹುದು. ಆಗ ಹೇಳಬೇಕು—ಉಪಹಿತ ಚೈತನ್ಯಕ್ಕೆ ದೃಶ್ಯತ್ವ ಬಂದರೆ ಉಪಧೇಯವಾದ ಶುದ್ಧಕ್ಕೂ ದೃಶ್ಯತ್ವ ಬರಲೇಬೇಕು' ಆಗ ಚರಮಾವೃತ್ತಿ ತನ್ನ ವಿಷಯದಲ್ಲಿ ತಾನೂ ಅಂತರ್ಭಾವ ಹೊಂದಿದರೆ, ಅಂದರೆ ತನ್ನಿಂದ ಉಪಹಿತವಾದ ಚೈತನ್ಯವನ್ನು ವಿಷಯೀಕರಿಸುವಾಗ ಚೈತನ್ಯದೊಂದಿಗೆ, ಅದಕ್ಕೆ ಉಪಾಧಿಯಾದ ತನ್ನನ್ನೂ ವಿಷಯೀಕರಿಸಿದರೆ, ಅದು ಸ್ವಪ್ರಕಾಶವಾಗಬೇಕಾದೀತು. ಜಡವಾದ ಅಸ್ವಪ್ರಕಾಶವಾದ ವೃತ್ತಿ ಸ್ವಪ್ರಕಾಶವಾಗುತ್ತದೆ ಎಂದರೆ ವ್ಯಾಹತಿ. ಮತ್ತು ಚರಮವೃತ್ತಿ ವೇದಾಂತವಾಕ್ಯಜನ್ಯ. ತತ್ತ್ವಾವೇದಕವಾದ ವೇದಾಂತವಾಕ್ಯವು ಅತತ್ತ್ವವಾದ ವೃತ್ತಿಯನ್ನು ಹೇಳುವುದಿಲ್ಲವೆಂದ ಮೇಲೆ ಆ ವಾಕ್ಯದಿಂದ ಜನಿಸಿದ ಚರಮವೃತ್ತಿಯು

ವೃತ್ತಿವಿಷಯಕವಾಗಲಾರದು. ಆಗುವುದೆಂದರೆ ಮಿಥ್ಯಾಭೂತ ಚರಮವೃತ್ತಿವಿಷಯಕವಾದ್ದರಿಂದ ಚರಮವೃತ್ತಿ ಅಪ್ರಮಾ ಆದೀತು.

**'ವೃತ್ತ್ಯುಪರಾಗಃ ಅತ್ರ ಸತ್ತಯಾ ಉಪಯುಜ್ಯತೇ। ನತು ಭಾಸ್ಯತಯಾ' ಇತಿ ಕಲ್ಪತರು ವಿರೋಧಾಚ್ಚ।**

ಯದ್ಯಪಿ 'ಚರಮವೃತ್ತಿಯು ತನ್ನನ್ನು ತಾನು ವಿಷಯೀಕರಿಸಿ ಮಿಥ್ಯಾಭೂತವೃತ್ತಿ ವಿಷಯಕತ್ವೇನ ತಾನು ಅಪ್ರಮಾ ಆದರೂ, ವೃತ್ತಿರೂಪಸ್ವವಿಷಯಾಂಶದಲ್ಲಿ ಮಾತ್ರ ಅದು ಅಪ್ರಮಾ ಎನಿಸೀತು. ಬ್ರಹ್ಮಚೈತನ್ಯರೂಪ ವಿಷಯಾಂಶದಲ್ಲಿ ಅಪ್ರಮಾ ಆಗಲು ಕಾರಣವಿಲ್ಲ. ಚೈತನ್ಯವು ಮಿಥ್ಯಾ ಅಲ್ಲ, ಸತ್ಯವೇ ಆಗಿದೆ' ಎಂದು ಅದ್ವೈತಿ ಉಪಹಿತಚೈತನ್ಯವನ್ನು ಮಿಥ್ಯಾ ಎಂದೆನ್ನುವ ತನ್ನ ಸಿದ್ಧಾಂತವನ್ನು ಮರೆತು ಹೇಳಬಹುದು. ಆದರೂ ಅದಕ್ಕೆ ಹೀಗೆ ಉತ್ತರ ಹೇಳಬೇಕು—'ತತ್ತ್ವಾವೇದಕ ಅದ್ವೈತ ವೇದಾಂತಜನ್ಯ ಚರಮವೃತ್ತಿಯನ್ನು ಕೂಡ ಬಾಧ್ಯವಿಷಯಕವೆಂದು ಅಂಗೀಕರಿಸುವುದಾದರೆ, ವೃತ್ತಿ ಎಲ್ಲವೂ ವಿಷಯಾವಚ್ಛಿನ್ನ ಚೈತನ್ಯ ವಿಷಯಕವೇ ಆಗಿರುತ್ತದೆ ಎಂದು ನಿಯಮವಿರುವುದರಿಂದ, ಪ್ರತ್ಯಕ್ಷಾದಿಜನ್ಯ ಅತತ್ತ್ವಾವೇದಕವೃತ್ತಿಗೂ ತತ್ತ್ವಾವೇದಕವಾದ ವೇದಾಂತಜನ್ಯ ಚರಮವೃತ್ತಿಗೂ ಏನೂ ವೈಲಕ್ಷಣ್ಯವಿಲ್ಲವಾಗುವುದು' ಎಂದು. ಅಥವಾ ಕಲ್ಪತರುವಿನಲ್ಲಿ ಹೇಳಿರುವ ಅದ್ವೈತಸಿದ್ಧಾಂತವನ್ನು ಅವನಿಗೆ ನೆನಪಿಸಬೇಕು ಕಲ್ಪತರು ಹೇಳುತ್ತದೆ— 'ಅತ್ರ' ಅಂದರೆ, ವೃತ್ತಿಗೆ ಉಪಹಿತ ಚೈತನ್ಯ ವಿಷಯತ್ವವಿಷಯದಲ್ಲಿ 'ವೃತ್ತ್ಯುಪರಾಗಃ' ಚೈತನ್ಯಕ್ಕೆ ವೃತ್ತಿಸಂಬಂಧವು 'ಸತ್ತಯಾ ಉಪಯುಜ್ಯತೇ' ಸ್ವರೂಪಸತ್ತಾಗಿ ಪ್ರಯೋಜಕವಾಗುವುದು ಹೊರತು, 'ನ ತು ಭಾಸ್ಯತಯಾ ವಿಷಯ ಕೋಟಿ ಪ್ರವೇಶೇನ' ಜ್ಞಾಯಮಾನವಾಗಿ ವಿಷಯಕೋಟಿಯಲ್ಲಿ ಪ್ರವಿಷ್ಟವಾಗಿ ಪ್ರಯೋಜಕವಾಗುವುದಿಲ್ಲ' ಎಂದು ಸ್ಪಷ್ಟವಾಗಿ ವೃತ್ತಿಯಲ್ಲಿ ವೃತ್ತಿ ತಾನು ವಿಷಯವಾಗುವುದಿಲ್ಲವೆಂದೇ ಹೇಳಿದೆ. ಅದರ ವಿರೋಧವು ನಿನಗೆ ಬರುತ್ತದೆ' ಎಂದು.

ಉಪಾಧಿಯಾದ ಚರಮವೃತ್ತಿಯು ಮೂಲಾಜ್ಞಾನದಂತೆಯೇ ತಾನು ತನ್ನನ್ನು ವಿಷಯೀಕರಿಸದೆಯೇ 'ಸತ್ತಯಾ' ಉಪಸ್ಥಿಯಿಂದಲೇ ಚೈತನ್ಯವನ್ನು ಉಪಹಿತವನ್ನಾಗಿ ಮಾಡುತ್ತದೆ. ಬಳಿಕ ತನ್ನಿಂದ ಉಪಹಿತವಾದ ಮಿಥ್ಯಾಭೂತವಾದ ಚೈತನ್ಯವನ್ನು ವಿಷಯೀಕರಿಸುತ್ತದೆ ಎಂದು ಸಿದ್ಧಿಕಾರ ಹೇಳುತ್ತಾನೆ. ಇದು ವ್ಯಾಹತ. ಉಪಾಧಿಯನ್ನು ಬಿಟ್ಟು ಉಪಹಿತವನ್ನು ಮಾತ್ರ ವೃತ್ತಿಯು ವಿಷಯೀಕರಿಸುವುದು ಅಶಕ್ಯ. ವ್ಯಾಹತ.

**ಬಹಿರ್ಭಾವೇ ಚ ವಿಷಯಸ್ಯ ಸತ್ಯತ್ವೇನ ವ್ಯಭಿಚಾರಾನುದ್ಧಾರಾತ್।**

'ಚರಮವೃತ್ತಿ ತನ್ನ ವಿಷಯಕೋಟಿಯಿಂದ ತಾನು ಬಹಿರ್ಭೂತವಾಗಿರುತ್ತದೆ. ವಿಷಯಕೋಟಿಯಲ್ಲಿರುವ ಶುದ್ಧಚೈತನ್ಯವನ್ನು ಮಾತ್ರವೇ ವಿಷಯೀಕರಿಸುತ್ತದೆ. ಸ್ವವಿಷಯಕವಾಗುವುದಿಲ್ಲ' ಎನ್ನುವ ಪಕ್ಷದಲ್ಲಿ ಅದು ಶುದ್ಧಚೈತನ್ಯವನ್ನೇ ವಿಷಯೀಕರಿಸುವುದರಿಂದ, ಶುದ್ಧಚೈತನ್ಯ ಸತ್ಯವೇ

ಆಗಿರುವುದರಿಂದ, ವೃತ್ತಿವಿಷಯತ್ವರೂಪ ದೃಶ್ಯತ್ವಕ್ಕೆ ಸತ್ಯವಾದ ಶುದ್ಧಚೈತನ್ಯದಲ್ಲಿ ವ್ಯಭಿಚಾರ ಪರಿಹಾರವಾಗುವುದಿಲ್ಲ.

**ನ ಚ– ಸ್ವರೂಪೇಣ ದೃಶ್ಯತ್ವಂ ಹೇತುಃ, ಬ್ರಹ್ಮ ತು ವಿಶಿಷ್ಟರೂಪೇಣೈವ ದೃಶ್ಯಂ– ಇತಿ ವಾಚ್ಯಂ। ನಿರ್ವಿಕಲ್ಪಕಾಭಾವ ಪಕ್ಷೇ ಘಟಾದೇರಪಿ, ತತ್‌ಸದ್ಭಾವಪಕ್ಷೇ ನಿತ್ಯಾತೀಂದ್ರಿಯಸ್ಯಾಪಿ ವಿಶಿಷ್ಟರೂಪೇಣೈವ ದೃಶ್ಯತ್ವೇನ ಅಸಿದ್ಧೇಃ। ನ ಹಿ ಲಿಂಗಾದಿನಾ ನಿರ್ವಿಕಲ್ಪಕಧೀಃ।**

'ಸ್ವರೂಪೇಣ' ಅಂದರೆ ವೈಶಿಷ್ಟ್ಯಕ್ಕೆ ಪ್ರತಿಯೋಗಿಯಾಗಿ ಅಥವಾ ಅನುಯೋಗಿಯಾಗಿ ಕಾಣದೆಯೇ ಜ್ಞಾನದಲ್ಲಿ ಗೋಚರವಾಗುವುದನ್ನು ದೃಶ್ಯತ್ವವೆಂದು ಕರೆದು ಹೇತುಮಾಡುತ್ತೇನೆ. ಬ್ರಹ್ಮಚೈತನ್ಯವು ವೈಶಿಷ್ಟ್ಯ ಪ್ರತಿಯೋಗಿ–ಅನುಯೋಗಿ ಭಾವದಿಂದಲೇ ಕಾಣುವುದರಿಂದ ದೃಶ್ಯತ್ವವಿಲ್ಲ. ಆದರಿಂದ ವ್ಯಭಿಚಾರವಿಲ್ಲ ಎಂದು ಅದ್ವೈತಿ ಹೇಳಿದರೆ ಹೇತ್ವಸಿದ್ಧಿ ಬರುತ್ತದೆ. ನಿರ್ವಿಕಲ್ಪಕಜ್ಞಾನವೆಂಬುದಿದೆ ಎಂದು ಒಪ್ಪುವ ಪಕ್ಷದಲ್ಲಿ ಘಟಾದಿ ನಿರ್ವಿಕಲ್ಪಕದಲ್ಲಿ ಘಟಾದಿಯು ವೈಶಿಷ್ಟ್ಯಪ್ರತಿಯೋಗಿ–ಅನುಯೋಗಿ ಭಾವವಿಲ್ಲದೆಯೇ ಗೋಚರವಾಗುವುದು. ನಿರ್ವಿಕಲ್ಪಕಜ್ಞಾನ ವನ್ನು ಒಪ್ಪದ ಪಕ್ಷದಲ್ಲಿ ಎಲ್ಲಾ ಜ್ಞಾನವೂ ಸವಿಕಲ್ಪಕವೆ. ಆದರಲ್ಲಿ ವೈಶಿಷ್ಟ್ಯಪ್ರತಿಯೋಗಿ–ಅನುಯೋಗಿ ಭಾವದಿಂದಲೇ ಘಟಾದಿವಿಷಯ ಗೋಚರವಾಗುತ್ತದೆ. ಆದರಿಂದ ಘಟಾದಿ ಸರ್ವಪದಾರ್ಥ ಗಳಲ್ಲಿಯೂ ಹೇತುವಿಗೆ ಅಸಿದ್ಧಿ. ನಿರ್ವಿಕಲ್ಪಕವನ್ನು ಒಪ್ಪುವ ಪಕ್ಷದಲ್ಲಿ ನಿತ್ಯಾತೀಂದ್ರಿಯವಾದ ಧರ್ಮಾದಿಗಳಲ್ಲಿ ದೃಶ್ಯತ್ವವಿಲ್ಲದ್ದರಿಂದ ಭಾಗಾಸಿದ್ಧಿ. ಏಕೆಂದರೆ ವಿಶಿಷ್ಟ ಮಾತ್ರವಿಷಯಕವಾದ ಅನುಮಿತಿ ಶಾಬ್ದಬೋಧಗಳಲ್ಲಿ ಧರ್ಮಾದಿಗಳು ವಿಶಿಷ್ಟರೂಪದಿಂದಲೇ ಗೋಚರವಾಗುತ್ತವೆ. ಲಿಂಗ ಶಬ್ದಗಳಿಂದ ನಿರ್ವಿಕಲ್ಪಕಜ್ಞಾನವೆಂದೂ ಬರುವುದಿಲ್ಲ ತಾನೆ? ವ್ಯಾಪ್ತಿ ಪ್ರಕಾರಕ ಪಕ್ಷಧರ್ಮತಾವ ಗಾಹಿಯಾದ ಲಿಂಗಜ್ಞಾನವೂ ಪದಾರ್ಥತಾವಚ್ಛೇದಕಪ್ರಕಾರಕ ಪದಾರ್ಥೋಪಸ್ಥಿತಿಯೂ ವಿಶಿಷ್ಟವಿಷಯಕ ಅನುಮಿತಿ ಶಾಬ್ದಸಾಮಗ್ರಿಯೇ ಆಗಿರುವುದರಿಂದ ಅವುಗಳಿಂದ ಹುಟ್ಟುವ ಅನುಮಿತಿ ಶಾಬ್ದಬೋಧಗಳು ವಿಶಿಷ್ಟ ವಿಷಯಕವೇ ಆಗಿರುತ್ತವೆ.

**ವೇದಾಂತಾನಾಂ ಕಲ್ಪಿತವಿಶಿಷ್ಟ ಪರತ್ವೇ ತತ್ತ್ವಾವೇದಕತ್ವಾಯೋಗಾಚ್ಚ। 'ತರತಿ ಶೋಕಮಾತ್ಮವಿತ್' ಇತ್ಯಾದೌ ಮೋಕ್ಷಸಾಧನ ಶುದ್ಧರೂಪ ಪ್ರಮೋಕ್ತೇಶ್ಚ।**

ಬ್ರಹ್ಮವು ವೇದಾಂತ ಜನ್ಯಜ್ಞಾನದಲ್ಲಿ ವಿಶಿಷ್ಟರೂಪದಿಂದಲೇ ಕಾಣುತ್ತದೆ. ವಿಶಿಷ್ಟವು ಎಲ್ಲವೂ ಕಲ್ಪಿತವೆ. ಹೀಗಾಗಿ ವೇದಾಂತವು ಕಲ್ಪಿತ ವಿಶಿಷ್ಟಪರವಾದ್ದರಿಂದ ತತ್ತ್ವಾವೇದಕವಲ್ಲ ಎಂದಾಗುವುದು. ಆದರೆ 'ಪದಾರ್ಥತಾವಚ್ಛೇದಕಪ್ರಕಾರಕ ಪದಾರ್ಥೋಪಸ್ಥಿತಿಯು ಶಾಬ್ದ ಸಾಮಗ್ರಿಯಾಗಿರುವುದ ರಿಂದ ವೇದಾಂತವಾಕ್ಯಗಳು ಸ್ವಭಾವತಃ ವಿಶಿಷ್ಟವಿಷಯಕ ಬೋಧವನ್ನೇ ಉಂಟುಮಾಡುತ್ತಿದ್ದರೂ ಅದರಲ್ಲಿ ಅವುಗಳಿಗೆ ತಾತ್ಪರ್ಯವಿಲ್ಲ. ಚಿನ್ಮಾತ್ರದಲ್ಲಿಯೇ ತಾತ್ಪರ್ಯವಿರುತ್ತದೆ. ಆದರಿಂದ ತತ್ತ್ವಾವೇದಕತ್ವಕ್ಕೆ ಭಂಗ ಬರುವುದಿಲ್ಲ' ಎಂದು ಅದ್ವೈತಿ ಹೇಳುತ್ತಾನೆ.

ಇದಕ್ಕೆ ನಾವು ಹೇಳಬೇಕು—ಅಪೂರ್ವತ್ವಾದಿ ತಾತ್ಪರ್ಯಲಿಂಗಗಳಿರುವುದರಿಂದ ವೇದಾಂತ ವಾಕ್ಯಗಳಿಗೆ ಕಲ್ಪಿತ ವಿಶಿಷ್ಟದಲ್ಲಿ ತಾತ್ಪರ್ಯವಿರುವುದನ್ನು ತಲ್ಲಗಳೆಯಲಾಗದು. ಅಲ್ಲಗಳೆದರೆ, ತಾತ್ಪರ್ಯಗ್ರಾಹಕ ವಾಗದಿರುವುದರಿಂದ ಅವು ತಾತ್ಪರ್ಯಲಿಂಗಗಳೇ ಅಲ್ಲ ಎಂದಾದೀತು' ಎಂದು.

ಇನ್ನೊಂದು ದೋಷ— 'ತರತಿ ಶೋಕಂ ಆತ್ಮವಿತ್' 'ಆತ್ಮಜ್ಞಾನಿಯು ಶೋಕವನ್ನು ಮತ್ತು ಅದಕ್ಕೆ ಉಪಾದಾನವಾದ ಅಜ್ಞಾನವನ್ನು ನಿವೃತ್ತಿ ಮಾಡಿಕೊಳ್ಳುತ್ತಾನೆ! ಎಂದು ಶ್ರುತಿಯು ಮೋಕ್ಷಸಾಧನವಾದ ಶುದ್ಧವಿಷಯಕ ಪ್ರಮಾವನ್ನು ಶೋಕ ಅಜ್ಞಾನಗಳಿಗೆ ನಿವರ್ತಕವೆಂದು ಹೇಳುತ್ತಿದೆ. ಶೋಕವೆಂದರೆ ಇಲ್ಲಿ ಶೋಕಕ್ಕೆ ಉಪಾದಾನವಾದ ಅಜ್ಞಾನವೆ. ಅಜ್ಞಾನ ನಿವೃತ್ತಿಯು ಜ್ಞಾನದಿಂದಾಗ ಬೇಕೆಂದರೆ ಜ್ಞಾನವು ಪ್ರಮಾ ಆಗಬೇಕು. ಭ್ರಮವು ಅಜ್ಞಾನನಿವೃತ್ತಿ ಮಾಡುವುದಿಲ್ಲ. ಅಜ್ಞಾನ ನಿವೃತ್ತಿರೂಪಮೋಕ್ಷಕ್ಕೆ ಸಾಧನವಾದ ಈ ಪ್ರಮಾವು ಕಲ್ಪಿತ ವಿಶಿಷ್ಟವಿಷಯಕವಾಗದು. ಶುದ್ಧ ಅನುಪಹಿತ ವಿಷಯಕವೇ ಆಗಬೇಕು. ಉಪಹಿತ ವಿಷಯಕವಾದರೆ ಮೋಕ್ಷ ಸಾಧನವಾಗದು. ಅದರಿಂದ ಶ್ರುತಿಯು ಮೋಕ್ಷಸಾಧನತ್ವೇನ ಹೇಳುವ ಆತ್ಮಜ್ಞಾನವು ಅನುಪಹಿತ ಶುದ್ಧವಿಷಯಕವೆ ಆಗಿರುತ್ತದೆ. ಹೀಗೆ ವೇದಾಂತ ಜನ್ಯ ಜ್ಞಾನವಿಷಯತ್ವರೂಪ ದೃಶ್ಯತ್ವವು ಅನುಪಹಿತ ಶುದ್ಧ ಚೈತನ್ಯದಲ್ಲಿ ಬರುವುದೆಂದು ವೇದಾಂತವೇ ಹೇಳುತ್ತಿರುವುದರಿಂದ ವ್ಯಭಿಚಾರ ಅಪರಿಹಾರ್ಯ.

❖❖❖

किञ्च शुद्धज्ञानाभावे तदाच्छादकस्य मूलाज्ञानस्य निवृत्तिर्न स्यात् । ज्ञानस्याज्ञाननिवर्तकत्वे हि समानविषयत्वं तन्त्रम् ।

नच घटादिविषयज्ञानेष्वप्यन्याविषयत्वमेव तन्त्रम् । गौरवात् । दीपेच्छादौ समानविषयत्वेनैव विरोधितमोद्वेषादिनिवर्तकत्वदर्शनाच्च । घटपटाविति ज्ञानेन घटाज्ञानस्य विशिष्टज्ञानेन च विशेषणाज्ञानस्य च निवृत्तिदर्शनाच्च । ब्रह्मज्ञानस्य निर्विषयत्वे ज्ञानत्वायोगस्य वक्ष्यमाणत्वाच्च ।

अथ तदज्ञाननिवर्तकत्वे तदाकारत्वमेव तन्त्रम् । तच्च तद्विषयत्वाभावेऽपि करणसामर्थ्यादेव शशशृंगादिशब्दजन्यज्ञानस्येव युक्तम् । दृश्यत्वश्रुत्यादिकमपि तद्विषयमिति चेत् ।

स एवाकारो यस्येति वा । तदाकार एवाकारो यस्येति वा ।

**तदाकार इवाकारो यस्येति वा। नाद्यः। वृत्त्यनाश्रितस्यात्मनो वृत्त्याकारत्वायोगात्। न द्वितीयः। साकारवादापातात्। जडाद्याकार वृत्तावात्मीयस्य ज्ञानानन्दाद्यपरिच्छेदाकारस्याभावाच्च। सत्तयै-काकारत्वे च घटज्ञानस्याप्यात्माकारत्वापाताच्च। आत्मनो निराकारत्वाच्च।**

**अत एव न तृतीयः। ज्ञानानन्दादिना साम्यस्यासम्भवात्। सत्तया साम्यस्य चातिप्रसक्तेः। संस्थानसाम्यस्य च घट तद्वृत्त्योः कथञ्चित्सम्भवेऽपि अपरिच्छिन्नपरिच्छिन्नयोर्ब्रह्मतद्वृत्त्योरयोगात्।**

**तस्मात्तद्विषयत्वमेव तदाकारत्वमिति वाच्यम्। अन्यथा घटादिज्ञाने तद्विषयत्वं तन्त्रम्, आत्मज्ञाने तु तदाकारत्वमित्य-ननुगमादिति सुस्थ आत्मनि व्यभिचारः। अनिर्वचनीयत्वादिकं मिथ्यात्वमिति पक्षे तु तुच्छे व्यभिचारश्च। असद्वैलक्षण्यज्ञानार्थं तस्यापि ज्ञेयत्वात्।**

**समानविषयत्वमिति**। अन्यथा घटज्ञानेनापि पटाज्ञानस्य निवृत्तिप्रसङ्ग इति भावः। **गौरवादिति**। अभावघटितत्वादिति भावः। **समानविषयत्वेनैवेति**। दीपादेरन्यविषयत्वेऽपि स्वविरोधि तमआदि निवर्तकत्वदर्शनादिति भावः॥ **ब्रह्मज्ञानस्येति** वेदान्तजन्यज्ञानस्येत्यर्थः।

**तद्विषयमिति**। तदाकारत्वपरमित्यर्थः। **स एवाकार इति**। अत्राकारशब्दो धर्मपरः। **तदाकार एवेति**। तस्याकार एवेत्यर्थः॥ **तदाकार इवेति**॥ मध्यमपदलोपी समासः॥ **साकारवादेति**॥ ज्ञानस्यापि घटादिवत् घटत्वादिधर्मा-श्रयत्वाविशेषादित्यर्थः। ननु नास्माकं साकारवादः ज्ञानातिरिक्तविषयस्यापि स्वीकारादित्यनुशयेनाह **जडाद्याकारेति**। ननु ज्ञानानन्दाद्यसाधारणधर्मेण तदाकारत्वाभावेऽपि साधारणधर्मेण तदाकारत्वमस्तीत्याशङ्क्याह **सत्तयेति**। **आत्माकारत्वापातादिति**। तथाच घटज्ञानेनाप्यात्माज्ञाननिवृत्तिप्रसङ्ग इति भावः।

**निराकारत्वादिति ।** निर्धर्मकत्वादित्यर्थः । ननु शशविषाणादिशब्दजन्यवृत्तौ यत्तदाकारत्वं तदेवात्रापि स्यादित्याशङ्कामुपसंहारव्याजेन निरस्यति **तस्मादिति ।** तत्राप्यन्यस्य तदाकारस्य दुर्वचत्वेन सर्वत्र तद्विषयत्वमेव तदाकारत्वमित्यर्थः ।

**घटादिज्ञान इति ।** तदज्ञाननिवर्तकतायामिति शेषः । **अननुगमादिति ।** अननुगमापत्तेरित्यर्थः । एतच्चोपलक्षणम् । चरमवृत्तिवत् घटादिज्ञानस्यापि तदज्ञाननिवर्तकतायां तदाकारत्वस्यैव तन्त्रतया तदतिरिक्ततद्विषयकत्वे मानाभावेन दृग्विषयत्वरूपदृश्यत्वहेतोः स्वरूपासिद्धिरिति ध्येयम् । **तुच्छ इति ।** यद्यप्यस्तित्वप्रकारकवृत्तिव्याप्यत्वस्य हेतुत्वविवक्षायां न तुच्छे व्यभिचारः । तथाप्यसतोऽपि शशविषाणमस्तीति वाक्यजन्यतथाविधवृत्तिविषयत्वाद् व्यभिचार एव । नच तत्राप्याभासानिर्वचनीयशृङ्गस्यैव विषयत्वान्न व्यभिचार इति वाच्यम् । अस्तित्वस्यानिर्वचनीयत्वेऽप्यधिष्ठानस्यासत्त्वेन व्यभिचारतादवस्थ्यात् । यथा चास्तित्वस्यासदेवाधिष्ठानं तथाग्र एव स्पष्टीभविष्यतीति ध्येयम् ।

❖❖❖

**ಕಿಂಚ ಶುದ್ಧಜ್ಞಾನಾಭಾವೇ ತದಾಚ್ಛಾದಕಸ್ಯ ಮೂಲಾಜ್ಞಾನಸ್ಯ ನಿವೃತ್ತಿಃ ನ ಸ್ಯಾತ್।**
**ಜ್ಞಾನಸ್ಯ ಅಜ್ಞಾನ ನಿವರ್ತಕತ್ವೇ ಹಿ ಸಮಾನವಿಷಯತ್ವಂ ತಂತ್ರಂ।**

'ಶುದ್ಧದ ವಿಷಯದಲ್ಲಿ ಜ್ಞಾನವೇ ಬರುವುದಿಲ್ಲ, ಚರಮವೃತ್ತಿಯು ಕೂಡ ಶುದ್ಧವನ್ನು ವಿಷಯೀಕರಿಸುವುದಿಲ್ಲ' ಎಂದರೆ ಶುದ್ಧಕ್ಕೆ ಆವರಕವಾದ ಮೂಲಾಜ್ಞಾನದ ನಿವೃತ್ತಿ ಆಗಲಾರದು, ಮೋಕ್ಷವೆಂಬುದೇ ಇಲ್ಲವಾದೀತು.

'ಆಶ್ರಯತ್ವ ವಿಷಯತ್ವ ಭಾಗಿನೀ
ನಿರ್ವಿಶೇಷ ಚಿತಿರೇವ ಕೇವಲಾ ।
ಪೂರ್ವಸಿದ್ಧ ತಮಸೋ ಹಿ ಪಶ್ಚಿಮೋ
ನಾಶ್ರಯೋ ಭವತಿ ನಾಪಿ ಗೋಚರಃ'

ಎಂಬ ವಾರ್ತಿಕ ವಚನವು ಮೂಲಾಜ್ಞಾನಕ್ಕೆ ಆಶ್ರಯವೂ ವಿಷಯವೂ ಶುದ್ಧ ಚೈತನ್ಯವೇ ಹೊರತು ಉಪಹಿತ ಚೈತನ್ಯವಲ್ಲ' ಎಂದು ಸ್ಪಷ್ಟ ಹೇಳುತ್ತಿದೆ. ಹೀಗೆ ಶುದ್ಧಕ್ಕೆ ಆವರಕವಾದ ಶುದ್ಧವಿಷಯಕ ಅಜ್ಞಾನವು ನಾಶವಾಗಬೇಕಾದರೆ ಶುದ್ಧ ವಿಷಯದಲ್ಲಿ ಜ್ಞಾನ ಬರಲೇಬೇಕು. ಒಂದು ಅಜ್ಞಾನವು ಜ್ಞಾನದಿಂದ ನಿವರ್ತ್ಯವಾಗಬೇಕಾದರೆ ಜ್ಞಾನವು ಅಜ್ಞಾನಕ್ಕೆ ಸಮಾನವಾದ ವಿಷಯದಲ್ಲಿರಬೇಕು. ಘಟವಿಷಯಕಜ್ಞಾನದಿಂದ ಪಟಾವರಕ ಅಜ್ಞಾನ ನಾಶವಾಗುವುದಿಲ್ಲ.

**ನ ಚ ಘಟಾದಿವಿಷಯಜ್ಞಾನೇಷು ಅಪಿ ಅನ್ಯಾವಿಷಯತ್ವಮೇವ ತಂತ್ರಂ । ಗೌರವಾತ್ ।**

'ಘಟಾದಿವಿಷಯಕ ಜ್ಞಾನಗಳು ಘಟಾದ್ಯನ್ಯ ಅವಿಷಯಕವಾದ್ದರಿಂದ ಘಟಾದ್ಯಜ್ಞಾನ ನಿವರ್ತಕವಾಗುವಂತೆ, ನಿರ್ವಿಷಯಕವೇ ಆದ ಬ್ರಹ್ಮಜ್ಞಾನವು ಕೂಡ, ಬ್ರಹ್ಮಾನ್ಯಾವಿಷಯಕ ವಾದ್ದರಿಂದಲೇ ಬ್ರಹ್ಮಾಜ್ಞಾನ ನಿವರ್ತಕವಾಗಬಹುದು' ಎಂದು ಅದ್ವೈತಿ ಹೇಳಿದರೆ ಅದು ಯುಕ್ತವಲ್ಲ.

ಘಟಾದಿವಿಷಯಕ ಜ್ಞಾನಗಳಲ್ಲಿ ಕೂಡ ಘಟಾದ್ಯಜ್ಞಾನ ನಿವರ್ತಕತ್ವಕ್ಕೆ ನಞ್‌ದ್ವಯಾರ್ಥ ಘಟಿತವಾದ ಗುರುಭೂತವಾದ ಘಟಾದ್ಯನ್ಯ ಅವಿಷಯಕತ್ವವು ಪ್ರಯೋಜಕವೆನ್ನಲಾಗದು. ಹಾಗೆ ಹೇಳಿದರೆ ಗೌರವ ಬರುತ್ತದೆ. ಲಘುಭೂತವಾದ ಘಟಾದಿ ವಿಷಯಕತ್ವವೇ ಪ್ರಯೋಜಕ, ಆದರಿಂದ ಚರಮವೃತ್ತಿಯಲ್ಲಿ ಬ್ರಹ್ಮಾಜ್ಞಾನ ನಿವರ್ತಕತ್ವಕ್ಕೆ ಬ್ರಹ್ಮ ವಿಷಯಕತ್ವವೆ ಪ್ರಯೋಜಕ.

**ದೀಪೇಚ್ಛಾದೌ ಸಮಾನವಿಷಯತ್ವೇನೈವ ವಿರೋಧಿತಮೋದ್ವೇಷಾದಿ ನಿವರ್ತಕತ್ವ ದರ್ಶನಾಚ್ಚ ।**

ದೀಪದಲ್ಲಿ ಅನ್ಯವಿಷಯಕತ್ವವಿದ್ದರೂ ವಿರೋಧಿ ತಮೋನಿವರ್ತಕತ್ವವು, ಸಮಾನವಿಷಯತ್ವ ವಿರುವುದರಿಂದಲೇ ಇದೆ ಎಂಬುದು ಕಂಡಿದೆ. ಇಚ್ಛೆಯಲ್ಲಿ ಅನ್ಯ ವಿಷಯಕತ್ವವಿದ್ದರೂ ವಿರೋಧಿ ದ್ವೇಷ ನಿವರ್ತಕತ್ವವು ಕೂಡ ಸಮಾನವಿಷಯತ್ವವಿರುವುದರಿಂದಲೆ ಇದೆ ಎಂಬುದು ಕಂಡಿದೆ. ಆದರಿಂದ ಚರಮ ವೃತ್ತಿಯಲ್ಲಿರುವ ವಿರೋಧಿ ಬ್ರಹ್ಮಾಜ್ಞಾನ ನಿವರ್ತಕತ್ವಕ್ಕೆ ನ್ಯೂನವೃತ್ತಿಯಾದ ಅನ್ಯಾವಿಷಯಕತ್ವ ಅವಚ್ಛೇದಕವಲ್ಲ, ಅನ್ಯೂನವೃತ್ತಿಯಾದ ಸಮಾನವಿಷಯತ್ವವಿರುವುದರಿಂದಲೇ ನಿವರ್ತಕ ಎನ್ನಬೇಕು.

**ಘಟಪಟಾವಿತಿ ಜ್ಞಾನೇನ ಘಟಾಜ್ಞಾನಸ್ಯ, ವಿಶಿಷ್ಟ ಜ್ಞಾನೇನ ಚ ವಿಶೇಷಣಾಜ್ಞಾನಸ್ಯ ಚ ನಿವೃತ್ತಿದರ್ಶನಾಚ್ಚ ।**

ತದಾವರಕ ಅಜ್ಞಾನನಿವರ್ತಕತ್ವಕ್ಕೆ ಜ್ಞಾನದಲ್ಲಿ ತದನ್ಯ ಅವಿಷಯಕತ್ವವೇ ಪ್ರಯೋಜಕ ವೆನ್ನುವುದು ಅನುಭವವಿರುದ್ಧವಾಗುವುದು. 'ಘಟಪಟೌ' ಎಂಬ ಸಮೂಹಾಲಂಬನ ಜ್ಞಾನವು ಘಟಪಟಗಳೆರಡನ್ನೂ ವಿಷಯೀಕರಿಸುತ್ತಿರುವುದರಿಂದ ಘಟಾನ್ಯ ಪಟವಿಷಯಕವೇ ಆದರೂ ಘಟಾವರಕ ಅಜ್ಞಾನವು ಆ ಜ್ಞಾನದಿಂದ ನಿವೃತ್ತವಾಗುವುದು ಅನುಭವದಲ್ಲಿ ಕಂಡಿದೆ. ಘಟವಿಷಯಕ ವಾದ್ದರಿಂದ ಆ ಜ್ಞಾನವು ಘಟಾವರಕ ಅಜ್ಞಾನ ನಿವೃತ್ತಿ ಮಾಡಿದೆ. ಹಾಗೇ ವಿಶಿಷ್ಟಜ್ಞಾನವೂ ಕೂಡ ವಿಶೇಷಣ ವಿಶೇಷ್ಯಗಳೆರಡನ್ನೂ ವಿಷಯೀಕರಿಸುವುದರಿಂದ ವಿಶೇಷಣಾನ್ಯವಿಶೇಷ್ಯವಿಷಯಕ ವಾದರೂ ವಿಶೇಷಣವಿಷಯಕವಾದ್ದರಿಂದ ವಿಶೇಷಣದ ಅಜ್ಞಾನವನ್ನು ನಿವೃತ್ತಿ ಮಾಡುವುದು ಕಂಡಿದೆ.

**ಬ್ರಹ್ಮಜ್ಞಾನಸ್ಯ ನಿರ್ವಿಷಯತ್ವೇ ಜ್ಞಾನತ್ವಾಯೋಗಸ್ಯ ವಕ್ಷ್ಯಮಾಣತ್ವಾಚ್ಚ ।**

'ಚರಮವೃತ್ತಿಯು ಬ್ರಹ್ಮಾನ್ಯವಿಷಯಕವಾಗಿರುವುದು ಶಕ್ಯವಿಲ್ಲ. ಬ್ರಹ್ಮಾನ್ಯವು ಮಿಥ್ಯಾ ಎಂಬ ನಿಯಮವಿರುವುದರಿಂದ ಮಿಥ್ಯಾಭೂತವಾದ ಬ್ರಹ್ಮಾನ್ಯವನ್ನು ಅದು ವಿಷಯೀಕರಿಸಲಾರದು' ಎಂದು ದೃಶ್ಯತ್ವಕ್ಕೆ ಬ್ರಹ್ಮನಲ್ಲಿ ಮಿಥ್ಯಾತ್ವವ್ಯಭಿಚಾರ ಬಂದೀತೆಂದು ಭಯದಿಂದ ಚರಮವೃತ್ತಿಗೆ ಬ್ರಹ್ಮವಿಷಯಕತ್ವವನ್ನೂ ಅಪಲಾಪ ಮಾಡಿದರೆ, ಚರಮವೃತ್ತಿ ನಿರ್ವಿಷಯಕವಾದೀತು. ಆಗ ವೇದಾಂತ ಜನ್ಯವಾದ ಆ ವೃತ್ತಿ ಜ್ಞಾನವು ಘಟದಂತೇ ಮತ್ತು ಶುದ್ಧಬ್ರಹ್ಮರೂಪ ಜ್ಞಾನದಂತೆಯೇ ಜ್ಞಾನವೇ ಅಲ್ಲವಾದೀತು. 'ನಿರ್ವಿಷಯತ್ವೇ ಜ್ಞಾನಮೇವ ನ ಸ್ಯಾತ್ ಘಟವತ್' ಎಂದು ಬ್ರಹ್ಮರೂಪಜ್ಞಾನದ ಬಗ್ಗೆ ಮುಂದೆ ಜಡತ್ವಹೇತುಭಂಗದಲ್ಲಿ ಹೇಳಲಿದ್ದೇವೆ.

**ಅಥ ತದಜ್ಞಾನನಿವರ್ತಕತ್ವೇ ತದಾಕಾರತ್ವಮೇವ ತಂತ್ರಂ। ತಚ್ಚ ತದ್ವಿಷಯತ್ವಾಭಾವೇಽಪಿ ಕರಣಸಾಮರ್ಥ್ಯಾದೇವ ಶಶಶೃಂಗಾದಿ ಶಬ್ದಜನ್ಯಜ್ಞಾನಸ್ಯೇವ ಯುಕ್ತಂ। ದೃಶ್ಯತ್ವ ಶ್ರುತ್ಯಾದಿಕಮಪಿ ತದ್ವಿಷಯಂ ಇತಿ ಚೇತ್।**

'ಬೇರೆ ಜ್ಞಾನವು ಅಜ್ಞಾನನಿವರ್ತಕವಾಗಲು ಅದು ಅಜ್ಞಾನಸಮಾನ ವಿಷಯಕವಾಗಿರುವುದು ಆವಶ್ಯಕವಾದರೂ ಬ್ರಹ್ಮಜ್ಞಾನವು ಮೂಲಾಜ್ಞಾನನಿವರ್ತಕವಾಗಲು ಅದು ಬ್ರಹ್ಮಾಕಾರವಾದರೆ ಸಾಕು. ಬ್ರಹ್ಮವಿಷಯಕವೆ ಆಗಿರಬೇಕೆಂದರೆ ಅದು ಶಕ್ಯವಿಲ್ಲ. ವಿಷಯತ್ವವು ಕರ್ಮತ್ವರೂಪ ಕಾರಕ ವಿಶೇಷ. ಕೂಟಸ್ಥನಾದ ಆತ್ಮನಿಗೆ ಈ ವಿಷಯತ್ವ ಅಸಂಭವಿ. 'ಆತ್ಮಾ ವಾ ಅರೇ ದ್ರಷ್ಟವ್ಯಃ' 'ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ' ಇತ್ಯಾದಿ ಶ್ರುತಿಯೂ ಕೂಡ ಬ್ರಹ್ಮಜ್ಞಾನಕ್ಕೆ ಬ್ರಹ್ಮಾಕಾರತ್ವವನ್ನೇ ಹೇಳುತ್ತದೆ.

ಆತ್ಮ ವಿಷಯಕತ್ವವಿಲ್ಲದೆ ಆತ್ಮಾಕಾರತ್ವವು ಜ್ಞಾನಕ್ಕೆ ಹೇಗೆ ಎಂದರೆ, 'ಶಶವಿಷಾಣಂ' ಎಂಬ ಶಬ್ದವು ಸ್ವಸಾಮರ್ಥ್ಯದಿಂದ ಶಶವಿಷಾಣಾಕಾರಜ್ಞಾನವನ್ನು ಉಂಟುಮಾಡುತ್ತದೆ ಹೊರತು ಸಕಲ ಸಾಮರ್ಥ್ಯರಹಿತವಾದ ಶಶವಿಷಾಣದ ಸಾಮರ್ಥ್ಯದಿಂದ ಶಶವಿಷಾಣವಿಷಯಕ ಜ್ಞಾನವನ್ನುಂಟು ಮಾಡುವುದಿಲ್ಲ. ಹಾಗೇ ವೇದಾಂತವಾಕ್ಯರೂಪ ಕರಣಸಾಮರ್ಥ್ಯದಿಂದಲೆ ಬ್ರಹ್ಮಾಕಾರವಾದ ಬ್ರಹ್ಮಜ್ಞಾನ ಉತ್ಪನ್ನವಾಗುತ್ತದೆ' ಎಂದು ಬ್ರಹ್ಮನಿಗೆ ವೃತ್ತಿವ್ಯಾಪ್ಯತ್ವವನ್ನು ಒಪ್ಪದ ಭಾಮತೀಮತದವರು ಹೇಳುತ್ತಾರೆ.

**ಸ ಏವ ಆಕಾರೋ ಯಸ್ಯೇತಿ ವಾ? ತದಾಕಾರ ಏವ ಆಕಾರೋ ಯಸ್ಯೇತಿ ವಾ? ತದಾಕಾರ ಇವ ಆಕಾರೋ ಯಸ್ಯೇತಿ ವಾ?**

ಬ್ರಹ್ಮ ಅವಿಷಯಕ ಬ್ರಹ್ಮಜ್ಞಾನವು ಬ್ರಹ್ಮಾಕಾರವೆಂದರೆ ಏನರ್ಥ? ಆತ್ಮವೇ ಜ್ಞಾನದ ಧರ್ಮವೆಂದೆ? ಆತ್ಮಧರ್ಮವಾದ ಜ್ಞಾನಾನಂದಾದಿಯೇ ಜ್ಞಾನದ ಧರ್ಮವೆಂದೆ? ಅಥವಾ ಆತ್ಮ, ಆತ್ಮಾಕಾರಗಳಿಗಿಂತ ಬೇರೆಯಾದುದು ಆತ್ಮಾಕಾರ ಸದೃಶವಾದುದು ಜ್ಞಾನದ ಆಕಾರವೆಂದೆ?

**ನಾದ್ಯಃ। ವೃತ್ತ್ಯನಾಶ್ರಿತಸ್ಯ ಆತ್ಮನಃ ವೃತ್ತ್ಯಾಕಾರತ್ವಾಯೋಗಾತ್। ನ ದ್ವಿತೀಯಃ। ಸಾಕಾರವಾದಾಪಾತಾತ್। ಜಡಾದ್ಯಾಕಾರವೃತ್ತೌ ಆತ್ಮೀಯಸ್ಯ ಜ್ಞಾನಾನಂದಾದ್ಯಪರಿಚ್ಛೇದಾ-**

**ನ ಚ ಘಟಾದಿವಿಷಯಜ್ಞಾನೇಷು ಅಪಿ ಅನ್ಯಾವಿಷಯತ್ವಮೇವ ತಂತ್ರಂ । ಗೌರವಾತ್ ।**

'ಘಟಾದಿವಿಷಯಕ ಜ್ಞಾನಗಳು ಘಟಾದ್ಯನ್ಯ ಅವಿಷಯಕವಾದ್ದರಿಂದ ಘಟಾದ್ಯಜ್ಞಾನ ನಿವರ್ತಕವಾಗುವಂತೆ, ನಿರ್ವಿಷಯಕವೇ ಆದ ಬ್ರಹ್ಮಜ್ಞಾನವು ಕೂಡ, ಬ್ರಹ್ಮಾನ್ಯಾವಿಷಯಕ ವಾದ್ದರಿಂದಲೇ ಬ್ರಹ್ಮಾಜ್ಞಾನ ನಿವರ್ತಕವಾಗಬಹುದು' ಎಂದು ಅದ್ವೈತಿ ಹೇಳಿದರೆ ಅದು ಯುಕ್ತವಲ್ಲ.

ಘಟಾದಿವಿಷಯಕ ಜ್ಞಾನಗಳಲ್ಲಿ ಕೂಡ ಘಟಾದ್ಯಜ್ಞಾನ ನಿವರ್ತಕತ್ವಕ್ಕೆ ನಞ್‌ದ್ವಯಾರ್ಥ ಘಟಿತವಾದ ಗುರುಭೂತವಾದ ಘಟಾದ್ಯನ್ಯ ಅವಿಷಯಕತ್ವವು ಪ್ರಯೋಜಕವೆನ್ನಲಾಗದು. ಹಾಗೆ ಹೇಳಿದರೆ ಗೌರವ ಬರುತ್ತದೆ. ಲಘುಭೂತವಾದ ಘಟಾದಿ ವಿಷಯಕತ್ವವೇ ಪ್ರಯೋಜಕ, ಅದರಿಂದ ಚರಮವೃತ್ತಿಯಲ್ಲಿ ಬ್ರಹ್ಮಾಜ್ಞಾನ ನಿವರ್ತಕತ್ವಕ್ಕೆ ಬ್ರಹ್ಮ ವಿಷಯಕತ್ವವೆ ಪ್ರಯೋಜಕ.

**ದೀಪೇಚ್ಛಾದೌ ಸಮಾನವಿಷಯತ್ವೇನೈವ ವಿರೋಧಿತಮೋದ್ವೇಷಾದಿ ನಿವರ್ತಕತ್ವ ದರ್ಶನಾಚ್ಚ ।**

ದೀಪದಲ್ಲಿ ಅನ್ಯವಿಷಯಕತ್ವವಿದ್ದರೂ ವಿರೋಧಿ ತಮೋನಿವರ್ತಕತ್ವವು, ಸಮಾನವಿಷಯತ್ವ ವಿರುವುದರಿಂದಲೇ ಇದೆ ಎಂಬುದು ಕಂಡಿದೆ. ಇಚ್ಛೆಯಲ್ಲಿ ಅನ್ಯ ವಿಷಯಕತ್ವವಿದ್ದರೂ ವಿರೋಧಿ ದ್ವೇಷ ನಿವರ್ತಕತ್ವವು ಕೂಡ ಸಮಾನವಿಷಯತ್ವವಿರುವುದರಿಂದಲೆ ಇದೆ ಎಂಬುದು ಕಂಡಿದೆ. ಅದರಿಂದ ಚರಮ ವೃತ್ತಿಯಲ್ಲಿರುವ ವಿರೋಧಿ ಬ್ರಹ್ಮಾಜ್ಞಾನ ನಿವರ್ತಕತ್ವಕ್ಕೆ ನ್ಯೂನವೃತ್ತಿಯಾದ ಅನ್ಯಾವಿಷಯಕತ್ವ ಅವಚ್ಛೇದಕವಲ್ಲ. ಅನ್ಯೂನವೃತ್ತಿಯಾದ ಸಮಾನವಿಷಯತ್ವವಿರುವುದರಿಂದಲೇ ನಿವರ್ತಕ ಎನ್ನಬೇಕು.

**ಘಟಪಟಾವಿತಿ ಜ್ಞಾನೇನ ಘಟಾಜ್ಞಾನಸ್ಯ, ವಿಶಿಷ್ಟ ಜ್ಞಾನೇನ ಚ ವಿಶೇಷಣಾಜ್ಞಾನಸ್ಯ ಚ ನಿವೃತ್ತಿದರ್ಶನಾಚ್ಚ ।**

ತದಾವರಕ ಅಜ್ಞಾನನಿವರ್ತಕತ್ವಕ್ಕೆ ಜ್ಞಾನದಲ್ಲಿ ತದನ್ಯ ಅವಿಷಯಕತ್ವವೇ ಪ್ರಯೋಜಕ ವೆನ್ನುವುದು ಅನುಭವವಿರುದ್ಧವಾಗುವುದು. 'ಘಟಪಟೌ' ಎಂಬ ಸಮೂಹಾಲಂಬನ ಜ್ಞಾನವು ಘಟಪಟಗಳೆರಡನ್ನೂ ವಿಷಯೀಕರಿಸುತ್ತಿರುವುದರಿಂದ ಘಟಾನ್ಯ ಪಟವಿಷಯಕವೇ ಆದರೂ ಘಟಾವರಕ ಅಜ್ಞಾನವು ಆ ಜ್ಞಾನದಿಂದ ನಿವೃತ್ತವಾಗುವುದು ಅನುಭವದಲ್ಲಿ ಕಂಡಿದೆ. ಘಟವಿಷಯಕ ವಾದ್ದರಿಂದ ಆ ಜ್ಞಾನವು ಘಟಾವರಕ ಅಜ್ಞಾನ ನಿವೃತ್ತಿ ಮಾಡಿದೆ. ಹಾಗೇ ವಿಶಿಷ್ಟಜ್ಞಾನವೂ ಕೂಡ ವಿಶೇಷಣ ವಿಶೇಷ್ಯಗಳೆರಡನ್ನೂ ವಿಷಯೀಕರಿಸುವುದರಿಂದ ವಿಶೇಷಣಾನ್ಯವಿಶೇಷ್ಯವಿಷಯಕ ವಾದರೂ ವಿಶೇಷಣವಿಷಯಕವಾದ್ದರಿಂದ ವಿಶೇಷಣದ ಅಜ್ಞಾನವನ್ನು ನಿವೃತ್ತಿ ಮಾಡುವುದು ಕಂಡಿದೆ.

ಬ್ರಹ್ಮಜ್ಞಾನಸ್ಯ ನಿರ್ವಿಷಯತ್ವೇ ಜ್ಞಾನತ್ವಾಯೋಗಸ್ಯ ವಕ್ಷ್ಯಮಾಣತ್ವಾಚ್ಚ ।

'ಚರಮವೃತ್ತಿಯು ಬ್ರಹ್ಮಾನ್ಯವಿಷಯಕವಾಗಿರುವುದು ಶಕ್ಯವಿಲ್ಲ. ಬ್ರಹ್ಮಾನ್ಯವು ಮಿಥ್ಯಾ ಎಂಬ ನಿಯಮವಿರುವುದರಿಂದ ಮಿಥ್ಯಾಭೂತವಾದ ಬ್ರಹ್ಮಾನ್ಯವನ್ನು ಅದು ವಿಷಯೀಕರಿಸಲಾರದು' ಎಂದು ದೃಶ್ಯತ್ವಕ್ಕೆ ಬ್ರಹ್ಮನಲ್ಲಿ ಮಿಥ್ಯಾತ್ವವ್ಯಭಿಚಾರ ಬಂದೀತೆಂದು ಭಯದಿಂದ ಚರಮವೃತ್ತಿಗೆ ಬ್ರಹ್ಮವಿಷಯಕತ್ವವನ್ನೂ ಅಪಲಾಪ ಮಾಡಿದರೆ, ಚರಮವೃತ್ತಿ ನಿರ್ವಿಷಯಕವಾದೀತು. ಆಗ ವೇದಾಂತ ಜನ್ಯವಾದ ಆ ವೃತ್ತಿ ಜ್ಞಾನವು ಘಟವಂತೇ ಮತ್ತು ಶುದ್ಧಬ್ರಹ್ಮರೂಪ ಜ್ಞಾನದಂತೆಯೇ ಜ್ಞಾನವೇ ಅಲ್ಲವಾದೀತು. 'ನಿರ್ವಿಷಯತ್ವೇ ಜ್ಞಾನಮೇವ ನ ಸ್ಯಾತ್ ಘಟವತ್' ಎಂದು ಬ್ರಹ್ಮರೂಪಜ್ಞಾನದ ಬಗ್ಗೆ ಮುಂದೆ ಜಡತ್ವಹೇತುಭಂಗದಲ್ಲಿ ಹೇಳಲಿದ್ದೇವೆ.

**ಅಥ ತದಜ್ಞಾನನಿವರ್ತಕತ್ವೇ ತದಾಕಾರತ್ವಮೇವ ತಂತ್ರಂ। ತಚ್ಚ ತದ್ವಿಷಯತ್ವಾಭಾವೇಽಪಿ ಕರಣಸಾಮರ್ಥ್ಯಾದೇವ ಶಶಶೃಂಗಾದಿ ಶಬ್ದಜನ್ಯಜ್ಞಾನಸ್ಯೇವ ಯುಕ್ತಂ। ದೃಶ್ಯತ್ವ ಶ್ರುತ್ಯಾದಿಕಮಪಿ ತದ್ವಿಷಯಂ ಇತಿ ಚೇತ್।**

'ಬೇರೆ ಜ್ಞಾನವು ಅಜ್ಞಾನನಿವರ್ತಕವಾಗಲು ಅದು ಅಜ್ಞಾನಸಮಾನ ವಿಷಯಕವಾಗಿರುವುದು ಆವಶ್ಯಕವಾದರೂ ಬ್ರಹ್ಮಜ್ಞಾನವು ಮೂಲಾಜ್ಞಾನನಿವರ್ತಕವಾಗಲು ಅದು ಬ್ರಹ್ಮಾಕಾರವಾದರೆ ಸಾಕು. ಬ್ರಹ್ಮವಿಷಯಕವೆ ಆಗಿರಬೇಕೆಂದರೆ ಅದು ಶಕ್ಯವಿಲ್ಲ. ವಿಷಯತ್ವವು ಕರ್ಮತ್ವರೂಪ ಕಾರಕ ವಿಶೇಷ. ಕೂಟಸ್ಥನಾದ ಆತ್ಮನಿಗೆ ಈ ವಿಷಯತ್ವ ಅಸಂಭವಿ. 'ಆತ್ಮಾ ವಾ ಅರೇ ದ್ರಷ್ಟವ್ಯಃ' 'ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ' ಇತ್ಯಾದಿ ಶ್ರುತಿಯೂ ಕೂಡ ಬ್ರಹ್ಮಜ್ಞಾನಕ್ಕೆ ಬ್ರಹ್ಮಾಕಾರತ್ವವನ್ನೇ ಹೇಳುತ್ತದೆ.

ಆತ್ಮ ವಿಷಯಕತ್ವವಿಲ್ಲದೆ ಆತ್ಮಾಕಾರತ್ವವು ಜ್ಞಾನಕ್ಕೆ ಹೇಗೆ ಎಂದರೆ, 'ಶಶವಿಷಾಣಂ' ಎಂಬ ಶಬ್ದವು ಸ್ವಸಾಮರ್ಥ್ಯದಿಂದ ಶಶವಿಷಾಣಾಕಾರಜ್ಞಾನವನ್ನು ಉಂಟುಮಾಡುತ್ತದೆ ಹೊರತು ಸಕಲ ಸಾಮರ್ಥ್ಯರಹಿತವಾದ ಶಶವಿಷಾಣದ ಸಾಮರ್ಥ್ಯದಿಂದ ಶಶವಿಷಾಣವಿಷಯಕ ಜ್ಞಾನವನ್ನುಂಟು ಮಾಡುವುದಿಲ್ಲ. ಹಾಗೇ ವೇದಾಂತವಾಕ್ಯರೂಪ ಕರಣಸಾಮರ್ಥ್ಯದಿಂದಲೆ ಬ್ರಹ್ಮಾಕಾರವಾದ ಬ್ರಹ್ಮಜ್ಞಾನ ಉತ್ಪನ್ನವಾಗುತ್ತದೆ' ಎಂದು ಬ್ರಹ್ಮನಿಗೆ ವೃತ್ತಿವ್ಯಾಪ್ಯತ್ವವನ್ನು ಒಪ್ಪದ ಭಾಮತೀಮತದವರು ಹೇಳುತ್ತಾರೆ.

**ಸ ಏವ ಆಕಾರೋ ಯಸ್ಯೇತಿ ವಾ? ತದಾಕಾರ ಏವ ಆಕಾರೋ ಯಸ್ಯೇತಿ ವಾ? ತದಾಕಾರ ಇವ ಆಕಾರೋ ಯಸ್ಯೇತಿ ವಾ?**

ಬ್ರಹ್ಮ ಅವಿಷಯಕ ಬ್ರಹ್ಮಜ್ಞಾನವು ಬ್ರಹ್ಮಾಕಾರವೆಂದರೆ ಏನರ್ಥ? ಆತ್ಮವೇ ಜ್ಞಾನದ ಧರ್ಮವೆಂದೆ? ಆತ್ಮಧರ್ಮವಾದ ಜ್ಞಾನಾನಂದಾದಿಯೇ ಜ್ಞಾನದ ಧರ್ಮವೆಂದೆ? ಅಥವಾ ಆತ್ಮ, ಆತ್ಮಾಕಾರಗಳಿಗಿಂತ ಬೇರೆಯಾದುದು ಆತ್ಮಾಕಾರ ಸದೃಶವಾದುದು ಜ್ಞಾನದ ಆಕಾರವೆಂದೆ?

**ನಾದ್ಯಃ। ವೃತ್ತ್ಯನಾಶ್ರಿತಸ್ಯ ಆತ್ಮನಃ ವೃತ್ತ್ಯಾಕಾರತ್ವಾಯೋಗಾತ್। ನ ದ್ವಿತೀಯಃ। ಸಾಕಾರವಾದಾಪಾತಾತ್। ಜಡಾದ್ಯಾಕಾರವೃತ್ತೌ ಆತ್ಮೀಯಸ್ಯ ಜ್ಞಾನಾನಂದಾದ್ಯಪರಿಚ್ಛೇದಾ-**

**ಕಾರಸ್ಯ ಅಭಾವಾಚ್ಚ। ಸತ್ತಯೈಕಾಕಾರತ್ವೇ ಚ ಘಟಜ್ಞಾನಸ್ಯಾಪಿ ಆತ್ಮಾಕಾರತ್ವಾಪಾತಾಚ್ಚ। ಆತ್ಮನೋ ನಿರಾಕಾರತ್ವಾಚ್ಚ।**

ಆತ್ಮವೇ ಜ್ಞಾನದ ಆಕಾರ, ಧರ್ಮ ಎಂಬ ಮೊದಲನೆ ಪಕ್ಷ ಸರಿಯಲ್ಲ. ಒಂದು ವಸ್ತುವಿನ ಆಕಾರವೆಂದರೆ ಅದು ಆ ವಸ್ತುವನ್ನು ಆಶ್ರಯಿಸಿರುತ್ತದೆ. ಆತ್ಮನು ವೃತ್ತಿಯನ್ನು ಆಶ್ರಯಿಸಿರುವುದಿಲ್ಲ. ಅದರಿಂದ ಆತ್ಮನು ವೃತ್ತಿಯ ಆಕಾರವಲ್ಲ. ಯದ್ಯಪಿ ಆತ್ಮನು ಜ್ಞಾನದ ಆಕಾರವಾಗಬೇಕಾದರೆ ಜ್ಞಾನವನ್ನಾಶ್ರಯಿಸಿಯೆ ಇರಬೇಕೆಂದಿಲ್ಲ. ಚೈತ್ರನ ಮನೆ ಎಂದರೆ ಮನೆ ಚೈತ್ರನಲ್ಲಿ ಆಶ್ರಯಿಸಿರುವುದಿಲ್ಲ. ಬೇರೆ ಸ್ವಸ್ವಾಮಿಭಾವಾದಿ ಸಂಬಂಧ ಸಾಕು. ಆದರೆ ಅಂಥ ಬೇರೆ ಸಂಬಂಧ ಆತ್ಮನಿಗೂ ಜ್ಞಾನಕ್ಕೂ ಇಲ್ಲ. ಆತ್ಮನಲ್ಲಿ ಜ್ಞಾನವು ಅಧ್ಯಸ್ತವಾದ್ದರಿಂದ ಅಧ್ಯಾಸ ಸಂಬಂಧವಿದೆ ಎಂದರೆ ಘಟಾಕಾರ ಜ್ಞಾನವೂ ಕೂಡ ಘಟದಲ್ಲಿ ಅಧ್ಯಸ್ತವೆನ್ನಬೇಕಾದೀತು.

'ಆತ್ಮಧರ್ಮವಾದ ಜ್ಞಾನಾನಂದಾದಿ ಆಕಾರವೆ ಜ್ಞಾನದ ಆಕಾರ. 'ಆತ್ಮಾಕಾರ' ಎಂಬಲ್ಲಿ ಆತ್ಮಶಬ್ದಕ್ಕೆ ಆತ್ಮಧರ್ಮವಾದ ಆಕಾರದಲ್ಲಿ ಲಕ್ಷಣಾ' ಎನ್ನುವ ಎರಡನೇ ಪಕ್ಷದಲ್ಲಿ ಜ್ಞಾನಕ್ಕೆ ಆತ್ಮಧರ್ಮರೂಪವಾದ ಆಕಾರವಿದೆ ಎನ್ನುವ ಬೌದ್ಧರ ಸಾಕಾರವಾದವನ್ನು ಒಪ್ಪಿದಂತಾದೀತು ಈ ದೋಷ ಮೂರು ಪಕ್ಷಗಳಲ್ಲಿ ಸಮಾನ. ಆದರೆ ಈ ವಾದದಂತೆ ಹೊರಗೆ ಕಾಣುವ ಘಟಾದಿ ಆಕಾರಗಳು ಜ್ಞಾನತ್ವದಂತೇ ಒಳಗಿನ ಜ್ಞಾನದ್ದೇ ಆಕಾರಗಳು, ಹೊರತು ಹೊರಗೆ ಬೇರೆ ಘಟಾದಿ ಆಕಾರಗಳಿಲ್ಲ. ಇದನ್ನು ಅದ್ವೈತಿ ಒಪ್ಪುವುದಿಲ್ಲ. ಅವನು ಹೊರಗೆ ಶುಕ್ತಿಯಲ್ಲಿ ಆರೋಪಿತವಾದ ಪ್ರಾತಿಭಾಸಿಕವಾದ ರಜತಾಕಾರವನ್ನು ಮಾತ್ರ ಒಳಗಿನ ಜ್ಞಾನದ ಆಕಾರವೆನ್ನುತ್ತಾನೆ.

ವ್ಯಾವಹಾರಿಕ ಪ್ರಪಂಚವನ್ನು ಬೌದ್ಧರಂತೆ ಅದ್ವೈತಿಯು ಜ್ಞಾನಾಕಾರವೆನ್ನುವುದಿಲ್ಲ. ಎಂದರೆ, ಬೇರೆ ದೋಷವನ್ನು ಹೇಳುತ್ತಾರೆ— ಜಡ, ಅನಾನಂದ, ಪರಿಚ್ಛೇದ, ಅನೃತ ರೂಪ ಆಕಾರಗಳು ವೃತ್ತಿಯ ಆಕಾರಗಳಾಗಿರುವುದರಿಂದ ಅದರಲ್ಲಿ ಆತ್ಮಧರ್ಮವಾದ ಜ್ಞಾನದ ಆನಂದ ಅಪರಿಚ್ಛೇದ ಸತ್ಯ ಎಂಬ ಆಕಾರಗಳು ಬರುವ ಸಂಭವವಿಲ್ಲ.

ಆತ್ಮನ ಅಸಾಧಾರಣವಾದ ಜ್ಞಾನಾನಂದಾದಿ ಆಕಾರವು ವೃತ್ತಿಗೆ ಬಾರದಿದ್ದರೂ ಸಾಧಾರಣ ವಾದ ಸತ್ತಾರೂಪ ಆಕಾರ ಬರಬಹುದೆಂದರೆ, ಘಟಜ್ಞಾನಕ್ಕೂ ಆತ್ಮಘಟೋಭಯ ಸಾಧಾರಣವಾದ ಸತ್ತಾರೂಪ ಆತ್ಮಾಕಾರವಿರುವುದರಿಂದ ಘಟಜ್ಞಾನವನ್ನೂ ಆತ್ಮಜ್ಞಾನವೆನ್ನಬೇಕಾದೀತು. ಘಟಜ್ಞಾನ ದಿಂದಲೂ ಆತ್ಮಾಜ್ಞಾನ ನಿವೃತ್ತಿ ಆದೀತು.

ಘಟಾದಿಗಳಲ್ಲಿರುವ ಕಂಬುಗ್ರೀವಾದಿ ಮತ್ತ ರೂಪ ಸಂಸ್ಥಾನ ವಿಶೇಷವೆ ಇಲ್ಲಿ ಆಕಾರವೆಂದು ವಿವಕ್ಷಿತವೆನ್ನುವುದು ಅಸಂಭವ. ಆತ್ಮನಲ್ಲಿ ಅವಯವ ಸಂಯೋಗ ರೂಪ ಸಂಸ್ಥಾನವಿಶೇಷರೂಪವಾದ ಆಕಾರವಿಲ್ಲ. ಅವನು ಆಕಾಶದಂತೆ ನಿರಾಕಾರ ಮಾತ್ರವಲ್ಲ, ನಿರ್ಧರ್ಮಕನೂ ಆಗಿದ್ದಾನೆ.

**ಅತ ಏವ ನ ತೃತೀಯಃ । ಜ್ಞಾನಾನಂದಾದಿನಾ ಸಾಮ್ಯಸ್ಯ ಅಸಂಭವಾತ್ । ಸತ್ತಯಾ**

**ಸಾಮ್ಯಸ್ಯ ಚ ಅತಿಪ್ರಸಕ್ತೇಃ। ಸಂಸ್ಥಾನ ಸಾಮ್ಯಸ್ಯ ಚ ಘಟ ತದ್‌ವೃತ್ತ್ಯೋಃ ಕಥಂಚಿತ್ ಸಂಭವೇಽಪಿ ಅಪರಿಚ್ಛಿನ್ನ ಪರಿಚ್ಛಿನ್ನಯೋಃ ಬ್ರಹ್ಮ ತದ್‌ವೃತ್ತ್ಯೋಃ ಅಯೋಗಾತ್।**

ಆತ್ಮಾಕಾರಸದೃಶವಾದ ಆಕಾರ ಉಳ್ಳದ್ದು ಆತ್ಮಜ್ಞಾನ ಎನ್ನುವ ಮೂರನೇ ಪಕ್ಷದಲ್ಲಿಯೂ ಹಿಂದಿನ ಪಕ್ಷಗಳಿಗೆ ಹೇಳಿದ ದೋಷಗಳಿವೆ. ಈ ಪಕ್ಷದಲ್ಲಿ 'ಆತ್ಮಾಕಾರ' ಎಂಬಲ್ಲಿ ಆತ್ಮಶಬ್ದಕ್ಕೆ ಆತ್ಮಾಕಾರ ಸದೃಶ ಎಂಬರ್ಥದಲ್ಲಿ ಲಕ್ಷಣಾ. 'ಆತ್ಮಾ ಇವ ಆಕಾರಃ ಯಸ್ಯ' ಎಂದು ಮಧ್ಯಮ ಪದಲೋಪಿ ಬಹುವ್ರೀಹಿ ಸಮಾಸ. ಜ್ಞಾನಾಕಾರದಲ್ಲಿ ಆತ್ಮಾಕಾರವಾದ ಜ್ಞಾನಾನಂದಾದಿಗಳ ಪೂರ್ತಿ ಸಾಮ್ಯ ಅಸಂಭವವಾದ್ದರಿಂದ ಈ ಪಕ್ಷವೂ ಸರಿಯಲ್ಲ.

ಪೂರ್ತಿಸಾಮ್ಯವಿಲ್ಲದಿದ್ದರೂ ಸತ್ತಯಾ ಸಾಮ್ಯವಿರಬಹುದೆಂದರೆ ಘಟಜ್ಞಾನಕ್ಕೂ ಸತ್ತಯಾ ಆತ್ಮಾಕಾರಸಾಮ್ಯವಿರುವುದರಿಂದ ಅದು ಆತ್ಮಜ್ಞಾನವಾದೀತು, ಆತ್ಮಾಜ್ಞಾನನಿವರ್ತಕವಾದೀತೆಂದು ಅತಿಪ್ರಸಕ್ತಿ. ಅವಯವ ಸಂಯೋಗವಿಶೇಷರೂಪ ಸಂಸ್ಥಾನ ಸಾಮ್ಯವು ಸಾವಯವವಾದ ಘಟ ಮತ್ತು ಘಟವೃತ್ತಿಗಳಿಗೆ, ಅಂತರವೃತ್ತಿಯು ಹೊರಗೆ ಬಂದು ವಿಷಯಾಕಾರ ತಳೆಯುವುದನ್ನು ಒಪ್ಪುವ ಪಕ್ಷದಲ್ಲಿ, ಕಥಂಚಿತ್ ಸಂಭವವಿದ್ದರೂ, ಅಪರಿಚ್ಛಿನ್ನವಾದ ನಿರವಯವಾದ ಆತ್ಮನಿಗೂ ಪರಿಚ್ಛಿನ್ನವಾದ ಸಾವಯವವಾದ ಆತ್ಮವಿಷಯಕ ವೃತ್ತಿಗೂ ಅವಯವ ಸಂಯೋಗರೂಪ ಸಂಸ್ಥಾನ ಸಾಮ್ಯ ಕೂಡುವುದಿಲ್ಲ.

**ತಸ್ಮಾತ್ ತದ್ವಿಷಯತ್ವಮೇವ ತದಾಕಾರತ್ವಂ ಇತಿ ವಾಚ್ಯಂ। ಅನ್ಯಥಾ ಘಟಾದಿಜ್ಞಾನೇ ತದ್ವಿಷಯತ್ವಂ ತಂತ್ರಂ, ಆತ್ಮಜ್ಞಾನೇ ತು ತದಾಕಾರತ್ವಂ ಇತಿ ಅನನುಗಮಾತ್ ಇತಿ ಸುಸ್ಥ ಆತ್ಮನಿ ವ್ಯಭಿಚಾರಃ।**

'ಶಶವಿಷಾಣಂ' ಎಂಬ ಶಬ್ದಜನ್ಯವೃತ್ತಿಯಲ್ಲಿ ತದ್ವಿಷಯತ್ವವನ್ನು ಹೇಳಲು ಶಕ್ಯವಾಗುವುದಿಲ್ಲ, ತದಾಕಾರತ್ವವನ್ನೆ ಹೇಳಬೇಕು ಎಂದಮೇಲೆ ವೇದಾಂತಜನ್ಯವೃತ್ತಿಯಲ್ಲಿಯೂ ಬ್ರಹ್ಮವಿಷಯತ್ವವನ್ನು ಬಿಟ್ಟು ಆತ್ಮಾಕಾರತ್ವವನ್ನು ಹೇಳುವುದೇ ಯುಕ್ತ'—ಎಂದು ಅದ್ವೈತಿ ಹೇಳಿದರೆ ಅದು ಸರಿಯಲ್ಲ. ಶಶವಿಷಾಣಶಬ್ದಜನ್ಯವೃತ್ತಿಯಲ್ಲಿಯೂ ತದಾಕಾರತ್ವವನ್ನು ಹೇಳಲು ಶಕ್ಯವಾಗದಿರುವುದರಿಂದ ಅಲ್ಲಿಯೂ ತದ್ವಿಷಯತ್ವವನ್ನೇ ಹೇಳಬೇಕು. ಆದರಿಂದ ಸರ್ವತ್ರ ತದ್ವಿಷಯತ್ವವೇ ತದಾಕಾರತ್ವವೆನ್ನಬೇಕು. ಹೀಗಾಗಿ ಆತ್ಮನಲ್ಲಿ ವ್ಯಭಿಚಾರ ಅಪರಿಹಾರ್ಯ.

ಮತ್ತು ಘಟಾದಿಜ್ಞಾನದಲ್ಲಿ ಘಟಾಜ್ಞಾನ ನಿವರ್ತಕತ್ವಕ್ಕೆ ತದ್ವಿಷಯತ್ವವನ್ನು ಪ್ರಯೋಜಕವೆಂದು ಒಪ್ಪಿ ಆತ್ಮಜ್ಞಾನದಲ್ಲಿ ಆತ್ಮಾಜ್ಞಾನನಿವರ್ತಕತ್ವಕ್ಕೆ ಆತ್ಮಾಕಾರತ್ವವನ್ನು ಪ್ರಯೋಜಕವೆಂದು ಹೇಳಿದರೆ ಸರ್ವತ್ರ ಅನುಗತವಾದ ನಿವರ್ತಕತಾವಚ್ಛೇದಕವಿಲ್ಲದ್ದರಿಂದ ಅನುಗಮ ಸಾಧ್ಯವಾಗದೆ ಹೋದೀತು.

ಇದು ಉಪಲಕ್ಷಣ, ಚರಮವೃತ್ತಿಯಂತೆ ಘಟಾದಿಜ್ಞಾನದಲ್ಲಿಯೂ ತದಜ್ಞಾನ ನಿವರ್ತಕತ್ವಕ್ಕೆ ತದಾಕಾರತ್ವವೇ ಪ್ರಯೋಜಕವೆಂದಾಗುವುದರಿಂದ, ತದತಿರಿಕ್ತವಾದ ವಿಷಯತ್ವದಲ್ಲಿ ಪ್ರಮಾಣವಿಲ್ಲ

ದಿರುವುದರಿಂದ, ದೃಗ್‌ವಿಷಯತ್ವರೂಪಹೇತುವು ಪಕ್ಷವಾದ ಪ್ರಪಂಚದಲ್ಲಿ ಎಲ್ಲಿಯೂ ಇಲ್ಲವೆಂದಾದೀತು. ಸ್ವರೂಪಾಸಿದ್ಧಿದೋಷ ಬಂದೀತು. ಅದರಿಂದ ತದ್ವಿಷಯತ್ವವೇ ತದಾಕಾರತ್ವ. ಆತ್ಮನಲ್ಲಿ ದೃಗ್‌ವಿಷಯತ್ವವಿರುವುದರಿಂದ ದೃಶ್ಯತ್ವ ಹೇತುವಿಗೆ ವ್ಯಭಿಚಾರ ಅಪರಿಹಾರ್ಯ.

**ಅನಿರ್ವಚನೀಯತ್ವಾದಿಕಂ ಮಿಥ್ಯಾತ್ವಂ ಇತಿ ಪಕ್ಷೇ ತು ತುಚ್ಛೇ ವ್ಯಭಿಚಾರಶ್ಚ। ಅಸದ್ವೈಲಕ್ಷಣ್ಯಜ್ಞಾನಾರ್ಥಂ ತಸ್ಯಾಪಿ ಜ್ಞೇಯತ್ವಾತ್।**

ಸದಸದ್‌ವಿಲಕ್ಷಣತ್ವರೂಪ ಅನಿರ್ವಚನೀಯತ್ವವೂ, ಆದಿಪದೋಕ್ತವಾದ ಜ್ಞಾನನಿವರ್ತ್ಯತ್ವವೂ ಮಿಥ್ಯಾತ್ವ ಎನ್ನುವ ಪಕ್ಷದಲ್ಲಿ ತುಚ್ಛದಲ್ಲಿ ವ್ಯಭಿಚಾರ. ಅಸದ್‌ವಿಲಕ್ಷಣತ್ವಜ್ಞಾನಕ್ಕಾಗಿ ಪ್ರತಿಯೋಗಿಯಾದ ಅಸತ್ತನ್ನು ತಿಳಿಯಬೇಕು ಅದರಿಂದ ಅಸತ್ತಿನಲ್ಲಿ ದೃಶ್ಯತ್ವ ಬರುತ್ತದೆ. ಅಸದ್‌ವಿಲಕ್ಷಣತ್ವಘಟಿತ ಮಿಥ್ಯಾತ್ವ ಬರುವುದಿಲ್ಲ. ಜ್ಞಾನನಿವರ್ತ್ಯತ್ವರೂಪ ಮಿಥ್ಯಾತ್ವವೂ ಬರುವುದಿಲ್ಲ. ಹೀಗಾಗಿ ಅಸತ್ತಿನಲ್ಲಿ ವ್ಯಭಿಚಾರ.

ಯದ್ಯಪಿ—'ಶಶವಿಷಾಣಂ ಅಸತ್' ಎಂಬ ಶಬ್ದದಿಂದ ಅಸ್ತಿತ್ವಪ್ರಕಾರಕವೃತ್ತಿ ಬಾರದಿರುವುದರಿಂದ, ಅಸ್ತಿತ್ವಪ್ರಕಾರಕವೃತ್ತಿ ವಿಷಯತ್ವವನ್ನೇ ಹೇತು ಮಾಡುತ್ತೇವೆ. ಆಗ ಅಸತ್ತಿನಲ್ಲಿ ವ್ಯಭಿಚಾರವಿಲ್ಲ'—ಎಂದು ಅದ್ವೈತಿ ಹೇಳಬಹುದು. ಆದರೆ 'ಶಶವಿಷಾಣಂ ಅಸ್ತಿ' ಎಂದು ವಾಕ್ಯಾಭಾಸದಿಂದ ಅಸ್ತಿತ್ವಪ್ರಕಾರಕ ವೃತ್ತಿ ಬರುವುದರಿಂದ ತದ್ವಿಷಯತ್ವರೂಪ ದೃಶ್ಯತ್ವಕ್ಕೆ ವ್ಯಭಿಚಾರವಿದ್ದೇ ಇದೆ.

'ಶಶವಿಷಾಣಂ ಅಸ್ತಿ' ಎಂಬಲ್ಲಿ ಆಭಾಸ ಅನಿರ್ವಚನೀಯ ವಿಷಾಣವೇ ಆರೋಪಿತವಾಗಿ ಕಾಣುತ್ತದೆ ಹೊರತು ಅಸತ್ತಾದ ವಿಷಾಣವಲ್ಲ. ಅದರಿಂದ ಅದು ಪಕ್ಷಕೋಟಿಯಲ್ಲೇ ಸೇರುವುದರಿಂದ ವ್ಯಭಿಚಾರವಿಲ್ಲ' ಎಂದರೆ ಹೇಳುತ್ತೇವೆ. ಶಶವಿಷಾಣದಲ್ಲಿ ಅಸ್ತಿತ್ವವು ಆರೋಪಿತವೆಂದಮೇಲೆ ಅಸ್ತಿತ್ವವೇ ಅನಿರ್ವಚನೀಯ ಹೊರತು, ಅಧಿಷ್ಠಾನವಾದ ಶಶವಿಷಾಣವು ಅಸತ್ತೇ. ಅದು ಅಧಿಷ್ಠಾನವಾಗಿ ವೃತ್ತಿವಿಷಯವಾಗಿದೆ, ಅದರಲ್ಲಿ ಮಿಥ್ಯಾತ್ವವಿಲ್ಲ, ದೃಶ್ಯತ್ವ ಬಂದಿದೆ. ಹೀಗಾಗಿ ವ್ಯಭಿಚಾರ ಪರಿಹಾರವಾಗಿಲ್ಲ. ಅಸ್ತಿತ್ವಾರೋಪಕ್ಕೆ ಅಸತ್ತಾದ ಶಶವಿಷಾಣವೇ ಅಧಿಷ್ಠಾನ ಎನ್ನುವ ಅಂಶವು ಆಕರದಲ್ಲಿ ಸ್ಪಷ್ಟವಾಗುತ್ತದೆ.

❖❖❖

**अथ प्राचां रीत्या मास्तु दृग्विषयत्वं दृश्यत्वम् । किन्त्वाधुनिकरीत्या फलव्याप्यत्वमिति द्वितीयोऽस्त्विति चेत् । फलं हि मद्रीत्या व्यवहारो वा भट्टरीत्या ज्ञातता वा त्वद्रीत्या वृत्तिप्रतिफलितं चैतन्यं वा तदभिव्यक्तं विषयाधिष्ठानचैतन्यं वा ।**

**नाद्यः । हानादेर्गगनादावभावात् । अभिलापस्य चात्मन्यपि**

**भावात् । न द्वितीयः । ज्ञाततताया मम घटादौ परस्याप्यती-तादावभावात् । न तृतीयचतुर्थौ । अतीतादावसिद्धेः ।**

**तदपि स्वसत्ताकाले फलव्याप्यमिति चेन्न । नित्यातीन्द्रियेऽसिद्धेः । तदपि योगिनं प्रति फलव्याप्यमिति चेन्न । चित्सुखेन 'नच योगिप्रत्यक्षगम्यतयाऽपरोक्षत्वं धर्मादीनां, चोदनैक-प्रमाणयोग्यत्वादि'त्युक्तत्वेन तद्विरोधात् । तुच्छमपि तुच्छत्वेन योगिनं प्रत्यपरोक्षमिति सुवचत्वाच्च । पक्षैकदेशे साक्षिवेद्याविद्यान्तःकरणतद्धर्मसुखादौ दृष्टान्ते शुक्तिरूप्ये च फलव्याप्यत्वाभावाच्च ।**

ननु व्यवहारोऽपि किमादानादिरूपः किंवाभिलपनरूप इति विकल्प्याद्यं निराचष्टे **हानादेरिति** । तथाच भागासिद्धिरिति भावः । न द्वितीय इत्याह **अभिलापस्य चेति** । तथाच व्यभिचार इति भावः । **ममेति** । प्रमाणाभावादिति भावः । **अतीतादाविति** । यद्यप्यतीतानागतयोरपि वर्तमानतादशायामस्त्येव ज्ञाततावत्त्वम् । तथापि ज्ञाततायामेव मानाभावेन तद्गर्भहेतुः स्वरूपासिद्धः इत्यत्रैव तात्पर्यम् । ननु चोदनैक समधिगम्यत्वं शब्दतदुपजीविप्रमाणातिरिक्तप्रमाणागम्यत्वं विवक्षितम् । योगजधर्मश्च चोदनोपजीवक इति न चित्सुखोक्तिविरोध इत्यत आह **तुच्छमपीति** ।। **फलेति** ।। वृत्त्यभिव्यक्तचैतन्यस्यैव फलत्वादिति भावः ।

❖❖❖

## ಫಲವ್ಯಾಪ್ಯತ್ವವು ದೃಶ್ಯತ್ವವಲ್ಲ

**ಅಥ ಪ್ರಾಚಾಂ ರೀತ್ಯಾ ಮಾಸ್ತು ದೃಗ್‌ವಿಷಯತ್ವಂ ದೃಶ್ಯತ್ವಂ, ಕಿಂತು ಆಧುನಿಕರೀತ್ಯಾ ಫಲ ವ್ಯಾಪ್ಯತ್ವಂ ಇತಿ ದ್ವಿತೀಯಃ ಅಸ್ತು ಇತಿ ಚೇತ್ ।**

ಮೊದಲನೆ ಪಕ್ಷದಲ್ಲಿ ನಾನು ಪ್ರಾಚೀನರ ರೀತಿಯಿಂದ ದೃಗ್ ವಿಷಯತ್ವವನ್ನು ದೃಶ್ಯತ್ವವೆಂದಿಟ್ಟುಕೊಂಡು ಅದನ್ನು ಹೇತುಮಾಡಿದ್ದೇನೆ. ಅದಕ್ಕೆ ಬ್ರಹ್ಮನಲ್ಲಿ ವ್ಯಭಿಚಾರವಿದೆ ಎನ್ನುವುದಾದರೆ ಅದು ಬೇಡ. ಆಧುನಿಕ ರೀತಿಯಿಂದ, ಫಲವ್ಯಾಪ್ಯತ್ವವು ದೃಶ್ಯತ್ವ ಎಂಬ ಎರಡನೇ ಪಕ್ಷವಿರಲಿ ಎಂದು ಈಗ ಅದ್ವೈತಿ ಹೇಳುತ್ತಾನೆ. ವೃತ್ತಿಯಿಂದಾಗಲಿ, ವೃತ್ತಿಯಲ್ಲಿ ಪ್ರತಿಫಲಿತವಾದ

ಜ್ಞಾತೃಚೈತನ್ಯದಿಂದಾಗಲಿ, ಅಭಿವ್ಯಕ್ತವಾದ ಘಟಾದಿವಿಷಯಾಧಿಷ್ಠಾನ ಚೈತನ್ಯವು ವೃತ್ತಿಯ ಫಲವೆಂದು ಅದ್ವೈತಮತ. ಜ್ಞಾತತಾವು ಜ್ಞಾನದ ಫಲವೆಂದು ಭಾಟ್ಟಮತ. 'ವ್ಯವಹಾರ' ಅಂದರೆ ಅಭಿಜ್ಞಾ–ಅಭಿಲಪನ–ಹಾನ–ಉಪಾದಾನ–ಉಪೇಕ್ಷಾಗಳು ಜ್ಞಾನಫಲವೆಂದು ದ್ವೈತ ಮತ.

**ಫಲಂ ಹಿ ಮದ್ರೀತ್ಯಾ ವ್ಯವಹಾರೋ ವಾ? ಭಟ್ಟರೀತ್ಯಾ ಜ್ಞಾತತಾ ವಾ? ತ್ವದ್ರೀತ್ಯಾ ವೃತ್ತಿಪ್ರತಿಫಲಿತಂ ಚೈತನ್ಯಂ ವಾ, ತದಭಿವ್ಯಕ್ತಂ ವಿಷಯಾಧಿಷ್ಠಾನ ಚೈತನ್ಯಂ ವಾ?**

ಫಲವ್ಯಾಪ್ಯತ್ವದಲ್ಲಿ ಘಟಕವಾಗಿ ಸೇರಿದ ಫಲ ಯಾವುದು? ನನ್ನ ರೀತಿಯಿಂದ ವ್ಯವಹಾರವೆ? ಭಟ್ಟರೀತಿಯಿಂದ ಜ್ಞಾತತಾವೆ? ನಿನ್ನ ರೀತಿಯಿಂದ ವೃತ್ತಿ ಪ್ರತಿಫಲಿತ ಚೈತನ್ಯವೆ ಅಥವಾ ಅದರಿಂದ ಅಭಿವ್ಯಕ್ತವಾಗುವ ವಿಷಯಾಧಿಷ್ಠಾನ ಚೈತನ್ಯವೆ?

**ನಾದ್ಯಃ। ಹಾನಾದೇರ್ಗಗನಾದೌ ಅಭಾವಾತ್। ಅಭಿಲಾಪಸ್ಯ ಚ ಆತ್ಮನ್ಯಪಿ ಭಾವಾತ್। ನ ದ್ವಿತೀಯಃ। ಜ್ಞಾತತಾಯಾಃ ಮಮ ಘಟಾದೌ, ಪರಸ್ಯಾಪಿ ಅತೀತಾದೌ ಅಭಾವಾತ್। ನ ತೃತೀಯ ಚತುರ್ಥೌ। ಅತೀತಾದೌ ಅಸಿದ್ಧೇಃ।**

ನನ್ನ ರೀತಿಯಿಂದ ವ್ಯವಹಾರವು ವೃತ್ತಿಗೆ ಫಲವೆನ್ನುವ ಮೊದಲನೆ ಪಕ್ಷ ಸರಿಯಲ್ಲ. ವ್ಯವಹಾರವೆಂದರೆ ಹಾನ–ಉಪಾದಾನ–ಉಪೇಕ್ಷಾಗಳೆಂದರೆ, ಅವು ವಿಭುವಾದ ಆಕಾಶಾದಿ ವಿಷಯದಲ್ಲಿ ಇಲ್ಲ. ಅದರಿಂದ ಭಾಗಾಸಿದ್ಧಿ. ಅಭಿಜ್ಞಾ–ಅಭಿಲಪನರೂಪ ವ್ಯವಹಾರವು ಫಲವೆಂದರೆ ಅದು ಆತ್ಮನ ವಿಷಯದಲ್ಲಿಯೂ ಇದೆ. ಅದರಿಂದ ವ್ಯಭಿಚಾರ. ಜ್ಞಾತತಾವು ಫಲವೆನ್ನುವ ಎರಡನೆ ಪಕ್ಷವೂ ಸರಿಯಲ್ಲ. ನನಗೆ ಘಟಾದಿಗಳಲ್ಲಿ ಎಲ್ಲಿಯೂ ಜ್ಞಾತತಾ ಎಂಬ ಫಲವಿಲ್ಲ. ಏಕೆಂದರೆ ಅದರ ವಿಷಯದಲ್ಲಿ ಪ್ರಮಾಣವಿಲ್ಲ. ಅದ್ವೈತಿಗೂ ಜ್ಞಾತತಾವು ಅತೀತ ಅನಾಗತಗಳಲ್ಲಿ ಇಲ್ಲದ್ದರಿಂದ ಭಾಗಾಸಿದ್ಧಿ. ಯದ್ಯಪಿ ಅತೀತ ಅನಾಗತಗಳಲ್ಲಿ ವರ್ತಮಾನತಾದಶಾದಲ್ಲಿ ಜ್ಞಾತತಾ ಇರುವುದರಿಂದ ಭಾಗಾಸಿದ್ಧಿಯನ್ನು ಹೇಳಲಾಗುವುದಿಲ್ಲ. ಆದರೂ ಜ್ಞಾತತಾವಿಷಯದಲ್ಲಿಯೇ ಪ್ರಮಾಣವಿಲ್ಲದ್ದರಿಂದ ತದ್‌ಘಟಿತವಾದ ದೃಶ್ಯತ್ವ ಹೇತುವು ಸ್ವರೂಪಾಸಿದ್ಧ ಎನ್ನುವುದರಲ್ಲಿ ತಾತ್ಪರ್ಯ.

**ತದಪಿ ಸ್ವಸತ್ತಾಕಾಲೇ ಫಲವ್ಯಾಪ್ಯಮಿತಿ ಚೇನ್ನ, ನಿತ್ಯಾತೀಂದ್ರಿಯೇ ಅಸಿದ್ಧೇಃ। ತದಪಿ ಯೋಗಿನಂ ಪ್ರತಿ ಫಲವ್ಯಾಪ್ಯಮಿತಿ ಚೇನ್ನ। ಚಿತ್ಸುಖೇನ 'ನಚ ಯೋಗಿಪ್ರತ್ಯಕ್ಷ ಗಮ್ಯತಯಾ ಅಪರೋಕ್ಷತ್ವಂ। ಧರ್ಮಾದೀನಾಂ ಚೋದನೈಕಪ್ರಮಾಣಯೋಗ್ಯತ್ವಾತ್' ಇತ್ಯುಕ್ತತ್ವೇನ ತದ್ವಿರೋಧಾತ್। ತುಚ್ಛಮಪಿ ತುಚ್ಛತ್ವೇನ ಯೋಗಿನಂ ಪ್ರತಿ ಅಪರೋಕ್ಷಮಿತಿ ಸುವಚತ್ವಾಚ್ಚ।**

'ಅತೀತಾದಿಯೂ ಕೂಡ ವರ್ತಮಾನತಾ ದಶಾದಲ್ಲಿ ಅಂತಃಕರಣ ಹೊರಗೆ ಬಂದಾಗ ಫಲವ್ಯಾಪ್ಯವಾಗುತ್ತದೆ. ಅದರಿಂದ ಭಾಗಾಸಿದ್ಧಿ ಇಲ್ಲ'ವೆಂದರೆ, ಅದು ಸರಿಯಲ್ಲ.

ನಿತ್ಯಾತೀಂದ್ರಿಯವಾದ ಧರ್ಮಾದಿ ವಿಷಯದಲ್ಲಿ ಅಂತಃಕರಣವು ಹೊರಗೆ ಹೋಗದೆ ಒಳಗೇ ತದಾಕಾರವಾಗಿ ಪರಿಣಮಿಸುವುದರಿಂದ ಫಲವ್ಯಾಪ್ಯತ್ವವಿಲ್ಲವೆಂದು ಅಸಿದ್ಧಿ.

'ಅದೂ ಕೂಡ ಯೋಗಿಗೆ ಫಲವ್ಯಾಪ್ಯವೆ' ಎಂದರೆ, ಚಿತ್ಸುಖನ ವಚನವಿರೋಧ ಬರುತ್ತದೆ. ಅವನು ಹೇಳಿದ್ದಾನೆ— 'ಯೋಗಿ ಪ್ರತ್ಯಕ್ಷ ವೇದ್ಯವಾಗುವುದರಿಂದ ಧರ್ಮಾದಿ ನಿತ್ಯಾತೀಂದ್ರಿಯ ಪದಾರ್ಥವು ಅಪರೋಕ್ಷವಾಗುತ್ತದೆ ಎನ್ನಬಾರದು. ಏಕೆಂದರೆ ಚೋದನಾಲಕ್ಷಣೋಽರ್ಥೋ ಧರ್ಮಃ' ಎಂಬಂತೆ ಧರ್ಮಾದಿಗಳು ವೇದೈಕಪ್ರಮಾಣಯೋಗ್ಯವಾಗಿವೆ' ಎಂದು.

ಯೋಗಿಗೂ ಕೂಡ ಅಂತಃಕರಣವು ಬಹಿರಿಂದ್ರಿಯದ್ವಾರಾ ಹೊರಗೆ ಬಂದು ವಿರುದ್ಧ ಅತೀತಾದಿ ಸರ್ವಾಕಾರವಾಗಿ ಪರಿಣಾಮ ಹೊಂದುವುದು ಮತ್ತು ಅದರಿಂದ ವಿಷಯಾಧಿಷ್ಠಾನ ಚೈತನ್ಯವು ಅಭಿವ್ಯಕ್ತವಾಗುವುದು ವಿವರ್ತಮತದಲ್ಲಿ ಅಂಗೀಕೃತವಾಗಿಲ್ಲ.

ಯೋಗಿಗಳ ಯೋಗಜಧರ್ಮವು ಅತೀಂದ್ರಿಯವನ್ನು ಐಂದ್ರಿಯವನ್ನಾಗಿಸಿ ಫಲವ್ಯಾಪ್ಯವನ್ನಾಗಿ ಮಾಡುವುದಿಲ್ಲ. ಐಂದ್ರಿಯ ಪದಾರ್ಥವನ್ನೇ ಅದು ದೂರದಲ್ಲಿರಲಿ ಅಥವಾ ಮರೆಯಲ್ಲಿರಲಿ ಇಂದ್ರಿಯಗೋಚರವಾಗಿ ಮಾಡುತ್ತದಷ್ಟೆ. ಆದರಿಂದ ಅತೀಂದ್ರಿಯದಲ್ಲಿ ಫಲವ್ಯಾಪ್ಯತ್ವವಿಲ್ಲ. ಯೋಗಬಲದಿಂದ ಅತೀಂದ್ರಿಯದ ಅಪರೋಕ್ಷ ಬರುತ್ತದೆ, ಅದೂ ಫಲವ್ಯಾಪ್ಯವಾಗುತ್ತದೆ ಎನ್ನುವುದಾದರೆ 'ತುಚ್ಛವೂ ತುಚ್ಛತ್ವೇನ ಯೋಗಿಗೆ ಅಪರೋಕ್ಷವಾಗುವುದರಿಂದ ವ್ಯಭಿಚಾರ. 'ಅಸತ್ತು ಅಪರೋಕ್ಷ ಪ್ರತೀತಿ ಗೋಚರವಾಗುವುದಿಲ್ಲ' ಎಂಬ ನಿಯಮವೂ ವ್ಯಭಿಚರಿತ'ವೆಂದು ಹೇಳಬೇಕಾದೀತು. ಆದರಿಂದ ಫಲವ್ಯಾಪ್ಯತ್ವರೂಪ ದೃಶ್ಯತ್ವವು ನಿತ್ಯಾತೀಂದ್ರಿಯದಲ್ಲಿ ಭಾಗಾಸಿದ್ಧವೇ ಆಗಿದೆ.

ಯದ್ಯಪಿ ವೇದೈಕವೇದ್ಯತ್ವವನ್ನು ಧರ್ಮಾದಿಗಳಿಗೆ ಹೇಳಿದರೆ, ಯೋಗಜಧರ್ಮಸಹಕೃತ ಪ್ರತ್ಯಕ್ಷವೇದ್ಯತ್ವ, ಫಲವ್ಯಾಪ್ಯತ್ವಗಳಿಲ್ಲವೆಂದಾಗುವುದಿಲ್ಲ. ವೇದಾನುಪಜೀವಿಯಾದ ಪ್ರತ್ಯಕ್ಷಾನುಮಾನಾದಿಗಳಿಂದ ಧರ್ಮಾದಿಗಳು ವೇದ್ಯವಲ್ಲ ಎಂದು ಅದಕ್ಕೆ ಅಭಿಪ್ರಾಯ. ಯೋಗಜಧರ್ಮಸಹಕೃತ ಪ್ರತ್ಯಕ್ಷವು ವೇದೋಪಜೀವಿಯೆ. ಚಿತ್ಸುಖನು ಯೋಗಜಧರ್ಮಸಹಕೃತ ಪ್ರತ್ಯಕ್ಷಪ್ರಮಾಣದಿಂದ ನಿತ್ಯಾತೀಂದ್ರಿಯಗಳಿಗೆ ಫಲವ್ಯಾಪ್ಯತ್ವವನ್ನು ಒಪ್ಪಿಯೇ ಅಪರೋಕ್ಷತ್ವವನ್ನು ನಿರಾಕರಣೆ ಮಾಡುತ್ತಿದ್ದಾನೆ. ಇಲ್ಲಿ 'ಅಪರೋಕ್ಷತ್ವ'ವೆಂದರೆ ಸಾಕ್ಷಾತ್ಕಾರ ನಿಯಾಮಕ ಲೌಕಿಕ ಪ್ರತ್ಯಾಸತ್ತಿ ಸ್ವಭಾವಯೋಗ್ಯತ್ವ. ಯೋಗಜಧರ್ಮದಿಂದ ಯೋಗಿಯು ಅತೀಂದ್ರಿಯ ಧರ್ಮಾದಿಗಳ ಪರೋಕ್ಷ ಸ್ವಭಾವವನ್ನೇ ಪರಿವರ್ತನ ಮಾಡಿ ಅಪರೋಕ್ಷಸ್ವಭಾವವನ್ನಾಗಿ ಲೌಕಿಕ ಸನ್ನಿಕರ್ಷ ಯೋಗ್ಯವನ್ನಾಗಿ ಮಾಡುವುದಿಲ್ಲ ಎನ್ನುತ್ತಾನೆ. ಆದರಿಂದ ಯೋಗಿಗಳಿಗೆ ಧರ್ಮಾದಿಗಳು ಪ್ರತ್ಯಕ್ಷಗೋಚರವಾಗಿ ಫಲವ್ಯಾಪ್ಯವಾಗುವುದನ್ನು ಚಿತ್ಸುಖವಚನವು ನಿರಾಕರಿಸುವುದಿಲ್ಲ.

'ಯತ್ರಾಪ್ಯತಿಶಯೋ ದೃಷ್ಟಃ ಸ ಸ್ವಾರ್ಥಾನತಿಲಂಘನಾತ್ ।
ದೂರ ಸೌಕ್ಷ್ಮ್ಯಾದಿ ದೃಷ್ಟೌ ಸ್ಯಾನ್ನ ರೂಪೇ ಶ್ರೋತ್ರವೃತ್ತಿತಾ ॥'

'ಯೋಗಜಧರ್ಮವು ಆಯಾ ಇಂದ್ರಿಯಕ್ಕೆ ಕ್ಲೃಪ್ತವಾದ ವಿಷಯದ ವಸ್ತುಸ್ವಭಾವವನ್ನೇ ಬದಲಿಸಿ ರೂಪವನ್ನು ಶ್ರೋತ್ರಯೋಗ್ಯವನ್ನಾಗಿ ಮಾಡುವುದಿಲ್ಲ. ಅದು ಯೋಗಿಗೆ ದೂರ ಸೌಕ್ಷ್ಮ್ಯಾದಿ ದೋಷಗಳಿಂದ ಪ್ರತ್ಯಕ್ಷಕ್ಕೆ ಪ್ರತಿಬಂಧವಾಗದಂತೆ ಮಾಡುತ್ತದೆ.' ಹೀಗೆ ಅದ್ವೈತಿ ಹೇಳಿದರೆ, 'ತುಚ್ಛವನ್ನೂ ಕೂಡ ಯೋಗಿಯು ತುಚ್ಛತ್ವೇನ ಅಪರೋಕ್ಷವಾಗಿ ಕಂಡು ಫಲವ್ಯಾಪ್ಯವನ್ನಾಗಿ ಮಾಡಿಕೊಂಡರೆ ದೃಶ್ಯತ್ವಕ್ಕೆ ತುಚ್ಛದಲ್ಲಿ ವ್ಯಭಿಚಾರವೆಂದೂ, ಅಸತ್ತು ಅಪರೋಕ್ಷ ಕಾಣುವುದಿಲ್ಲವೆಂಬ ನಿಯಮಭಂಗದಿಂದ 'ಅಸಚ್ಚೇತ್ ನ ಪ್ರತೀಯೇತ' ಎನ್ನುವ ಅವನ ಅರ್ಥಾಪತ್ತಿ ಪ್ರಮಾಣ ಆಭಾಸವಾಗುವುದೆಂದೂ ದೋಷವನ್ನು ಹೇಳುತ್ತಾರೆ.

**ಪಕ್ಷೈಕದೇಶೇ ಸಾಕ್ಷಿವೇದ್ಯಾವಿದ್ಯಾಂತಃಕರಣಧರ್ಮ ಸುಖಾದೌ, ದೃಷ್ಟಾಂತೇ ಶುಕ್ತಿರೂಪ್ಯೇ ಚ ಫಲವ್ಯಾಪ್ಯತ್ವಾಭಾವಾಚ್ಚ ।**

ಪಕ್ಷೈಕದೇಶವಾದ ಸಾಕ್ಷಿವೇದ್ಯವಾದ ಅವಿದ್ಯೆ ಮತ್ತು ಅಂತಃಕರಣಧರ್ಮವಾದ ಸುಖಾದಿಗಳಲ್ಲಿ ಅಂತಃಕರಣವೃತ್ತಿಪ್ರತಿಫಲಿತ ಚೈತನ್ಯ ಅಭಿವ್ಯಕ್ತ ಅಧಿಷ್ಠಾನ ಚೈತನ್ಯ ವೇದ್ಯತ್ವವಿಲ್ಲದ್ದರಿಂದ ಭಾಗಾಸಿದ್ಧಿ. ಶುಕ್ತಿರೂಪ್ಯವು ಕೂಡ ಅವಿದ್ಯಕವಾದ್ದರಿಂದ ಸಾಕ್ಷಿವೇದ್ಯವಾಗಿದ್ದು ಅಂತಃಕರಣವೃತ್ತಿಜನ್ಯಫಲವ್ಯಾಪ್ಯ ವಾಗದಿರುವುದರಿಂದ ದೃಷ್ಟಾಂತದಲ್ಲಿ ದೃಶ್ಯತ್ವರೂಪ ಸಾಧನವೈಕಲ್ಯವು ಬರುತ್ತದೆ.

❖❖❖

नापि साधारणमिति तृतीयः । ब्रह्मणि वृत्तिव्याप्यत्वरूप-विशेषस्य सत्वेन (दृश्यत्वरूप) सामान्यस्यापि सत्वात् ।

नन्वस्तु तर्हि चतुर्थः । अतीतादेरपि कदाचित्स्वाकारवृत्ति-प्रतिफलितचिद्विषयत्वात् । अविद्यादेरपि साक्षिविषयत्वात् । नित्यातीन्द्रियस्यापि ज्ञातत्वेनाज्ञातत्वेन वा साक्षिविषयत्वात् । दृग्रूपात्मनस्तु तदविषयत्वादिति चेन्न । नित्यातीन्द्रियं पूर्वं न ज्ञातं इदानीं शब्देन ज्ञातमितिवत् शुद्धं ब्रह्म पूर्वं न ज्ञातमिदानीं वेदान्तेन ज्ञातमित्यनुभवेन ब्रह्मणि व्यभिचारात् ।

तद्व्यवहारजनने तद्विषयत्वस्य तन्त्रत्वेन स्वव्यवहारहेतो-श्चितोऽप्यभिधानस्याभिधेयत्ववच्चिद्विषयत्वाच्च ।

कल्पितभेदेन विम्वप्रतिविम्वयोर्लिङ्गलिङ्गिभाववज्जीवब्रह्मणो-

र्ज्ञातृज्ञेयभाववच्चात्मनोऽपि स्वाकारवृत्तिप्रतिफलितचिद्विषयत्व-सम्भवाच्च । अन्यथा तया तदज्ञाननिवृत्त्ययोगात् । तदाकारवृत्त्यैव च तन्निवृत्तौ घटादावपि तथात्वापातेनासिद्धेः । अज्ञाना विरोधिस्फुरणरूपत्वस्य चात्मनीव घटादावपि सुवचत्वात् । अस्फुरणरूपेष्वतीन्द्रियेष्विवैन्द्रियकेष्वपि वृत्तिविषयत्वमात्रेण व्यवहारादिसम्भवे तत्प्रतिफलितचैतन्यविषयत्वस्य तदभिव्यक्त-चैतन्यविषयत्वस्य वा कल्पनायोगाच्च । घटादावन्धकारानिवर्तक-प्रभाया इवाज्ञानाविरोधिज्ञानस्याननुभवाच्च । अन्यथा इच्छाद्याकारा-न्तःकरणवृत्तिप्रतिफलितं तद्व्यंग्यं वा इच्छादिकं परोक्षवृत्तिप्रति-फलितं तद्व्यंग्यं वा परोक्षज्ञानं तमोनिवर्तकप्रभाप्रतिफलितं तद्व्यंग्यं वा प्रभांतरं च कल्प्यं स्यात् ।

''तमेव भांत''मित्यादिश्रुत्यर्थस्तु प्रतिकर्मव्यवस्थाभङ्गे वक्ष्यते ।

चैतन्याविषयस्याप्यापरोक्ष्यं च चैतन्याभिव्यंजकत्वार्थ-मावश्यकेनेन्द्रियजन्यत्वप्रयुक्तेन वृत्तिगतेन साक्षात्कारत्वरूपविशेषे-णैवोपपन्नम् । इच्छादिवृत्त्यनिष्ठेन परोक्षवृत्तिगतेन ज्ञानत्वरूप-विशेषेण विषयस्य ज्ञातत्ववत् स्मृत्याद्यनिष्ठेनानुभवादिगतेन विशेषेण तद्विषयस्यानुभूतत्वानुमितत्वादिवच्च । अन्यथा परोक्षत्वापरोक्षत्वे एकज्ञानत्वव्याप्ये न स्याताम् ।

साधारणमिति । वृत्तिफलव्याप्यत्वविशेषानालिङ्गितमित्यर्थः । तदविषयत्वा-दिति । कर्तृकर्मभावविरोधादिति भावः । ज्ञातमित्यनुभवेनेति । तादृशानुभवस्यानु-व्यवसायतया मतद्वयेऽपि चिद्रूपत्वादिति भावः । तद्व्यवहारजनन इति ।

ननु व्यवहारत्वेन ज्ञानत्वेन सामान्यतः कार्यकारणभावः । घटादिव्यवहारे अतिप्रसङ्गपरिहाराय तद्व्यवहारत्वेन तद्विषय(क)ज्ञानत्वेन विशिष्य कार्यकारणभावः । ज्ञानव्यवहारे तु न तद्विषयकज्ञानत्वं कारणतावच्छेदकं गौरवात् । किन्तु ज्ञानत्वमेव

लाघवात् । तथाच चैतन्यव्यवहारे न तद्विषयकज्ञानं कारणमिति न तत्र व्यभिचार इति चेन्न । स्वरूपतो व्यवहारायोग्ये निर्विकल्पकेऽपि ज्ञानत्वस्य सत्त्वेन तस्य व्यवहार जनकतानवच्छेदकत्वात् । अतीतानागतज्ञानव्यवहारेऽपि तद्विषयकज्ञानस्यैव हेतुत्वेन तस्याहेतुत्वाच्चेति ।

नन्वभिधात्वेन विषयता, अभिधापदनिरूपिताभिधात्वेन विषयितेत्याकार-भेदसत्त्वान्न वृत्तिविरोध इत्यत आह **कल्पितभेदेनेति । तयेति ।** वृत्तिप्रतिफलितचितेत्यर्थः । **तदाकारवृत्त्येति ।** ब्रह्माकारवृत्त्यैव तदज्ञाननिवृत्तौ तेनैव न्यायेन घटादावपि तत्तदाकारवृत्त्यैव तत्तदज्ञाननिवृत्त्यापत्त्या चिद्विषयत्वे मानाभावेन तद्घटितहेतोः स्वरूपासिध्यापत्तेरित्यर्थः । नन्वात्मनोऽज्ञानाविरोधिज्ञानत्वेन अविद्यानिवृत्तौ स्वविषयत्वमप्रयोजकमेव । अतस्तदाकारवृत्त्यैव तदज्ञाननिवृत्तिरित्यत आह **अज्ञानाविरोधिस्फुरणरूपत्वस्येति ।** तथाचात्मनोऽज्ञानाविरोधित्वे घटादिवत् स्फुरणरूपत्वमेव न स्यात्, स्फुरणस्य धर्मिग्राहकमानेनाज्ञानविरोधितयैव सिद्धेः । अन्यथा स्फुरणस्याप्यज्ञानावृतत्वापत्त्या जगदान्ध्यापत्तेरिति भावः । ननु घटादेर्व्यवहारसिद्ध्यर्थं चिद्विषयत्वमावश्यकम् । व्यवहर्तव्यज्ञानं विना तद्व्यवहारस्यैवायोगात् । तथाच चिद्विषयत्वरूपहेतुर्नासिद्ध इत्यत आह **अस्फुरणरूपेष्विति । तदभिव्यक्तेति ।** वृत्त्यभिव्यक्तेत्यर्थः । ननु वृत्तेः सकाशादविद्यानिवृत्तिसंभवेऽपि जडत्वात्तस्याः घटादिविषयप्रकाशरूपत्वमसंभवीति तत्प्रकाशार्थं वृत्तिप्रतिफलितचैतन्यविषयत्वमावश्यकम् । आत्मनस्तु स्वत एव प्रकाशत्वात् अज्ञाननिवृत्त्यर्थमेव वृत्त्यपेक्षेत्यत आह **घटादाविति ।** तथाचाज्ञान-विरोधिन्यां वृत्तावेव घटादिप्रकाशरूपत्वकल्पनमुचितम् । न त्वननुभूयमानाज्ञाना-विरोधिज्ञानमङ्गीकृत्य तस्य विषयप्रकाशरूपत्वकल्पनमिति भावः । **ज्ञानस्येति ।** घटाकारवृत्तिप्रतिफलितचैतन्यस्येत्यर्थः । **अन्यथेति ।** प्रमाणं विनाप्यज्ञानाविरोधि-तादृशज्ञानकल्पन इत्यर्थः । यद्वाननुभूयमानस्यान्यथोपपन्नकार्यस्य ज्ञानस्य कल्पन इत्यर्थः । नन्वज्ञानाविरोधिज्ञानं न कल्प्यते किन्तु तमेव भान्तमिति श्रुत्यैव सिध्यतीत्यत आह **तमेवेति ।** ननु घटादीनां प्रमाणसिद्धापरोक्ष्यनिर्वाहाय वृत्तिप्रतिफलितचैतन्यविषयत्वमावश्यकम्, तथाच नासिद्धिरित्यत आह

**चैतन्याविषयस्यापीति ।** **इन्द्रियजन्यत्वेति ।** इन्द्रियत्वेनेन्द्रियजन्यत्वेत्यर्थ: । एतच्चोपलक्षणम् । अनावृतसंवित्तादात्म्येनैव परेणार्थापरोक्ष्यस्वीकारात्, आपरोक्ष्यसिध्यर्थमपि चिद्विषयत्वस्यानावश्यकत्वेनाप्रसिद्धितादवस्थ्यमित्यपि बोध्यम् । **अन्यथेति ।** वृत्तेरपि साक्षात्कारत्वानभ्युपगमे इत्यर्थ: । **एकेति ।** चिद्गतापरोक्षत्वस्य वृत्तिगतज्ञानत्वासमानाधिकरणत्वादिति भाव: ।

❖❖❖

## ವೃತ್ತಿವ್ಯಾಪ್ಯತ್ವ ಫಲವ್ಯಾಪ್ಯತ್ವ ಸಾಧಾರಣವೂ ದೃಶ್ಯತ್ವವಲ್ಲ

**ನಾಪಿ ಸಾಧಾರಣಮಿತಿ ತೃತೀಯಃ। ಬ್ರಹ್ಮಣಿ ವೃತ್ತಿವ್ಯಾಪ್ಯತ್ವರೂಪ ವಿಶೇಷಸ್ಯ ಸತ್ತ್ವೇನ ದೃಶ್ಯತ್ವರೂಪ ಸಾಮಾನ್ಯಸ್ಯಾಪಿ ಸತ್ತ್ವಾತ್।**

'ವೃತ್ತಿವ್ಯಾಪ್ಯತ್ವ' 'ಫಲವ್ಯಾಪ್ಯತ್ವ'ವೆಂದು ವಿಶೇಷರೂಪದಿಂದ ದೃಶ್ಯತ್ವವನ್ನು ಹೇತು ಮಾಡುವುದಿಲ್ಲ. 'ದೃಶ್ಯತ್ವ'ವೆಂದು ಸಾಮಾನ್ಯರೂಪದಿಂದಲೆ ಹೇತುಮಾಡುತ್ತೇನೆ ಎಂಬ ಮೂರನೆ ಪಕ್ಷವೂ ಸರಿಯಲ್ಲ. ಆತ್ಮನಲ್ಲಿ ವೃತ್ತಿವ್ಯಾಪ್ಯತ್ವರೂಪದಿಂದ ದೃಶ್ಯತ್ವವು ಇರುವುದರಿಂದ ವ್ಯಭಿಚಾರಿ ಎಂದು ಹೇಳಿದ್ದರಿಂದ, ಒಂದಾದರೂ ವಿಶೇಷವಿದ್ದರೆ ಅಲ್ಲಿ ಸಾಮಾನ್ಯವಿರಲೇಬೇಕೆಂಬ ನಿಯಮಾನುಸಾರ ಸಾಮಾನ್ಯ ದೃಶ್ಯತ್ವವು ಆತ್ಮನಲ್ಲಿದೆ, ವ್ಯಭಿಚಾರವಿದೆ.

## ಕದಾಚಿತ್ ಕಥಂಚಿತ್ ಚಿದ್‌ವಿಷಯತ್ವವು ದೃಶ್ಯತ್ವವಲ್ಲ

**ನನ್ವಸ್ತು ತರ್ಹಿ ಚತುರ್ಥಃ। ಅತೀತಾದೇರಪಿ ಕದಾಚಿತ್ ಸ್ವಾಕಾರ ವೃತ್ತಿ ಪ್ರತಿಫಲಿತ ಚಿದ್ವಿಷಯತ್ವಾತ್। ಅವಿದ್ಯಾದೇರಪಿ ಸಾಕ್ಷಿ ವಿಷಯತ್ವಾತ್। ನಿತ್ಯಾತೀಂದ್ರಿಯಸ್ಯಾಪಿ ಜ್ಞಾತತ್ವೇನ ಅಜ್ಞಾತತ್ವೇನ ವಾ ಸಾಕ್ಷಿ ವಿಷಯತ್ವಾತ್। ದೃಗ್‌ರೂಪಾತ್ಮನಸ್ತು ತದವಿಷಯತ್ವಾತ್ ಇತಿ ಚೇನ್ನ।**

'ಹಾಗಾದರೆ ಕದಾಚಿತ್ ಕಥಂಚಿತ್ ಚಿದ್ವಿಷಯತ್ವರೂಪ ದೃಶ್ಯತ್ವವು ಮಿಥ್ಯಾತ್ವಾನುಮಾನದಲ್ಲಿ ಹೇತು ಎನ್ನುವ ನಾಲ್ಕನೇ ಪಕ್ಷವೇ ಇರಲಿ. ಏಕೆಂದರೆ ಅತೀತಾದಿ ಸ್ಥಳದಲ್ಲಿ ಘಟಾದಿಗಳು 'ಕದಾಚಿತ್' ಎಂದೋ ಒಮ್ಮೆ, ಅವು ವರ್ತಮಾನವಾಗಿರುವಾಗ, ಸ್ವಾಕಾರವೃತ್ತಿಪ್ರತಿಫಲಿತವಾದ ಚೈತನ್ಯಕ್ಕೆ ವಿಷಯವಾಗಿರುತ್ತವೆ. ಆದರಿಂದ ಅವು ಮಿಥ್ಯಾ. ಅವಿದ್ಯೆ, ಅವಿದ್ಯಕವಾದ ಶುಕ್ತಿರಜತಾದಿಗಳು, ಸುಖಾದಿ ಅಂತಃಕರಣ ಧರ್ಮಗಳು ಎಲ್ಲವೂ ಸಾಕ್ಷಿ ಚೈತನ್ಯಕ್ಕೆ ವಿಷಯವಾಗಿವೆ. ಆದರಿಂದ ಅಸಿದ್ಧಿ ಇಲ್ಲ. ಚೈತನ್ಯರೂಪವಾದ ಆತ್ಮನು ಮಾತ್ರ, ಕದಾಚಿತ್ ಕಥಂಚಿತ್ ಕೂಡ ಚೈತನ್ಯಕ್ಕೆ ವಿಷಯವಾಗುವುದಿಲ್ಲ. ಏಕೆಂದರೆ ತನ್ನನ್ನು ತಾನು ತಿಳಿಯುವಂಥ ಕರ್ಮಕರ್ತೃಭಾವಗಳು ಎರಡೂ

ಒಬ್ಬನಲ್ಲಿ ವಿರುದ್ಧ. ಅದರಿಂದ ಈ ಹೇತುವಿಗೆ ಆತ್ಮನಲ್ಲಿ ವ್ಯಭಿಚಾರವಿಲ್ಲ'—ಹೀಗೆ ಹೇಳುವುದು ಸರಿಯಲ್ಲ.

**ನಿತ್ಯಾತೀಂದ್ರಿಯಂ ಪೂರ್ವಂ ನ ಜ್ಞಾತಂ ಇದಾನೀಂ ಶಬ್ದೇನ ಜ್ಞಾತಂ ಇತಿವತ್ ಶುದ್ಧಂ ಬ್ರಹ್ಮ ಪೂರ್ವಂ ನ ಜ್ಞಾತಂ ಇದಾನೀಂ ವೇದಾಂತೇನ ಜ್ಞಾತಂ ಇತ್ಯನುಭವೇನ ಬ್ರಹ್ಮಣಿ ವ್ಯಭಿಚಾರಾತ್ ।**

ನಿತ್ಯಾತೀಂದ್ರಿಯವಾದ ಧರ್ಮಾದಿಗಳು ಹಿಂದೆ ನನಗೆ ತಿಳಿದಿರಲಿಲ್ಲ, ಈಗ ಶಬ್ದದಿಂದ ತಿಳಿಯಿತು ಎನ್ನುವಂತೆ ಶುದ್ಧಬ್ರಹ್ಮವು ಹಿಂದೆ ನನಗೆ ತಿಳಿದಿರಲಿಲ್ಲ. ಈಗ ವೇದಾಂತದಿಂದ ತಿಳಿಯಿತು ಎನ್ನುವ ಅನುಭವವಿರುವುದರಿಂದ ನಿತ್ಯಾತೀಂದ್ರಿಯದಂತೆ ಶುದ್ಧಚೈತನ್ಯವೂ ಕೂಡ ಕದಾಚಿತ್ ಕಥಂಚಿತ್ ಅನುಭವಕ್ಕೆ ಅಂದರೆ ಮತದ್ವಯದಲ್ಲಿಯೂ ಅನುವ್ಯವಸಾಯರೂಪಸಾಕ್ಷಿ ಚೈತನ್ಯಕ್ಕೆ ವಿಷಯವಾಗಿದೆ. ಅನುಭವವನ್ನು ಅನಾದರ ಮಾಡಿ ಚೈತನ್ಯಕ್ಕೆ ಚೈತನ್ಯ ವಿಷಯತ್ವವನ್ನು ಕೇವಲ ಭೇದಾಭಾವ ಹೇತುವಿನಿಂದ ಅಪಲಾಪ ಮಾಡಿದರೆ ನಿತ್ಯಾತೀಂದ್ರಿಯಗಳಿಗೂ ಕಥಂಚಿತ್ ಚೈತನ್ಯ ವಿಷಯತ್ವವನ್ನು ಅಪಲಾಪಮಾಡುವ ಪ್ರಸಂಗವಿದೆ. ತದವಿಷಯತ್ವಕ್ಕೆ ತದ್ವಿಷಯ ವ್ಯವಹಾರಾಜನಕತ್ವವೇ ಪ್ರಯೋಜಕ ಹೊರತು ತದಭಿನ್ನತ್ವವು ಪ್ರಯೋಜಕವಲ್ಲ—

**ತದ್‌ವ್ಯವಹಾರಜನನೇ ತದ್‌ವಿಷಯತ್ವಸ್ಯ ತಂತ್ರತ್ವೇನ ಸ್ವವ್ಯವಹಾರ ಹೇತೋಃ ಚಿತೋऽಪಿ ಅಭಿಧಾನಸ್ಯ ಅಭಿಧೇಯತ್ವವತ್ ಚಿದ್‌ವಿಷಯತ್ವಾಚ್ಚ ।**

ಅನುಭವ ಬಲದಿಂದ ಚಿತ್ತಿಗೆ ಚಿದ್ವಿಷಯತ್ವವನ್ನು ಒಪ್ಪಬೇಕು, ಮಾತ್ರವಲ್ಲ, ಅದು ಯುಕ್ತಿಯುಕ್ತವೂ ಆಗಿದೆ. ಜ್ಞಾನವು ತದ್‌ವ್ಯವಹಾರ ಉಂಟುಮಾಡುವಲ್ಲಿ ತದ್‌ವಿಷಯತ್ವವು ಪ್ರಯೋಜಕ. ತದ್‌ಭಿನ್ನತ್ವವು ಬೇಕಾಗಿಲ್ಲ. ಹೀಗಾಗಿ ಚೈತನ್ಯರೂಪಜ್ಞಾನವು ಚೈತನ್ಯ ಭಿನ್ನವಾಗದಿದ್ದರೂ ಚೈತನ್ಯವಿಷಯಕ ವ್ಯವಹಾರವನ್ನುಂಟು ಮಾಡುವುದರಿಂದ ಅದಕ್ಕೆ ಪ್ರಯೋಜಕವಾದ ಚೈತನ್ಯ ವಿಷಯತ್ವವನ್ನು ಅಂಗೀಕರಿಸಲೇಬೇಕು. 'ಚೈತನ್ಯವು ಚೈತನ್ಯವಿಷಯಕವಾಗಿದೆ. ಚೈತನ್ಯವಿಷಯಕ ವ್ಯವಹಾರಜನಕವಾದ್ದರಿಂದ. ಯಾವುದು ತದ್‌ವಿಷಯಕವ್ಯವಹಾರ ಜನಕವೋ ಅದು ತದ್‌ವಿಷಯಕ. ಉದಾ: ಘಟವಿಷಯಕವ್ಯವಹಾರ ಜನಕವಾದ ಘಟಜ್ಞಾನವು ಘಟವಿಷಯಕ' ಎಂದು ಅನುಮಾನ. ಚೈತನ್ಯವು ಚೈತನ್ಯ ವಿಷಯಕವಲ್ಲ, ಭೇದವಿಲ್ಲದಿರುವುದರಿಂದ ಎಂದು ಅನುಮಾನಮಾಡಿದರೆ ತದ್ವಿಷಯವ್ಯವಹಾರ ಜನಕತ್ವಾಭಾವವು ಉಪಾಧಿ ಮತ್ತು ಅಭಿಧಾನದಲ್ಲಿ ಅಭಿಧಾನ ಭೇದವಿಲ್ಲದಿದ್ದರೂ ತದ್ವಿಷಯತ್ವವಿದೆ, ಅಭಿಧೇಯತ್ವವಿದೆ ಎಂದು ಭೇದಾಭಾವ ಹೇತುವಿಗೆ ಅಭಿಧಾನದಲ್ಲಿ ವ್ಯಭಿಚಾರವಿದೆ.

ಯದ್ಯಪಿ ವ್ಯವಹಾರತ್ವೇನ ಜ್ಞಾನತ್ವೇನ ಸಾಮಾನ್ಯಕಾರ್ಯಕಾರಣಭಾವ. ಘಟವ್ಯವಹಾರದಲ್ಲಿ ಪಟಜ್ಞಾನ ಕಾರಣವಾಗುವುದಿಲ್ಲವೆಂದು ಅತಿಪ್ರಸಂಗಪರಿಹಾರಕ್ಕೆ ತದ್ವಿಷಯಕ ವ್ಯವಹಾರಕ್ಕೆ

ತದ್ವಿಷಯಕಜ್ಞಾನವು ಕಾರಣವೆಂದು ವಿಶೇಷಕಾರ್ಯಕಾರಣಭಾವವನ್ನೂ ಹೇಳಬೇಕಾಗುತ್ತದೆ. ಆದರೆ ಜ್ಞಾನವ್ಯವಹಾರಕ್ಕೆ ಜ್ಞಾನವು ತದ್ವಿಷಯಕಜ್ಞಾನತ್ವೇನ ಕಾರಣವಾಗುವುದಿಲ್ಲ, ಗೌರವವಿರುವುದರಿಂದ. ಲಾಘವದಿಂದ ಜ್ಞಾನತ್ವೇನ ಜ್ಞಾನವು ಕಾರಣವೆನ್ನಬೇಕು. ಹೀಗಾಗಿ ಚೈತನ್ಯವ್ಯವಹಾರಕ್ಕೆ ಚೈತನ್ಯಜ್ಞಾನವು ಚೈತನ್ಯವಿಷಯತ್ವೇನ ಕಾರಣವಲ್ಲ. ಕೇವಲ ಜ್ಞಾನತ್ವೇನ ಕಾರಣವೆಂದಮೇಲೆ ಚೈತನ್ಯ ವ್ಯವಹಾರ ಕಾರಣವಾದ ಮಾತ್ರಕ್ಕೆ ಚೈತನ್ಯವು ಚೈತನ್ಯ ವಿಷಯವಾಗಬೇಕಿಲ್ಲ. ಆದರಿಂದ ಚೈತನ್ಯದಲ್ಲಿ ದೃಶ್ಯತ್ವಹೇತುವಿಗೆ ವ್ಯಭಿಚಾರವಿಲ್ಲ ಎಂದು ಅದ್ವೈತಿ ಆಕ್ಷೇಪ ಮಾಡಬಹುದು.

ಆದರೆ ಜ್ಞಾನತ್ವವು ಅತಿಪ್ರಸಕ್ತಧರ್ಮವಾದ್ದರಿಂದ ಜ್ಞಾನವ್ಯವಹಾರಜನಕತಾವಚ್ಛೇದಕ ವಾಗಲಾರದು. ಏಕೆಂದರೆ ವ್ಯವಹಾರ ಅಜನಕವಾದ ನಿರ್ವಿಕಲ್ಪಕದಲ್ಲಿ ಜ್ಞಾನತ್ವವು ಅತಿರಿಕ್ತವೃತ್ತಿ ಯಾಗಿದೆ. ಮತ್ತು ಅತೀತ ಅನಾಗತ ಜ್ಞಾನ ವ್ಯವಹಾರಗಳಲ್ಲಿ ಅತೀತವಿಷಯ ವ್ಯವಹಾರಕ್ಕೆ ಅನಾಗತ ವಿಷಯಜ್ಞಾನ ಕಾರಣವಾಗದಿರಲು ತದ್ವಿಷಯಕಜ್ಞಾನತ್ವವನ್ನೇ ಕಾರಣತಾವಚ್ಛೇದಕ ಮಾಡಬೇಕಾಗು ತ್ತದೆ. ಆದರಿಂದ ತದ್‌ವ್ಯವಹಾರಹೇತುವಾದ ಜ್ಞಾನವು ತದ್ವಿಷಯಕವಾಗಲೇಬೇಕು. ಆದರಿಂದ ಚೈತನ್ಯವ್ಯವಹಾರಜನಕವಾದ ಚೈತನ್ಯಜ್ಞಾನವು ಚೈತನ್ಯವಿಷಯಕವಾಗುವುದರಿಂದ ದೃಶ್ಯತ್ವಹೇತು ವ್ಯಭಿಚರಿತವಾಗಿದೆ.

**ಕಲ್ಪಿತಭೇದೇನ ಬಿಂಬಪ್ರತಿಬಿಂಬಯೋಃ ಲಿಂಗಲಿಂಗಿಭಾವವತ್, ಜೀವಬ್ರಹ್ಮಣೋಃ ಜ್ಞಾತೃಜ್ಞೇಯ ಭಾವವಚ್ಚ ಆತ್ಮನೋಽಪಿ ಸ್ವಾಕಾರವೃತ್ತಿ ಪ್ರತಿಫಲಿತ ಚಿದ್ವಿಷಯತ್ವ ಸಂಭವಾಚ್ಚ। ಅನ್ಯಥಾ ತಯಾ ತದಜ್ಞಾನ ನಿವೃತ್ತ್ಯಯೋಗಾತ್।**

'ಅಭಿಧಾನತ್ವೇನ ವಿಷಯತ್ವ, ಅಭಿಧಾನಪದನಿರೂಪಿತ ಅಭಿಧಾನತ್ವೇನ ವಿಷಯಿತ್ವ ಎಂದು ವ್ಯವಸ್ಥೆಯಿಂದ ಅವಚ್ಛೇದಕಭೇದದಿಂದ ಒಂದೇ ಅಭಿಧಾನಕ್ಕೆ ವಿಷಯತ್ವ ವಿಷಯಿತ್ವಗಳು ಕೂಡುತ್ತದೆ. ವೃತ್ತಿವಿರೋಧವಿಲ್ಲ. ಹಾಗೆ ಚೈತನ್ಯದಲ್ಲಿ ವಿಷಯತ್ವವಿಷಯಿತ್ವಗಳು ಭೇದವಿಲ್ಲದೆ ಕೂಡಲಾರವು' ಎಂದು ಅದ್ವೈತಿ ಆಕ್ಷೇಪಿಸಿದರೆ ಅವನಿಗೆ ಹೇಳಬೇಕು—ಚೈತನ್ಯಕ್ಕೆ ಚೈತನ್ಯಾಭೇದವಿರುವುದರಿಂದ ಚೈತನ್ಯ ವಿಷಯತ್ವವಿಲ್ಲ ಎನ್ನುವುದು ಯುಕ್ತವಲ್ಲ. ನಿನ್ನ ಮತದಲ್ಲಿ ಬಿಂಬ ಪ್ರತಿಬಿಂಬಗಳಿಗೆ ಅಭೇದವಿದ್ದರೂ ಕಲ್ಪಿತ ಭೇದವಿರುವುದರಿಂದ ಪ್ರತಿಬಿಂಬವು ಬಿಂಬಕ್ಕೆ ಅನುಮಾಪಕವಾಗುತ್ತದೆ. ಜೀವ ಬ್ರಹ್ಮರಿಗೆ ಅಭೇದವಿದ್ದರೂ ಕಲ್ಪಿತಭೇದದಿಂದ ಜೀವನು ಜ್ಞಾತೃ, ಬ್ರಹ್ಮನು ಜ್ಞೇಯವೆಂದು ವ್ಯವಸ್ಥೆ ಇದೆ. ಹಾಗೇ ಚೈತನ್ಯ ಒಂದೇ ಆದರೂ ಅದು ಸ್ವವಿಷಯಕ ಅಂತಃಕರಣವೃತ್ತಿ ಪ್ರತಿಫಲಿತ ಚಿದ್‌ವಿಷಯವಾಗ ಬಹುದು. ಅನ್ಯಥಾ ಆತ್ಮನಿಗೆ ಸ್ವಾಕಾರವೃತ್ತಿ ಪ್ರತಿಫಲಿತ ಚಿದ್‌ವಿಷಯತ್ವವಿಲ್ಲದಿದ್ದರೆ ಆ ಪ್ರತಿಫಲಿತ ಚಿತ್ತಿನಿಂದ ಆತ್ಮನ ಅಜ್ಞಾನ ನಿವೃತ್ತಿಯಾಗಲಾರದು. ಏಕೆಂದರೆ ಘಟಾಕಾರವೃತ್ತಿಪ್ರತಿಫಲಿತ ಚಿತ್ತಿನಿಂದ ಘಟಾಜ್ಞಾನನಿವೃತ್ತಿ ಕಂಡಿದೆ. ಹೀಗಾಗಿ ಆತ್ಮನಿಗೆ ಚಿದ್‌ವಿಷಯತ್ವವಿರುವುದರಿಂದ ದೃಶ್ಯತ್ವಹೇತುವಿಗೆ ವ್ಯಭಿಚಾರ ಅಪರಿಹಾರ್ಯ.

**ತದಾಕಾರವೃತ್ತ್ಯೈವ ಚ ತನ್ನಿವೃತ್ತೌ ಘಟಾದಾವಪಿ ತಥಾತ್ವಾಪಾತೇನ ಅಸಿದ್ಧೇಃ।**

'ತದಾಕಾರವೃತ್ತಿಯಿಂದಲೇ ತದಜ್ಞಾನನಿವೃತ್ತಿ ಎಂದು ಅಂಗೀಕರಿಸುತ್ತೇನೆ. ಆದರಿಂದ ಅಜ್ಞಾನನಿವೃತ್ತಿಗಾಗಿ ಚಿತ್ತಿಗೆ ಚಿದ್ವಿಷಯತ್ವವನ್ನು ಒಪ್ಪುವುದು ಬೇಡ. ಆದರಿಂದ ದೃಶ್ಯತ್ವಹೇತುವಿಗೆ ಚಿತ್ತಿನಲ್ಲಿ ವ್ಯಭಿಚಾರವಿಲ್ಲ' ಎಂದರೆ, ಇದೇ ರೀತಿ ಘಟಾಕಾರವೃತ್ತಿಯಿಂದಲೇ ಘಟಾಜ್ಞಾನನಿವೃತ್ತಿ ಯಾದೀತು, ಆದರಿಂದ ಘಟಾದಿಯು ಕೂಡ ಚಿದ್ವಿಷಯವಾಗಬೇಕಾಗಿಲ್ಲವೆಂದು ದೃಶ್ಯತ್ವಹೇತುವಿಗೆ ಅಸಿದ್ಧಿಪ್ರಸಂಗವಿದೆ.

**ಅಜ್ಞಾನಾವಿರೋಧಿ ಸ್ಫುರಣರೂಪತ್ವಸ್ಯ ಚ ಆತ್ಮನೀವ ಘಟಾದಾವಪಿ ಸುವಚತ್ವಾತ್ ।**

'ಆತ್ಮನು ಅಜ್ಞಾನಾವಿರೋಧಿ ಸ್ಫುರಣರೂಪನಾದ್ದರಿಂದ ಸ್ವವಿಷಯತ್ವವನ್ನು ಹೇಳಿ ಪ್ರಯೋಜನವಿಲ್ಲ. ಆದರಿಂದ ಅಜ್ಞಾನ ನಿವೃತ್ತಿಯಾಗುವುದಿಲ್ಲ. ಸ್ವಾಕಾರವೃತ್ತಿಯಿಂದಲೇ ಅಜ್ಞಾನ ನಿವೃತ್ತಿ. ಹೀಗಾಗಿ ಚಿತ್ತಿಗೆ ಚಿದ್ವಿಷಯತ್ವವಿಲ್ಲದ್ದರಿಂದ ದೃಶ್ಯತ್ವ ಹೇತುವಿಗೆ ಚಿತ್ತಿನಲ್ಲಿ ವ್ಯಭಿಚಾರವಿಲ್ಲ' ಎಂದರೆ, ಆತ್ಮನಂತೆ ಘಟಾದಿಗೂ ಅಜ್ಞಾನಾವಿರೋಧಿ ಸ್ಫುರಣ ರೂಪತ್ವವನ್ನು ಏಕೆ ಹೇಳಬಾರದು? ಘಟಾದಿಗೂ ತದಾಕಾರ ವೃತ್ತಿಯಿಂದಲೆ ಅಜ್ಞಾನ ನಿವೃತ್ತಿಯಾಗುವುದರಿಂದ ವೃತ್ತಿಪ್ರತಿಫಲಿತ ಚೈತನ್ಯ ವಿಷಯತ್ವ ಬೇಡವೆಂದಾದೀತು. ಹೀಗಾಗಿ ಆತ್ಮನು ಅಜ್ಞಾನಾವಿರೋಧಿ ಎಂದರೆ ಘಟಾದಿಯಂತೇ ಸ್ಫುರಣರೂಪನಲ್ಲವೆಂದಾಗುತ್ತದೆ. ಏಕೆಂದರೆ ಸ್ಫುರಣವು ಧರ್ಮಿಗ್ರಾಹಕ ಪ್ರಮಾಣದಿಂದ ಅಜ್ಞಾನ ವಿರೋಧಿಯಾಗಿಯೇ ಸಿದ್ಧವಾಗುತ್ತದೆ. ಇಲ್ಲದಿದ್ದರೆ ಸ್ಫುರಣವೂ ಕೂಡ ಅಜ್ಞಾನಾವೃತವಾದೀತು. ಜಗತ್ತೇ ಅಂಧಕಾರಮಯವಾದೀತು.

**ಅಸ್ಫುರಣ ರೂಪೇಷು ಅತೀಂದ್ರಿಯೇಷು ಇವ, ಐಂದ್ರಿಯಕೇಷ್ವಪಿ ವೃತ್ತಿವಿಷಯತ್ವ ಮಾತ್ರೇಣ ವ್ಯವಹಾರಾದಿ ಸಂಭವೇ ತತ್ಪ್ರತಿಫಲಿತಚೈತನ್ಯ ವಿಷಯತ್ವಸ್ಯ, ತದಭಿವ್ಯಕ್ತ ಚೈತನ್ಯ ವಿಷಯತ್ವಸ್ಯ ವಾ ಕಲ್ಪನಾಽಯೋಗಾಚ್ಚ ।**

ಘಟಾದಿಗಳಲ್ಲಿ ಸ್ವಾಕಾರವೃತ್ತಿಪ್ರತಿಫಲಿತ ಚಿದ್‌ವೇದ್ಯತ್ವವನ್ನು ಅದ್ವೈತಿ ಹೇಳುವುದರಿಂದ ಘಟಾದಿಗಳಂತೆ ಆತ್ಮನೂ ಕೂಡ ಪ್ರತಿಫಲಿತ ಚಿದ್‌ವೇದ್ಯನೇಕಲ್ಲ? ಎನ್ನುತ್ತ ಆತ್ಮನಲ್ಲಿ ದೃಶ್ಯತ್ವ ಹೇತುವಿಗೆ ವ್ಯಭಿಚಾರವನ್ನು ಹೇಳಿದ್ದೇವೆ. ವಸ್ತುತಃ ಘಟಾದಿಗಳಲ್ಲಿ ಪ್ರತಿಫಲಿತ ಚಿದ್ ವೇದ್ಯತ್ವವನ್ನು ಒಪ್ಪಬೇಕಾಗಿಲ್ಲ. ಆತ್ಮನಲ್ಲಿ ಪ್ರತಿಫಲಿತ ಚಿದ್‌ವೇದ್ಯತ್ವವಾಗಲಿ ತದಭಿವ್ಯಕ್ತಚಿದ್‌ವೇದ್ಯತ್ವವಾಗಲಿ ಇಲ್ಲವೆಂದಮೇಲೆ ಘಟಾದಿಗಳಲ್ಲಿ ಅದನ್ನೇಕೆ ಕಲ್ಪಿಸಬೇಕು?

'ಘಟಾದಿವ್ಯವಹಾರ ಸಿದ್ಧಿಗಾಗಿ. ಏಕೆಂದರೆ ವ್ಯವಹರ್ತವ್ಯ ಜ್ಞಾನವಿಲ್ಲದೆ ವ್ಯವಹಾರ ಕೂಡುವುದಿಲ್ಲ. ಘಟಾದಿ ಸ್ವತಃಸ್ಫುರಣರೂಪವಲ್ಲ, ಜ್ಞಾನರೂಪವಲ್ಲ, ಆದರಿಂದ ಜ್ಞಾನರೂಪ ಚಿದ್ವಿಷಯತ್ವವು ಬೇಕು' ಎಂದರೆ ಅದು ಸರಿಯಲ್ಲ.

ಜ್ಞಾನರೂಪತ್ವವು ಅತೀಂದ್ರಿಯ ಧರ್ಮಾದಿಗಳಿಗೂ ಇಲ್ಲ. ಅವುಗಳ ವ್ಯವಹಾರವು ಪ್ರತಿಫಲಿತ ಚಿದ್‌ವಿಷಯತ್ವವಿಲ್ಲದೇ ಆಗುತ್ತಿದೆ ಎಂದಮೇಲೆ ಐಂದ್ರಿಯವಾದ ಘಟಾದಿವ್ಯವಹಾರವೂ ಚಿದ್

ವಿಷಯತ್ವವಿಲ್ಲದೇ ಏಕಾಗಬಾರದು? ವೃತ್ತಿವಿಷಯತ್ವದಿಂದಲೆ ಅದನ್ನು ನಿರ್ವಾಹ ಮಾಡಬಹುದು ತಾನೆ?

**ಘಟಾದೌ ಅಂಧಕಾರ ಅನಿವರ್ತಕ ಪ್ರಭಾಯಾ ಇವ ಅಜ್ಞಾನಾವಿರೋಧಿ ಜ್ಞಾನಸ್ಯ ಅನನುಭವಾಚ್ಚ। ಅನ್ಯಥಾ ಇಚ್ಛಾದ್ಯಂತಃಕರಣ ವೃತ್ತಿಪ್ರತಿಫಲಿತಂ ತದ್ವ್ಯಂಗ್ಯಂ ವಾ ಇಚ್ಛಾದಿಕಂ, ಪರೋಕ್ಷವೃತ್ತಿಪ್ರತಿಫಲಿತಂ ತದ್ವ್ಯಂಗ್ಯಂ ವಾ ಪರೋಕ್ಷಜ್ಞಾನಂ, ತಮೋನಿವರ್ತಕ ಪ್ರಭಾ ಪ್ರತಿಫಲಿತಂ ತದ್ವ್ಯಂಗ್ಯಂ ವಾ ಪ್ರಭಾಂತರಂ ಚ ಕಲ್ಪ್ಯಂ ಸ್ಯಾತ್ ।**

'ಘಟಾದಿಗಳಲ್ಲಿ ವೃತ್ತಿಯಿಂದ ಅಜ್ಞಾನನಿವೃತ್ತಿ ಸಂಭವವಿದ್ದರೂ ಅದು ಜಡವಾದ್ದರಿಂದ ಘಟವನ್ನು ಪ್ರಕಾಶಗೊಳಿಸಲಾರದು. ಅದರಿಂದ ಘಟಾದಿ ಪ್ರಕಾಶಕ್ಕಾಗಿ ವೃತ್ತಿಯಿಂದ ಬೇರೆಯಾಗಿ ವೃತ್ತಿಯಲ್ಲಿ ಪ್ರತಿಫಲಿತ ಚೈತನ್ಯರೂಪ ಪ್ರಕಾಶವೂ ಬೇಕು. ಆತ್ಮನು ಸ್ವತಃ ಪ್ರಕಾಶರೂಪನೇ ಆದ್ದರಿಂದ ಘಟವನ್ನು ಪ್ರಕಾಶಗೊಳಿಸುತ್ತಾನೆ. ಆದರೆ ಅಜ್ಞಾನನಿವೃತ್ತಿಗಾಗಿ ವೃತ್ತಿಬೇಕು.' ಎಂದು ಅದ್ವೈತಿ ಹೇಳುತ್ತಾನೆ. ಇದು ಸರಿಯಲ್ಲ. ಘಟವನ್ನು ಪ್ರಕಾಶಗೊಳಿಸಲು ಅಜ್ಞಾನ ನಿವರ್ತಕವಾಗಿ ಆವಶ್ಯಕವಾದ ವೃತ್ತಿಯೇ ಸಾಕು. ಅಜ್ಞಾನ ಅನಿವರ್ತಕವಾದ ಬೇರೆ ಪ್ರಕಾಶ ಬೇಕಾಗಿಲ್ಲ. ಘಟಾದ್ಯಾವರಕ ಅಂಧಕಾರವನ್ನು ಕಳೆಯಲು ಸಾಮರ್ಥ್ಯವಿಲ್ಲದ, ಘಟಾದಿಗಳಿಗೆ ಕೇವಲ ಪ್ರಕಾಶಕವಾದ, ಒಂದು ಪ್ರಭೆ ಅನುಭವದಲ್ಲಿ ಕಂಡಿಲ್ಲ. ಹಾಗೇ ಅಜ್ಞಾನವನ್ನು ಕಳೆಯಲಾರದ ಪ್ರತಿಫಲಿತ ಚೈತನ್ಯರೂಪವಾದ ಬೇರೆ ಒಂದು ಜ್ಞಾನವೂ ಅನುಭವ ಸಿದ್ಧವಾಗಿಲ್ಲ. ಅದರಿಂದ ಘಟಾಜ್ಞಾನನಿವರ್ತಕವಾದ ವೃತ್ತಿಯನ್ನೆ ಘಟಪ್ರಕಾಶಕವೆಂದೂ ಒಪ್ಪಬೇಕು. ವೃತ್ತಿಯು ಜಡವೆಂದಮಾತ್ರಕ್ಕೆ ಪ್ರಕಾಶಕವಾಗಲಾರದೆನ್ನಬಾರದು. ಜಡವಾದ ಪ್ರಭೆಯು ಘಟದ ಅಂಧಕಾರವನ್ನು ಕಳೆದು ಅದಕ್ಕೆ ಪ್ರಕಾಶವನ್ನು ಉಂಟುಮಾಡುತ್ತದೆ ಎನ್ನುವುದು ಅನುಭವದಲ್ಲಿ ಕಂಡಿದೆ. ಇದನ್ನು ಒಪ್ಪದಿದ್ದರೆ ಅತಿಪ್ರಸಕ್ತಿ.

ಇಚ್ಛಾದಿ ಅಂತಃಕರಣ ವೃತ್ತಿಯಲ್ಲಿ ಪ್ರತಿಫಲಿತವಾಗುವ, ದ್ವೇಷಾದಿ ಅನಿವರ್ತಕವಾದ ಬೇರೆ ಇಚ್ಛಾದಿಯನ್ನು ಅಥವಾ ಅದರಿಂದ ವ್ಯಂಗ್ಯವಾಗುವ ಬೇರೆ ಇಚ್ಛಾದಿಯನ್ನು ಒಪ್ಪಬೇಕಾದೀತು.

ಪರೋಕ್ಷವೃತ್ತಿಯಲ್ಲಿ, ವಹ್ನ್ಯನುಮಿತಿಯಲ್ಲಿ ಪ್ರತಿಫಲಿತವಾಗುವ ವಹ್ನಿಪ್ರವೃತ್ತಿರೂಪ ಕಾರ್ಯ ಅಜನಕವಾದ ಇನ್ನೊಂದು ವಹ್ನ್ಯನುಮಿತಿಯನ್ನು, ಅಥವಾ ಅದರಿಂದ ಅಭಿವ್ಯಕ್ತವಾಗುವ ಬೇರೊಂದು ವಹ್ನ್ಯನುಮಿತಿಯನ್ನೂ ಒಪ್ಪಬೇಕಾದೀತು.

ತಮೋನಿವರ್ತಕವಾದ ಪ್ರಭೆಯಲ್ಲಿ ಪ್ರತಿಫಲಿತವಾಗುವ ತಮೋನಿವೃತ್ತಿ ಮಾಡದ ಇನ್ನೊಂದು ಪ್ರಭೆಯನ್ನು ಅಥವಾ ಅದರಿಂದ ವ್ಯಕ್ತವಾಗುವ ಬೇರೊಂದು ಪ್ರಭೆಯನ್ನು ಒಪ್ಪಬೇಕಾದೀತು.

ಅದರಿಂದ ಅಜ್ಞಾನನಿವರ್ತಕವಾದ ವೃತ್ತಿಇರುವಾಗ ಅದರಲ್ಲಿ ಪ್ರತಿಪಲಿತವಾಗುವ ಅಜ್ಞಾನಾನಿವರ್ತಕವಾದ ಇನ್ನೊಂದು ಚೈತನ್ಯವನ್ನು ಅಥವಾ ಅದರಿಂದ ಅಭಿವ್ಯಕ್ತವಾಗುವ

ಬೇರೊಂದು ಚೈತನ್ಯವನ್ನು ಒಪ್ಪುವುದು ಅತ್ಯಂತ ಅನುಚಿತ. ಹೀಗಾಗಿ ವೃತ್ತಿ ಪ್ರತಿಫಲಿತ ಚಿದ್ವಿಷಯತ್ವವು ಘಟಾದಿಗಳಲ್ಲಿ ಬಾರದಿರುವುದರಿಂದ ದೃಶ್ಯತ್ವ ಹೇತುವಿಗೆ ಅಸಿದ್ಧಿದೋಷ ಅಪರಿಹಾರ್ಯ.

**'ತಮೇವ ಭಾಂತಂ' ಇತಿ ಶ್ರುತ್ಯರ್ಥಸ್ತು ಪ್ರತಿಕರ್ಮ ವ್ಯವಸ್ಥಾ ಭಂಗೇ ವಕ್ಷ್ಯತೇ ।**

'ತಮೇವ ಭಾಂತಂ ಅನುಭಾತಿ ಸರ್ವಂ ತಸ್ಯಭಾಸಾ ಸರ್ವಮಿದಂ ವಿಭಾತಿ' ಎಂಬ ಶ್ರುತಿಯು ಅದ್ವೈತಿಯ ಪ್ರಕಾರ 'ಪ್ರಪಂಚಾರೋಪಾಧಿಷ್ಠಾನವಾದ ಬ್ರಹ್ಮಚೈತನ್ಯವು ವೃತ್ತಿಪ್ರತಿಫಲಿತ ಚೈತನ್ಯದಿಂದ ಅಭಿವ್ಯಕ್ತವಾದಾಗ ಅದರ ಬೆಳಕಿನಿಂದ ಈ ಪ್ರಪಂಚ ಎಲ್ಲವೂ ಬೆಳಗುತ್ತದೆ' ಎಂದು ಹೇಳುತ್ತದೆ. ಆದರೆ ಇದು ಶ್ರುತ್ಯರ್ಥವಲ್ಲ. 'ಅಪಿ ಸ್ಮರ್ಯತೇ' (ಬ್ರಹ್ಮಸೂತ್ರ 1.3.23) ಎಂಬ ಸೂತ್ರದಲ್ಲಿ ಶಾಂಕರಭಾಷ್ಯವು

'ಯದಾದಿತ್ಯಗತಂ ತೇಜೋ ಜಗದ್ ಭಾಸಯತೇಽಖಿಲಂ

ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಂ' (ಗೀ.15.6.12)

ಎಂಬ ಗೀತಾವಾಕ್ಯದ ಆಧಾರ ತೋರಿಸಿ, 'ಸೂರ್ಯಚಂದ್ರಾದಿ ಜ್ಯೋತಿಗಳೆಲ್ಲಕ್ಕೂ ಪರಬ್ರಹ್ಮನೇ ಪ್ರಕಾಶದಾಯಕ' ಎಂದು ಅರ್ಥಹೇಳಿದೆ ಎಂದು ಮುಂತಾಗಿ ಪ್ರತಿಕರ್ಮವ್ಯವಸ್ಥಾಭಂಗ ಪ್ರಕರಣದಲ್ಲಿ ಹೇಳುತ್ತೇವೆ. (ನೋಡಿ: ನ್ಯಾಯಾಮೃತಾಮೋದ-ಶ್ರುತ್ಯರ್ಥವಿಚಾರ, ಪು.35)

**ಚೈತನ್ಯಾವಿಷಯಸ್ಯಾಪಿ ಆಪರೋಕ್ಷ್ಯಂ ಚೈತನ್ಯಾಭಿವ್ಯಂಜಕತ್ವಾರ್ಥಂ ಆವಶ್ಯಕೇನ ಇಂದ್ರಿಯಜನ್ಯತ್ವ ಪ್ರಯುಕ್ತೇನ ವೃತ್ತಿಗತೇನ ಸಾಕ್ಷಾತ್ಕಾರತ್ವರೂಪ ವಿಶೇಷೇಣೈವ ಉಪಪನ್ನಂ। ಇಚ್ಛಾದಿ ವೃತ್ತ್ಯನಿಷ್ಠೇನ ಪರೋಕ್ಷ ವೃತ್ತಿಗತೇನ ಜ್ಞಾನತ್ವರೂಪ ವಿಶೇಷೇಣ ವಿಷಯಸ್ಯ ಜ್ಞಾತತ್ವವತ್, ಸ್ಮೃತ್ಯಾದ್ಯನಿಷ್ಠೇನ ಅನುಭವಾದಿಗತೇನ ವಿಶೇಷೇಣ ತದ್ವಿಷಯಸ್ಯ ಅನುಭೂತತ್ವ ಅನುಮಿತತ್ವಾದಿವಚ್ಚ।**

'ಘಟಾದಿಗಳಿಗೆ ಪ್ರಮಾಣಸಿದ್ಧವಾದ ಆಪರೋಕ್ಷ್ಯವನ್ನು ನಿರ್ವಾಹಮಾಡಲು ಅಪರೋಕ್ಷೈಕರಸವಾದ ವೃತ್ತಿ ಪ್ರತಿಫಲಿತ ಚೈತನ್ಯ ವಿಷಯತ್ವವು ಆವಶ್ಯಕ. ಆದರಿಂದ ಚಿದ್ವಿಷಯತ್ವವಿರುವುದರಿಂದ ದೃಶ್ಯತ್ವಹೇತುವಿಗೆ ಅಸಿದ್ಧಿ ದೋಷವಿಲ್ಲ' ಎಂದು ಅದ್ವೈತಿ ಹೇಳುತ್ತಾನೆ. ಆದರೆ ಘಟಾದಿಗಳ ಅಪರೋಕ್ಷತ್ವವು ಚೈತನ್ಯವಿಷಯತ್ವವಿಲ್ಲದೆಯೆ ನಿರ್ವಾಹವಾಗುತ್ತದೆ. ವೃತ್ತಿಯು ಚೈತನ್ಯಾಭಿವ್ಯಂಜಕವಾಗಲು ಇಂದ್ರಿಯಜನ್ಯತ್ವ ಪ್ರಯುಕ್ತವಾಗಿ ವೃತ್ತಿಯಲ್ಲಿ ಸ್ವಾಭಾವಿಕವಾಗಿ ಸಾಕ್ಷಾತ್ಕಾರತ್ವರೂಪ ವಿಶೇಷವಿದೆ. ಇಲ್ಲದಿದ್ದರೆ ಪರೋಕ್ಷವೃತ್ತಿಯಿಂದಲೂ ಚೈತನ್ಯಾಭಿವ್ಯಕ್ತಿ ಉಂಟಾದೀತು. ಈ ಸಾಕ್ಷಾತ್ಕಾರತ್ವರೂಪವಾದ ವೃತ್ತಿಗತ ವಿಶೇಷವೇ ವಿಷಯಗತ ಅಪರೋಕ್ಷತ್ವಕ್ಕೆ ಪ್ರಯೋಜಕವಾಗಬಹುದು. ಅದಕ್ಕೆ ವಿಷಯವು ಚಿದ್ವಿಷಯವಾಗಬೇಕಿಲ್ಲ. ಇದಕ್ಕೆ ದೃಷ್ಟಾಂತಗಳು— ವಿಷಯದಲ್ಲಿ ಜ್ಞಾತತ್ವಕ್ಕೆ ಪ್ರಯೋಜಕವು, ಇಚ್ಛಾದಿರೂಪ ಅಂತಃಕರಣವೃತ್ತಿಯಲ್ಲಿಲ್ಲದ ಪರೋಕ್ಷ ವೃತ್ತಿಗತವಾದ ಜ್ಞಾನತ್ವರೂಪ ವಿಶೇಷ. ವಿಷಯದಲ್ಲಿ ಅನುಭೂತತ್ವಕ್ಕೆ ಪ್ರಯೋಜಕವು ಸ್ಮೃತಿಯಲ್ಲಿಲ್ಲದ ಅನುಭವಗತ

ವಾದ ಅನುಭವತ್ವರೂಪ ವಿಶೇಷ. ವಿಷಯದಲ್ಲಿ ಅನುಮಿತತ್ವಕ್ಕೆ ಪ್ರಯೋಜಕವು, ಪ್ರತ್ಯಕ್ಷಾದಿಗಳಲ್ಲಿಲ್ಲದ ಅನುಮಿತಿಗತವಾದ ಅನುಮಿತಿತ್ವ ರೂಪವಿಶೇಷ.

**ಅನ್ಯಥಾ ಪರೋಕ್ಷತ್ವಾಪರೋಕ್ಷತ್ವೇ ಏಕಜ್ಞಾನತ್ವ ವ್ಯಾಪ್ಯೇ ನ ಸ್ಯಾತಾಂ ।**

ಇಂದ್ರಿಯಜನ್ಯವಾದ ವೃತ್ತಿಯಲ್ಲಿಯೂ ಸ್ವಾಭಾವಿಕವಾಗಿ ಸಾಕ್ಷಾತ್ಕಾರತ್ವರೂಪವಾದ ವಿಶೇಷವಿದೆ ಎಂದು ಒಪ್ಪದಿದ್ದರೆ, ಸಾಕ್ಷಾದಪರೋಕ್ಷ ಚೈತನ್ಯ ವಿಷಯತ್ವ ಪ್ರಯುಕ್ತವಾಗಿ ಔಪಚಾರಿಕವಾದ ಅಪರೋಕ್ಷತ್ವಮಾತ್ರವಿದೆ ಎಂದು ಒಪ್ಪಿದರೆ, ಜ್ಞಾನಕಾರಣಕಜ್ಞಾನತ್ವರೂಪ ಪರೋಕ್ಷತ್ವವೂ, ಪರೋಕ್ಷಜ್ಞಾನಭಿನ್ನತ್ವರೂಪ ಅಪರೋಕ್ಷತ್ವವೂ ಎರಡೂ ಒಂದು ಜ್ಞಾನತ್ವಕ್ಕೆ ವ್ಯಾಪ್ಯವೆನ್ನುವುದು ಕೂಡಲಾರದು. ಅದ್ವೈತಮತದಲ್ಲಿ ವೃತ್ತಿ ಮತ್ತು ಚೈತನ್ಯಗಳಲ್ಲಿ ಒಂದು ಜ್ಞಾನತ್ವವಿಲ್ಲ. ಚೈತನ್ಯದಲ್ಲಿ ಜ್ಞಪ್ತಿರೂಪವಾದ ಮುಖ್ಯಜ್ಞಾನತ್ವ. ವೃತ್ತಿಯಲ್ಲಿ ಜ್ಞಪ್ತಿಕಾರಣತ್ವರೂಪವಾದ ಔಪಚಾರಿಕ ಜ್ಞಾನತ್ವ. ಪರೋಕ್ಷತ್ವವು ಔಪಚಾರಿಕಜ್ಞಾನತ್ವಕ್ಕೇ ವ್ಯಾಪ್ಯ. ಅಪರೋಕ್ಷತ್ವವು ಮುಖ್ಯಜ್ಞಾನತ್ವಕ್ಕೇ ವ್ಯಾಪ್ಯ. ಇದು ಸರಿಯಲ್ಲ. 'ಜ್ಞಾನಂ ದ್ವಿವಿಧಂ, ಪರೋಕ್ಷಂ ಅಪರೋಕ್ಷಂ ಚ' ಎಂದು ಮಹರ್ಷಿಗಳು ವಿಭಾಗ ಮಾಡಿದ್ದು, ಸರ್ವಶಾಸ್ತ್ರಕಾರರೂ ಅಂಗೀಕರಿಸಿದ್ದು ಅಯುಕ್ತವೆಂದಾದೀತು. ಇಂದ್ರಿಯಜನ್ಯವೃತ್ತಿಯಲ್ಲಿ ಸ್ವಾಭಾವಿಕ ಅಪರೋಕ್ಷತ್ವವನ್ನು ಒಪ್ಪಿದರೆ ಪರೋಕ್ಷತ್ವ ಅಪರೋಕ್ಷತ್ವಗಳೆರಡೂ ಒಂದು ವೃತ್ತಿನಿಷ್ಠಜ್ಞಾನತ್ವಕ್ಕೆ ವ್ಯಾಪ್ಯವಾಗುವುವು.

ಇಂದ್ರಿಯಜನ್ಯವೃತ್ತ್ಯತಿರಿಕ್ತವಾಗಿ ಚೈತನ್ಯರೂಪ ಅಪರೋಕ್ಷಜ್ಞಾನದಲ್ಲಿಯೇ ಪ್ರಮಾಣವಿಲ್ಲದ್ದರಿಂದ ಚೈತನ್ಯಗತ ಅಪರೋಕ್ಷತ್ವಕ್ಕೆ ವೃತ್ತಿಗತ ಜ್ಞಾನತ್ವವ್ಯಾಪ್ಯತ್ವ ಬರುವುದಿಲ್ಲವೆಂಬ ಅನುಪಪತ್ತಿ ಇಲ್ಲ.

❖❖❖

**न पञ्चमः । आत्मनोऽपि स्वप्रकाशत्वाद्धितीयत्वादि-विशिष्टव्यवहारे तदपेक्षानियमात् । नन्वात्मनि विशिष्टव्यवहारे विशेषणोपनायकमानापेक्षानियमेऽपि स्वरूपमात्रव्यवहारे तदन-पेक्षेति चेन्न । घटादावपि तथेत्यसिद्धेः ।**

**ननु घटादौ स्वरूपमात्रव्यवहार एव नास्ति, आत्मनि तु सुषुप्तावस्तीति चेन्न । एतावन्तं कालं सुखमहमस्वाप्समिति परामर्शेन तस्य विशिष्टत्वेनैव सिद्धेः ।**

**नन्वात्मनि विशिष्टव्यवहारे तदपेक्षायामपि न विशेष्यांशे तदपेक्षा । स्वप्रकाशत्वात् । घटादौ तदंशेऽपीति चेन्न ।**

**नियतिपदवैयर्थ्यात् । आसंसारमज्ञानावृतस्य शुद्धस्य स्वव्यवहारे अनधिगतार्थबोधकवेदान्तजन्याज्ञाननिवर्तकवृत्त्यपेक्षानियमाच्च । वृत्त्यन्यसंविदपेक्षायाश्च तव नित्यातीन्द्रिये मम घटादावप्यभावादित्युक्तत्वाच्च । नच घटादावपि वृत्त्याऽज्ञाने निवृत्ते व्यवहारार्थं संविदन्तरापेक्षा अनुभूयते । एतेन स्वव्यवहारे स्वातिरिक्तस्वावच्छिन्नसंवित्सापेक्षत्वं दृश्यत्वमिति निरस्तम् ।**

ननु स्वातिरेकिसंविदपेक्षेत्यत्र संवित्पदेन किं वृत्तिर्विवक्षिता किंवा चैतन्यमिति विकल्प्य तत्राद्यं निराकरोति **आत्मनोऽपीति । घटादावपीति ।** घटादावपि विशिष्टव्यवहारे तदतिरिक्तसंविदपेक्षानियमेऽपि निर्विकल्पकरूपे तत्स्वरूपव्यवहारे न तदपेक्षेत्यसिद्धिरित्यर्थः । **नन्विति ।** निर्विकल्पके प्रमाणाभावादिति भावः । **न विशेष्यांश इति ।** विशेषणांशे साध्यस्यापि सत्त्वान्न व्यभिचार इति भावः । **नियतीति ।** व्यभिचारावारकत्वादिति भावः । ननु चैतन्यस्वरूपमात्रव्यवहारस्याधुनातनस्य स्वातिरेकि संविदपेक्षत्वात् तत्र व्यभिचारवारणायैव नियतिपदमिति न तद्वैयर्थ्यमित्यत आह **आसंसारमिति ।** अज्ञाननिवृत्यनन्तरं तादृशचैतन्यगोचरव्यवहारे मानाभावात् नियतिपदसत्त्वेऽपि व्यभिचारतादवस्थ्येन तद्वैयर्थ्यं तदवस्थमिति भावः । द्वितीयं निराह **वृत्त्यन्यसंविदपेक्षायाश्चेति । एतेनेति ।** तव नित्यातीन्द्रिये मम घटादावपि स्वावच्छिन्न संवित्सापेक्षत्वाभावेनेत्यर्थः ।

❖❖❖

## ಸ್ವವ್ಯವಹಾರೇ ಸ್ವಾತಿರೇಕಿ ಸಂವಿದಪೇಕ್ಷಾನಿಯತಿಯು ದೃಶ್ಯತ್ವವಲ್ಲ

**ನ ಪಂಚಮಃ । ಆತ್ಮನೋಽಪಿ ಸ್ವಪ್ರಕಾಶತ್ವ ಅದ್ವಿತೀಯತ್ವಾದಿ ವಿಶಿಷ್ಟವ್ಯವಹಾರೇ ತದಪೇಕ್ಷಾ ನಿಯಮಾತ್ ।**

ಸ್ವವ್ಯವಹಾರೇ ಸ್ವಾತಿರೇಕಿ ಸಂವಿದಪೇಕ್ಷಾ ನಿಯತಿಯು ದೃಶ್ಯತ್ವವೆಂಬ ಐದನೇ ಪಕ್ಷವೂ ಸರಿಯಲ್ಲ. ಆತ್ಮನಿಗೂ ಸ್ವಪ್ರಕಾಶತ್ವ ಅದ್ವಿತೀಯತ್ವಾದಿ ವಿಶಿಷ್ಟ ವ್ಯವಹಾರದಲ್ಲಿ ವಿಶೇಷಣ ವಿಷಯಕವಾದ ಸ್ವಾತಿರೇಕಿಯಾದ ವೃತ್ತಿಯ ಅಪೇಕ್ಷೆ ನಿಯಮೇನ ಇದೆ. ಆದರಿಂದ ದೃಶ್ಯತ್ವಹೇತುವಿಗೆ ಆತ್ಮನಲ್ಲಿ ವ್ಯಭಿಚಾರ.

**ನನು ಆತ್ಮನಿ ವಿಶಿಷ್ಟ ವ್ಯವಹಾರೇ ವಿಶೇಷಣೋಪನಾಯಕ ಮಾನಾಪೇಕ್ಷಾ ನಿಯಮೇಽಪಿ ಸ್ವರೂಪ ಮಾತ್ರ ವ್ಯವಹಾರೇ ತದನಪೇಕ್ಷಾ ಇತಿ ಚೇನ್ನ। ಘಟಾದಾವಪಿ ತಥಾ ಇತಿ ಅಸಿದ್ಧೇಃ।**

'ಆತ್ಮನಲ್ಲಿ ವಿಶಿಷ್ಟವ್ಯವಹಾರ ಉಂಟಾಗಲು ವಿಶೇಷಣದ ಉಪನೀತ ಭಾನಕ್ಕೆ ಉಪನಾಯಕವಾದ ಸ್ವಾತಿರೇಕಿಯಾದ ಪ್ರಮಾಣದ ಅಪೇಕ್ಷೆ ನಿಯಮೇನ ಇದ್ದರೂ ಸ್ವರೂಪಮಾತ್ರ ವ್ಯವಹಾರ ಉಂಟಾಗಲು ಅಂಥ ಪ್ರಮಾಣದ ಅಪೇಕ್ಷೆ ಇಲ್ಲದ್ದರಿಂದ ಆತ್ಮನಲ್ಲಿ ದೃಶ್ಯತ್ವವಿಲ್ಲ, ವ್ಯಭಿಚಾರವಿಲ್ಲ'—ಹೀಗೆ ಹೇಳಿದರೆ ಇದೂ ಸರಿಯಲ್ಲ. ಘಟಾದಿಗಳಲ್ಲಿಯೂ ಘಟತ್ವಾದಿ ವಿಶಿಷ್ಟ ವ್ಯವಹಾರಕ್ಕೆ ವಿಶೇಷಣವಾದ ಘಟತ್ವಾದಿ ಉಪನಾಯಕ ಪ್ರಮಾಣಾಂತರದ ಅಪೇಕ್ಷೆ ಹೊರತು ಸ್ವರೂಪ ಮಾತ್ರ ವ್ಯವಹಾರದಲ್ಲಿ ಅದರ ಅಪೇಕ್ಷೆ ಇಲ್ಲ ಎನ್ನಲು ಬರುವುದರಿಂದ ಘಟಾದಿಗಳಲ್ಲಿ ದೃಶ್ಯತ್ವವಿಲ್ಲವೆಂದು ಅಸಿದ್ಧಿ.

**ನನು— ಘಟಾದೌ ಸ್ವರೂಪಮಾತ್ರ ವ್ಯವಹಾರ ಏವ ನಾಸ್ತಿ। ಆತ್ಮನಿ ತು ಸುಷುಪ್ತಾವಸ್ತಿ–ಇತಿ ಚೇನ್ನ। ಏತಾವಂತಂ ಕಾಲಂ ಸುಖಮಹಮಸ್ವಾಪ್ಸಂ ಇತಿ ಪರಾಮರ್ಶೇನ ತಸ್ಯ ವಿಶಿಷ್ಟತ್ವೇನೈವ ಸಿದ್ಧೇಃ।**

'ನಿರ್ವಿಕಲ್ಪಕದಲ್ಲಿ ಪ್ರಮಾಣವಿಲ್ಲದ್ದರಿಂದ ಘಟಾದಿ ವಿಷಯದಲ್ಲಿ ಸ್ವರೂಪಮಾತ್ರವಿಷಯಕ ವ್ಯವಹಾರವೇ ಇಲ್ಲ. ಆತ್ಮನ ವಿಷಯದಲ್ಲಿ ಸುಷುಪ್ತಿಕಾಲದಲ್ಲಿ ಸ್ವರೂಪ ಮಾತ್ರ ವಿಷಯಕ ವ್ಯವಹಾರವಿದೆ'—ಹೀಗೆ ಹೇಳುವುದು ಸರಿಯಲ್ಲ. 'ಇಷ್ಟು ಹೊತ್ತು ನಾನು ಸುಖವಾಗಿ ನಿದ್ದೆ ಮಾಡಿದೆನೆ'ಂದು ಕಾಲಾದಿ ವಿಶಿಷ್ಟವಾಗಿಯೇ ನೆನಪು ಮಾಡಿಕೊಳ್ಳುವುದರಿಂದ ಸೌಷುಪ್ತಿಕವ್ಯವಹಾರವು ವಿಶಿಷ್ಟ ವಿಷಯಕವೇ ಹೊರತು ಸ್ವರೂಪಮಾತ್ರ ವಿಷಯಕವಲ್ಲವೆಂದು ಸಿದ್ಧವಾಗುವುದು.

**ನನು ಆತ್ಮನಿ ವಿಶಿಷ್ಟವ್ಯವಹಾರೇ ತದಪೇಕ್ಷಾಯಾಮಪಿ ನ ವಿಶೇಷ್ಯಾಂಶೇ ತದಪೇಕ್ಷಾ। ಸ್ವಪ್ರಕಾಶತ್ವಾತ್। ಘಟಾದೌ ತದಂಶೇಽಪಿ ಇತಿ ಚೇನ್ನ। ನಿಯತಿಪದ ವೈಯರ್ಥ್ಯಾತ್।**

'ಆತ್ಮನಲ್ಲಿ ವಿಶಿಷ್ಟವ್ಯವಹಾರದಲ್ಲಿ ಸ್ವಾತ್ತಿರಿಕ್ತ ಸಂವಿದಪೇಕ್ಷಾ ಇದ್ದರೂ ವಿಶೇಷ್ಯಾಂಶದಲ್ಲಿ ಅದರ ಅಪೇಕ್ಷೆ ಇಲ್ಲ. ಸ್ವಪ್ರಕಾಶವಾದ್ದರಿಂದ. ವಿಶೇಷಣಾಂಶದಲ್ಲಿ ಅದರ ಅಪೇಕ್ಷಾ ಇದ್ದರೂ ಸಾಧ್ಯವಾದ ಮಿಥ್ಯಾತ್ವವೂ ಅದರಲ್ಲಿ ಇರುವುದರಿಂದ ವ್ಯಭಿಚಾರವಿಲ್ಲ. ಘಟಾದಿಗಳಲ್ಲಿ ವಿಶೇಷ್ಯಾಂಶದಲ್ಲಿಯೂ ಅದರ ಅಪೇಕ್ಷೆ ಇದೆ. ಅದರಿಂದ ಅಸಿದ್ಧಿ ಇಲ್ಲ'—ಹೀಗೆ ಹೇಳಿದರೆ 'ಸ್ವಾತಿರೇಕಿ ಸಂವಿದಪೇಕ್ಷಾ ನಿಯತಿ'ಯೇ ದೃಶ್ಯತ್ವವೆಂದು ನಿಯತಿ ಪದವು ವ್ಯರ್ಥ, ವ್ಯಭಿಚಾರ ಅವಾರಕವಾಗುವುದರಿಂದ. ವ್ಯಭಿಚಾರ ಅವಾರಕವಾದ ಅಂಶ ಹೇತುವಿನಲ್ಲಿರುವುದರಿಂದ ವ್ಯಾಪ್ಯತ್ವಾಸಿದ್ಧಿ ಬಂದಿತು.

**ಆ ಸಂಸಾರಂ ಅಜ್ಞಾನಾವೃತಸ್ಯ ಶುದ್ಧಸ್ಯ ಸ್ವವ್ಯವಹಾರೇ ಅನಧಿಗತಾರ್ಥಬೋಧಕ ವೇದಾಂತಜನ್ಯ ಅಜ್ಞಾನನಿವರ್ತಕ ವೃತ್ತ್ಯಪೇಕ್ಷಾನಿಯಮಾಚ್ಚ।**

'ಚೈತನ್ಯ ಸ್ವರೂಪಮಾತ್ರ ವಿಷಯದಲ್ಲಿ ಸ್ಫುರಣ ರೂಪ ವ್ಯವಹಾರವಿದೆ. ಅದು ಸ್ವಾತಿರೇಕಿ ವೇದಾಂತಜನ್ಯ ಸಂವಿದಪೇಕ್ಷವಾಗಿದೆ. ಮಿಥ್ಯಾತ್ವರೂಪಸಾಧ್ಯವು ಸ್ವರೂಪದಲ್ಲಿಲ್ಲ, ಸ್ವಾತಿರೇಕಿ ಸಂವಿದಪೇಕ್ಷೆ ಇದೆ ಎಂದು ವ್ಯಭಿಚಾರ ಬರುತ್ತದೆ. ಅದಕ್ಕೆ ನಿಯತಿಪದ ಹಾಕಿದ್ದೇವೆ. ಸುಷುಪ್ತಿಯಲ್ಲಿ ಸ್ವಾತಿರೇಕಿ ಸಂವಿದಪೇಕ್ಷಾ ಇಲ್ಲವಾದ್ದರಿಂದ ಅಪೇಕ್ಷಾನಿಯತಿರೂಪ ಹೇತುವಿಲ್ಲವೆಂದು ವ್ಯಭಿಚಾರ ಪರಿಹಾರವಾಗುತ್ತದೆ. ಅದರಿಂದ ವೈಯರ್ಥ್ಯವಿಲ್ಲ' —ಎಂದು ಹೇಳಿದರೆ ಅದೂ ಸರಿಯಲ್ಲ. ಸಂಸಾರವಿರುವಷ್ಟು ಕಾಲದಲ್ಲೆಲ್ಲ ಸುಷುಪ್ತಿಕಾಲದಲ್ಲಿಯೂ ಕೂಡ ಈಗತಾನೆ ಹೇಳಿದಂತೆ ಶುದ್ಧಸ್ವರೂಪವು ಅಜ್ಞಾನಾವೃತವಾಗಿರುವುದರಿಂದ ವಿಶೇಷ್ಯಾಂಶದಲ್ಲಿ ಸ್ವವ್ಯವಹಾರವು, ಅನಧಿಗತಾರ್ಥಬೋಧಕವಾದ ವೇದಾಂತ ಜನ್ಯವಾಗಿದ್ದು ಅಜ್ಞಾನ ನಿವರ್ತಕವಾಗುವ ವೃತ್ತಿಯ ಅಪೇಕ್ಷೆ ನಿಯಮೇನ ಇರುತ್ತದೆ. ಸುಷುಪ್ತಿಕಾಲದಲ್ಲಿ ವೇದಾಂತಜನ್ಯ ವೃತ್ತಿ ಇಲ್ಲದೆಯೇ ವ್ಯವಹಾರ ಉಂಟೆಂದರೆ ವೇದಾಂತವು ಅಧಿಗತಾರ್ಥ ಬೋಧಕವಾಗಿ ಅಪ್ರಮಾಣವಾಗುತ್ತದೆ. ಅಜ್ಞಾನ ನಿವೃತ್ತಿಯಾದ ಅನಂತರ ಶುದ್ಧ ಚೈತನ್ಯವಿಷಯದಲ್ಲಿ ವ್ಯವಹಾರವೇ ಇಲ್ಲ. ಅದರಿಂದ ನಿಯತಿ ಪದ ಹಾಕಿದರೂ ವ್ಯಭಿಚಾರವೇ ಇದೆಯಾದ್ದರಿಂದ ನಿಯತಿಪದ ವ್ಯರ್ಥವೇ ಆಗಿದೆ.

**ವೃತ್ತ್ಯನ್ಯ ಸಂವಿದಪೇಕ್ಷಾಯಾಶ್ಚ ತವ ನಿತ್ಯಾತೀಂದ್ರಿಯೇ ಮಮ ಘಟಾದಾವಪಿ ಅಭಾವಾತ್ ಇತ್ಯುಕ್ತತ್ವಾಚ್ಚ ।**

'ಸ್ವಾತಿರೇಕಿಸಂವಿದಪೇಕ್ಷಾ' ಎಂಬಲ್ಲಿ ಸಂವಿತ್ ಎಂದರೆ ವೃತ್ತಿ ಎಂದು ವಿವಕ್ಷೆ ಮಾಡಿದಾಗ ಮಾತ್ರ ಹೀಗೆ ವೃತ್ತ್ಯಪೇಕ್ಷಾನಿಯಮಕ್ಕೆ ಚೈತನ್ಯಸ್ವರೂಪದಲ್ಲಿ ವ್ಯಭಿಚಾರ ಸರಿ. ಆದರೆ ಸಂವಿತ್ ಎಂದರೆ ವೃತ್ತ್ಯನ್ಯವಾದ ಚೈತನ್ಯರೂಪಜ್ಞಾನವನ್ನೇ ವಿವಕ್ಷೆಮಾಡುತ್ತೇವೆ. ಸ್ವಾತಿರೇಕಿ ಚೈತನ್ಯಸ್ವರೂಪಜ್ಞಾನದ ಅಪೇಕ್ಷೆಯು ಸ್ಫುರಣರೂಪ ಸ್ವವ್ಯವಹಾರದಲ್ಲಿ ಶುದ್ಧಚೈತನ್ಯಕ್ಕೆ ಇಲ್ಲ. ಸ್ಫುರಣರೂಪ ಸ್ವವ್ಯವಹಾರವು ಬ್ರಹ್ಮನ ವಿಷಯದಲ್ಲಿ ನಿತ್ಯಸಿದ್ಧವಾಗಿದೆ. ಅದಕ್ಕೆ ಸ್ವಾತಿರೇಕಿ ಚೈತನ್ಯದ ಅಪೇಕ್ಷೆ ಇಲ್ಲದ್ದರಿಂದ ವ್ಯಭಿಚಾರವಿಲ್ಲ' ಎಂದರೆ, ವೃತ್ತ್ಯನ್ಯ ಸಂವಿದಪೇಕ್ಷೆಯು ನಿನ್ನ ಅದ್ವೈತಮತದಲ್ಲಿ ನಿತ್ಯಾತೀಂದ್ರಿಯದ ಲ್ಲಿಲ್ಲ. ಅದರಿಂದ ಭಾಗಾಸಿದ್ಧಿ. ನನ್ನ ಮತದಲ್ಲಿ ಘಟಾದಿಗಳಲ್ಲಿಯೂ ಇಲ್ಲ. ವೃತ್ತಿಯಿಂದಲೇ ಸ್ವವ್ಯವಹಾರವೆಲ್ಲವೂ ಕೂಡುತ್ತದೆ. ಪ್ರತಿಫಲಿತ ಚೈತನ್ಯ ಅಥವಾ ತದಭಿವ್ಯಕ್ತ ಅಧಿಷ್ಠಾನ ಚೈತನ್ಯಗಳ ಅಪೇಕ್ಷೆ ಇಲ್ಲವೆಂದು ಹೇಳಿಯೇ ಇದ್ದೇವೆ. ಅದರಿಂದ ಅಸಿದ್ಧಿ.

**ನ ಚ ಘಟಾದಾವಪಿ ವೃತ್ತ್ಯಾ ಅಜ್ಞಾನೇ ನಿವೃತ್ತೇ ವ್ಯವಹಾರಾರ್ಥಂ ಸಂವಿದಂತರಾಪೇಕ್ಷಾ ಅನುಭೂಯತೇ ।**

ಆತ್ಮದಲ್ಲಿ ಹೇಗೋ ಹಾಗೇ ಘಟಾದಿಗಳಲ್ಲಿಯೂ ವೃತ್ತಿಯೇ ಅಜ್ಞಾನನಿವರ್ತಕವಾಗಿರುವುದ ರಿಂದ, ಅಜ್ಞಾನವು ಅದರಿಂದ ನಿವೃತ್ತವಾದಾಗ ಸ್ಫುರಣರೂಪ ಸ್ವವ್ಯವಹಾರಕ್ಕೆ ಅಜ್ಞಾನನಿವರ್ತಕವಲ್ಲದ ಇನ್ನೊಂದು ಚೈತನ್ಯರೂಪಜ್ಞಾನದ ಅಪೇಕ್ಷೆ ಇರುವುದು ಅನುಭವದಲ್ಲಿ ಕಂಡಿಲ್ಲ. ಅದು ಅಪ್ರಾಮಾಣಿಕ. ಅದರಿಂದ ಅಸಿದ್ಧಿ. 'ಘಟಾದಿ ಅಸ್ಫುರಣರೂಪವಾದ್ದರಿಂದ ಸ್ಫುರಣರೂಪ

ಸ್ವವ್ಯವಹಾರಕ್ಕೆ ಸ್ವಾತಿರಿಕ್ತಸಂವಿದಪೇಕ್ಷೆ ಇದೆ' ಎಂದು ಹಿಂದೇ ಹೇಳಿದ್ದೇನೆ' ಎಂದರೆ, 'ಘಟಾದಿಯೂ ಕೂಡ ಆತ್ಮದಂತೇ ಅಜ್ಞಾನಾವಿರೋಧಿ ಸ್ಫುರಣರೂಪವೆಂದೇಕೆ ಹೇಳಬಾರದು?' ಎಂದು ಆಗಲೇ ನಾನೂ ಕೇಳಿದ್ದೇನೆ!

**ಏತೇನ ಸ್ವವ್ಯವಹಾರೇ ಸ್ವಾತಿರಿಕ್ತ ಸ್ವಾವಚ್ಛಿನ್ನಸಂವಿತ್ಸಾಪೇಕ್ಷತ್ವಂ ದೃಶ್ಯತ್ವಂ ಇತಿ ನಿರಸ್ತಂ।**

'ಸ್ವವ್ಯವಹಾರದಲ್ಲಿ ಸ್ವಾತಿರಿಕ್ತವಾದ 'ಸ್ವಾವಚ್ಛಿನ್ನ'ವಾದ, ಅಂದರೆ ಸ್ವವಿಷಯಕವಾದ ಸಂವಿತ್ತಿನ ಅಪೇಕ್ಷೆ ನಿಯಮೇನ ಇರುವುದೇ ದೃಶ್ಯತ್ವ. ಬ್ರಹ್ಮನ ವಿಷಯದಲ್ಲಿ ಸ್ವರೂಪ ಚೈತನ್ಯಜ್ಞಾನವು ಸ್ವವಿಷಯಕವಲ್ಲ, ಕರ್ತೃಕರ್ಮವಿರೋಧದಿಂದ ಅದನ್ನು ನಾವು ಒಪ್ಪಿಲ್ಲ. ಹೀಗಾಗಿ ಸ್ವವಿಷಯಕತ್ವೇನ ಸ್ವರೂಪಚೈತನ್ಯಾತ್ಮಕ ಜ್ಞಾನವು ಸ್ಫುರಣರೂಪ ಸ್ವವ್ಯವಹಾರಕ್ಕೆ ಕಾರಣವಾಗಿಲ್ಲ. ಸ್ವವಿಷಯ ವ್ಯವಹಾರದಲ್ಲಿ ಸ್ವಾವಚ್ಛಿನ್ನ ಸಂವಿದಪೇಕ್ಷೆ ಇಲ್ಲದ್ದರಿಂದ ದೃಶ್ಯತ್ವವಿಲ್ಲ, ವ್ಯಭಿಚಾರವಿಲ್ಲ' ಎಂದು ಹೇಳಿದರೆ, ಅದು, ಆತ್ಮನಿಗೆ ವೇದಾಂತಜನ್ಯ ವೃತ್ತಿವ್ಯಾಪ್ಯತ್ವವಿದೆ ಎಂದು ನಾವು ಸಮರ್ಥಿಸಿದ್ದರಿಂದಲೇ ನಿರಸ್ತವಾಗಿದೆ.

❖❖❖

न षष्ठः । घटादौ विशेष्यवत्फलव्याप्यत्वाभावरूप-विशेषणस्याप्युक्तन्यायेन सत्त्वेनाविद्यादौ शुक्तिरूप्यादौ च विशेषणवद्विशेष्यस्यापि सत्त्वेन विशिष्टरूपस्वप्रकाशत्वव्यति-रेकरूपहेतोः पक्षैकदेशे दृष्टान्ते चाभावात् ।

अत्रोक्तं चित्सुखेन । ''शुक्तिरूप्यादौ विशेषणमस्ति, नतु विशेष्यम् । अध्यस्तत्वात् । अपरोक्षव्यवहारायोग्येऽपि तत्र तद्व्यवहारस्तु अधिष्ठानभूतसाक्षिगतापरोक्ष्याध्यासाद्युक्तः । इदमिति व्यवहारायोग्येऽपि तस्मिन्नधिष्ठानगतेदंत्वारोपादिदमिति व्यवहारवत् । यद्यपि घटादिरप्यध्यस्तः । तथापि तत्र सत्त्वमिवाऽऽपरोक्ष्यं व्यावहारिकम् । रूप्यादौ तु प्रातिभासिक''मिति । तन्न ।

सर्वव्यावहारिकोपादाने ब्रह्मज्ञानात्प्रागबाधिते श्रुत्यादिसिद्धे च व्यावहारिकेऽज्ञाने अंतःकरणादौ च योग्यत्वस्यापि व्यावहारिकत्वात् ।

**न ह्यापरोक्ष्यैकरसेन साक्षिणा साक्षाद्वेद्ये अज्ञानादावापरोक्ष्यं प्रातिभासिकम्, वृत्तिद्वारा तद्वेद्ये घटादौ तु व्यावहारिकमिति युक्तम् । शिष्टं स्वप्रकाशत्ववादे वक्ष्यते ।**

**उक्तन्यायेनेति ।** आवश्यकवृत्त्यैवोपपत्तौ तत्प्रतिफलितचैतन्यविषयत्वे मानाभावेनेत्यर्थः । ननु यथा शुक्तिरूप्यादिदृष्टान्ते स्वप्रकाशत्वाभावरूपसाधनवैकल्यं विशेष्याभावात् परिह्रियते तथैव घटादावप्युभयाभावप्रयुक्तविशिष्टाभावाङ्गीकारेणासिद्धिः किं न परिह्रियते ? अध्यस्तत्वहेतुना तत्रापि विशेष्याभावस्य साधयितुं शक्यत्वादिति शङ्कते **यद्यपीति ।** अपरोक्षव्यवहारायोग्यत्वसाधने नाध्यस्तत्वमात्रं हेतुः । किंत्वागन्तुकदोषप्रयुक्तभानत्वरूपप्रातिभासिकत्वम् । तच्च घटादौ नास्त्येव । तत्राध्यस्तत्वमात्रेण नत्साधने बाधश्चेत्यभिप्रेत्य परिहरति **तथापीति । योग्यत्वस्यापीति ।** अपरोक्षव्यवहारयोग्यत्वस्यापीत्यर्थः ।

❖❖❖

**ಅಸ್ವಪ್ರಕಾಶತ್ವವು ದೃಶ್ಯತ್ವವಲ್ಲ**

**ನ ಷಷ್ಠಃ। ಘಟಾದೌ ವಿಶೇಷ್ಯವತ್ ಫಲವ್ಯಾಪ್ಯತ್ವಾಭಾವರೂಪ ವಿಶೇಷಣಸ್ಯಾಪಿ ಉಕ್ತನ್ಯಾಯೇನ ಸತ್ತ್ವೇನ, ಅವಿದ್ಯಾದೌ ಶುಕ್ತಿರೂಪ್ಯಾದೌ ಚ ವಿಶೇಷಣವತ್ ವಿಶೇಷ್ಯಸ್ಯಾಪಿ ಸತ್ತ್ವೇನ ವಿಶಿಷ್ಟರೂಪ ಸ್ವಪ್ರಕಾಶತ್ವವ್ಯತಿರೇಕ ರೂಪಹೇತೋಃ ಪಕ್ಷೈಕದೇಶೇ ದೃಷ್ಟಾಂತೇ ಚ ಅಭಾವಾತ್ ।**

'ಫಲವ್ಯಾಪ್ಯತ್ವೇ ಸತಿ ಅಪರೋಕ್ಷವ್ಯವಹಾರಯೋಗ್ಯತ್ವಾಭಾವ'ರೂಪ ಅಸ್ವಪ್ರಕಾಶತ್ವವೆಂಬ ದೃಶ್ಯತ್ವವು ಮಿಥ್ಯಾತ್ವಕ್ಕೆ ಹೇತು ಎನ್ನುವ ಆರನೇ ಪಕ್ಷವೂ ಸರಿಯಲ್ಲ. ಘಟಾದಿಗಳಲ್ಲಿ ಭಾಗಾಸಿದ್ಧಿ ಬರುತ್ತದೆ. 'ಫಲವ್ಯಾಪ್ಯತ್ವವಿಶಿಷ್ಟವಾದ ಅಪರೋಕ್ಷ ವ್ಯವಹಾರಯೋಗ್ಯತ್ವ' ಎಂಬ ವಿಶಿಷ್ಟದಲ್ಲಿ ವಿಶೇಷ್ಯಾಂಶವಾದ ಅಪರೋಕ್ಷವ್ಯವಹಾರಯೋಗ್ಯತ್ವವು ಘಟಾದಿ ಐಂದ್ರಿಯಪದಾರ್ಥದಲ್ಲಿ ಇದೆ ಎನ್ನುವುದರಲ್ಲಿ ವಿವಾದವಿಲ್ಲ. ವಿಶೇಷಣಾಂಶವಾದ ಫಲವ್ಯಾಪ್ಯತ್ವವೂ ಘಟಾದಿಗಳಲ್ಲಿ ಇದೆ ಎಂದು ಉಕ್ತನ್ಯಾಯದಿಂದ ಸಿದ್ಧವೇ ಇದೆ. ಅಂದರೆ, ಅಜ್ಞಾನನಿವೃತ್ತಿಗೆ ಅವಶ್ಯವಾದ ವೃತ್ತಿಯಿಂದಲೇ ಅಪರೋಕ್ಷವ್ಯವಹಾರ ಕೂಡುವಾಗ ವೃತ್ತಿಪ್ರತಿಫಲಿತ ಚೈತನ್ಯರೂಪ ಫಲವ್ಯಾಪ್ಯತ್ವ ಬೇರೆ ಇದೆ ಎನ್ನುವಲ್ಲಿ ಪ್ರಮಾಣವಿಲ್ಲ ಎಂದು ಹಿಂದೆ ಹೇಳಿದ್ದೇವೆ. ಆದುದರಿಂದ ಫಲವ್ಯಾಪ್ಯತ್ವರೂಪ ವಿಶೇಷಣಾಂಶವೂ ಇದೆ. ಹೀಗಾಗಿ ವಿಶೇಷ್ಯವಿಶೇಷಣಾಂಶಗಳೆರಡೂ ಇರುವುದರಿಂದ

ವಿಶಿಷ್ಟಾಭಾವರೂಪ ಅಸ್ವಪ್ರಕಾಶತ್ವವೆಂಬ ದೃಶ್ಯತ್ವವು ಪಕ್ಷೈಕದೇಶವಾದ ಘಟಾದಿರೂಪ ಇಂದ್ರಿಯಪದಾರ್ಥಗಳಲ್ಲಿ ಭಾಗಾಸಿದ್ಧವಾಗಿದೆ.

ಅವಿದ್ಯಾ ಶುಕ್ತಿರೂಪ್ಯಾದಿ ಪ್ರಾತಿಭಾಸಿಕ ಪದಾರ್ಥಗಳು ದೃಷ್ಟಾಂತವಾಗಿವೆ. ಅವೆಲ್ಲವೂ ಅವಿದ್ಯಾವೃತ್ತಿಪ್ರತಿಫಲಿತ ಚೈತನ್ಯ ರೂಪ ಸಾಕ್ಷಿವೇದ್ಯವೆ ಹೊರತು ಅಂತಃಕರಣ ವೃತ್ತಿಪ್ರತಿಫಲಿತ ಚೈತನ್ಯರೂಪ ಫಲವ್ಯಾಪ್ಯವಲ್ಲ. ಅಪರೋಕ್ಷ ವ್ಯವಹಾರ ಯೋಗ್ಯವಾಗಿವೆ. ಹೀಗಾಗಿ ಫಲಾವ್ಯಾಪ್ಯತ್ವರೂಪ ವಿಶೇಷಣವೂ ಅಪರೋಕ್ಷ ವ್ಯವಹಾರ ಯೋಗ್ಯತ್ವರೂಪ ವಿಶೇಷ್ಯವೂ ಇರುವುದರಿಂದ ವಿಶಿಷ್ಟಾಭಾವರೂಪ ದೃಶ್ಯತ್ವವಿಲ್ಲವೆಂದು ಸಾಧನವೈಕಲ್ಯದೋಷ.

**ಅತ್ರೋಕ್ತಂ ಚಿತ್ಸುಖೇನ—'ಶುಕ್ತಿರೂಪ್ಯಾದೌ ವಿಶೇಷಣಮಸ್ತಿ, ನ ತು ವಿಶೇಷ್ಯಂ। ಅಧ್ಯಸ್ತತ್ವಾತ್। ಅಪರೋಕ್ಷವ್ಯವಹಾರಾಯೋಗ್ಯೇಽಪಿ ತತ್ರ ತದ್‌ವ್ಯವಹಾರಸ್ತು ಅಧಿಷ್ಠಾನಭೂತ ಸಾಕ್ಷಿಗತ ಆಪರೋಕ್ಷ್ಯಾಧ್ಯಾಸಾದ್ ಯುಕ್ತಃ। ಇದಮಿತಿ ವ್ಯವಹಾರಾಯೋಗ್ಯೇಽಪಿ ತಸ್ಮಿನ್ ಅಧಿಷ್ಠಾನಗತ ಇದಂತ್ವಆರೋಪಾತ್ ಇದಮಿತಿ ವ್ಯವಹಾರವತ್। ಯದ್ಯಪಿ ಘಟಾದಿರಪಿ ಅಧ್ಯಸ್ತಃ। ತಥಾಪಿ ತತ್ರ ಸತ್ವಮಿವ ಆಪರೋಕ್ಷ್ಯಂ ವ್ಯಾವಹಾರಿಕಂ। ರೂಪ್ಯಾದೌ ತು ಪ್ರಾತಿಭಾಸಿಕಂ' ಇತಿ। ತನ್ನ।**

ದೃಷ್ಟಾಂತದಲ್ಲಿ ಸಾಧನವೈಕಲ್ಯವನ್ನು ಹೇಳಲು, 'ಶುಕ್ತಿರೂಪ್ಯಾದಿಗಳಲ್ಲಿ ಅಪರೋಕ್ಷ ವ್ಯವಹಾರಯೋಗ್ಯತ್ವವಿದೆ' ಎಂದು ಹೇಳಿದ್ದೇವೆ. ಈ ವಿಷಯದಲ್ಲಿ ಚಿತ್ಸುಖರ ಆಕ್ಷೇಪ ಹೀಗಿದೆ— ಶುಕ್ತಿರೂಪ್ಯಾದಿಗಳಲ್ಲಿ ಅಸ್ವಪ್ರಕಾಶತ್ವರೂಪ ದೃಶ್ಯತ್ವವಿಲ್ಲವೆಂದು ಸಾಧನವೈಕಲ್ಯ ಹೇಳಿದ್ದು ಸರಿಯಲ್ಲ. ಫಲಾವ್ಯಾಪ್ಯತ್ವವಿಶಿಷ್ಟ ಅಪರೋಕ್ಷವ್ಯವಹಾರಯೋಗ್ಯತ್ವವೆಂಬ ವಿಶಿಷ್ಟದಲ್ಲಿ ಫಲಾವ್ಯಾಪ್ಯತ್ವರೂಪ ವಿಶೇಷಣಾಂಶವಿದ್ದರೂ ಅಪರೋಕ್ಷವ್ಯವಹಾರಯೋಗ್ಯತ್ವರೂಪ ವಿಶೇಷ್ಯಾಂಶವಿಲ್ಲದ್ದರಿಂದ ವಿಶೇಷ್ಯಾಭಾವವೇ ಬರುತ್ತದೆ. ಶುಕ್ತಿರೂಪ್ಯವು ಅಧ್ಯಸ್ತವಾಗಿದ್ದು ವ್ಯವಹಾರಕಾಲದಲ್ಲಿಯೇ ಬಾಧ್ಯವಾಗಿದೆ. ಅದರಿಂದ ವ್ಯವಹಾರದಶಾದಲ್ಲಿಯೇ ಅಪರೋಕ್ಷವ್ಯವಹಾರಯೋಗ್ಯತ್ವವಿಲ್ಲ.

ಹಾಗಾದರೆ 'ರೂಪ್ಯವನ್ನು ಪ್ರತ್ಯಕ್ಷವಾಗಿ ಕಾಣುತ್ತಿದ್ದೇನೆ' 'ಶುಕ್ತಿರೂಪ್ಯವಿಷಯದಲ್ಲಿ ಅಪರೋಕ್ಷವಿದೆ' ಎಂದು ಅನುವ್ಯವಸಾಯರೂಪ ವ್ಯವಹಾರ ಹೇಗೆ? ಎಂದರೆ, ರಜತದಲ್ಲಿ ಪುರೋವೃತ್ತಿತ್ವವು ವ್ಯವಹಾರಕಾಲದಲ್ಲಿಯೇ ಬಾಧಿತವಾದ್ದರಿಂದ 'ಇದಂ ರೂಪ್ಯಂ' ಎಂದು ಅಪರೋಕ್ಷವ್ಯವಹಾರಕ್ಕೆ ಅದು ಅಯೋಗ್ಯವಾಗಿದ್ದರೂ 'ಇದು' ಎಂದು ಅಪರೋಕ್ಷ ವ್ಯವಹಾರವನ್ನು ನಾವು ಮಾಡುವುದು, ಅಧಿಷ್ಠಾನಭೂತ ಸಾಕ್ಷಿಗತ ಪುರೋವೃತ್ತಿತ್ವದ ಆರೋಪದಿಂದ ಯುಕ್ತವಾಗಿದೆ. 'ಇದಂ' ಎಂಬ ಆಕಾರದ ಅವಿದ್ಯಾವೃತ್ತಿ ಪ್ರತಿಬಿಂಬಿತ ಸಾಕ್ಷಿಚೈತನ್ಯದಲ್ಲಿ 'ಇದಂತ್ವ' ಅಂದರೆ ಪುರೋವೃತ್ತಿತ್ವವಿದೆ. ಅದನ್ನು ರೂಪ್ಯದಲ್ಲಿ ಅಧ್ಯಾಸಮಾಡಿ 'ಇದು ರೂಪ್ಯ'ವೆಂದು ವ್ಯವಹಾರ ಮಾಡುತ್ತೇವೆ. ಹಾಗೇ 'ರೂಪ್ಯವು ಪ್ರತ್ಯಕ್ಷವಾಗಿದೆ' ಎಂಬ ಆಪರೋಕ್ಷ್ಯವ್ಯವಹಾರವೂ ಕೂಡ ಆಪರೋಕ್ಷ್ಯಾಕಾರಾವಿದ್ಯಾವೃತ್ತಿ ಪ್ರತಿಬಿಂಬಿತ ಸಾಕ್ಷಿಚೈತನ್ಯದಲ್ಲಿ ಇರುವ ಅಪರೋಕ್ಷತ್ವವನ್ನು ರೂಪ್ಯದಲ್ಲಿ ಆರೋಪಿಸಿವುದರಿಂದ ಯುಕ್ತವಾಗುತ್ತದೆ.

ಯದ್ಯಪಿ ಶುಕ್ತಿರೂಪ್ಯದಂತೆ ಘಟಾದಿಯೂ ಅಧ್ಯಸ್ತವೆ. ಅಧ್ಯಸ್ತತ್ವಹೇತುವಿನಿಂದ ರೂಪ್ಯಾದಿಗಳಲ್ಲಿ ಅಪರೋಕ್ಷವ್ಯವಹಾರ ಯೋಗ್ಯತೆ ಇಲ್ಲವೆಂದು ಸಾಧನೆ ಮಾಡುವಾಗ ಘಟಾದಿಗಳಲ್ಲಿ ವ್ಯಭಿಚಾರ ಬರುತ್ತದೆ. ಆದರಿಂದ ಶುಕ್ತಿರೂಪ್ಯದಲ್ಲಿ ಅಪರೋಕ್ಷವ್ಯವಹಾರಯೋಗ್ಯತ್ವರೂಪ ವಿಶೇಷ್ಯವಿಲ್ಲವೆಂದು ವಿಶಿಷ್ಟಾಭಾವವನ್ನು ಹೇಳಿ ದೃಷ್ಟಾಂತದಲ್ಲಿ ಸಾಧನವೈಕಲ್ಯವನ್ನು ಪರಿಹಾರ ಮಾಡುವಂತೆ, ಘಟಾದಿಗಳಲ್ಲಿಯೂ ವಿಶೇಷ್ಯಾಭಾವ ಪ್ರಯುಕ್ತ ವಿಶಿಷ್ಟಾಭಾವ ಉಂಟೆಂದು ಅಸಿದ್ಧಿಪರಿಹಾರವೇಕೆ ಮಾಡಬಾರದು? ಅಧ್ಯಸ್ತತ್ವಹೇತುವಿನಿಂದ ಘಟಾದಿಗಳಲ್ಲಿಯೂ ವಿಶೇಷ್ಯಾಭಾವ ಸಾಧನೆ ಮಾಡುವುದು ಶಕ್ಯತಾನೆ? ಎಂಬ ಪ್ರಶ್ನೆ ಬರುತ್ತದೆ.

ಆದರೆ ಘಟಾದಿಗಳಲ್ಲಿ ಸತ್ವದಂತೆ ಅಪರೋಕ್ಷ್ಯವೂ ವ್ಯಾವಹಾರಿಕವಾಗಿ ಇದೆ. ರೂಪ್ಯಾದಿಗಳಲ್ಲಿ ವ್ಯಾವಹಾರಿಕವಾಗಿ ಇಲ್ಲ. ಅಲ್ಲಿ ಅಪರೋಕ್ಷ್ಯವು ಕೇವಲ ಪ್ರಾತಿಭಾಸಿಕ. ಆಗಂತುಕ ದೋಷ ಪ್ರಯುಕ್ತವಾಗಿ ಭಾಸಮಾನವಾಗುತ್ತದೆ. 'ಅಧ್ಯಸ್ತತ್ವಹೇತುವಿನಿಂದ ರೂಪ್ಯಾದಿಗಳಲ್ಲಿ ಅಪರೋಕ್ಷ ವ್ಯವಹಾರಯೋಗ್ಯತೆ ಇಲ್ಲವೆಂದು ಸಾಧನೆ ಮಾಡುವಾಗ ಘಟಾದಿಗಳಲ್ಲಿ ವ್ಯಭಿಚಾರ ಬರುತ್ತದೆ' ಎಂದು ಸಮಸ್ಯೆ ಈಗ ಇಲ್ಲ, ಏಕೆಂದರೆ ಅಧ್ಯಸ್ತತ್ವವು ಪ್ರಾತಿಭಾಸಿಕತ್ವರೂಪವೇ ವಿವಕ್ಷಿತವಾಗಿದೆ. ಅದಕ್ಕೆ ಘಟಾದಿಗಳಲ್ಲಿ ವ್ಯಭಿಚಾರವಿಲ್ಲ'—'ಇತಿ ತನ್ನ' ಹೀಗೆ ಚಿತ್ಸುಖಿನು ಹೇಳಿದ್ದು ಯುಕ್ತವಲ್ಲ. ಏಕೆ ಯುಕ್ತವಲ್ಲ ಎಂದರೆ—

> **ಸರ್ವವ್ಯಾವಹಾರಿಕೋಪಾದಾನೇ ಬ್ರಹ್ಮಜ್ಞಾನಾತ್ಪ್ರಾಗಬಾಧಿತೇ ಶ್ರುತ್ಯಾದಿಸಿದ್ಧೇ ಚ ವ್ಯಾವಹಾರಿಕೇ ಅಜ್ಞಾನೇ ಅಂತಃಕರಣಾದೌ ಚ ಯೋಗ್ಯತ್ವಾಸ್ಯಾಪಿ ವ್ಯಾವಹಾರಿಕತ್ವಾತ್। ನಹಿ ಅಪರೋಕ್ಷೈಕರಸೇನ ಸಾಕ್ಷಿಣಾ ಸಾಕ್ಷಾದ್ ವೇದ್ಯೇ ಅಜ್ಞಾನಾದೌ ಅಪರೋಕ್ಷ್ಯಂ ಪ್ರಾತಿಭಾಸಿಕಂ, ವೃತ್ತಿದ್ವಾರಾ ತದ್ವೇದ್ಯೇ ಘಟಾದೌ ತು ವ್ಯಾವಹಾರಿಕಮಿತಿ ಯುಕ್ತಂ। ಶಿಷ್ಟಂ ಸ್ವಪ್ರಕಾಶತ್ವವಾದೇ ವಕ್ಷ್ಯತೇ।**

ಅಜ್ಞಾನವು ಪ್ರಾತಿಭಾಸಿಕ ಎನ್ನುವುದು ಅಸಂಗತ. ಅದು ವ್ಯಾವಹಾರಿಕವೆ. ಸರ್ವವ್ಯಾವಹಾರಿಕ ಪ್ರಪಂಚಕ್ಕೆ ಉಪಾದಾನ ಕಾರಣವಾದ ಅವಿದ್ಯೆಯನ್ನು 'ವ್ಯಾವಹಾರಿಕವಲ್ಲ, ಪ್ರಾತಿಭಾಸಿಕ' ಎನ್ನಲು ಶಕ್ಯವಿಲ್ಲ. ಮತ್ತು ಬ್ರಹ್ಮಜ್ಞಾನ ಬರುವುದಕ್ಕೆ ಮೊದಲು ಇತರ ಜ್ಞಾನದಿಂದ ಅದು ಬಾಧಿತವೂ ಆಗಿಲ್ಲ. ಶ್ರುತ್ಯಾದಿಗಳಿಂದ ಸಿದ್ಧವೂ ಆಗಿದೆ. ಆದರಿಂದ ವ್ಯಾವಹಾರಿಕವೆ. ಅಂತಃಕರಣಾದಿಗಳೂ ಕೂಡ ಹಾಗೇ. ಬ್ರಹ್ಮಜ್ಞಾನೇತರಜ್ಞಾನ ಬಾಧ್ಯವಾಗಿಲ್ಲ. ಶ್ರುತ್ಯಾದಿ ಸಿದ್ಧವೂ ಆಗಿರುವುದರಿಂದ ವ್ಯಾವಹಾರಿಕವೆಂದೇ ಹೇಳಬೇಕು. ಆದರಲ್ಲಿರುವ ಅಪರೋಕ್ಷವ್ಯವಹಾರಯೋಗ್ಯತ್ವವೂ ವ್ಯಾವಹಾರಿಕವೆ. ಅದನ್ನು ಪ್ರಾತಿಭಾಸಿಕವೆಂದು ಪರಿಗಣಿಸುವುದು ಉಚಿತವಲ್ಲ. ಏಕೆಂದರೆ ಅಪರೋಕ್ಷೈಕರಸವಾದ ಸಾಕ್ಷಿಚೈತನ್ಯದಿಂದ 'ಅಹಮಜ್ಞಃ' ನನ್ನಲ್ಲಿ ಅಜ್ಞಾನವಿದೆ ಎಂದು ಅಜ್ಞಾನವು ಸಾಕ್ಷಾತ್ ವೇದ್ಯ. 'ಘಟವನ್ನು ಪ್ರತ್ಯಕ್ಷವಾಗಿ ಕಾಣುತ್ತಿದ್ದೇನೆ' ಎಂದು ಸಾಕ್ಷಿಯು ಜ್ಞಾನದ್ವಾರಾ ಘಟವನ್ನು ವಿಷಯೀಕರಿಸುತ್ತದೆ. ನೇರವಾಗಿ 'ಇದು ಘಟ' ಎಂದು ಸಾಕ್ಷಿಯು ಗ್ರಹಿಸುವುದಿಲ್ಲ. ಹೀಗೆ, ಜ್ಞಾನದ್ವಾರಾ ಸಾಕ್ಷಿಗೆ

ವಿಷಯವಾಗುವ ಘಟಾದಿಯು ವ್ಯಾವಹಾರಿಕ, ನೇರವಾಗಿ ಸಾಕ್ಷಿಗೆ ವಿಷಯವಾಗುವ ಅಜ್ಞಾನವು ಪ್ರಾತಿಭಾಸಿಕ ಎಂದು ವ್ಯತ್ಯಾಸವಾಗಿ ಹೇಳುವುದು ಜಾಣತನವಲ್ಲ.

ಆದರಿಂದ ಅಜ್ಞಾನಾದಿಗಳಲ್ಲಿಯೂ ವಿಶೇಷಣ ವಿಶೇಷ್ಯಗಳೆರಡು ಇರುವುದರಿಂದ ವಿಶಿಷ್ಟಾಭಾವವಿಲ್ಲ, ವಿಶಿಷ್ಟಾಭಾವರೂಪ ಅಸ್ವಪ್ರಕಾಶತ್ವಕ್ಕೆ ಅಸಿದ್ಧಿ. ನಿರ್ಧರ್ಮಕ ಬ್ರಹ್ಮನಲ್ಲಿ ಅಪರೋಕ್ಷ ವ್ಯವಹಾರ ಯೋಗ್ಯತ್ವರೂಪವಿಶೇಷ್ಯವಿಲ್ಲದ್ದರಿಂದ ವಿಶಿಷ್ಟಾಭಾವರೂಪ ಅಸ್ವಪ್ರಕಾಶತ್ವರೂಪ ದೃಶ್ಯತ್ವವು ಬ್ರಹ್ಮನಲ್ಲಿ ವ್ಯಭಿಚರಿತ ಎಂದು ಮುಂತಾಗಿ ದೋಷಗಳನ್ನು ಮುಂದೆ ಸ್ವಪ್ರಕಾಶತ್ವವಾದದಲ್ಲಿ 'ಪ್ರಮಾಣಂ ಚಾತ್ರ–ಅನುಭೂತಿಃ ಸ್ವಪ್ರಕಾಶಾ' ಇತ್ಯಾದಿಯಾಗಿ ಹೇಳುತ್ತೇವೆ. 'ಅಸ್ತಿ ಚಾತ್ಮನಿ' ಎಂದು ಸಂಗ್ರಹ ಶ್ಲೋಕದಲ್ಲಿ ಅಸ್ವಪ್ರಕಾಶತ್ವ ಲಕ್ಷಣವು ಆತ್ಮನಲ್ಲಿ ಅತಿವ್ಯಾಪ್ತ ಎಂದೂ ಹೇಳುತ್ತೇವೆ.

❖❖❖

## किञ्चास्वप्रकाशत्वस्य पञ्चमप्रकाराविद्यानिवृत्तौ व्यभिचारः ।

यत्तु प्रमाणवस्त्वन्यतराधीनवृत्तिविषयत्वं दृश्यत्वम् । तुच्छस्य घटादिवत्प्रमाणाधीनवृत्तिविषयत्वस्य प्रातिभासिकवद्वस्त्वधीन-वृत्तिविषयत्वस्य चाभावान्न तत्र व्यभिचार इति । तत्त्वतितुच्छम् । प्रमाणाधीनवृत्तिविषयत्वस्यामिथ्यात्वेन व्याप्तेः । प्रमाणशब्देन ज्ञापकोक्तौ तु तुच्छे व्यभिचारः । तज्ज्ञानस्यापि ज्ञापकाधीनत्वात् । धीमात्रशरीररूप्यादिवृत्तौ वस्तुपरतन्त्रत्वस्याप्यभावाच्च । वस्तु-परतन्त्रशब्देनासदविषयकत्वस्यासद्विलक्षणविषयकत्वस्य चोक्तौ मद्रीत्या दृष्टान्तस्य साधनवैकल्यात् । ब्रह्मणि व्यभिचारापरिहाराच्च । एवञ्च ।

न धर्मादौ फलव्याप्तिर्वृत्तिव्याप्यत्वमात्मनि ।
अज्ञातत्वादिरूपेण चिद्वेद्यत्वं तु चित्यपि ।।

अन्यापेक्षाभिलापत्वमस्त्यौपनिषदात्मनि ।
त्वदुक्तास्वप्रभत्वं च रूप्ये नास्त्यस्ति चात्मनि ।।

**प्रमाणशब्देनेति** । व्यावहारिकप्रमाणत्वाश्रयविवक्षायां चासिद्धिः । व्यावहारि-कत्वस्य मिथ्यात्वविशेषरूपस्याद्याप्यनिश्चितत्वादिति भावः । ननु दृष्टान्ते

प्रसाध्याङ्गत्वान्न साधनवैकल्यं दोष इत्यत आह **ब्रह्मणीति** । सुखप्रतिपत्त्यर्थ-मुक्तदूषणानि संगृह्णाति **एवंचेति** ।

### ।। इति दृश्यत्वहेतुभङ्गः ।।

❖❖❖

**ಕಿಂಚ ಅಸ್ವಪ್ರಕಾಶತ್ವಸ್ಯ ಪಂಚಮಪ್ರಕಾರಾವಿದ್ಯಾನಿವೃತ್ತೌ ವ್ಯಭಿಚಾರಃ ।**

ಅಸ್ವಪ್ರಕಾಶತ್ವರೂಪ ದೃಶ್ಯತ್ವಹೇತುವಿಗೆ ಮತ್ತು ಹಿಂದೆ ಹೇಳಿದ ವೃತ್ತಿವ್ಯಾಪ್ಯತ್ವಾದಿರೂಪವಾದ ಎಲ್ಲ ಬಗೆಯ ದೃಶ್ಯತ್ವಹೇತುವಿಗೆ ಪಂಚಮಪ್ರಕಾರವಾದ ಅವಿದ್ಯಾನಿವೃತ್ತಿಯಲ್ಲಿ ವ್ಯಭಿಚಾರವೂ ಬರುತ್ತದೆ. ಸತ್ವ–ಅಸತ್ವ–ಸದಸತ್ವ–ಸದಸದ್ವಿಲಕ್ಷಣತ್ವಗಳೆಂಬ ನಾಲ್ಕು ಪ್ರಕಾರಗಳಲ್ಲಿ ನಾಲ್ಕನೆಯದಾದ ಸದಸದ್ವಿಲಕ್ಷಣತ್ವವೇ ಮಿಥ್ಯಾತ್ವ. ಅವಿದ್ಯೆಯು ಚತುರ್ಥಪ್ರಕಾರಮಿಥ್ಯಾವಾಗಿರುವುದರಿಂದ ಅದರ ನಿವೃತ್ತಿಯು ಸದಸದ್‌ವಿಲಕ್ಷಣ ವಿಲಕ್ಷಣ ಎಂದು ಪಂಚಮಪ್ರಕಾರವೇ ಆಗುತ್ತದೆ. ಪ್ರತಿಯೋಗಿ ತದಭಾವಗಳಿಗೆ ವಿಲಕ್ಷಣತ್ವ ಆವಶ್ಯಕ. ಹೀಗಾಗಿ ಇದರಲ್ಲಿ ಚತುರ್ಥ ಪ್ರಕಾರವಾದ ಮಿಥ್ಯಾತ್ವರೂಪ ಸಾಧ್ಯವಿಲ್ಲ. ಅಪರೋಕ್ಷವ್ಯವಹಾರಯೋಗ್ಯತ್ವರೂಪ ವಿಶೇಷ್ಯವಿಲ್ಲದ್ದರಿಂದ ವಿಶಿಷ್ಟಾಭಾವರೂಪ ಅಸ್ವಪ್ರಕಾಶತ್ವವೆಂಬ ಹೇತು ಬರುತ್ತದೆಯಾದ್ದರಿಂದ ವ್ಯಭಿಚಾರ ಬರುತ್ತದೆ.

ಅವಿದ್ಯಾನಿವೃತ್ತಿಯಲ್ಲಿ ವ್ಯಭಿಚಾರಪರಿಹಾರಕ್ಕೆ ಸಿದ್ಧಿಕಾರನು 'ಅಜ್ಞಾನಕಾಲವೃತ್ತಿತ್ವ'ವನ್ನು ಹೇತುವಿನಲ್ಲಿ ವಿಶೇಷಣವಾಗಿ ಕೊಡುತ್ತೇನೆ' ಎನ್ನುತ್ತಾನೆ. ಅದು ಸರಿಯಲ್ಲ. ಅವಿದ್ಯಾನಿವೃತ್ತಿಯು ಪಂಚಮಪ್ರಕಾರವೆಂದಮೇಲೆ ಅದು ಬ್ರಹ್ಮಾತಿರಿಕ್ತವಸ್ತುವಾಗುವುದರಿಂದ ಅಜ್ಞಾನಕಾರ್ಯವೇ ಆಗಬೇಕು. ಅಜ್ಞಾನಕಾಲವೃತ್ತಿಯೂ ಆಗಬೇಕು. ಆದರಿಂದ ಹೇತು ಸತ್ವವನ್ನು ಪರಿಹರಿಸಲಾಗದು. ಮತ್ತು ಅವಿದ್ಯಾನಿವೃತ್ತ್ಯುತರ ಕಾಲೀನ ಪ್ರಾರಬ್ಧಭೋಗದಲ್ಲಿ ಅಸಿದ್ಧಿಪರಿಹಾರಕ್ಕೆ ಅಜ್ಞಾನ ಲೇಶಕಾಲೀನತ್ವವನ್ನು ಸೇರಿಸಬೇಕು. ಆಗ ಘಟಾದಿಗಳಲ್ಲಿ ಅಸಿದ್ಧಿ. ಅನ್ಯತರಕಾಲೀನತ್ವವನ್ನು ಸೇರಿಸುವೆನೆಂದರೆ, ಹೇತು ಅಪ್ರಯೋಜಕವಾಗುವುದು.

### ಪ್ರಮಾಣ–ವಸ್ತು ಅನ್ಯತರಾಧೀನ ವೃತ್ತಿವಿಷಯತ್ವವೂ ದೃಶ್ಯತ್ವವಲ್ಲ

**ಯತ್ತು 'ಪ್ರಮಾಣ–ವಸ್ತು ಅನ್ಯತರಾಧೀನ ವೃತ್ತಿವಿಷಯತ್ವಂ ದೃಶ್ಯತ್ವಂ । ತುಚ್ಛಸ್ಯ ಘಟಾದಿವತ್ ಪ್ರಮಾಣಾಧೀನ ವೃತ್ತಿವಿಷಯತ್ವಸ್ಯ, ಪ್ರಾತಿಭಾಸಿಕವತ್ ವಸ್ತ್ವಧೀನವೃತ್ತಿ ವಿಷಯತ್ವಸ್ಯ ಚ ಅಭಾವಾತ್ ನ ತತ್ರ ವ್ಯಭಿಚಾರ' ಇತಿ, ತತ್ತು ಅತಿ ತುಚ್ಛಂ ।**

**ಪ್ರಮಾಣಾಧೀನ ವೃತ್ತಿ ವಿಷಯತ್ವಸ್ಯ ಅಮಿಥ್ಯಾತ್ವೇನ ವ್ಯಾಪ್ತೇಃ ।**

ಪ್ರಮಾಣ ಮತ್ತು ವಸ್ತು ಇವೆರಡರಲ್ಲಿ ಯಾವುದಾದರೊಂದಕ್ಕೆ ಅಧೀನವಾಗಿ ಬರುವ ವೃತ್ತಿಗೆ

ವಿಷಯವಾಗುವುದೇ ದೃಶ್ಯತ್ವವೆಂದು ಕೆಲವರು ಹೇಳುತ್ತಾರೆ— 'ಪ್ರಮಾಣವೆಂದರೆ ಪ್ರತ್ಯಕ್ಷಾದಿಗಳು. ಪ್ರಾತಿಭಾಸಿಕ ಶುಕ್ತಿರೂಪ್ಯಾದಿಗಳಲ್ಲಿ ಪ್ರಮಾಣಾಧೀನ ವೃತ್ತಿವಿಷಯತ್ವವಿಲ್ಲದಿದ್ದರೂ ವಸ್ತ್ವಧೀನ ವೃತ್ತಿವಿಷಯತ್ವವಿದೆ. ವಸ್ತು ಎಂದು ಘಟಾದಿವ್ಯಾವಹಾರಿಕದಂತೆ ಶುಕ್ತಿರೂಪ್ಯಾದಿಪ್ರಾತಿಭಾಸಿಕವೂ ವಿವಕ್ಷಿತವೆ. ಏಕೆಂದರೆ, ಶುಕ್ತಿರೂಪ್ಯಾದಿಯೂ ಅಸದ್‌ವಿಲಕ್ಷಣ ಸ್ವರೂಪದಿಂದ ವಸ್ತುವೆನಿಸುತ್ತದೆ. ತದಧೀನ ವೃತ್ತಿ ಎಂದರೆ ತದಾಕಾರಾಪಿದ್ಯಾವೃತ್ತಿ. ಶುಕ್ತಿರೂಪ್ಯದಲ್ಲಿ ಪ್ರಮಾಣಾಧೀನವೃತ್ತಿವಿಷಯತ್ವ ರೂಪದೃಶ್ಯತ್ವವಿಲ್ಲದ್ದರಿಂದ ದೃಷ್ಟಾಂತಕ್ಕೆ ಸಾಧನವೈಕಲ್ಯ ಬಂದೀತೆಂದು, ವಸ್ತ್ವಧೀನ ವೃತ್ತಿವಿಷಯತ್ವವನ್ನು ವೈಕಲ್ಪಿಕವಾಗಿ ದೃಶ್ಯತ್ವಲಕ್ಷಣವೆಂದು ವಿವಕ್ಷೆ ಮಾಡಿದ್ದಾರೆ. ಇದನ್ನೇ ದೃಶ್ಯತ್ವಲಕ್ಷಣವೆಂದರೆ ಘಟಾದಿಗಳಲ್ಲಿ ಅಸಿದ್ಧಿ. 'ಹಾಗಾದರೆ ಅನನುಗಮ' ಎಂದರೆ ಅನ್ಯತರತ್ವೇನ ಅನುಗಮ ಮಾಡಿದ್ದಾರೆ. ಆದರಿಂದ ಅಸಿದ್ಧಿಯೂ ಇಲ್ಲ, ಸಾಧನ ವೈಕಲ್ಯವೂ ಇಲ್ಲ, ತುಚ್ಛದಲ್ಲಿ ವೃತ್ತಿವಿಷಯತ್ವವೂ ಇಲ್ಲದ್ದರಿಂದ ಆದರಲ್ಲಿ ವ್ಯಭಿಚಾರವೂ ಇಲ್ಲ'—

'ತತ್ತು ಅತಿ ತುಚ್ಛಂ।' ದೃಶ್ಯತ್ವದ ಈ ನಿರ್ವಚನವು ಅತಿತುಚ್ಛ. ಏಕೆಂದರೆ ಪ್ರಮಾಣಾಧೀನ ವೃತ್ತಿವಿಷಯತ್ವವು ಅಮಿಥ್ಯಾತ್ವದಿಂದ ವ್ಯಾಪ್ತ. ಮಿಥ್ಯಾಭೂತವಾದುದು ಪ್ರಮಾಣಾಧೀನ ವೃತ್ತಿ ವಿಷಯವಾಗುವುದಿಲ್ಲ. ಹೀಗಾಗಿ ಇಂಥ ದೃಶ್ಯತ್ವ ಹೇತುವು ಅಮಿಥ್ಯಾತ್ವರೂಪವಾದ ಸಾಧ್ಯಾಭಾವ ದಿಂದಲೇ ವ್ಯಾಪ್ತವಾದ್ದರಿಂದ ವಿರುದ್ಧ ಹೇತುವಾಗುವುದು.

**ಪ್ರಮಾಣಶಬ್ದೇನ ಜ್ಞಾಪಕೋಕ್ತೌ ತು ತುಚ್ಛೇ ವ್ಯಭಿಚಾರಃ। ತಜ್ಞಾನಸ್ಯಾಪಿ ಜ್ಞಾಪಕಾಧೀನತ್ವಾತ್।**

**ಧೀಮಾತ್ರ, ಶರೀರ ರೂಪ್ಯಾದಿ ವೃತ್ತೌ ವಸ್ತುಪರತಂತ್ರತ್ವಸ್ಯಾಪಿ ಅಭಾವಾಚ್ಚ।**

'ಪ್ರಮಾಣ' ಶಬ್ದದಿಂದ ಕೇವಲ ಜ್ಞಾಪಕವು ವಿವಕ್ಷಿತವಾದರೆ ಜ್ಞಾಪಕಾಧೀನವೃತ್ತಿವಿಷಯತ್ವವು ಅಮಿಥ್ಯಾತ್ವಕ್ಕೆ ವ್ಯಾಪ್ಯವಾಗದಿದ್ದರೂ ತುಚ್ಛದಲ್ಲಿ ವ್ಯಭಿಚಾರ. ತುಚ್ಛದಲ್ಲಿ ಸದಸದ್ ವಿಲಕ್ಷಣತ್ವರೂಪ ಮಿಥ್ಯಾತ್ವವಿಲ್ಲ, ಸಾಧ್ಯವಿಲ್ಲ. ಆದರೆ, ಜ್ಞಾಪಕಾಧೀನ ವೃತ್ತಿ ವಿಷಯತ್ವರೂಪ ದೃಶ್ಯತ್ವಹೇತು ಬರುತ್ತದೆ. ತುಚ್ಛಜ್ಞಾನವು ಕೂಡ ಜ್ಞಾನವೇ ಆಗಿರುವುದರಿಂದ ಅದು ಜ್ಞಾಪಕಾಧೀನವೆ. ಶಶಶೃಂಗಾದಿ ಪದರೂಪ ಜ್ಞಾಪಕಾಧೀನವಾಗಿಯೆ ಅದು ಬರುತ್ತದೆ. ಹೀಗೆ ತುಚ್ಛದಲ್ಲಿ ವ್ಯಭಿಚಾರ.

ಪ್ರಮಾಣಶಬ್ದದಿಂದ ವ್ಯಾವಹಾರಿಕ ಪ್ರಾಮಾಣ್ಯಾಶ್ರಯವನ್ನು ವಿವಕ್ಷೆಮಾಡಿದರೆ ಘಟಾದಿ ರೂಪ ಪಕ್ಷದಲ್ಲಿ ಪ್ರಮಾಣಾಧೀನ ವೃತ್ತಿವಿಷಯತ್ವವೆ ಬರುವುದಿಲ್ಲ, ಅಸಿದ್ಧಿ. ಏಕೆಂದರೆ ಮಿಥ್ಯಾತ್ವ ವಿಶೇಷರೂಪವಾದ ವ್ಯಾವಹಾರಿಕತ್ವವೆಂಬುದು ಮಿಥ್ಯಾತ್ವಾನುಮಾನದಿಂದ ಸಿದ್ಧವಾಗಬೇಕಷ್ಟೆ. ಪೂರ್ವದಲ್ಲಿ ಅದು ಇನ್ನೂ ಸಿದ್ಧವೇ ಆಗಿಲ್ಲ. ಆದರಿಂದ ವ್ಯಾವಹಾರಿಕ ಪ್ರಾಮಾಣ್ಯಾಶ್ರಯಾ ಧೀನವೃತ್ತಿವಿಷಯತ್ವರೂಪ ದೃಶ್ಯತ್ವ ಹೇತುವು ಸ್ವರೂಪಾಸಿದ್ಧ.

ದೃಷ್ಟಾಂತವಾದ ಶುಕ್ತಿರೂಪ್ಯದಲ್ಲಿ ಸಾಧನ ವೈಕಲ್ಯವೂ ಬರುತ್ತದೆ. ಶುಕ್ತಿರೂಪ್ಯವು ವಸ್ತುವಲ್ಲ, ಅದು ಧೀಮಾತ್ರ. ಪ್ರತಿಭಾಸಮಾತ್ರ. ಅದು ಒಂದು ಪ್ರತಿಭಾಸಕ್ಕೆ ಪೂರ್ವದಲ್ಲಿದ್ದು ಅದರ ಅಧೀನ ವಾಗಿ ಆ ಪ್ರತಿಭಾಸ ಬರುತ್ತಿದ್ದರೆ ಮಾತ್ರ ಅದು ವಸ್ತುವೆನಿಸೀತು. ಹೀಗಾಗಿ ರೂಪ್ಯಾಕಾರಾವಿದ್ಯಾವೃತ್ತಿ ರೂಪವಾದ ಶುಕ್ತಿರೂಪ್ಯವು ವಸ್ತ್ವಧೀನ ವೃತ್ತಿವಿಷಯವಾಗುವುದಿಲ್ಲವಾದ್ದರಿಂದ ಅದರಲ್ಲಿ ಹೇತು ಬರುವುದಿಲ್ಲ. ಸಾಧನ ವೈಕಲ್ಯ ಬರುತ್ತದೆ.

**ವಸ್ತುಪರತಂತ್ರ ಶಬ್ದೇನ ಅಸದವಿಷಯಕತ್ವಸ್ಯ ಅಸದ್ವಿಲಕ್ಷಣವಿಷಯಕತ್ವಸ್ಯ ಚ ಉಕ್ತೌ ಮದ್ರೀತ್ಯಾ ದೃಷ್ಟಾಂತಸ್ಯ ಸಾಧನವೈಕಲ್ಯಾತ್ । ಬ್ರಹ್ಮಣಿ ವ್ಯಭಿಚಾರಾಪರಿಹಾರಾಚ್ಚ ।**

'ವಸ್ತುಪರತಂತ್ರ' ಶಬ್ದದಿಂದ ಅಸದವಿಷಯಕತ್ವವನ್ನು ವಿವಕ್ಷೆ ಮಾಡಿದರೆ, ಮತ್ತು ಅಸದ್‌ವಿಲಕ್ಷಣ ವಿಷಯಕತ್ವವನ್ನು ವಿವಕ್ಷೆ ಮಾಡಿದರೆ ನನ್ನ ರೀತಿಯಿಂದ ದೃಷ್ಟಾಂತಕ್ಕೆ ಸಾಧನವೈಕಲ್ಯ. ನನ್ನ ಮತದಲ್ಲಿ ಶುಕ್ತಿರೂಪ್ಯವು ಅತ್ಯಂತಾಸತ್. ಆದರಿಂದ ಅದರಲ್ಲಿ ಅಸದವಿಷಯವೃತ್ತಿ ವಿಷಯತ್ವವೂ ಇಲ್ಲ, ಅಸದ್‌ವಿಲಕ್ಷಣವಿಷಯಕ ವೃತ್ತಿವಿಷಯತ್ವವೂ ಇಲ್ಲ. 'ಇದೆ ಎಂದು ನಾನು ಸಾಧನೆ ಮಾಡುತ್ತೇನೆ. ಪ್ರಸಾಧ್ಯಾಂಗವಾದ ದೃಷ್ಟಾಂತದಲ್ಲಿ ಸಾಧನವೈಕಲ್ಯವು ದೋಷವಲ್ಲ' ಎಂದರೆ, ಬ್ರಹ್ಮನಲ್ಲಿ ವಸ್ತ್ವಧೀನ ವೃತ್ತಿವಿಷಯತ್ವವಿದೆ, ಮತ್ತು ಪ್ರಮಾಣಾಧೀನವಾದ ವೇದಾಂತವಾಕ್ಯ ಜನ್ಯವಾದ ವೃತ್ತಿವಿಷಯತ್ವವನ್ನು ಉಪಪಾದನ ಮಾಡಿದ್ದೇವೆ. ಆದರಿಂದ ವ್ಯಭಿಚಾರವು ಅಪರಿಹಾರ್ಯ.

**ಏವಂ ಚ —   ನ ಧರ್ಮಾದೌ ಫಲವ್ಯಾಪ್ತಿ ರ್ವೃತ್ತಿವ್ಯಾಪ್ಯತ್ವಮಾತ್ಮನಿ ।**
**ಅಜ್ಞಾತತ್ವಾದಿರೂಪೇಣ ಚಿದ್ವೇದ್ಯತ್ವಂ ತು ಚಿತ್ಯಪಿ ॥**
**ಅನ್ಯಾಪೇಕ್ಷಾಭಿಲಾಪತ್ವಂ ಅಸ್ತ್ಯೌಪನಿಷದಾತ್ಮನಿ ।**
**ತ್ವದುಕ್ತಾಸ್ವಪ್ರಭತ್ವಂ ಚ ರೂಪ್ಯೇ ನಾಸ್ತ್ಯಸ್ತಿ ಚಾತ್ಮನಿ ॥**

ಏವಂಚ,

(1) ಫಲವ್ಯಾಪ್ಯತ್ವರೂಪದೃಶ್ಯತ್ವವು ಧರ್ಮಾದಿಗಳಲ್ಲಿ ಭಾಗಾಸಿದ್ಧವಾಗಿದೆ.

(2) ವೃತ್ತಿ ವ್ಯಾಪ್ಯತ್ವರೂಪ ದೃಶ್ಯತ್ವವು ಆತ್ಮನಲ್ಲಿ ವ್ಯಭಿಚರಿತವಾಗಿದೆ.

(3) ಕದಾಚಿತ್ ಕಥಂಚಿತ್ ಅಜ್ಞಾತತ್ವಾದಿ ರೂಪೇಣ ಚಿದ್‌ವೇದ್ಯತ್ವರೂಪ ದೃಶ್ಯತ್ವವು ಆತ್ಮನಲ್ಲಿ ವ್ಯಭಿಚರಿತವಾಗಿದೆ.

(4) ಸ್ವವ್ಯವಹಾರೇ ಸ್ವಾತಿರೇಕಿ ಸಂವಿದಪೇಕ್ಷತ್ವರೂಪ ದೃಶ್ಯತ್ವವು ವೇದಾಂತ ಜನ್ಯವೃತ್ತಿವಿಷಯ ಚೈತನ್ಯದಲ್ಲಿ ವ್ಯಭಿಚರಿತವಾಗಿದೆ.

(5) ನೀನು ಹೇಳುವ ಅಸ್ವಪ್ರಕಾಶತ್ವರೂಪ ದೃಶ್ಯತ್ವವು ಶುಕ್ತಿರೂಪ್ಯದಲ್ಲಿಲ್ಲ, ಸಾಧನವೈಕಲ್ಯ. ಆತ್ಮನಲ್ಲಿದೆ, ಆದರಿಂದ ವ್ಯಭಿಚರಿತವೂ ಆಗಿದೆ.

❖❖❖

## 17. जडत्वहेतुभङ्गः

जडत्वमप्यज्ञातृत्वं वा अज्ञानत्वं वा अस्वप्रकाशत्वं बा अनात्मत्वं बा पराभिप्रेतं वा ?

नाद्यः । त्वन्मते पक्षनिक्षिप्तस्याहमर्थस्यैव ज्ञातृत्वात् । शुद्धात्मनोऽप्यज्ञातृत्वाच्च ।

शुद्धेऽपि कल्पितं ज्ञातृत्वमस्तीति चेन्न । कल्पितेन हेत्वभावेन व्यभिचारापरिहारात् । कल्पितस्य ज्ञातृत्वस्याभावो हेतुरिति चेन्न । गौरोऽहं जानामीति कल्पितज्ञातृत्ववति देहादौ तदभावासिद्धेः । धर्मिसमसत्ताकस्य ज्ञातृत्वस्याभावो हेतुरिति चेन्न । तादृशज्ञातृत्ववत्यन्तःकरणे तदभावासिद्धेः । शुद्धे तादृशज्ञातृत्वाभावाच्च ।

न द्वितीयः । वृत्तिज्ञाने भागासिद्धेः । यदि च सांख्यवेदांतिनां तु करणव्युत्पत्त्या बुद्धिवृत्तिर्ज्ञानमिति विवरणोक्तेर्वृत्तिरज्ञप्तिस्तर्हि परोक्षवृत्त्या स्वविषये अज्ञाननिवृत्तिव्यवहारस्मृतयो न स्युः । तासां ज्ञप्तिकार्यत्वात् । धर्माधर्मादिकं च जानामीत्यनुभवश्च न स्यात् ।

किञ्चात्मनि व्यभिचारः । तथाहि । आत्मरूपं ज्ञानं सविषयं निर्विषयं वा ? आद्येऽपि स्वविषयं परविषयं वा । नाद्यः । स्ववृत्तिविरोधेन परैरस्वीकारात् ।

ननु स्वकर्मकत्वाभावेऽपि स्वव्यवहारजननयोग्यत्वरूपं स्वविषयत्वमस्ति । तत्स्वभावस्यापि स्फुरणस्य तद्व्यवहारजनकतया तद्विषयत्वमिति चित्सुखोक्तेरिति चेन्न । घटादावप्येतदन्यस्य ज्ञप्तिकर्मत्वस्याभावात् । नहि घटादावपि तदाकारवृत्तिः तत्प्रतिबिम्बितचैतन्यं बा ज्ञप्तिः । ताञ्च प्रति कर्मत्वं तत्कारकविशेषत्वं वा तज्जन्यावरणाभिभवरूपातिशययोगित्वं वेति युक्तम् । ज्ञातैकसति

**सुखादौ शुक्तिरूप्यादौ चोक्तरूपज्ञप्तिकर्मत्वाभावापातात् । ब्रह्मणोऽपि चरमवृत्तिविषयस्योक्तरूपां ज्ञप्तिं प्रत्युक्तरूपकर्मत्वापाताच्च ।**

**अहमर्थस्यैवेति** । तथाच भागासिद्धिरिति भावः । **शुद्धात्मनोऽपीति** । तथाच तत्र व्यभिचार इति भावः । **व्यभिचारापरिहारादिति** । अन्यथा विपक्षे आरोपितसाधनाभावमादायासद्धेतोरपि सद्धेतुत्वप्रसङ्ग इति भावः । **तादृशज्ञातृत्वेति** । धर्मिसमसत्ताकज्ञातृत्वेत्यर्थः । **बुद्धिवृत्तिरिति** । अत्र बुद्धिपदमन्तःकरणपरम् । **स्ववृत्तिविरोधेनेति** । स्वस्यैव स्वं प्रति कर्तृत्वकर्मत्व विरोधेनेत्यर्थः । **तत्स्वभावस्यापीति** । स्वकर्मकत्वाभावस्वभावस्यापीत्यर्थः । **चित्सुखोक्तेरिति** । अतो नापसिद्धान्त इति भावः । **घटादावपीति** । तथाच घटादिसाधारणज्ञप्तिकर्मत्वोक्तावपसिद्धान्त तादवस्थ्यमिति भावः । ननु वह्निमनुमिनोमीत्यत्रेव साक्षिभास्ये दुःखादावपि कर्मत्वमस्त्वित्यत आह **ब्रह्मणोऽपीति** ।

❖❖❖

## ಅಜ್ಞಾತೃತ್ವವು ಜಡತ್ವವಲ್ಲ

**ಜಡತ್ವಮಪಿ ಅಜ್ಞಾತೃತ್ವಂ ವಾ, ಅಜ್ಞಾನತ್ವಂ ವಾ, ಅಸ್ವಪ್ರಕಾಶತ್ವಂ ವಾ, ಅನಾತ್ಮತ್ವಂ ವಾ, ಪರಾಭಿಪ್ರೇತಂ ವಾ? ನಾದ್ಯಃ। ತ್ವನ್ಮತೇ ಪಕ್ಷನಿಕ್ಷಿಪ್ತಸ್ಯ ಅಹಮರ್ಥಸ್ಯೈವ ಜ್ಞಾತೃತ್ವಾತ್ । ಶುದ್ಧಾತ್ಮನೋಽಪಿ ಅಜ್ಞಾತೃತ್ವಾಚ್ಚ ।**

'ವಿಮತಂ ಮಿಥ್ಯಾ ದೃಶ್ಯತ್ವಾತ್ ಜಡತ್ವಾತ್ ಪರಿಚ್ಛಿನ್ನತ್ವಾತ್ ಶುಕ್ತಿರೂಪ್ಯವತ್' ಎಂಬ ಅನುಮಾನದಲ್ಲಿ ದೃಶ್ಯತ್ವದಂತೆ ಜಡತ್ವವೂ ಒಂದು ಹೇತು. ಈ ಜಡತ್ವವನ್ನು ಅದ್ವೈತಿಗೆ ನಿರ್ವಚನ ಮಾಡಲು ಬರುವುದಿಲ್ಲ. ಏಕೆಂದರೆ ಅಜ್ಞಾತೃತ್ವ–ಅಜ್ಞಾನತ್ವ–ಅಸ್ವಪ್ರಕಾಶತ್ವ–ಅನಾತ್ಮತ್ವ ಎಂದು ನಾಲ್ಕು ಬಗೆಯಾಗಿ ನಿರ್ವಚನ ಮಾಡಲು ಅವನು ಯತ್ನಿಸಬಹುದು. ಇಲ್ಲವೆ ಪರಾಭಿಮತವಾದ ಅಂದರೆ ದ್ವೈತಿಗೆ ಅಭಿಮತವಾದ ಜಡತ್ವವನ್ನೆ ಹೇತುಮಾಡುವೆನೆನ್ನಬಹುದು.

ಮೊದಲಿಗೆ, 'ಅಜ್ಞಾತೃತ್ವವು ಜಡತ್ವ' ಎನ್ನುವ ಮೊದಲನೆ ಪಕ್ಷ ಸರಿಯಲ್ಲ. ನಿನ್ನ ಮತದಲ್ಲಿ ಅಹಮರ್ಥ ಜೀವನಲ್ಲ, ಜಡವಾದ ಅಂತಃಕರಣವೇ ಅಹಮರ್ಥ. ಅದರಿಂದ ಅದು ಪಕ್ಷ ಕೋಟಿಯಲ್ಲಿ ನಿಕ್ಷಿಪ್ತವಾಗಿದೆ. ಅದರಲ್ಲಿ ಹೇತು ಬರಬೇಕು. ಆದರೆ ನಿನ್ನ ಮತದಲ್ಲಿ ಈ ಅಹಮರ್ಥವೇ ಜ್ಞಾತೃ. ಆತ್ಮ ಜ್ಞಾತೃವಲ್ಲ. ಅದರಿಂದ ಅಜ್ಞಾತೃತ್ವರೂಪಹೇತು ಅಹಮರ್ಥದಲ್ಲಿಲ್ಲ. ಹೀಗಾಗಿ ಭಾಗಾಸಿದ್ಧಿ. ಶುದ್ಧಾತ್ಮನಲ್ಲಿ ಜ್ಞಾತೃತ್ವವಿಲ್ಲದ್ದರಿಂದ ಅಜ್ಞಾತೃತ್ವರೂಪ ಹೇತು ವ್ಯಭಿಚರಿತವೂ ಆಯಿತು.

**ಶುದ್ಧೇऽಪಿ ಕಲ್ಪಿತಂ ಜ್ಞಾತೃತ್ವಂ ಅಸ್ತೀತಿ ಚೇನ್ನ। ಕಲ್ಪಿತೇನ ಹೇತ್ವಭಾವೇನ ವ್ಯಭಿಚಾರಾಪರಿಹಾರಾತ್ ।**

'ಶುದ್ಧದಲ್ಲಿಯೂ ಕಲ್ಪಿತವಾದ ಜ್ಞಾತೃತ್ವವಿದೆ. ಕಲ್ಪಿತವಾದ ಅಜ್ಞಾತೃತ್ವಾಭಾವವಿದೆ. ವ್ಯಭಿಚಾರ ವಿಲ್ಲ' ಎಂದರೆ ಇದು ಸರಿಯಲ್ಲ. ಸಾಧ್ಯಾಭಾವವಿರುವಲ್ಲಿ ವಾಸ್ತವ ಹೇತುವಿರುವಾಗ ಕಲ್ಪಿತವಾದ ಹೇತ್ವಭಾವ ಉಂಟೆಂದು ವ್ಯಭಿಚಾರ ಪರಿಹಾರ ಮಾಡುವುದು ಅಶಕ್ಯ.

'ಧೂಮವಾನ್ ವಹ್ನೇಃ' ಎಂಬ ಅನುಮಾನದಲ್ಲಿ ಧೂಮಾಭಾವಉಳ್ಳ ಅಯೋಗೋಲಕದಲ್ಲಿ ವಹ್ನಿ ಇರುವುದರಿಂದ ವ್ಯಭಿಚಾರ ವೆನ್ನುವುದು ಸರ್ವಸಮ್ಮತ. ಅಲ್ಲಿ ಕಲ್ಪಿತವಾದ ವಹ್ನ್ಯಭಾವ ಉಂಟೆಂದು ವ್ಯಭಿಚಾರಪರಿಹಾರ ಮಾಡುವುದು ಕಂಡಿಲ್ಲ. ಮಾಡುವುದಾದರೇ ದುಷ್ಟಹೇತು ಸದ್ಧೇತುವಾದೀತು.

**ಕಲ್ಪಿತಸ್ಯ ಜ್ಞಾತೃತ್ವಸ್ಯ ಅಭಾವೋ ಹೇತುರಿತಿ ಚೇನ್ನ। ಗೌರೋऽಹಂ ಜಾನಾಮೀತಿ ಕಲ್ಪಿತ ಜ್ಞಾತೃತ್ವವತಿ ದೇಹಾದೌ ತದಭಾವಾಸಿದ್ಧೇಃ।**

'ಕಲ್ಪಿತವಾದ ಜ್ಞಾತೃತ್ವದ ಅಭಾವವೇ ಜಡತ್ವ. ಅದನ್ನೇ ಹೇತು ಮಾಡುತ್ತೇವೆ. ಕಲ್ಪಿತವಾದ ಜ್ಞಾತೃತ್ವ ಶುದ್ಧಾತ್ಮನಲ್ಲಿದೆ. ಅದರ ಅಭಾವರೂಪ ಜಡತ್ವ ಆತ್ಮನಲ್ಲಿಲ್ಲ, ವ್ಯಭಿಚಾರವಿಲ್ಲ' ಎಂದರೆ, ಆಗ ಭಾಗಾಸಿದ್ಧಿ. ಕಲ್ಪಿತವಾದ ಜ್ಞಾತೃತ್ವವು ದೇಹದಲ್ಲಿದೆ, ಅಂತಃಕರಣದಲ್ಲಿದೆ. ಅದರ ಅಭಾವರೂಪ ಜಡತ್ವ ಹೇತು ದೇಹ ಅಂತಃಕರಣಗಳಲ್ಲಿಲ್ಲ, ಭಾಗಾಸಿದ್ಧಿ. 'ಗೌರವರ್ಣದವನಾದ ನಾನು ಜ್ಞಾನಉಳ್ಳವ ನಾಗಿದ್ದೇನೆ' ಎಂದು ಅಹಮರ್ಥನಿಷ್ಠವಾದ ಜ್ಞಾತೃತ್ವವು ಗೌರವರ್ಣದ ದೇಹದಲ್ಲಿ ಕಲ್ಪಿತವಾಗಿದೆ. ಗೌರವರ್ಣದವನು ನಾನೆಂದು ಗೌರತ್ವ ಅಹಂತ್ವಗಳಿಗೆ ಸಾಮಾನಾಧಿಕರಣ್ಯ ಕಾಣುವುದರಿಂದ ಶರೀರ ಅಹಮರ್ಥಗಳಿಗೆ ಅಭೇದ ಕಾಣುವುದರಿಂದ ಅಹಮರ್ಥ ನಿಷ್ಠವಾದ ಜ್ಞಾತೃತ್ವ ಶರೀರದಲ್ಲಿ ಕಾಣುತ್ತದೆ. ಹೀಗಾಗಿ ಪಕ್ಷಕೋಟಿ ಪ್ರವಿಷ್ಟವಾದ ದೇಹಾದಿಗಳಲ್ಲಿ ಕಲ್ಪಿತವಾದ ಜ್ಞಾತೃತ್ವದ ಅಭಾವರೂಪ ಹೇತು ಇಲ್ಲ, ಭಾಗಾಸಿದ್ಧಿ.

**ಧರ್ಮಿ ಸಮಸತ್ತಾಕಸ್ಯ ಜ್ಞಾತೃತ್ವಸ್ಯ ಅಭಾವೋ ಹೇತುರಿತಿ ಚೇನ್ನ। ತಾದೃಶ ಜ್ಞಾತೃತ್ವವತಿ ಅಂತಃಕರಣೇ ತದಭಾವಾಸಿದ್ಧೇಃ। ಶುದ್ಧೇ ತಾದೃಶ ಜ್ಞಾತೃತ್ವಾಭಾವಾಚ್ಚ।**

'ಧರ್ಮಿಸಮಸತ್ತಾಕವಾದ ಜ್ಞಾತೃತ್ವದ ಅಭಾವವೇ ಹೇತು. ದೇಹದಲ್ಲಿ ಕಲ್ಪಿತವಾದ ಜ್ಞಾತೃತ್ವ ಪ್ರಾತಿಭಾಸಿಕ, ದೇಹ ವ್ಯಾವಹಾರಿಕ. ದೇಹದಲ್ಲಿ ವ್ಯಾವಹಾರಿಕ ಜ್ಞಾತೃತ್ವವಿಲ್ಲದ್ದರಿಂದ ಅಜ್ಞಾತೃತ್ವ ಹೇತುವಿಗೆ ಅಸಿದ್ಧಿ ಇಲ್ಲ.' ಎಂದರೆ, ಅಂತಃಕರಣದಲ್ಲಿ ಜ್ಞಾತೃತ್ವವು ಅಂತಃಕರಣದಂತೆಯೆ ವ್ಯಾವಹಾರಿಕ. ಧರ್ಮಿಸಮಸತ್ತಾಕವಾದ ಜ್ಞಾತೃತ್ವಉಳ್ಳ ಅಂತಃಕರಣದಲ್ಲಿ ಅಜ್ಞಾತೃತ್ವಹೇತು ಅಸಿದ್ಧ. ಪಾರಮಾರ್ಥಿಕನಾದ ಆತ್ಮನಲ್ಲಿ ಧರ್ಮಿಸಮಸತ್ತಾಕ ಜ್ಞಾತೃತ್ವವಿಲ್ಲದ್ದರಿಂದ ಅಜ್ಞಾತೃತ್ವ ಹೇತುವಿರುವುದರಿಂದ ವ್ಯಭಿಚಾರ.

**ಅಜ್ಞಾನತ್ವವೂ ಜಡತ್ವವಲ್ಲ**

**ನ ದ್ವಿತೀಯಃ। ವೃತ್ತಿಜ್ಞಾನೇ ಭಾಗಾಸಿದ್ಧೇಃ। ಯದಿ ಚ 'ಸಾಂಖ್ಯವೇದಾಂತಿನಾಂ ತು ಕರಣವ್ಯುತ್ಪತ್ತ್ಯಾ ಬುದ್ಧಿವೃತ್ತಿಃ ಜ್ಞಾನಮಿ'ತಿ ವಿವರಣೋಕ್ತೇಃ ವೃತ್ತಿಃ ಅಜ್ಞಪ್ತಿಃ ತರ್ಹಿ ಪರೋಕ್ಷವೃತ್ತ್ಯಾ ಸ್ವವಿಷಯೇ ಅಜ್ಞಾನನಿವೃತ್ತಿ–ವ್ಯವಹಾರ–ಸ್ಮೃತಯೋ ನ ಸ್ಯುಃ। ತಾಸಾಂ ಜ್ಞಪ್ತಿ ಕಾರ್ಯತ್ವಾತ್। 'ಧರ್ಮಾಧರ್ಮಾದಿಕಂ ಚ ಜಾನಾಮಿ' ಇತಿ ಅನುಭವಶ್ಚ ನ ಸ್ಯಾತ್।**

'ಅಜ್ಞಾನತ್ವರೂಪ ಜಡತ್ವವೇ ಹೇತು' ಎನ್ನುವ ಎರಡನೇ ಪಕ್ಷವೂ ಸರಿಯಲ್ಲ. ವೃತ್ತಿಜ್ಞಾನವು ಜ್ಞಾನವಾದ್ದರಿಂದ ಅಜ್ಞಾನತ್ವರೂಪ ಹೇತು ಬಾರದಿರುವುದರಿಂದ ಭಾಗಾಸಿದ್ಧಿ.

'ಬುದ್ಧಿವೃತ್ತಿಜ್ಞಾನವು ಜ್ಞಪ್ತಿರೂಪಜ್ಞಾನವಲ್ಲ. ಚೈತನ್ಯವೇ ಜ್ಞಪ್ತಿರೂಪಜ್ಞಾನ. ಅದಕ್ಕೆ ಕರಣವಾದ್ದರಿಂದ ಕರಣವ್ಯುತ್ಪತ್ತಿಯಿಂದ ಗೌಣವಾಗಿ ಜ್ಞಾನವೆಂದು ಬುದ್ಧಿ ವೃತ್ತಿಜ್ಞಾನ ಕರೆಸಿಕೊಳ್ಳುತ್ತದೆ. ಬುದ್ಧಿ ಎಂದರೆ ಅಂತಃಕರಣ. 'ಬುದ್ಧಿವೃತ್ತಿಯು ಸಾಂಖ್ಯರೂಪರಾದ ವೇದಾಂತಿಗಳ ಮತದಲ್ಲಿ ಕರಣವ್ಯುತ್ಪತ್ತಿಯಿಂದ ಮಾತ್ರ ಜ್ಞಾನವೆನಿಸುತ್ತದೆ, ಭಾವ ವ್ಯುತ್ಪತ್ತಿಯಿಂದಲ್ಲ' ಎಂದು ವಿವರಣದಲ್ಲಿ ಹೇಳಿದೆ. ಹೀಗೆ ವೃತ್ತಿಯು ಜ್ಞಪ್ತಿರೂಪವಲ್ಲದ್ದರಿಂದ ಅಜ್ಞಪ್ತಿತ್ವರೂಪ ಅಜ್ಞಾನತ್ವಹೇತುವಿಗೆ ವೃತ್ತಿಯಲ್ಲಿ ಭಾಗಾಸಿದ್ಧಿ ಇಲ್ಲ' ಎನ್ನುವುದಾದರೆ ಪರೋಕ್ಷವೃತ್ತಿಯು ಅಜ್ಞಪ್ತಿಯಾಗಿರುವುದರಿಂದ, ಚೈತನ್ಯ ಪ್ರತಿಫಲನವೂ ಇಲ್ಲದ್ದರಿಂದ ಸ್ವವಿಷಯದಲ್ಲಿ ಅಜ್ಞಾನನಿವೃತ್ತಿ, ವ್ಯವಹಾರ ಮತ್ತು ಅದರ ಸಂಸ್ಕಾರದಿಂದ ಸ್ಮೃತಿ ಎಂಬ ಕಾರ್ಯಗಳಾಗದಿರಬೇಕಾದೀತು. ಏಕೆಂದರೆ ಇವು ಜ್ಞಪ್ತಿಕಾರ್ಯಗಳು. ಹೀಗಾಗಿ ಪರೋಕ್ಷ ವೃತ್ತಿಯಲ್ಲಿ ಜ್ಞಪ್ತಿತ್ವವೇ ಇದೆ. ಅಜ್ಞಪ್ತಿತ್ವರೂಪ ಹೇತುವಿಲ್ಲದಿರುವುದರಿಂದ ಭಾಗಾಸಿದ್ಧಿಯೇ ಇದೆ. ಪರೋಕ್ಷವೃತ್ತಿಯು 'ಧರ್ಮಾಧರ್ಮಗಳನ್ನು ನಾನು ತಿಳಿದಿದ್ದೇನೆ' ಎಂಬ ಅನುಭವ ಬಲದಿಂದಲೂ ಜ್ಞಪ್ತಿರೂಪವೇ ಆಗಿದೆ. ಅಜ್ಞಪ್ತಿ ರೂಪವಲ್ಲ. ಆದರಿಂದ ಅಜ್ಞಪ್ತಿ ಎಂದರೆ ಅನುಭವ ವಿರೋಧವೂ ಬರುತ್ತದೆ.

**ಕಿಂಚ ಆತ್ಮನಿ ವ್ಯಭಿಚಾರಃ। ತಥಾಹಿ। ಆತ್ಮರೂಪಂ ಜ್ಞಾನಂ ಸವಿಷಯಂ ನಿರ್ವಿಷಯಂ ವಾ? ಆದ್ಯೇಽಪಿ ಸ್ವವಿಷಯಂ ಪರವಿಷಯಂ ವಾ? ನಾದ್ಯಃ। ಸ್ವವೃತ್ತಿ ವಿರೋಧೇನ ಪರೈಃ ಅಸ್ವೀಕಾರಾತ್।**

ಅಜ್ಞಾನತ್ವವನ್ನು ಹೇತುಮಾಡಿದರೆ ಆತ್ಮನಲ್ಲಿ ವ್ಯಭಿಚಾರ. ಏಕೆಂದರೆ ಆತ್ಮನನ್ನು ಜ್ಞಾನರೂಪನೆನ್ನಲು ಅದ್ವೈತದಲ್ಲಿ ಸಾಧ್ಯವಿಲ್ಲ. ಜ್ಞಾನರೂಪನೆನ್ನಲು, ಅದ್ವೈತಿಯು ಆತ್ಮರೂಪಜ್ಞಾನವು ಸವಿಷಯವೆ? ನಿರ್ವಿಷಯವೆ? ಎನ್ನುವುದನ್ನು ಹೇಳಬೇಕು. ಸವಿಷಯವೆನ್ನುವ ಪಕ್ಷದಲ್ಲಿ ಸ್ವವಿಷಯಕವೆ? ಪರವಿಷಯಕವೆ? ಎನ್ನುವುದನ್ನೂ ಹೇಳಬೇಕು.

ಆತ್ಮರೂಪಜ್ಞಾನವು ಸವಿಷಯ ಎನ್ನುವ ಮೊದಲನೆ ಪಕ್ಷದಲ್ಲಿ ಸ್ವವಿಷಯವೆನ್ನುವ ಮೊದಲಿನ

ಪಕ್ಷವನ್ನು ಸ್ವೀಕರಿಸುವುದಾದರೆ ಅದು ಯುಕ್ತವಾಗಲಾರದು. ಸ್ವವೃತ್ತಿವಿರೋಧದಿಂದ ಸ್ವವಿಷಯತ್ವ ಪಕ್ಷವನ್ನು ಅದ್ವೈತಿ ಒಪ್ಪಿಲ್ಲ. 'ಸ್ವ-ವೃತ್ತಿ' ಜ್ಞಾನರೂಪಕ್ರಿಯೆಯು ತನಗೆ ತಾನೇ ಕರ್ತೃವೂ ಕರ್ಮವೂ ಆಗಿರುವುದು, ವಿರುದ್ಧ. 'ಸ್ವವಿಷಯಕ' ಎಂದರೆ ಸ್ವಕರ್ಮಕ. ಅಂದರೆ ಕರ್ಮತಾ ಸಂಬಂಧದಿಂದ ಕ್ರಿಯೆಯು ವಿಷಯದಲ್ಲಿ ಇದೆ, ಕ್ರಿಯೆಯೂ ವಿಷಯವೂ ಒಂದೇ. ಆದರಿಂದ ಕ್ರಿಯೆ ತನ್ನಲ್ಲಿಯೇ ಕರ್ಮತಾಸಂಬಂಧದಿಂದ ಇದೆ ಎಂದಂತಾಯಿತು. ಆತ್ಮಾಶ್ರಯದೋಷದಿಂದ ಈ ಸ್ವ-ವೃತ್ತಿಯು ವಿರುದ್ಧವೆನಿಸುತ್ತದೆ. ಹಾಗೇ ಕ್ರಿಯೆಯೂ ಕರ್ತೃವೂ ಒಂದೆ. ಕ್ರಿಯೆಯು ಕರ್ತೃತ್ವಸಂಬಂಧದಿಂದ ತನ್ನಲ್ಲಿಯೇ ತಾನು ಇದೆ. ಆತ್ಮಾಶ್ರಯದೋಷದಿಂದ ಈ ಸ್ವವೃತ್ತಿಯೂ ವಿರುದ್ಧವೆ. ಹೀಗೆ ಸ್ವವೃತ್ತಿವಿರೋಧ ದೋಷದಿಂದ ಅದ್ವೈತಿಯು ಜ್ಞಾನಕ್ಕೆ ಸ್ವವಿಷಯತ್ವವನ್ನು ಒಪ್ಪುವಂತಿಲ್ಲ.

**ನನು ಸ್ವಕರ್ಮಕತ್ವಾಭಾವೇಽಪಿ ಸ್ವವ್ಯವಹಾರ ಜನನ ಯೋಗ್ಯತ್ವರೂಪಂ ಸ್ವವಿಷಯತ್ವಂ ಅಸ್ತಿ। 'ತತ್‌ಸ್ವಭಾವಸ್ಯಾಪಿ ಸ್ಫುರಣಸ್ಯ ತದ್‌ವ್ಯವಹಾರಜನಕತಯಾ ತದ್‌ವಿಷಯತ್ವಂ' ಇತಿ ಚಿತ್ಸುಖೋಕ್ತೇಃ ಇತಿ ಚೇನ್ನ।**

'ಆತ್ಮರೂಪಜ್ಞಾನವು ಸ್ವಕರ್ಮಕವಾಗದಿದ್ದರೂ ಸ್ವವಿಷಯ ವಿಷಯಕ ವ್ಯವಹಾರವನ್ನುಂಟು ಮಾಡಲು ಯೋಗ್ಯವಾಗಿದೆ. ಸ್ವವ್ಯವಹಾರ ಎಂದರೆ 'ಆತ್ಮನಿದ್ದಾನೆ' ಎನ್ನುವ ತನಗೆ ವಿಷಯನಾದ ತನ್ನ ವಿಷಯದಲ್ಲಿ ಬರುವ ಜ್ಞಾನ. ಮತ್ತು ಆ ಜ್ಞಾನದಿಂದ ಉಂಟಾಗುವ ಶಬ್ದವ್ಯವಹಾರ. ಇವೆರಡಕ್ಕೂ ಜ್ಞಾನರೂಪನಾದ ಆತ್ಮನು ತಾನೇ ಜನಕ. ಘಟಾದಿಗಳಲ್ಲಿ ಹೀಗಿಲ್ಲ. 'ಘಟವಿದೆ' ಎಂಬ ಜ್ಞಾನ ಘಟಕ್ಕಿಂತ ಬೇರೆಯೆ. ಘಟವಿದೆ ಎಂದು ಶಬ್ದಪ್ರಯೋಗಕ್ಕೆ ಘಟದಿಂದ ಬೇರೆಯೆ ಆದ ಘಟಜ್ಞಾನದ ಆವಶ್ಯಕತೆ ಇದೆ. ಘಟದ ಸಿದ್ಧಿಯಾಗಲಿ, 'ಘಟ' ಎಂಬ ಶಬ್ದವ್ಯವಹಾರವಾಗಲಿ ಸ್ವತಃ ಘಟದಿಂದಲೇ ಉಂಟಾಗುವುದಿಲ್ಲ.

ಆತ್ಮನ ಈ ವೈಲಕ್ಷಣ್ಯವನ್ನು ಚಿತ್ಸುಖಿನು ಹೇಳಿದ್ದಾನೆ— 'ಸ್ವಕರ್ಮಕತ್ವಾಭಾವ ಸ್ವಭಾವದ್ದಾದರೂ, ಸ್ವಭಾವತಃ ಸ್ವಕರ್ಮಕವಾಗದಿದ್ದರೂ 'ಸ್ಫುರಣ' ಅಂದರೆ ಆತ್ಮರೂಪಜ್ಞಾನವು ತನ್ನ ಸಿದ್ಧಿ ಹಾಗೂ ಶಬ್ದವ್ಯವಹಾರಗಳನ್ನು ಉಂಟುಮಾಡಲು ಯೋಗ್ಯವಾಗಿದೆ. ಈ ಯೋಗ್ಯತೆಯೇ ಸ್ವವಿಷಯತ್ವ' ಎಂದು. ಆದರಿಂದ ಆತ್ಮರೂಪಜ್ಞಾನಕ್ಕೆ ಪಾರಿಭಾಷಿಕವಾದ ಈ ಸ್ವವಿಷಯತ್ವವನ್ನು ಹೇಳುವುದು ಅಪಸಿದ್ಧಾಂತವಾಗುವುದಿಲ್ಲ'—ಹೀಗೆ ಹೇಳುವುದು ಸರಿಯಲ್ಲ.

**ಘಟಾದಾವಪಿ ಏತದನ್ಯಸ್ಯ ಜ್ಞಪ್ತಿಕರ್ಮತ್ವಸ್ಯಾಭಾವಾತ್ ।**

ಜ್ಞಾನ ಜನ್ಯವ್ಯವಹಾರ ಯೋಗ್ಯತ್ವವೆ ಜ್ಞಾನವಿಷಯತ್ವ ಹೊರತು ಬೇರೆ ಜ್ಞಾನವಿಷಯತ್ವವು ಘಟಾದಿಗಳಲ್ಲಿಯೂ ಎಲ್ಲಿಯೂ ಇಲ್ಲ. ಈ ಜ್ಞಾನವಿಷಯತ್ವವೇ ಜ್ಞಾನಕರ್ಮತ್ವ, ಬೇರೆ ಇಲ್ಲ. ಹೀಗಾಗಿ ಬ್ರಹ್ಮನಲ್ಲಿ ಜ್ಞಪ್ತಿಕರ್ಮತ್ವವನ್ನು ಒಪ್ಪದೇ 'ಜ್ಞಪ್ತಿವಿಷಯತ್ವವಿದೆ' ಎನ್ನುವುದು ಸ್ವವ್ಯಾಹತ. ಘಟಾದಿ ಸಾಧಾರಣವಾದ ಈ ಜ್ಞಾನಕರ್ಮತ್ವವನ್ನೇ ಬ್ರಹ್ಮನಿಗೆ ಅದ್ವೈತಿಯು ಹೇಳುತ್ತಿರುವುದರಿಂದ ಅಪಸಿದ್ಧಾಂತ ದೋಷ ಹಾಗೇ ಇದೆ.

**प्रमाणविरोधस्याविशिष्टतया स्वकालादौ सत्वेन कालान्तरादौ सत्वसाधनापातात् । रूपान्तरेणासतो ब्रह्मणः स्वरूपेणाप्यसत्वापाताच्च । रूप्यादेर्वियदादेश्च स्वकालेऽप्यसद्विलक्षणस्वरूपाभावापाताच्च ।**

**एतेन यत्सत्तत्सदा सर्वत्र सदेव । नहि रूपं कदाचित्कुत्रचिद्गन्धो भवति । तथाच यत्कदाचित्कुत्रचिदसत्तत्सदा सर्वत्रासदेवेति वाचस्पतीयं शून्यवाद्युक्तयुक्त्युद्गिरणं निरस्तम् ।**

अज्ञानस्यापरिच्छिन्नत्वमुपपादयति **अज्ञानस्य चेति** ।। ननु सर्वगतब्रह्मावरकत्वेऽपि नाज्ञानस्यापरिच्छिन्नत्वं विषयावरकनयनपटलादेः परिच्छिन्नत्वदर्शनादित्यत आह **विषयसम्बन्ध्यावरकत्वेन चेति** ।। **तत्र तदेति** ।। अभावानधिकरणस्य प्रतियोग्यधिकरणत्वनियमादिति भावः । कालादिर्न परिच्छिन्नः अग्र इत्यत्र संधिकार्यं विना निर्देशः श्रुतिशरीरयत्ताज्ञापनार्थः । अत एवेत्यादिश्रुतिभिरिति श्रुत्याकारप्रदर्शनमग्र इत्यवधेयम् ।। **ममेति** ।। असद्धानाङ्गीकर्तुरित्यर्थः ।। **विरोधाच्चेति** ।। यत्किञ्चिद्विशेषसत्वस्यैव सामान्याभाव-विरोधित्वादित्यर्थः ।। **तथा धीमात्रमिति** ।। एककालादिमात्रसत्वप्रकारकधीमात्रमित्यर्थः । ब्राह्मणमात्रमित्यादौ मात्रशब्देन सामीचीन्यव्यवच्छेदवत् धीमात्रमित्यत्रापि सा धीर्भ्रमरूपैव पर्यवस्यतीत्याशयेनाह **भ्रमोक्तौ चेति** ।। मात्रपदस्य तत्वावेदनलक्षणप्रामाण्यरूपधीसामीचीन्यव्यवच्छेदपरत्वाङ्गीकारे को दोष इत्यत आह **व्यावहारिकेति** ।। ननु कालान्तरादौ स्वरूपेणासत्वं हेतुः, प्रतिपन्नरूपव्यतिरिक्तरूपेण वेति विकल्प्याद्यं निराकरोति **तेनेति** ।। द्वितीयं निराह **रूपान्तरेणेति** ।। मिथ्यात्वक्षणिकत्वादिनेत्यर्थः । **रूप्यादेरिति** ।। शुक्तिरूप्यादेरपि पारमार्थिकत्वव्यावहारिकत्वादिरूपान्तरेणासत्त्वात् । तथाच कालान्तरासत्त्वं न स्वकाले असत्वप्रयोजकम् । नचैवमेकत्र सत्वासत्वयोः विरोधः । अवच्छेदकभेदेनाविरोधोपपत्तेरिति भावः । **एतेनेति** ।। अवच्छेदकभेदेन विरुद्धयोरप्यविरोधव्यवस्थापनेनेत्यर्थः । नचैवं रूपं कदाचिद्गन्धो भवेदिति वाच्यम् । तत्र रूपत्वगन्धत्वयोः सर्वदा विरोधस्य प्रमाणसिद्धत्वेन तस्य तत्वापादने न किञ्चित्कारणान्तरमस्तीति भावः ।

## ಅಜ್ಞಾನ ಪರಿಚ್ಛಿನ್ನವಲ್ಲ

**ಅಜ್ಞಾನಸ್ಯ ಸರ್ವದೇಶಕಾಲೋಪಾದಾನತ್ವೇನ ಸರ್ವಗತಂ ಬ್ರಹ್ಮ ಪ್ರತಿ ವಿಷಯಸಂಬಂಧ್ಯಾವರಣತ್ವೇನ ಚ ದೇಶಾದಿಪರಿಚ್ಛೇದಾಯೋಗಾತ್ ।**

ಅಜ್ಞಾನವು ಅದ್ವೈತಮತದಲ್ಲಿ ಸರ್ವದೇಶ ಸರ್ವಕಾಲಗಳಿಗೂ ಉಪಾದಾನವಾಗಿರುವುದ ರಿಂದ ಯಾವ ದೇಶಕಾಲಗಳಲ್ಲಿ ಅಜ್ಞಾನವಿಲ್ಲವೆನ್ನುವಿಯೋ ಆ ದೇಶಕಾಲಗಳ ಸ್ವರೂಪವೆ ಇಲ್ಲವಾದೀತು. ಉಪಾದಾನವಾದ ಅಜ್ಞಾನವಿಲ್ಲದಿದ್ದರೆ ಉಪಾದೇಯವಾದ ದೇಶಕಾಲಗಳಿರುವುದು ಅಸಂಭವ. ಅದರಿಂದ ಯಾವುದೇ ದೇಶದಲ್ಲಿ ಯಾವುದೇ ಕಾಲದಲ್ಲಿ ಅಜ್ಞಾನವಿಲ್ಲವೆನ್ನಲಾಗದು. ಅದರಿಂದ ಅಜ್ಞಾನಕ್ಕೆ ಪರಿಚ್ಛಿನ್ನತ್ವವಿಲ್ಲ. ಅಜ್ಞಾನವು ಸರ್ವಗತ ಬ್ರಹ್ಮನಿಗೆ ಆವರಣವೆಂದು ಅದ್ವೈತಿ ಒಪ್ಪಿರುವುದರಿಂದ ಅದೂ ಸರ್ವಗತವೇ ಆಗಬೇಕು.

ಯದ್ಯಪಿ ದೊಡ್ಡ ಬೆಟ್ಟವನ್ನು ನೋಡಲಾಗದಂತೆ ಕಣ್ಣಿಗೆ ಸಣ್ಣ ಬಟ್ಟೆ ತುಂಡು ಕಟ್ಟಿಕೊಳ್ಳಬಹುದು. ಈ ಬಟ್ಟೆಯ ಆವರಣವು ಬೆಟ್ಟದಷ್ಟು ಗಾತ್ರದ್ದಾಗಿರಬೇಕಿಲ್ಲ. ಆದರೂ, ಈ ಬಟ್ಟೆ ಬೆಟ್ಟಕ್ಕೆ ಆವರಣವಾದರೂ ಅದು ಬೆಟ್ಟಕ್ಕೆ ಸಂಬಂಧಿಸಿದ ಆವರಣವಾಗಿರುವುದಿಲ್ಲ. ಕಣ್ಣಿಗೇ ಸಂಬಂಧಿಸಿದ ಆವರಣವಾಗಿರುತ್ತದೆ.

'ಆಶ್ರಯತ್ವವಿಷಯತ್ವ ಭಾಗಿನೀ ನಿರ್ವಿಶೇಷ ಚಿತಿರೇವ ಕೇವಲಾ'

ಎಂದು ಅದ್ವೈತಮತ. ಅಜ್ಞಾನವು ಹಾಗಲ್ಲ. ಅದು ವಿಷಯಚೈತನ್ಯವನ್ನು ಸಂಬಂಧಿಸಿಯೇ ಅದಕ್ಕೆ ಆವರಣವಾಗಿರುತ್ತದೆ. ಅದರಿಂದ ವಿಷಯಚೈತನ್ಯದಷ್ಟೇ ದೇಶಕಾಲವ್ಯಾಪ್ತಿ ಆವರಕ ಅಜ್ಞಾನಕ್ಕೂ ಇರಬೇಕಾಗುತ್ತದೆ. ಅದರಿಂದ ದೇಶಕಾಲಾಪರಿಚ್ಛಿನ್ನನಾದ ಬ್ರಹ್ಮನಿಗೆ ಸಂಬಂಧಿಸಿ ಆವರಣವಾಗಿರುವ ಅಜ್ಞಾನವು ದೇಶಕಾಲಪರಿಚ್ಛಿನ್ನವಾಗದು.

**ಪ್ರತಿಪನ್ನೋಪಾಧೌ ನಿಷೇಧಸ್ಯ ಚ ಕುತ್ರಚಿತ್ ಕದಾಚಿತ್ ಅಭಾವೇ ತತ್ರ ತದಾ ಪ್ರತಿಯೋಗಿನಃ ಸತ್ತಾಪಾತಾತ್ ॥**

ಅದ್ವೈತಿಗೆ ಅಭಿಪ್ರೇತವಾದ ಪ್ರತಿಪನ್ನೋಪಾಧಿಸ್ಥನಿಷೇಧವೂ ಅಪರಿಚ್ಛಿನ್ನವೇ ಆಗಬೇಕು. ಸರ್ವದೇಶ ಸರ್ವಕಾಲಗಳಲ್ಲಿ ಇರಬೇಕು. ಯಾವುದಾದರೂ ದೇಶದಲ್ಲಿ ಕಾಲದಲ್ಲಿ ಅದಿಲ್ಲವೆಂದಾದರೆ ಅಲ್ಲಿ ನಿಷೇಧ ಪ್ರತಿಯೋಗಿಯಾದ ವಿಯದಾದಿ ಶುಕ್ತಿರೂಪ್ಯಾದಿಯು ಅನಿಷಿದ್ಧವಾಗಿ ಸತ್ಯವಾಗಿ ಇರಬೇಕಾದೀತು. ತಂತುದೇಶದಲ್ಲಿ ಪಟನಿಷೇಧವಿಲ್ಲ. ಅಲ್ಲಿ ಪ್ರತಿಯೋಗಿ ಪಟವು ಸತ್ಯವಾಗಿದೆ. ಪ್ರಳಯಕಾಲದಲ್ಲಿ ಗಂಧಾಭಾವದ ನಿಷೇಧರೂಪವಾದ ಗಂಧ ಇಲ್ಲ. ಆಗ ಪ್ರತಿಯೋಗಿಯಾದ ಗಂಧಾಭಾವವಿದೆ. ಅದರಿಂದ ಪ್ರತಿಪನ್ನೋಪಾಧಿಸ್ಥ ನಿಷೇಧವು ಅಪರಿಚ್ಛಿನ್ನ. ಅದರಲ್ಲಿ ಪರಿಚ್ಛಿನ್ನತ್ವ ಹೇತುವು ಅಸಿದ್ಧ.

**ತಥಾ ಚ— ಕಾಲಾದಿರ್ನ ಪರಿಚ್ಛಿನ್ನಃ ಅಗ್ರ ಆಸೀದಥಾಮೃತಃ ।**

**ಇತ್ಯಾದಿ ಶ್ರುತಿಭಿರ್ನೋಚೇತ್ ದುರ್ವಾರಾ ವ್ಯಾಹತಿರ್ಭವೇತ್ ॥**

'ಅಗ್ರ ಆಸೀತ್' 'ಅಥಾಮೃತಃ' ಇತ್ಯಾದಿ ಶ್ರುತಿಗಳಿಂದ ಕಾಲಾದಿಗಳು ದೇಶಕಾಲಾ ಪರಿಚ್ಛಿನ್ನವೆಂದು ಸಿದ್ಧವಾಗುವುದು. ಇಲ್ಲದಿದ್ದರೆ 'ಇಲ್ಲಿ ದೇಶವಿಲ್ಲ, ಈಗ ಕಾಲವಿಲ್ಲ' ಎಂದು ನಿಷೇಧಮಾಡುವಾಗ ವ್ಯಾಹತಿ ಅಪರಿಹಾರ್ಯವಾದೀತು, ಎಂದು ಸಿದ್ಧವಾಯಿತು.

'ನ ಪರಿಚ್ಛಿನ್ನಃ ಅಗ್ರ' ಎಂಬಲ್ಲಿ ಸಂಧಿ ಮಾಡದಿರುವುದು' ಅಗ್ರ ಆಸೀತ್' ಎಂಬ ಶ್ರುತಿ ಶರೀರವನ್ನು ಸ್ಪಷ್ಟವಾಗಿ ಹೇಳುವುದಕ್ಕಾಗಿ.

**ಕಿಂಚ ಕಾಲಾದಿಪರಿಚ್ಛಿನ್ನತ್ವಂ ನ ತಾವತ್ ಏಕಕಾಲಾದಿಮಾತ್ರೇ ಸತ್ವಂ । ರೂಪ್ಯಾದೌ ಮಮ ಅಸಿದ್ಧೇಃ । ತೇನ ತ್ರೈಕಾಲಿಕ ನಿಷೇಧಸಾಧನೇ ವಿರೋಧಾಚ್ಚ ।**

ಕಾಲಾದಿಪರಿಚ್ಛಿನ್ನತ್ವವೆಂದರೆ 'ಏಕಕಾಲಾದಿ ಮಾತ್ರದಲ್ಲಿ ಇರುವುದು' ಅಲ್ಲ. ಇದು ಶುಕ್ತಿರಜತದಲ್ಲಿ ನನಗೆ ಅಸಿದ್ಧ. ಶುಕ್ತಿರಜತ ನನ್ನ ಮತದಲ್ಲಿ ಅತ್ಯಂತಾಸತ್ತು. ಒಂದುಕಾಲದಲ್ಲಿ ಮಾತ್ರ ಸತ್ತು ಒಂದು ದೇಶದಲ್ಲಿ ಮಾತ್ರ ಸತ್ತು ಎಂದು ನಾನು ಒಪ್ಪುವುದಿಲ್ಲ. ಮತ್ತು ಏಕಕಾಲದಲ್ಲಿ ಮಾತ್ರ ಸತ್ತಾಗಿರುವುದನ್ನು ಮೂರು ಕಾಲದಲ್ಲಿಯೂ ಇಲ್ಲವೆಂದು ನಿಷೇಧಮಾಡುವುದು ವ್ಯಾಹತವಾಗುತ್ತದೆ. ಹೀಗೆ ಪರಿಚ್ಛಿನ್ನತ್ವಹೇತುವು ಮಿಥ್ಯಾತ್ವಕ್ಕೆ ವಿರುದ್ಧವಾಗುವುದು.

**ನಾಪಿ ತಥಾ ಧೀಮಾತ್ರಂ । ಮಾತ್ರ ಶಬ್ದೇನ ಏಕಕಾಲಾದಿ ಮಾತ್ರೇ ಸತ್ವರೂಪ ಅರ್ಥಾಭಾವೋಕ್ತೌ ಭ್ರಮೋಕ್ತೌ ಚ ಪ್ರಪಂಚೇ ಮಮಾಸಿದ್ಧೇಃ । ಪ್ರಮಾಭ್ರಮ ಸಾಧಾರಣ ಧೀತ್ವ ಸಾಮಾನ್ಯೋಕ್ತೌ ಆತ್ಮನ್ಯಪಿ ತಾದೃಶ ಭ್ರಮಸಂಭವೇನ ವ್ಯಭಿಚಾರಾತ್ । ವ್ಯಾವಹಾರಿಕ ಪ್ರಮೋಕ್ತೌ ರೂಪ್ಯಾದೌ ಅಭಾವಾತ್ ॥**

'ಏಕಕಾಲಾದಿ ಮಾತ್ರದಲ್ಲಿ ಸತ್ವವು ಪರಿಚ್ಛಿನ್ನತ್ವ' ಎನ್ನುವುದಕ್ಕೆ 'ಏಕಕಾಲಾದಿ ಮಾತ್ರದಲ್ಲಿ ಸತ್ವವೆನ್ನುವ ಜ್ಞಾನಮಾತ್ರ ವಿವಕ್ಷಿತವಾಗಿದೆ'—ಎಂದು ಹೇಳುವುದೂ ಸರಿಯಲ್ಲ. ಏಕೆಂದರೆ 'ಜ್ಞಾನ ಮಾತ್ರ' ಶಬ್ದದಿಂದ ಜ್ಞಾನಮಾತ್ರವಿದೆ, 'ಏಕಕಾಲಾದಿ ಮಾತ್ರದಲ್ಲಿ ಸತ್ವ'ವೆಂಬ ವಿಷಯವಿಲ್ಲ' ಎಂದು ಹೇಳುವ ಅಭಿಪ್ರಾಯವಿರಬಹುದು, ಅಥವಾ ಇವನು 'ಕೇವಲ ಬ್ರಾಹ್ಮಣ'ನಷ್ಟೆ! ಎಂದರೆ ಒಳ್ಳೆಯ ಬ್ರಾಹ್ಮಣ ಅಲ್ಲ ಎಂಬ ಅಭಿಪ್ರಾಯ. ಹಾಗೇ 'ಜ್ಞಾನ ಮಾತ್ರ' ಎಂದರೆ ಒಳ್ಳೆಯ ಜ್ಞಾನವಲ್ಲ, ಭ್ರಮವೆ ಎಂಬ ಅಭಿಪ್ರಾಯವನ್ನು ಹೇಳಬಹುದು. ಆದರಿಂದ 'ಏಕಕಾಲಾದಿ ಮಾತ್ರದಲ್ಲಿ ಸತ್ವವೆನ್ನುವ ಭ್ರಮವಿರುತ್ತದೆ' ಎಂದು ಹೇಳುವ ಅಭಿಪ್ರಾಯವಿದ್ದರೆ, ಪ್ರಪಂಚದಲ್ಲಿ ಈ ಪರಿಚ್ಛಿನ್ನತ್ವಹೇತು ನನಗೆ ಅಸಿದ್ಧ. ಏಕೆಂದರೆ ಪ್ರಪಂಚದಲ್ಲಿ ಜ್ಞಾನದಲ್ಲಿ ಕಾಣುವ ಏಕಕಾಲೇ ಸತ್ವವೆಂಬ ವಿಷಯವಿದೆ ಎಂದು ಒಪ್ಪಿದವನು ನಾನು. ಆ ಜ್ಞಾನವು ಭ್ರಮವಲ್ಲ ಎಂದೂ ಅಂಗೀಕರಿಸಿದ್ದೇನೆ. ಜ್ಞಾನದಲ್ಲಿ ಕಾಣುವ ವಿಷಯ ವಸ್ತುತಃ ಇಲ್ಲವೆಂದರೂ ಜ್ಞಾನವು ಭ್ರಮವೆಂದರೂ ಅರ್ಥದಲ್ಲಿ ವ್ಯತ್ಯಾಸವಿಲ್ಲ.

'ಭ್ರಮ' ಎಂದನ್ನುವುದಿಲ್ಲ, ಭ್ರಮಪ್ರಮಾಸಾಧಾರಣವಾಗಿ 'ಜ್ಞಾನ'ವೆನ್ನುತ್ತೇನೆ'—ಎಂದರೆ, ಆತ್ಮನಲ್ಲಿಯೂ ಕೂಡ ಏಕಕಾಲಮಾತ್ರ ಸತ್ತ್ವವೆಂದು ಭ್ರಮರೂಪಜ್ಞಾನ ಸಂಭವವಿರುವುದರಿಂದ ಈ ಪರಿಚ್ಛಿನ್ನತ್ವ ಹೇತುವಿಗೆ ಆತ್ಮನಲ್ಲಿ ವ್ಯಭಿಚಾರ.

'ಜ್ಞಾನ ಮಾತ್ರ ಎಂದಾಗ ತತ್ತ್ವಾವೇದಕವಾದ ಜ್ಞಾನವಲ್ಲ. ವ್ಯಾವಹಾರಿಕ ಪ್ರಮೆ ವಿವಕ್ಷಿತವಾಗಬಹುದು. ಆದರಿಂದ 'ಜ್ಞಾನ ಮಾತ್ರ ಶಬ್ದದಿಂದ ವ್ಯಾವಹಾರಿಕ ಪ್ರಮಾ ವಿವಕ್ಷಿತ' ಎಂದರೆ ಶುಕ್ತಿರೂಪ್ಯದಲ್ಲಿ ಏಕಕಾಲಸತ್ತ್ವ ಪ್ರಮಾ ಇಲ್ಲದಿರುವುದರಿಂದ ದೃಷ್ಟಾಂತದಲ್ಲಿ ಸಾಧನ ವೈಕಲ್ಯ.

**ನಾಪಿ ಕಾಲಾಂತರಾದೌ ಅಸತ್ತ್ವಂ। ತೇನ ಸ್ವಕಾಲಾದಾವಪಿ ಅಸತ್ತ್ವಸಾಧನೇ, ಪ್ರಮಾಣವಿರೋಧಸ್ಯ ಅವಿಶಿಷ್ಟತಯಾ, ಸ್ವಕಾಲಾದೌ ಸತ್ತ್ವೇನ ಕಾಲಾಂತರಾದೌ ಸತ್ತ್ವಸಾಧನಾ ಪಾತಾತ್। ರೂಪಾಂತರೇಣ ಅಸತೋ ಬ್ರಹ್ಮಣಃ ಸ್ವರೂಪೇಣಾಪಿ ಅಸತ್ತ್ವಾಪಾತಾಚ್ಚ। ರೂಪ್ಯಾದೇಃ ವಿಯದಾದೇಶ್ಚ ಸ್ವಕಾಲೇಽಪಿ ಅಸದ್ವಿಲಕ್ಷಣ ಸ್ವರೂಪಾಭಾವಾಪಾತಾಚ್ಚ।**

'ಕಾಲಾದಿ ಪರಿಚ್ಛಿನ್ನತ್ವ'ವೆಂದರೆ ಕಾಲಾಂತರ ದೇಶಾಂತರಗಳಲ್ಲಿ ಅಸತ್ತ್ವವೆಂದು ವಿವಕ್ಷಿತ ವಾಗಿದೆ— ಎಂದು ಹೇಳುವುದೂ ಸರಿಯಲ್ಲ, ಕಾಲಾಂತರದಲ್ಲಿಲ್ಲ, ದೇಶಾಂತರದಲ್ಲಿಲ್ಲ ಎಂದಮಾತ್ರಕ್ಕೆ ಸ್ವಕಾಲದಲ್ಲಿಯೂ ಇಲ್ಲ, ಸ್ವದೇಶದಲ್ಲಿಯೂ ಇಲ್ಲ, ಯಾವಕಾಲದಲ್ಲಿಯೂ ಇಲ್ಲ, ಯಾವ ದೇಶದಲ್ಲಿಯೂ ಇಲ್ಲ ಎಂದು ನೀನು ಮಿಥ್ಯಾತ್ವಸಾಧನೆ ಮಾಡುವುದು ಶಕ್ಯವಿಲ್ಲ, ಪ್ರಮಾಣವಿರೋಧ ಬರುತ್ತದೆ. ಆದರೂ ಸಾಧನೆ ಮಾಡುತ್ತೇನೆ ಎಂದರೆ ಸ್ವಕಾಲದಲ್ಲಿ ಸ್ವದೇಶದಲ್ಲಿ ಘಟಾದಿಗಳು ಇರುವುದರಿಂದ ಕಾಲಾಂತರ ದೇಶಾಂತರಗಳಲ್ಲಿ, ಎಲ್ಲ ಕಾಲ ಎಲ್ಲ ದೇಶಗಳಲ್ಲಿ ಘಟಾದಿಗಳಿವೆ ಎಂದು ನಾನು ಏಕೆ ಸಾಧನೆ ಮಾಡಬಾರದು? ಪ್ರಮಾಣ ವಿರೋಧವಿದೆ ಎಂದರೆ, ಪ್ರಮಾಣವಿರೋಧ ನಿನ್ನ ಮಿಥ್ಯಾತ್ವಸಾಧನೆಯಲ್ಲಿಯೂ ಇದೆ.

'ನಾನು ಘಟಾದಿಗಳನ್ನು ಕಾಲಾಂತರದಲ್ಲಿ ಸ್ವರೂಪೇಣ ಅಸತ್ತೆನ್ನುವುದಿಲ್ಲ, ರೂಪಾಂತರದಿಂದ ಅಂದರೆ ಪ್ರತೀತಿ ಸಿದ್ಧವಾದ ರೂಪಕ್ಕಿಂತ ವ್ಯತಿರಿಕ್ತರೂಪದಿಂದ ಅಸತ್ತೆನ್ನುತ್ತೇನೆ'—ಎಂದರೆ, ಹೇಳುತ್ತೇನೆ, ನಿರ್ಧರ್ಮಕನಾದ್ದರಿಂದ ಪಾರಮಾರ್ಥಿಕತ್ವರೂಪದಿಂದ ಅಥವಾ ಮಿಥ್ಯಾತ್ವ ಕ್ಷಣಿಕತ್ವಾದಿ ರೂಪದಿಂದ ಅಸತ್ತಾದ ಬ್ರಹ್ಮನು ಸ್ವರೂಪದಿಂದಲೂ ಅಸತ್ತೇ ಎಂದು. ಮತ್ತು ಪಾರಮಾರ್ಥಿಕತ್ವ ವ್ಯಾವಹಾರಿಕತ್ವಾದಿ ರೂಪದಿಂದ ಅಸತ್ತಾದ ಶುಕ್ತಿರೂಪ್ಯಾದಿಯು ಸ್ವರೂಪದಿಂದಲೇ ಅಸತ್ತೆಂದೂ ಹೇಳುತ್ತೇನೆ. ಮತ್ತು ಕಾಲಾಂತರದಲ್ಲಿ ಅಸತ್ತ್ವದಿಂದ ರೂಪ್ಯಾದಿ ವಿಯದಾದಿಗಳಿಗೆ ಸ್ವಕಾಲದಲ್ಲಿಯೂ ಅಸದ್ವಿಲಕ್ಷಣ ಸ್ವರೂಪೇಣ ಅಸತ್ತ್ವವನ್ನು ಹೇಳುತ್ತೇನೆ.

ಇದನ್ನು ಇಷ್ಟಾಪತ್ತಿ ಎನ್ನಲಾಗದು, ಅಸದ್ವಿಲಕ್ಷಣಸ್ವರೂಪ ಅನುಪಮರ್ದೇನ ಪಾರಮಾರ್ಥಿಕತ್ವಾಕಾರೇಣ ನಿಷೇಧ ಮಾಡುವವನು, ನೀನು. ಇಲ್ಲದಿದ್ದರೆ ರೂಪ್ಯಾದಿವಿಯದಾದಿ ಗಳಲ್ಲಿ ಪ್ರವೃತ್ತಿಯೇ ಕೂಡಲಾರದು. ಮತ್ತು ಸ್ವಸಿದ್ಧಾಂತವಿರೋಧವೂ ಬಂದೀತು.

**ಏತೇನ 'ಯತ್ ಸತ್, ತತ್ ಸದಾ ಸರ್ವತ್ರ ಸದೇವ। ನಹಿ ರೂಪಂ ಕದಾಚಿತ್ ಕುತ್ರಚಿತ್' ಗಂಧೋ ಭವತಿ। ತಥಾ ಚ ಯತ್ ಕದಾಚಿತ್ ಕುತ್ರಚಿತ್ ಅಸತ್, ತತ್ ಸದಾ ಸರ್ವತ್ರ ಅಸದೇವ' ಇತಿ ವಾಚಸ್ಪತೀಯಂ ಶೂನ್ಯವಾದ್ಯುಕ್ತ ಯುಕ್ತ್ಯುದ್ಗಿರಣಂ ನಿರಸ್ತಂ।**

ಭಾಮತೀಕಾರ ಹೇಳುತ್ತಾನೆ— 'ಯಾವುದು ಸತ್ತೋ ಅದು ಸದಾ ಸರ್ವತ್ರ ಸತ್ತೇ. ರೂಪವು ಎಂದೂ ಎಲ್ಲಿಯೂ ಗಂಧವಾಗುವುದಿಲ್ಲ. ಹೀಗಾಗಿ ಯಾವುದು ಒಂದು ಕಾಲದಲ್ಲಿ ಒಂದು ದೇಶದಲ್ಲಿ ಅಸತ್ತಾಗಿರುವುದೋ ಅದು ಎಲ್ಲ ಕಾಲ ಎಲ್ಲ ದೇಶಗಳಲ್ಲಿ ಅಸತ್ತೇ ಆಗಿರುತ್ತದೆ'—ಇದು ಶೂನ್ಯವಾದಿ ಹೇಳಿದ ಯುಕ್ತಿಯ ವಮನ. ಈಗ ಇದೂ ನಿರಸ್ತವಾಯಿತು.

'ಮುಂದೆ ಭಾವಿ ಬಾಧಕದಶಾದಲ್ಲಿ ಪ್ರಪಂಚ ಅಸತ್ತಾಗುತ್ತದೆ. ಮುಂದೆ ಅಸತ್ತಾಗಬೇಕಾದರೆ ಈಗಲೂ ಅದು ಅಸತ್ತೇ ಆಗಿರಬೇಕು. ಇಲ್ಲದಿದ್ದರೆ ಈಗ ಸತ್ತಾದುದು ಮುಂದೆ ಅಸತ್ತಾಗಲಾರದು. ರೂಪವು ಎಂದೂ ಗಂಧವಾಗುವುದಿಲ್ಲ' ಎಂದು ಬೌದ್ಧಶೂನ್ಯವಾದಿ ಹೇಳುವುದು ಜಗದಸತ್ವವಾದಿ ಯಾದ ಆತನಿಗೆ ಅನುಕೂಲವಾಗಿದೆ. ಜಗತ್ತಿಗೆ ಅಸದ್‌ವಿಲಕ್ಷಣ ಸ್ವರೂಪವನ್ನು ಅಂಗೀಕರಿಸುವ ಮಾಯಾವಾದಿ ಜಗದಸತ್ವಸಾಧಕವಾದ ಈ ಯುಕ್ತಿಯನ್ನು ಅರಗಿಸಿಕೊಳ್ಳಲಾರದೆ ವಾಂತಿಮಾಡು ತ್ತಾನೆ. ಕಾಲಾಂತರದಲ್ಲಿ ಜಗತ್ತಿಗೆ ಅಸತ್ವವು ಬಂದರೂ ಸ್ವಕಾಲದಲ್ಲಿ ಅಸತ್ವ ಬರಲು ಅದು ಪ್ರಯೋಜಕವಾಗುವುದಿಲ್ಲ. ಸ್ವಕಾಲದಲ್ಲಿ ಸತ್ವವೇ ಇರಬಹುದು.

ಒಂದೇ ಪದಾರ್ಥದಲ್ಲಿ ಸತ್ವ ಅಸತ್ವಗಳು ವಿರುದ್ಧವೆನ್ನಕೂಡದು. ಸ್ವಕಾಲಾವಚ್ಛೇದೇನ ಸತ್ವ ಕಾಲಾಂತರಾವಚ್ಛೇದೇನ ಅಸತ್ವವೆಂದು ಅವಚ್ಛೇದಕ ಭೇದದಿಂದ ಅವಿರೋಧ ಕೂಡುವುದು. ಹಾಗಾದರೆ ರೂಪವು ಎಂದಾದರೂ ಗಂಧವಾದೀತೆ? ಎಂದರೆ, ರೂಪತ್ವ ಗಂಧತ್ವಗಳಿಗೆ ಸರ್ವದಾ ವಿರೋಧವು ಪ್ರಮಾಣ ಸಿದ್ಧವಾಗಿದೆ, ಆದರೂ ರೂಪವು ಗಂಧವಾದೀತೆಂದು ಆಪಾದನೆ ಮಾಡಬೇಕೆಂದರೆ ಅದಕ್ಕೆ ಕಾರಣಾಂತರವೇನಿಲ್ಲ. ಆದರಿಂದ ಭಾಮತ್ಯುಕ್ತ ಯುಕ್ತಿ ಅಯುಕ್ತವೆ.

❖❖❖

**ननु देशपरिच्छिन्नत्वं सर्वमूर्तासंयोगित्वं वा परम-महत्परिमाणानधिकरणत्वं वा महत्त्वानधिकरणपरिमाणाधिकरणत्वं वेति चेन्न ।**

**आद्ययोरसङ्गे निर्गुणे च ब्रह्मण्यपि भावात् । अंत्यस्य गुणादावप्यभावात् । कालपरिच्छिन्नत्वमन्योन्याभावादौ प्रतिवाद्यसिद्धं च ।**

न तृतीयः । तद्धि भिन्नत्वम् । तस्य च तात्त्विकस्य प्रपञ्चेऽप्यभावात् । आत्मन्यप्यनृतव्यावृत्तिस्तात्त्विकीति वक्ष्यमाणत्वाच्च । कल्पितस्य त्वात्मन्यपि भावात् । धर्मिसमसत्वस्य रूप्येऽपि ममाभावात् । भिन्नत्वमात्रस्य चाध्यस्ताद्भेदेन सत्वेऽप्युपपत्तेः । सत्याद्भेदस्य चासिद्धेः ।

एतेन यदुक्तं प्रमाणमालायां— ''विवादाध्यासिताः स्वानुगतप्रतिभासे वस्तुनि कल्पिताः । विभक्तत्वात् । यथा सर्पमालादिकं स्वानुगते रज्वा इदमंशे सदर्थे च ब्रह्मण्यनुगच्छति पटादिकं विभज्यते सन्घटः सन्पट इति प्रतीते''रिति— निरस्तम् ।

विभक्तत्वं हि न तावद्विभिन्नत्वं कादाचित्कत्वं वा क्वाचित्कत्वं वा । निरस्तत्वात् । नापि बाधकदशायां निषिध्यमानत्वम् । साध्यावैशिष्ट्यात् । नापि कदाचिदेव प्रकाशमानत्वम् । सुखदुःखादिभोगे असिद्धेः । अप्रयोजकत्वाच्च । युक्तो हि सतोऽपि प्रकाशसामग्र्याः कादाचित्कत्वेन कदाचिदेवेच्छादिवत्प्रकाशोऽपि । नाप्यननुगतत्वम् । अननुगतानां घटपटादीनां चलनादौ रूपादौ द्रव्यत्वादौ ध्वंसादावनात्मत्वादौ च खपुष्पनृशृङ्गादीनां चासति आत्मनश्च सदर्थेऽनध्यासात् । अस्ति हि घटश्चलति पटश्चलति घटो रूपी पटो रूपी घटो द्रव्यं पटो द्रव्यं घटो ध्वस्तः पटो ध्वस्तः अनात्मा घटः अनात्मा पटः खपुष्पमसत् नृशृङ्गमसत् आत्मा सन्नित्यादिधीः ।।

सकलमूर्तसंयोगि देशकालाद्यनभ्युपगन्तुः शङ्क्यमित्यसिद्ध्युद्भावनमुपेक्ष्य व्यभिचारमाह आद्ययोरिति ।। यद्यपि निर्गुण इत्यनेनैवोभयव्यभिचारप्रदर्शनं भवति संयोगस्यापि गुणत्वादित्यसङ्ग इत्यधिकम्, तथापि प्रथमहेतु सत्वे प्रकारान्तरमप्यस्तीति सूचयितुं तदुक्तिरित्यवधेयम् ।। **प्रतिवाद्यसिद्धमिति** ।। नैयायिकाद्यसिद्धमित्यर्थः । तद्धीति ।। वस्तुतः परिच्छिन्नत्वमित्यर्थः ।। ननु भिन्नत्वं

तात्विकमतात्विकं वा साधारणं वेति विकल्प्याद्ये दोषमाह **तस्यचेति** ।। **वक्ष्यमाणत्वाच्चेति** ।। अखण्डार्थवाद इति शेषः । **द्वितीय आह कल्पितस्य त्विति** ।। ननु कल्पितभिन्नत्वमात्रस्यात्मनि व्यभिचारेऽपि धर्मिसमसत्वेन विशेषितस्य तस्य न व्यभिचार इत्यत आह **धर्मिसमसत्वस्य चेति** ।। अपिशब्दो भिन्नक्रमः । ममापि मत इत्यर्थः । **तृतीय आह भिन्नत्वमात्रस्य चेति** ।। **सत्यादिति** ।। सत्यत्वावच्छिन्नादित्यर्थः ।। **स्वानुगतप्रतिभास इति** ।। स्वानुगततया प्रतिभासो यस्य तस्मिन्नित्यर्थः । पक्षदृष्टान्तयोर्हेतुमुपपादयति **यथेति** ।। **स्वानुगत इति** ।। स्वानुगततया प्रतीयमान इत्यर्थः ।। **इदमंश इति** ।। विभज्यत इत्येतदत्रापि सम्बध्यते । पक्षे हेतुसत्वे प्रमाणमाह **सन्घट इति** ।। ननु कदाचिदेव प्रतीयमानत्वं सर्वदा प्रकाशमानत्वाभावो विवक्षित इति नासिद्धिरित्यत आह **अप्रयोजकत्वाच्चेति** ।। **अननुगतत्वमिति** ।। परस्परव्यावृत्तत्वमित्यर्थः ।। **अनध्यासादिति** ।। तथाचाननुगतत्वं अनुगतत्वं वा अध्यस्तत्वे अधिष्ठानत्वे वा न प्रयोजकमिति भावः ।

❖❖❖

**ನನು 'ದೇಶ ಪರಿಚ್ಛಿನ್ನತ್ವಂ ಸರ್ವಮೂರ್ತಾಸಂಯೋಗಿತ್ವಂ ವಾ, ಪರಮ ಮಹತ್‌ಪರಿಮಾಣ ಅನಧಿಕರಣತ್ವಂ ವಾ, ಮಹತ್ತ್ವಾನಧಿಕರಣ ಪರಿಮಾಣಾಧಿಕರಣತ್ವಂ ವಾ' ಇತಿ ಚೇನ್ನ । ಆದ್ಯಯೋಃ ಅಸಂಗೇ ನಿರ್ಗುಣೇ ಚ ಬ್ರಹ್ಮಣ್ಯಪಿ ಭಾವಾತ್ । ಅಂತ್ಯಸ್ಯ ಗುಣಾದಾವಪಿ ಅಭಾವಾತ್ । ಕಾಲ ಪರಿಚ್ಛಿನ್ನತ್ವಂ ಅನ್ಯೋನ್ಯಾಭಾವಾದೌ ಪ್ರತಿವಾದ್ಯಸಿದ್ಧಂ ಚ ।**

'ದೇಶಪರಿಚ್ಛಿನ್ನತ್ವವೆಂದರೆ ಸರ್ವಮೂರ್ತಅಸಂಯೋಗಿತ್ವ. ಅಥವಾ ಪರಮಹತ್‌ಪರಿಮಾಣ ಅನಧಿಕರಣತ್ವ. ಅಥವಾ ಮಹತ್ತ್ವಾನಧಿಕರಣ ಪರಿಮಾಣ ಅಧಿಕರಣತ್ವ ಎಂದು ಹೇಳುತ್ತೇನೆ' ಎಂದರೆ, ಅದೂ ಸರಿಯಲ್ಲ. ಮೊದಲಿನ ಎರಡು ಬಗೆಯ ದೇಶಪರಿಚ್ಛಿನ್ನತ್ವಹೇತುವೂ ಅಸಂಗನಾದ ನಿರ್ಗುಣ ನಾದ ಬ್ರಹ್ಮನಲ್ಲಿರುವುದರಿಂದ ವ್ಯಭಿಚಾರ. ಬ್ರಹ್ಮ ಅಸಂಗನಾದ್ದರಿಂದ ಸರ್ವಮೂರ್ತಾ ಸಂಯೋಗಿತ್ವ ಹೇತುವಿಗೆ ವ್ಯಭಿಚಾರ. ಬ್ರಹ್ಮ ನಿರ್ಗುಣನಾದ್ದರಿಂದ ಪರಮಹತ್‌ಪರಿಮಾಣಾನಧಿಕರಣತ್ವ ಎಂಬ ಎರಡನೆ ಹೇತುವಿಗೆ ವ್ಯಭಿಚಾರ.

ಯದ್ಯಪಿ 'ನಿರ್ಗುಣೇ' ಅಂದರೆ ನಿರ್ಗುಣನಾದ್ದರಿಂದಲೆ ಎರಡೂ ಹೇತುಗಳಿಗೆ ಬ್ರಹ್ಮನಲ್ಲಿ ವ್ಯಭಿಚಾರವೆನ್ನಬಹುದು. 'ಅಸಂಗೇ' 'ಅಸಂಗನಾದ್ದರಿಂದ' ಎಂದು ಬೇರೆ ಹೇತುವನ್ನು

ಹೇಳಬೇಕಾಗಿರಲಿಲ್ಲ. ಆದರೂ ಸರ್ವಮೂರ್ತಾಸಂಯೋಗಿತ್ವ ಹೇತುವಿಗೆ ಬ್ರಹ್ಮನಲ್ಲಿ ವ್ಯಭಿಚಾರವನ್ನು ನಿರ್ಗುಣತ್ವಮಾತ್ರದಿಂದಲೇ ಅಲ್ಲದೆ ಅಸಂಗತ್ವರೂಪ ಪ್ರಕಾರಾಂತರದಿಂದಲೂ ಹೇಳಲು ಬರುತ್ತದೆ ಎಂಬ ಅಭಿಪ್ರಾಯದಿಂದ 'ಅಸಂಗೇ' ಎಂದು ಹೇಳಿದ್ದಾರೆ. ಅದರಿಂದ ಅದು ವ್ಯರ್ಥವಲ್ಲ.

ದೇಶಕಾಲಾದಿಗಳು ಸಕಲ ಮೂರ್ತಸಂಯೋಗಿಯಾಗಿವೆ, ಪರಮ ಮಹತ್ ಪರಿಮಾಣಾಧಿಕರಣವಾಗಿವೆ, ಮತ್ತು ಮಹತ್ವಾನಧಿಕರಣವಾದ ಪರಿಮಾಣಕ್ಕೆ ಅನಧಿಕರಣವೂ ಆಗಿವೆ. ಅದರಿಂದ ಅಪರಿಚ್ಛಿನ್ನವಾಗಿವೆ. ಪರಿಚ್ಛಿನ್ನತ್ವ ಹೇತುವಿಗೆ ಈ ದೇಶಕಾಲಾದಿಗಳಲ್ಲಿ ಅಸಿದ್ಧಿ ಸ್ಪಷ್ಟವೇ ಇದೆ. ಅದನ್ನು ಬಿಟ್ಟು ಬ್ರಹ್ಮನಲ್ಲಿ ವ್ಯಭಿಚಾರವನ್ನು ಏಕೆ ಹೇಳಿದರು? ಎಂದರೆ, ಸರ್ವಮೂರ್ತ ಸಂಯೋಗಿಯಾದ ಮಹತ್ ಪರಿಮಾಣಾಧಿಕರಣವಾದ ದೇಶಕಾಲಾದಿಗಳನ್ನು ಒಪ್ಪದಿರುವ ಪೂರ್ವಪಕ್ಷಿಯು ಈ ಪರಿಚ್ಛಿನ್ನತ್ವ ಪರಿಷ್ಕಾರಗಳನ್ನು ಹೇಳುತ್ತಾನೆ. ಆದರಿಂದ ಅವನಿಗೆ ಅಸಿದ್ಧಿ ದೋಷವನ್ನು ಹೇಳಲಾಗುವುದಿಲ್ಲ. ಮಹತ್ವಾನಧಿಕರಣ ಪರಿಮಾಣಾಧಿಕರಣತ್ವವೆಂಬ ಮೂರನೆ ಬಗೆಯ ದೇಶಪರಿಚ್ಛಿನ್ನತ್ವವೆಂಬ ಹೇತುವು ಗುಣಕರ್ಮಾದಿಗಳಲ್ಲಿಯೂ ಇಲ್ಲದ್ದರಿಂದ ಭಾಗಾಸಿದ್ಧಿ.

ಮೂರೂ ಬಗೆಯ ದೇಶಪರಿಚ್ಛಿನ್ನತ್ವಗಳಿಗೂ ಅವಕಾಶ ಮತ್ತು ಪ್ರಕೃತ್ಯಾದಿಗಳಲ್ಲಿ ಅಸಿದ್ಧಿಯು ಸ್ಪಷ್ಟವೇ ಇದೆ.

ಕಾಲಪರಿಚ್ಛಿನ್ನತ್ವಹೇತು ಅನ್ಯೋನ್ಯಾಭಾವಾದಿಗಳಲ್ಲಿ ಪ್ರತಿವಾದಿಯಾದ ತಾರ್ಕಿಕನಿಗೆ ಅಸಿದ್ಧವೂ ಆಗಿದೆ.

### ವಸ್ತುತಃ ಪರಿಚ್ಛಿನ್ನತ್ವ ನಿರಾಸ

**ನ ತೃತೀಯಃ। ತದ್ಧಿ ಭಿನ್ನತ್ವಂ। ತಸ್ಯ ತಾತ್ವಿಕಸ್ಯ ಪ್ರಪಂಚೇऽಪ್ಯಭಾವಾತ್। ಆತ್ಮನ್ಯಪಿ ಅನೃತವ್ಯಾವೃತ್ತಿಃ ತಾತ್ವಿಕೀ ಇತಿ ವಕ್ಷ್ಯಮಾಣತ್ವಾಚ್ಚ। ಕಲ್ಪಿತಸ್ಯ ತು ಆತ್ಮನ್ಯಪಿ ಭಾವಾತ್। ಧರ್ಮಿ ಸಮಸತ್ವಸ್ಯ ರೂಪ್ಯೇऽಪಿ ಮಮಾಭಾವಾತ್। ಭಿನ್ನತ್ವ ಮಾತ್ರಸ್ಯ ಅಧ್ಯಸ್ತಾದ್‌ಭೇದೇನ ಸತ್ವೇऽಪಿ ಉಪಪತ್ತೇಃ। ಸತ್ಯಾತ್ ಭೇದಸ್ಯ ಚ ಅಸಿದ್ಧೇಃ।**

ವಸ್ತುತಃಪರಿಚ್ಛಿನ್ನತ್ವರೂಪವಾದ ಮೂರನೆ ಪರಿಚ್ಛಿನ್ನತ್ವವೂ ಯುಕ್ತವಲ್ಲ. ಏಕೆಂದರೆ ವಸ್ತುತಃ ಪರಿಚ್ಛಿನ್ನತ್ವವು ಭಿನ್ನತ್ವವೆ. ತಾತ್ವಿಕವಾದ ಭಿನ್ನತ್ವವು ಬ್ರಹ್ಮನಲ್ಲಿ ಮಾತ್ರವಲ್ಲದೆ ಪ್ರಪಂಚದಲ್ಲಿಯೂ ಇಲ್ಲ. ಆದರಿಂದ ಅಸಿದ್ಧಿ, ಆತ್ಮನಲ್ಲಿಯೂ ಅನೃತವ್ಯಾವೃತ್ತಿ ತಾತ್ವಿಕವಾಗಿದೆ ಎಂದು ಮುಂದೆ ಅಖಂಡಾರ್ಥ ವಾದದಲ್ಲಿ ಹೇಳುತ್ತೇವೆ. ಅದರಿಂದ ವ್ಯಭಿಚಾರ. ಕಲ್ಪಿತವಾದ ಭಿನ್ನತ್ವ ವಿವಕ್ಷಿತವೆಂದರೆ ಅದು ಆತ್ಮನಲ್ಲಿಯೂ ಇರುವುದರಿಂದ ವ್ಯಭಿಚಾರವೆ. ಧರ್ಮಿಸತ್ತಾಸಮಾನ ಸತ್ತಾಕವಾದ ಭಿನ್ನತ್ವವು ಶುಕ್ತಿರೂಪ್ಯದಲ್ಲಿ ನನ್ನ ಮತದಲ್ಲಿಯೂ ಇಲ್ಲ. ಅದರಿಂದ ದೃಷ್ಟಾಂತದಲ್ಲಿ ಸಾಧನ ವೈಕಲ್ಯ. ಭಿನ್ನತ್ವ ಮಾತ್ರವೆ ಹೇತು ಎಂದರೆ ಮಿಥ್ಯಾತ್ವಕ್ಕೆ ಅಪ್ರಯೋಜಕ. ಸತ್ಯತ್ವವಿದ್ದರೂ ಅಧ್ಯಸ್ತದಿಂದ ಭಿನ್ನತ್ವ

ಕೂಡುತ್ತದೆ. ಅಧ್ಯಸ್ತಭೇದರೂಪ ಹೇತುಸಿದ್ಧಿಯಿಂದ ಸತ್ಯತ್ವವೇ ಸಿದ್ಧವಾಗುತ್ತದೆ. ಸತ್ಯತ್ವಾವಚ್ಛಿನ್ನದಿಂದ ಭೇದವನ್ನು ಹೇತು ಮಾಡಿದರೆ ಅದು ಅಸಿದ್ಧ.

'ಸ್ವಸಮಾನ ಸತ್ತಾಕಭೇದ ಪ್ರತಿಯೋಗಿತ್ವರೂಪ ವಸ್ತುಪರಿಚ್ಛೇದ ವಿವಕ್ಷಿತ. ಇದಕ್ಕೆ ಬ್ರಹ್ಮತುಚ್ಛಗಳಲ್ಲಿ ವ್ಯಭಿಚಾರವಿಲ್ಲ. ಪ್ರಪಂಚದಲ್ಲಿ ಅಸಿದ್ಧಿಯೂ ಇಲ್ಲ' ಎಂದು ಸಿದ್ಧಿಕಾರ ಹೇಳುತ್ತಾನೆ. ಆದರೆ ದೃಷ್ಟಾಂತದಲ್ಲಿ ಸಾಧನ ವೈಕಲ್ಯವಿದೆ. ರೂಪ್ಯಪ್ರತಿಯೋಗಿಕ ಘಟಾದಿನಿಷ್ಠ ಭೇದ ವ್ಯಾವಹಾರಿಕವಾದ್ದರಿಂದ ಸ್ವಸಮಾನಸತ್ತಾಕ ಭೇದಪ್ರತಿಯೋಗಿತ್ವವು ರೂಪ್ಯದಲ್ಲಿಲ್ಲ.

## 19. ವಿಭಕ್ತತ್ವಹೇತು ನಿರಾಸ

**ಏತೇನ ಯದುಕ್ತಂ ಪ್ರಮಾಣಮಾಲಾಯಾಂ 'ವಿವಾದಾಧ್ಯಾಸಿತಾಃ ಸ್ವಾನುಗತ ಪ್ರತಿಭಾಸೇ ವಸ್ತುನಿ ಕಲ್ಪಿತಾಃ। ವಿಭಕ್ತತ್ವಾತ್। ಯಥಾ ಸರ್ಪ ಮಾಲಾದಿಕಂ ಸ್ವಾನುಗತೇ ರಜ್ಜ್ವಾ ಇದಮಂಶೇ ಸದರ್ಥೇ ಚ ಬ್ರಹ್ಮಣಿ ಅನುಗಚ್ಛತಿ ಪಟಾದಿಕಂ ವಿಭಜ್ಯತೇ। ಸನ್ ಘಟಃ ಸನ್ ಪಟಃ ಇತಿ ಪ್ರತೀತೇಃ' ಇತಿ ನಿರಸ್ತಂ।**

'ವಿವಾದಗೋಚರವಾಗಿರುವ ಘಟಾದಿಗಳು ವಿಭಕ್ತವಾಗಿದ್ದು ತಮಗೆ ಅನುಗತವಾಗಿ ಭಾಸಮಾನವಾಗುವ ವಸ್ತುವಿನಲ್ಲಿ ಕಲ್ಪಿತವಾಗಿವೆ, ವಿಭಕ್ತವಾದ್ದರಿಂದ. ಇದಕ್ಕೆ ದೃಷ್ಟಾಂತ—ಸರ್ಪ ಮಾಲೆ ಮುಂತಾದವುಗಳು ವಿಭಕ್ತವಾಗಿದ್ದು ತಮಗೆ ಅನುಗತವಾಗಿ ಅಂದರೆ ಅನುಗತಿಕರ್ತೃವಾಗಿ ಭಾಸಮಾನವಾಗುವ ರಜ್ಜುವಿನ ಇದಮಂಶದಲ್ಲಿ ಕಲ್ಪಿತವಾಗಿವೆ. ಹೀಗೇ ಧರ್ಮಿಯಾದ ಬ್ರಹ್ಮವು ಅನುಗತವಾಗಿರುವಾಗ ಆರೋಪ್ಯವಾದ ಘಟಾದಿಗಳು ವಿಭಕ್ತವಾಗಿವೆ. ಸನ್ ಘಟಃ, ಸನ್ ಪಟಃ ಎಂದು ಮುಂತಾಗಿ'. ಹೀಗೆ ಪ್ರಮಾಣಮಾಲಾಗ್ರಂಥದಲ್ಲಿ ಆನಂದಬೋಧನ ಅನುಮಾನ ಪ್ರಯೋಗವಿದೆ.

ಒಂದು ಹಗ್ಗವನ್ನು ಕಂಡು 'ಇದು ಹಾವು' ಎಂದು 'ಇದು ಮಾಲೆ' ಎಂದು ನಾನಾರೀತಿಯಾಗಿ ಭ್ರಮಿಸುವುದುಂಟು. ಇಲ್ಲಿ ಹಾವು ಮಾಲೆ ಮುಂತಾದ ಅಂಶಗಳು ಪರಸ್ಪರ ವಿಭಕ್ತವಾಗಿದ್ದು ಅನನುಗತವಾಗಿದ್ದರೂ ಅಂದರೆ ಪರಸ್ಪರ ಭಿನ್ನವಾಗಿದ್ದರೂ ಅವುಗಳಿಗೆ ಅನುಗತವಾಗಿ ಅಭಿನ್ನವಾಗಿ ಭಾಸಮಾನವಾಗುವುದು 'ಇದು' ಎಂಬ ಹಗ್ಗದ ಒಂದು ಅಂಶ. ಈ ಒಂದು ಅಂಶದಲ್ಲಿಯೆ ಹಾವು ಮಾಲೆ ಮುಂತಾದ ಅನೇಕ ಪದಾರ್ಥಗಳು ತಾದಾತ್ಮ್ಯೇನ ಆರೋಪಿತವಾಗುತ್ತವೆ, ಕಲ್ಪಿತವಾಗುತ್ತವೆ. ಹಾಗೇ 'ಘಟವು ಸತ್ಯ', 'ಪಟವು ಸತ್ಯ' ಎಂದು ಮುಂತಾಗಿ ಅನನುಗತವಾದ ಘಟಾದಿಗಳಿಗೆ ಅನುಗತವಾಗಿ 'ಸತ್ಯ' ವಾದ ವಸ್ತು ಅಧಿಷ್ಠಾನವಾಗಿ ಭಾಸವಾಗುತ್ತದೆ. ಆದರಲ್ಲಿಯೆ ಘಟಾದಿಗಳು ತಾದಾತ್ಮ್ಯೇನ ಅಧ್ಯಸ್ತವಾಗುತ್ತವೆ' ಎಂದು ಆನಂದಬೋಧನು ಹೇಳುತ್ತಾನೆ. ಇದೂ ಸರಿಯಲ್ಲ.

**ವಿಭಕ್ತತ್ವಂ ಹಿ ನ ತಾವತ್ ವಿಭಿನ್ನತ್ವಂ, ಕಾದಾಚಿತ್ಕತ್ವಂ ವಾ ಕ್ವಾಚಿತ್ಕತ್ವಂ ವಾ। ನಿರಸ್ತತ್ವಾತ್।**

ಸರಿಯಲ್ಲ, ಏಕೆಂದರೆ ವಿಭಕ್ತತ್ವವು ವಿಭಿನ್ನತ್ವವಾಗಲಿ, ಕಾದಾಚಿತ್ಕತ್ವವಾಗಲಿ, ಕ್ವಾಚಿತ್ಕತ್ವವಾಗಲಿ ಅಲ್ಲ. ಏಕೆಂದರೆ ವಿಭಿನ್ನತ್ವವನ್ನು ವಸ್ತುಪರಿಚ್ಛಿನ್ನತ್ವರೂಪ ಹೇತುನಿರಾಸಮಾಡುವ ಮೂಲಕ ನಿರಾಸ ಮಾಡಿದ್ದೇವೆ. ಕಾದಾಚಿತ್ಕತ್ವ ಕ್ವಾಚಿತ್ಕತ್ವಗಳನ್ನು ಕಾಲಪರಿಚ್ಛಿನ್ನತ್ವ ದೇಶಪರಿಚ್ಛಿನ್ನತ್ವ ಹೇತು ನಿರಾಸಮಾಡುವ ಮೂಲಕ ನಿರಾಸ ಮಾಡಿದ್ದೇವೆ.

**ನಾಪಿ ಬಾಧಕದಶಾಯಾಂ ನಿಷಿಧ್ಯಮಾನತ್ವಂ, ಸಾಧ್ಯಾವೈಶಿಷ್ಟ್ಯಾತ್ । ನಾಪಿ ಕದಾಚಿದೇವ ಪ್ರಕಾಶಮಾನತ್ವಂ । ಸುಖದುಃಖಾದಿ ಭೋಗೇ ಅಸಿದ್ಧೇಃ । ಅಪ್ರಯೋಜಕತ್ವಾಚ್ಚ । ಯುಕ್ತೋ ಹಿ ಸತೋಽಪಿ ಪ್ರಕಾಶಸಾಮಾಗ್ರ್ಯಾಃ ಕಾದಾಚಿತ್ಕತ್ವೇ ಕದಾಚಿದೇವ ಇಚ್ಛಾದಿವತ್ ಪ್ರಕಾಶೋಽಪಿ ।**

ವಿಭಕ್ತತ್ವವೆಂದರೆ 'ಬಾಧಕಾವತಾರದಶಾದಲ್ಲಿ ನಿಷಿಧ್ಯಮಾನತ್ವ' ಎನ್ನುವುದೂ ಸರಿಯಲ್ಲ. 'ಸ್ವಾನುಗತ ಪ್ರತಿಭಾಸೇ ವಸ್ತುನಿ ಕಲ್ಪಿತತ್ವ ಸಾಧ್ಯವು ಕೂಡ ಪ್ರತಿಪನ್ನೋಪಾಧಿಸ್ಥ ನಿಷೇಧ ಪ್ರತಿಯೋಗಿತ್ವವೇ. ಕಲ್ಪಿತವೆಂದರೆ ಸ್ವಾಭಾವವತಿ ಪ್ರತೀಯಮಾನವೆಂದೇ ಅರ್ಥ. ಹೇತುವೂ ಕೂಡ ನಿಷಿಧ್ಯಮಾನತ್ವ, ನಿಷೇಧ ಪ್ರತಿಯೋಗಿತ್ವವೆಂದ ಮೇಲೆ, ಹೇತುವಿಗೆ ಸಾಧ್ಯಾವೈಶಿಷ್ಟ್ಯ ಬಂದಿತು.

ವಿಭಕ್ತತ್ವವೆಂದರೆ 'ಕದಾಚಿದೇವ ಪ್ರಕಾಶಮಾನತ್ವ' ಎನ್ನುವುದೂ ಸರಿಯಲ್ಲ. ಸುಖದುಃಖಾದಿ ಭೋಗವು ಜ್ಞಾತೈಕಸತ್ತಾದ್ದರಿಂದ ಉತ್ಪತ್ತಿಯ ಅನಂತರ ಅದು ಇರುವವರೆಗೆ ಸದಾ ಪ್ರಕಾಶಮಾನವೇ ಆಗಿರುತ್ತದೆ. ಕದಾಚಿದೇವ ಪ್ರಕಾಶಮಾನವಾಗಿರುವುದಿಲ್ಲ. ಆದರಿಂದ ಹೇತು ಅಲ್ಲಿ ಅಸಿದ್ಧ.

ಸದಾಪ್ರಕಾಶಮಾನತ್ವಾಭಾವ ವಿವಕ್ಷಿತ ಎಂದರೇ ಅದು ಮಿಥ್ಯಾತ್ವಕ್ಕೆ ಅಪ್ರಯೋಜಕ. ಏಕೆಂದರೆ ಇಚ್ಛಾದಿಗಳು ಸತ್ತಾದರೂ ಕದಾಚಿತ್ ಪ್ರಕಾಶಮಾನವಾಗಿವೆ. ಅನ್ನ ಸಿದ್ಧವೇ ಇದ್ದರೂ ಅದನ್ನು ಉಣ್ಣುವ ಇಚ್ಛೆ ಹಸಿವಿದ್ದರೆ ಮಾತ್ರ ಪ್ರಕಾಶಮಾನವಾಗುತ್ತದೆ. ಹಾಗೆಯೇ ಸತ್ಯವಾದ ವಸ್ತುವು ಕೂಡ ಅದರ ಪ್ರಕಾಶಕ್ಕೆ ತಕ್ಕುದಾದ ಇಂದ್ರಿಯಾರ್ಥಸನ್ನಿಕರ್ಷಾದಿರೂಪ ಸಾಮಗ್ರಿ ಇದ್ದರೆ ಮಾತ್ರ ಕದಾಚಿತ್ ಪ್ರಕಾಶಮಾನವಾಗುವುದು. ವಸ್ತು ಮಿಥ್ಯಾ ಆಗಿರಬೇಕಿಲ್ಲ.

**ನಾಪಿ ಅನನುಗತತ್ವಂ । ಅನನುಗತಾನಾಂ ಘಟಪಟಾದೀನಾಂ ಚಲನಾದೌ ರೂಪಾದೌ ದ್ರವ್ಯತ್ವಾದೌ ಧ್ವಂಸಾದೌ ಅನಾತ್ಮತ್ವಾದೌ ಚ, ಖಪುಷ್ಪ ನೃಶೃಂಗಾದೀನಾಂ ಚ ಅಸತಿ, ಆತ್ಮನಶ್ಚ ಸದರ್ಥೇ ಅನಧ್ಯಾಸಾತ್ । ಅಸ್ತಿ ಹಿ 'ಘಟಃ ಚಲತಿ, ಪಟಃ ಚಲತಿ' 'ಘಟೋ ರೂಪೀ, ಪಟೋ ರೂಪೀ' 'ಘಟೋ ದ್ರವ್ಯಂ, ಪಟೋ ದ್ರವ್ಯಂ' 'ಘಟೋ ಧ್ವಸ್ತಃ, ಪಟೋ ಧ್ವಸ್ತಃ' 'ಅನಾತ್ಮಾ ಘಟಃ, ಅನಾತ್ಮಾ ಪಟಃ' 'ಖಪುಷ್ಪಂ ಅಸತ್, ನೃಶೃಂಗಂ ಅಸತ್' 'ಆತ್ಮಾ ಸನ್' ಇತ್ಯಾದಿ ಧೀಃ ।**

'ವಿಭಕ್ತತ್ವವೆಂದರೆ ಅನನುಗತತ್ವ, ಪರಸ್ಪರವ್ಯಾವೃತ್ತತ್ವ' ಎಂದರೂ ಅದು ಸರಿಯಲ್ಲ. 'ಅನನುಗತವು ಸ್ವಾನುಗತದಲ್ಲಿ ಕಲ್ಪಿತವಾಗಿರುತ್ತದೆ, ರಜ್ಜುವಿನ ಇದಮಂಶವು ಅದರಲ್ಲಿ ಕಲ್ಪಿತವಾದ ಸರ್ಪಮಾಲೆ ಮುಂತಾದವುಗಳಲ್ಲಿ ಅನುಗತವಾಗಿದೆ' ಎಂದು ವ್ಯಾಪ್ತಿಯನ್ನು ಹೇಳಲು ಬರುವುದಿಲ್ಲ. ಅದಕ್ಕೆ ಸರ್ವತ್ರ ವ್ಯಭಿಚಾರ ಕಂಡುಬರುತ್ತದೆ. ಉದಾ: ಅನನುಗತವಾದ ಘಟಪಟಾದಿಗಳಲ್ಲಿ

ಚಲನಾದಿಗಳೂ ರೂಪಾದಿಗಳೂ ದ್ರವ್ಯತ್ವಾದಿಗಳೂ ಧ್ವಂಸಾದಿಗಳೂ ಅನಾತ್ಮತ್ವಾದಿಗಳೂ ಅನುಗತವಾಗಿವೆ. ಅವುಗಳಲ್ಲಿ ಘಟಪಟಾದಿಗಳು ಅಧ್ಯಸ್ತವಾಗಿಲ್ಲ. ಅನನುಗತವಾದ ಗಗನಾರವಿಂದ ನರವಿಷಾಣಾದಿಗಳು ಅವುಗಳಲ್ಲಿ ಅನುಗತವಾದ ಅಸತ್ತ್ವದಲ್ಲಿ ಆರೋಪಿತವಾಗಿಲ್ಲ. ಅನನುಗತರಾದ ದ್ವಿತೀಯಾಭಾವ-ಆತ್ಮರು ಅವರಲ್ಲಿ ಅನುಗತವಾದ 'ಸದ್'ವಸ್ತುವಿನಲ್ಲಿ ಅಧ್ಯಸ್ತರಾಗಿಲ್ಲ.

ಅನನುಗತತ್ವವಾಗಲಿ ಅನುಗತತ್ವವಾಗಲಿ ಅಧ್ಯಸ್ತತ್ವ ಅಥವಾ ಅಧಿಷ್ಠಾನತ್ವಕ್ಕೆ ಪ್ರಯೋಜಕವಲ್ಲ.

'ಚಲನಾದಿಗಳು ಯಾವುವೂ ಅನುಗತವಲ್ಲ, ಸದ್ ವಸ್ತು ಒಂದೇ ಅನುಗತ' ಎನ್ನಬಾರದು. 'ಘಟವು ಚಲಿಸುತ್ತದೆ. ಪಟವು ಚಲಿಸುತ್ತದೆ' 'ಘಟವು ರೂಪಿ, ಪಟವು ರೂಪಿ' 'ಘಟವು ದ್ರವ್ಯ, ಪಟವು ದ್ರವ್ಯ' 'ಘಟವು ಧ್ವಸ್ತ, ಪಟವು ಧ್ವಸ್ತ' 'ಘಟವು ಅನಾತ್ಮ, ಪಟವು ಅನಾತ್ಮ' 'ಖಪುಷ್ಪ ಅಸತ್, ನೃಶೃಂಗ ಅಸತ್' 'ಆತ್ಮವು ಸತ್, ದ್ವಿತೀಯಾಭಾವವು ಸತ್' ಇತ್ಯಾದಿ ಪ್ರತೀತಿಗಳಿವೆ. ಇಲ್ಲಿ ಎಲ್ಲ ಕಡೆ ವ್ಯಭಿಚಾರ.

❖❖❖

दृश्यते चैकत्रानेकेषामिवैकस्यापि रूप्यस्यानेकेषु शुक्तिवङ्गादिष्वध्यासः । एवं च सदर्थस्यैव घटादिष्वारोपः किं न स्यात् ।

एतेन विवादाध्यासितं सद्रूपे कल्पितम् । प्रत्येकं तदनुविद्धतया प्रतीयमानत्वात् । प्रत्येकं चन्द्रानुविद्धजलतरंगचन्द्रवदिति ब्रह्मसिद्ध्युक्तं निरस्तम् । खण्डो गौर्मुण्डो गौरिति प्रत्येकं गोत्वानुविद्धस्यापि खण्डादेस्तत्रानध्यासात् ।

किञ्च रूपादिहीनमासंसारमज्ञानावृतं शब्दैकगम्यं ब्रह्म सन्घटः सन् शब्द इत्यादिचाक्षुषादिज्ञाने न भाति । किंत्वनित्यो घट इत्यादौ अनित्यत्वादिकमिव सत्त्वमपि घटगतमेव ।

नच स्वरूपेणाप्रत्यक्षस्यापि राहोश्चन्द्रावच्छेदेनेव ब्रह्मणोऽपि घटाद्यवच्छेदेन प्रत्यक्षतेति युक्तम् । शब्दाद्यवच्छिन्नस्य गगनादेः श्रावणादित्वापातात् । राहोस्तु दूरदोषेणाज्ञातस्य नीलस्य शुक्लभास्वरचन्द्रसंबन्धाच्चाक्षुषता युक्तेति ।।

सहचारदर्शनमात्रेणाध्यस्ताधिष्ठानभाव स्वीकारेऽतिप्रसङ्गमाह दृश्यतेचेति ।। प्रत्येकं चन्द्रानुविद्धेति ।। प्रत्येकं चन्द्रोपरक्ततया प्रतीयमाना ये

जलतरङ्गचन्द्रास्तद्वदित्यर्थः । अत्रानुविद्धत्वोक्तिः दृष्टान्ते हेतुसत्वप्रतिपादनाय । अत्र च सामान्यव्याप्तिरभिमता । अतो न दृष्टान्तासिद्धिरिति ध्येयम् ।। **अनध्यासादिति** ।। तथाच खण्डादिष्वेव व्यभिचार इति भावः ।

ननु सद्रूपे कल्पितमिति साध्ये सच्छब्दार्थः किं ब्रह्मव्यतिरिक्तं, किं वा ब्रह्मैव ? न प्रथमः । अनभ्युपगमात् । द्वितीये तदनुविद्धतया प्रतीयमानत्वादिति हेतोः ब्रह्मानुविद्धतया प्रतीयमानत्वमित्यर्थः स्यात्, तथाचासिद्धिरित्याह **किञ्चेति** ।। रूपादिहीनस्यापि कालादेः चाक्षुषत्ववत् ब्रह्मणोऽपि चाक्षुषत्वं किं न स्यादित्यत आह **आसंसारमिति** ।। आङत्राभिविधौ । किञ्च ब्रह्मणः शब्दैकसमाधिगम्यत्वादपि न चाक्षुषादिप्रत्ययगोचरत्वमित्याह **शब्दैकसमधिगम्यमिति** ।। **घटगतमेवेति** ।। स्वीकार्यमितिशेषः । अन्यथाऽनित्यत्वादिकमपि घटादिधर्मतया न सिद्ध्येदिति भावः । नन्वेवं राहोरपि चाक्षुषत्वं न स्यादित्यत आह **राहोस्त्विति** ।। उद्भूतनीलरूपवत्त्वेन तस्यायोग्यत्वमसिद्धमिति भावः ।।

### ।। इति परिच्छिन्नत्वहेतुभङ्गः ।।

❖❖❖

### ಪ್ರಪಂಚ ಬ್ರಹ್ಮದಲ್ಲಿ ಆರೋಪಿತವಲ್ಲ

**ದೃಶ್ಯತೇ ಚ ಏಕತ್ರ ಅನೇಕೇಷಾಮಿವ ಏಕಸ್ಯಾಪಿ ರೂಪ್ಯಸ್ಯ ಅನೇಕೇಷು ಶುಕ್ತಿರಂಗಾದಿಷು ಅಧ್ಯಾಸಃ। ಏವಂ ಚ ಸದರ್ಥಸ್ಯೈವ ಘಟಾದಿಷು ಆರೋಪಃ ಕಿಂ ನ ಸ್ಯಾತ್?**

ಅಧ್ಯಸ್ತತ್ವಕ್ಕೆ ಅಧಿಷ್ಠಾನತ್ವಕ್ಕೆ ಅನನುಗತತ್ವ ಅನುಗತತ್ವಗಳು ಅಪ್ರಯೋಜಕ. ಸಹಚಾರದರ್ಶನ ಮಾತ್ರದಿಂದ ಅಧ್ಯಸ್ತಾಧಿಷ್ಠಾನಭಾವ ಸ್ವೀಕಾರ ಮಾಡಿದರೆ ಅತಿಪ್ರಸಕ್ತಿ ಇದೆ. ಒಂದು ರಜ್ಜುವಿನಲ್ಲಿ ಸರ್ಪ ಮಾಲೆ ಮುಂತಾದ ಅನೇಕ ಪದಾರ್ಥಾರೋಪದಂತೆ, ಚಿಪ್ಪು ತಗರ ಮುಂತಾದ ಅನೇಕ ಪದಾರ್ಥಗಳಲ್ಲಿ ಒಂದು ರೂಪ್ಯವನ್ನು ಕೂಡ ಆರೋಪಿಸುವುದು ಕಂಡಿದೆ. ಆದರಿಂದ ಸದ್‌ವಸ್ತು ಒಂದನ್ನೇ ಘಟಾದಿ ಅನೇಕ ಪದಾರ್ಥಗಳಲ್ಲಿ ಏಕೆ ಅಧ್ಯಾಸಮಾಡಬಾರದು?

ಲಾಘವದಿಂದ ಒಂದು ಅಧಿಷ್ಠಾನಕಲ್ಪನೆ ಮಾಡಬೇಕು, ಅನೇಕ ಅಧಿಷ್ಠಾನಕಲ್ಪನೆ ಮಾಡುವುದು ಗೌರವ ಎಂದರೆ ಅನೇಕ ಅಧಿಷ್ಠಾನ ಕಂಡಿರುವುದರಿಂದ ಪ್ರಾಮಾಣಿಕವಾಗಿದೆ, ಗೌರವ ದೋಷವಾಗುವುದಿಲ್ಲ.

ಇಲ್ಲಿ ಅದ್ವೈತಸಿದ್ಧಿಕಾರ ಹೇಳುತ್ತಾನೆ-'ವಿಭಕ್ತತ್ವವೆಂದರೆ ಸ್ವಸಮಾನಸತ್ತಾಕ ಭೇದಪ್ರತಿಯೋಗಿತ್ವ ರೂಪ ವಸ್ತುಪರಿಚ್ಛೇದ ವಿವಕ್ಷಿತವಾಗಿದೆ. ಆದರಿಂದ ಬ್ರಹ್ಮತುಚ್ಛಗಳಲ್ಲಿ ವ್ಯಭಿಚಾರವಿಲ್ಲ' ಎಂದು. ತುಚ್ಛ ಪ್ರತಿಯೋಗಿಕಭೇದ ಮತ್ತು ಬ್ರಹ್ಮಪ್ರತಿಯೋಗಿಕ ಭೇದ ಅವನ ಮತಪ್ರಕಾರ ಸ್ವಸಮಾನಸತ್ತಾಕವಲ್ಲ ಎಂದು ಅವನಿಗೆ ಅಭಿಮಾನ. ವಸ್ತುತಃ ನಮ್ಮ ಮತಪ್ರಕಾರ ಈ ಭೇದವು ಸ್ವಸಮಾನಸತ್ತಾಕವೆ. ನಮಗೆ ಇನ್ನೂ ಮಿಥ್ಯಾತ್ವ ಸಿದ್ಧಿಯಾಗಿಲ್ಲ, ಸತ್ತಾತ್ರೈವಿಧ್ಯ ಸಿದ್ಧವಾಗಿಲ್ಲ. ಆದರಿಂದ ದೃಷ್ಟಾಂತದಲ್ಲಿ ಸಾಧನ ವೈಕಲ್ಯವೂ ಬರುತ್ತದೆ. ಪ್ರಾತಿಭಾಸಿಕ ರೂಪ್ಯನಿಷ್ಠ ಘಟಭೇದವು ಪ್ರಾತಿಭಾಸಿಕವೆಂದು ಅವನ ಅಭಿಮಾನ. ವಸ್ತುತಃ ರೂಪ್ಯ ಘಟಗಳಿಗೆ ವ್ಯಾವಹಾರಿಕವಾಗಿಯೇ ಭೇದವಿದೆ. ಆದರಿಂದ ಸ್ವಸಮಾನಸತ್ತಾಕ ಭೇದಪ್ರತಿಯೋಗಿತ್ವ ರೂಪ್ಯದಲ್ಲಿಲ್ಲ. ದೃಷ್ಟಾಂತೇ ಸಾಧನವೈಕಲ್ಯ ಬರುತ್ತದೆ.

'ಒಂದು ರೂಪ್ಯದಿಂದ ಇನ್ನೊಂದು ರೂಪ್ಯದಲ್ಲಿರುವ ಭೇದದ ಪ್ರತಿಯೋಗಿತ್ವ ಸ್ವಸಮಾನಸತ್ತಾಕಭೇದ ಪ್ರತಿಯೋಗಿತ್ವವೆ. ಅದು ರೂಪ್ಯದಲ್ಲಿರುವುದರಿಂದ ಸಾಧನ ವೈಕಲ್ಯವಿಲ್ಲ' ಎಂದರೆ ಅದು ಸರಿಯಲ್ಲ. ಎರಡು ಪ್ರಾತಿಭಾಸಿಕ ರೂಪ್ಯಗಳಿಗೂ ಭೇದವು ವ್ಯಾವಹಾರಿಕವೆ. ಆದ್ದರಿಂದ ಸ್ವಸಮಾನಸತ್ತಾಕ ಭೇದ ಪ್ರತಿಯೋಗಿತ್ವ ರೂಪ್ಯದಲ್ಲಿಲ್ಲ.

'ಒಂದು ಪ್ರಾತಿಭಾಸಿಕ ರೂಪ್ಯದಲ್ಲಿಯೆ ಪ್ರಾತಿಭಾಸಿಕವಾದ ಸ್ವಪ್ರತಿಯೋಗಿಕಭೇದವತ್ತ್ವ ಏಕೆ ಬರಬಾರದು? ಸ್ವಸಮಾನ ಸತ್ತಾಕಭೇದಪ್ರತಿಯೋಗಿತ್ವ ಅದರಲ್ಲಿ ಏಕೆ ಇಲ್ಲ?' ಎಂದರೆ ಅವಿದ್ಯಾವೃತ್ತಿರೂಪವಾದ ಸಾಕ್ಷಿಸಿದ್ಧವಾದ ರೂಪ್ಯದಲ್ಲಿ ಸ್ವಪ್ರತಿಯೋಗಿಕ ಭೇದವತ್ತ್ವ ಭ್ರಮ ಬರುವುದು ಅಸಂಭವ. ಆದರಿಂದ ಪ್ರಾತಿಭಾಸಿಕ ಭೇದಪ್ರತಿಯೋಗಿತ್ವವಿಟ್ಟುಕೊಂಡು ರೂಪ್ಯದಲ್ಲಿ ಹೇತು ಸತ್ವವನ್ನು ಹೇಳಿ ಸಾಧನವೈಕಲ್ಯ ಪರಿಹಾರ ಮಾಡಲಾಗದು. ಪರಿಹಾರ ಮಾಡುತ್ತೇವೆ ಎಂದರೆ, ತುಚ್ಛದಲ್ಲಿಯೂ ಪ್ರಾತಿಭಾಸಿಕಭೇದಪ್ರತಿಯೋಗಿತ್ವವಿಟ್ಟುಕೊಂಡು ಹೇತುಸತ್ವವನ್ನು ಹೇಳಿ ವ್ಯಭಿಚಾರ ಎನ್ನಬಹುದು.

**ಏತೇನ ವಿವಾದಾಧ್ಯಾಸಿತಂ ಸದ್ರೂಪೇ ಕಲ್ಪಿತಂ। ಪ್ರತ್ಯೇಕಂ ತದನುವಿದ್ಧತಯಾ ಪ್ರತೀಯಮಾನತ್ವಾತ್। ಪ್ರತ್ಯೇಕಂ ಚಂದ್ರಾನುವಿದ್ಧ ಜಲತರಂಗ ಚಂದ್ರವತ್ ಇತಿ ಬ್ರಹ್ಮಸಿದ್ಧ್ಯುಕ್ತಂ ನಿರಸ್ತಂ। ಖಂಡೋ ಗೌಃ ಮುಂಡೋ ಗೌಃ ಇತಿ ಪ್ರತ್ಯೇಕಂ ಗೋತ್ವಾನುವಿದ್ಧಸ್ಯಾಪಿ ಖಂಡಾದೇಃ ತತ್ರ ಅನಧ್ಯಾಸಾತ್।**

'ವಿವಾದಗೋಚರವಾದ ಘಟಾದಿ ಅನೇಕ ಪ್ರಪಂಚವು ಸದ್‌ವಸ್ತುವಿನಲ್ಲಿ ಕಲ್ಪಿತವಾಗಿದೆ. ಪ್ರತಿಯೊಂದೂ ಸದ್‌ವಸ್ತುವಿನ ಅನುವೇಧಯುಕ್ತವಾಗಿಯೇ ಪ್ರತೀಯಮಾನವಾಗಿರುವುದರಿಂದ. ಸಾಮಾನ್ಯವ್ಯಾಪ್ತಿಗೆ ಉದಾಹರಣೆ, ಜಲತರಂಗಗಳಲ್ಲಿ ಕಾಣುವ ಅನೇಕ ಚಂದ್ರಕಗಳು ಚಂದ್ರಬಿಂಬಗಳು ಎಲ್ಲವೂ ಪ್ರತಿಯೊಂದು ಚಂದ್ರನ ಅನುವೇಧಯುಕ್ತವಾಗಿ ಕಾಣುವಂತೆ' ಎಂದು ಬ್ರಹ್ಮಸಿದ್ಧಿ ಗ್ರಂಥದಲ್ಲಿ ಹೇಳಿದ್ದೂ ಸರಿಯಲ್ಲ.

ತರಂಗಾವಚ್ಛಿನ್ನಚೈತನ್ಯದಲ್ಲಿ ಚಂದ್ರಕದ ಆರೋಪ. ಹೊರತು, ಚಂದ್ರನಲ್ಲಿ ಚಂದ್ರಕ ಆರೋಪಿತ ವಾಗುವುದಿಲ್ಲ. ಆದರಿಂದ ದೃಷ್ಟಾಂತ ಸಾಧ್ಯವಿಕಲವಾಗಿದೆ.

'ಇದೂ ಚಂದ್ರ, ಇದೂ ಚಂದ್ರ' ಎಂದು ತರಂಗಚಂದ್ರಗಳು ಪ್ರತಿಯೊಂದು ಗಗನಚಂದ್ರನ ಅನುವೇಧ ಅಂದರೆ ಅನುವಿಧಾಯಿತ್ವ ಯುಕ್ತವಾಗಿ ಕಾಣುವಂತೆ 'ಖಂಡವೂ ಗೋವು ಮುಂಡವೂ ಗೋವು' ಎಂದು ಖಂಡ ಮುಂಡಾದಿಗಳೆಲ್ಲವೂ ಗೋತ್ವದ ಅನುವೇಧಯುಕ್ತವಾಗಿ ಕಾಣುತ್ತವೆ ಎಂದಮಾತ್ರಕ್ಕೆ ಖಂಡ ಮುಂಡಾದಿಗಳು ಗೋತ್ವದಲ್ಲಿ ಅಧ್ಯಸ್ತವಾಗಿಲ್ಲ. ಆದರಿಂದ ವ್ಯಭಿಚಾರ.

ಗೋತ್ವವು ಜಾತಿ. ಅದರಲ್ಲಿ ಗೋವ್ಯಕ್ತಿಗಳು ಕಲ್ಪಿತವಾಗಿಲ್ಲ. ಆದರೆ, 'ಗೋತ್ವ ಜಾತಿಯಲ್ಲ. ಸತ್ ಸಾಮಾನ್ಯ, ಅಂದರೆ ಸತ್ತಾ ಒಂದೇ ಜಾತಿ. ವ್ಯಕ್ತಿವಿಶೇಷವಿಶಿಷ್ಟ ಸತ್‌ಸಾಮಾನ್ಯವೇ ಗೋತ್ವಾದಿಗಳೆಂದು ವ್ಯವಹಾರಗೋಚರವಾಗುತ್ತವೆ' ಎಂದು ಪ್ರಮಾಣಮಾಲಾಕಾರನ ಮತವಿದೆ. ಇದು ಸರಿಯಲ್ಲ. ಗೋತ್ವಾದಿ ವ್ಯವಹಾರವನ್ನು ಬೇರೆ ಒಪ್ಪದಿದ್ದರೆ ಸತ್ತಾವ್ಯವಹಾರವನ್ನು ಏಕೆ ಒಪ್ಪಬೇಕು? ಸತ್‌ಬ್ರಹ್ಮವು ವ್ಯಕ್ತಿವಿಶಿಷ್ಟವಾಗುವುದು ಆರೋಪದಿಂದ, ಆರೋಪಕ್ಕೆ ಅಧಿಷ್ಠಾನಜ್ಞಾನಬೇಕು, ಅದು ವ್ಯಕ್ತಿಯಿಂದ. ಹೀಗೆ ಅನ್ಯೋನ್ಯಾಶ್ರಯ.

ಎತ್ತು ತುಸು ಕೊಂಬುಗಳು ಮೂಡಿದ್ದರೆ 'ಖಂಡ'ಗೋ ಎನಿಸುತ್ತದೆ. ಇನ್ನೂ ಕೊಂಬುಗಳೇ ಮೂಡಿಲ್ಲದಿದ್ದರೆ 'ಮುಂಡ'ಗೋ ಎನಿಸುತ್ತದೆ.

**ಕಿಂಚ ರೂಪಾದಿಹೀನಂ ಅಸಂಸಾರಂ ಅಜ್ಞಾನಾವೃತಂ ಶಬ್ದೈಕಸಮಧಿಗಮ್ಯಂ ಬ್ರಹ್ಮ 'ಸನ್ ಘಟಃ, ಸನ್ ಶಬ್ದಃ' ಇತ್ಯಾದಿ ಚಾಕ್ಷುಷಾದಿಜ್ಞಾನೇ ನ ಭಾತಿ । ಕಿಂತು ಅನಿತ್ಯೋ ಘಟಃ ಇತ್ಯಾದೌ ಅನಿತ್ಯತ್ವಾದಿಕಮಿವ ಸತ್ವಮಪಿ ಘಟಗತಮೇವ ।**

'ಘಟಾದಿಗಳು ಬ್ರಹ್ಮಾನುವಿದ್ಧತ್ವೇನ ಪ್ರತೀಯಮಾನವಾಗುವುದರಿಂದ ಬ್ರಹ್ಮನಲ್ಲಿ ಅಧ್ಯಸ್ತವಾಗಿವೆ' ಎಂಬ ಈ ಅನುಮಾನ ಅಸಿದ್ಧವೂ ಆಗಿದೆ. ಘಟಶಬ್ದಾದಿಗಳ ಚಾಕ್ಷುಷಶ್ರಾವಣಾದಿ ಸಾಕ್ಷಾತ್ಕಾರಗಳಲ್ಲಿ ಬ್ರಹ್ಮರೂಪ ಅಧಿಷ್ಠಾನದ ಅನುವೇಧ ಕಾಣಬೇಕೆಂದರೆ ಬ್ರಹ್ಮವು ಚಾಕ್ಷುಷಾದಿ ಜ್ಞಾನವಿಷಯತ್ವ ಯೋಗ್ಯವಾಗಿರಬೇಕು. ಆದರೆ ಬ್ರಹ್ಮವು ಚಾಕ್ಷುಷ ಜ್ಞಾನ ವಿಷಯತ್ವಕ್ಕೆ ಯೋಗ್ಯವಲ್ಲ, ಧರ್ಮಾಧರ್ಮಾದಿಗಳಂತೇ ರೂಪಾದಿಹೀನವಾಗಿರುವುದರಿಂದ.

'ರೂಪವು ರೂಪಹೀನವಾಗಿದೆ. ಚಾಕ್ಷುಷಜ್ಞಾನ ವಿಷಯತ್ವ ಯೋಗ್ಯವಾಗಿದೆ. ಹಾಗೇ ಬ್ರಹ್ಮವೂ ಏಕಾಬಾರದೆಂ'ದರೆ ಚಾಕ್ಷುಷಯೋಗ್ಯತೆಗೆ ರೂಪ, ರೂಪವತ್‌ಸಮವೇತತ್ವಾದಿಗಳು ಪ್ರಯೋಜಕ. ರೂಪವು ರೂಪವತ್ಸಮವೇತವಾದ್ದರಿಂದ ಚಕ್ಷುಸ್ಸಿಗೆ ಯೋಗ್ಯವೆ. ಆದರಿಂದ ವ್ಯಬಿಚಾರವಿಲ್ಲ. 'ರೂಪಾದಿಹೀನಂ' ಎಂದರೆ ಚಾಕ್ಷುಷತ್ವಪ್ರಯೋಜಕ ಧರ್ಮಹೀನ ಎಂದರ್ಥ. ಆದರಿಂದ ರೂಪ ರೂಪತ್ವ ತದಭಾವಗಳಲ್ಲಿಯೂ ವ್ಯಭಿಚಾರವಿಲ್ಲ. ಆದರಿಂದ ಬ್ರಹ್ಮ ಚಕ್ಷುಸ್ಸಿಗೆ ಯೋಗ್ಯವಲ್ಲ, ಯೋಗ್ಯತಾ ಪ್ರಯೋಜಕ ಧರ್ಮರಹಿತವಾದ್ದರಿಂದ, ಅತೀಂದ್ರಿಯ ಧರ್ಮಾದಿಯಂತೆ.

ಬ್ರಹ್ಮ ಚಾಕ್ಷುಷಜ್ಞಾನವಿಷಯತ್ವಕ್ಕೆ ಯೋಗ್ಯವಲ್ಲ ಎನ್ನಲು ಇನ್ನೊಂದು ಹೇತು— 'ಸಂಸಾರವಿರುವಷ್ಟು ಕಾಲ ಬ್ರಹ್ಮವು ಅಜ್ಞಾನಾವೃತವಾಗಿರುವುದರಿಂದ, ವ್ಯತಿರೇಕೇಣ ಘಟದಂತೆ', ಎಂದು. ಘಟದಲ್ಲಿ ಸಂಸಾರಪ್ರಸಕ್ತಿಯೇ ಇಲ್ಲದ್ದರಿಂದ ಹೇತ್ವಭಾವವಿದೆ. ಕಣ್ಣಿಗೆ ಕಾಣುವುದರಿಂದ ಸಾಧ್ಯಾಭಾವವೂ ಇದೆ.

ಇನ್ನೊಂದು ಹೇತು— ಬ್ರಹ್ಮವು ಶಬ್ದೈಕ ಗಮ್ಯವಾದ್ದರಿಂದ, ಧರ್ಮಾದಿಗಳಂತೆ, ವ್ಯತಿರೇಕೇಣ ಘಟದಂತೆ ಎಂದು.

ಇಲ್ಲಿ ಸಿದ್ಧಿಕಾರ ಹೇಳುತ್ತಾನೆ—'ಕಾಲದಂತೆ ಬ್ರಹ್ಮನೂ ಸರ್ವೇಂದ್ರಿಯಗ್ರಾಹ್ಯ.

'ಅತೋಽನುಭವ ಏವೈಕೋ ವಿಷಯೋಽಜ್ಞಾತಲಕ್ಷಣಃ ।

ಅಕ್ಷಾದೀನಾಂ ಸ್ವತಃಸಿದ್ಧಾ ಯತ್ರ ತೇಷಾಂ ಪ್ರಮಾಣತಾ'' ಎಂದು ವಾರ್ತಿಕವಿದೆ.

ಆದರಿಂದ ಚಾಕ್ಷುಷ ಶ್ರಾವಣಾದಿ ಸರ್ವೇಂದ್ರಿಯಜನ್ಯಜ್ಞಾನಗಳಲ್ಲಿಯೂ ಬ್ರಹ್ಮಾನುವೇಧ ಯುಕ್ತವೆ. ಅದಕ್ಕೆ ರೂಪಾದಿಗಳ ಅಪೇಕ್ಷೆ ಇಲ್ಲ. ಶುದ್ಧಬ್ರಹ್ಮ 'ಅಸಂಸಾರಂ ಅಜ್ಞಾನಾವೃತ' ಎಂದೂ ಒಪ್ಪುವುದಿಲ್ಲ. ಬ್ರಹ್ಮಸಿದ್ಧಿಗ್ರಂಥ ರೀತ್ಯಾ ಸತ್ತಾದಾತ್ಮ್ಯೇನ ಅದು ಮೂಲಾಜ್ಞಾನದಿಂದ ಆವೃತವಾಗಿಲ್ಲ. ಕೇವಲ ಘಟಾದ್ಯವಚ್ಛಿನ್ನವಾಗಿ ಅಜ್ಞಾನಾವೃತವಾಗಿದೆ. ಚಾಕ್ಷುಷಾದಿಜ್ಞಾನದಿಂದ ಈ ಅಜ್ಞಾನ ನಾಶವಾದಾಗ ಅದು ಆ ಜ್ಞಾನದಲ್ಲಿ ತೋರುತ್ತದೆ' ಎಂದು.

ಇದು ಸರಿಯಲ್ಲ. 'ನ ತತ್ರ ಚಕ್ಷುರ್ಗಚ್ಛತಿ ನ ವಾಗ್ ಗಚ್ಛತಿ ನೋ ಮನಃ' ಇತ್ಯಾದಿ ಶ್ರುತಿಗಳಿಂದ ಬ್ರಹ್ಮ ಅವ್ಯಕ್ತವಾಗಿರುವುದರಿಂದ ಸರ್ವೇಂದ್ರಿಯಗ್ರಾಹ್ಯತ್ವ ಅಪ್ರಾಮಾಣಿಕ. ಕಾಲವು ಸರ್ವೇಂದ್ರಿಯಗ್ರಾಹ್ಯವಾಗುವುದು ಸಾಕ್ಷಿಯಿಂದ ಉಪನೀತವಾಗುವುದರಿಂದ. ಅನುಪನೀತಭಾನಕ್ಕೆ ರೂಪಾದಿಗಳ ಅಪೇಕ್ಷೆ ಇದ್ದೇ ಇದೆ. ಬ್ರಹ್ಮನು ಮೂಲಾಜ್ಞಾನದಿಂದ ಆವೃತನಲ್ಲವೆಂದರೆ ಇನ್ನೇನು ಆವೃತವಾಗುತ್ತದೆ? ಆನಂದಾಂಶ ಮಾತ್ರ ಆವೃತವಾಗುತ್ತದೆ ಎಂದು ನಿರಂಶನಾದ ಅಖಂಡಬ್ರಹ್ಮನ ವಿಷಯದಲ್ಲಿ ಹೇಳುವುದು ಅಸಂಗತ.

'ಬ್ರಹ್ಮ ದ್ರವ್ಯವಲ್ಲ, 'ಅಸ್ಥೂಲಮನಣು ಅಹ್ರಸ್ವಂ ಅದೀರ್ಘಂ' ಎಂದು ಚತುರ್ವಿಧಪರಿಮಾಣ ನಿಷೇಧವಿರುವುದರಿಂದ. ದ್ರವ್ಯವಲ್ಲದ್ದರಿಂದಲೇ ದ್ರವ್ಯಗ್ರಹಣದಲ್ಲಿಯೇ ಚಕ್ಷುಸ್ಸಿಗೆ ರೂಪಾಪೇಕ್ಷೆ ಇರುವುದರಿಂದ, ನೀರೂಪತ್ವವು ಬ್ರಹ್ಮನ ಚಾಕ್ಷುಷಜ್ಞಾನಕ್ಕೆ ಬಾಧಕವಲ್ಲ' ಎಂದು ಸಿದ್ಧಿಕಾರ ಹೇಳುತ್ತಾನೆ.

ಆದರೆ ಬ್ರಹ್ಮವು 'ಅಣೋರಣೀಯಾನ್ ಮಹತೋ ಮಹೀಯಾನ್? ಇತ್ಯಾದಿ ಶ್ರುತಿಗಳಿಂದ ಅಪ್ರಾಕೃತವಾದ ಸಕಲ ಪರಿಮಾಣಗಳುಳ್ಳದ್ದು, ದ್ರವ್ಯವಲ್ಲವೆನ್ನಲಾಗದು. 'ಅಸ್ಥೂಲಮನಣು' ಎಂಬುದು ಪ್ರಾಕೃತ ಪರಿಮಾಣನಿಷೇಧ.

'ಧರ್ಮ್ಯನ್ಯೂನಸತ್ತಾಕದ್ರವ್ಯತ್ವವಿದ್ದರೇ ದ್ರವ್ಯ ಚಕ್ಷುಸ್ಸಿಗೆ ಯೋಗ್ಯ. ಬ್ರಹ್ಮನಲ್ಲಿ ದ್ರವ್ಯತ್ವವನ್ನು ಒಪ್ಪಿದರೂ ಅದು ಧರ್ಮಿಗಿಂತ ನ್ಯೂನಸತ್ತಾಕವಾಗಿದೆ. ಆದರಿಂದ ಅದು ಚಕ್ಷುರ್ಯೋಗ್ಯವೆನಿಸಲು ರೂಪದ ಅಪೇಕ್ಷೆ ಇಲ್ಲ' ಎಂದೂ ಸಿದ್ಧಿಕಾರ ಹೇಳುತ್ತಾನೆ. ಆದರೆ ಈ ವ್ಯವಸ್ಥೆ ಮಿಥ್ಯಾತ್ವಸಿದ್ಧಿಯಾದ ಅನಂತರ ಸತ್ತಾತ್ರೈವಿಧ್ಯ ಸಿದ್ಧವಾದಾಗ ಹೇಳಬಹುದಾದುದು. ಆದರಿಂದ ಅನ್ಯೋನ್ಯಾಶ್ರಯ ದೋಷ ಬರುತ್ತದೆ.

ಬ್ರಹ್ಮ ಚಾಕ್ಷುಷಜ್ಞಾನ ವಿಷಯನಲ್ಲ ಎನ್ನಲು ಇನ್ನೊಂದು ಹೇತು—'ಶಬ್ದೈಕ ಸಮಧಿಗಮ್ಯಂ'

ಎಂದು. 'ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ' ಎಂದು ಉಪನಿಷ ದೇಕಗಮ್ಯತ್ವವನ್ನು ಉಪನಿಷತ್ತೇ ಹೇಳುತ್ತಿದೆ. 'ಹಾಗಾದರೆ 'ಸನ್ ಘಟಃ' 'ಸನ್ ಪಟಃ ಇತ್ಯಾದಿ ಪ್ರತ್ಯಕ್ಷ ವಿರೋಧ' ಎಂದರೆ, ಇಲ್ಲ, 'ಘಟವು ಅನಿತ್ಯ' ಎಂಬಲ್ಲಿ ಘಟದಲ್ಲಿ ಅದರಲ್ಲಿಯೇ ಇರುವ ಅನಿತ್ಯತ್ವ ಕಾಣುತ್ತದೆ. ಇದನ್ನು ಒಪ್ಪದಿದ್ದರೆ ಘಟಕ್ಕೆ ಅನಿತ್ಯತ್ವ ಸಿದ್ಧವಾಗಲಾರದು. ಹಾಗೇ ಘಟವು ಸತ್ಯ' ಎಂಬಲ್ಲಿಯೂ ಘಟದಲ್ಲಿಯೇ ಇರುವ ಅದರ ಸತ್ಯತ್ವ ಕಾಣುತ್ತದೆ ಹೊರತು 'ಸನ್' ಎಂದು ಬ್ರಹ್ಮ ಕಾಣುವುದಿಲ್ಲ. ಸತ್ ಬ್ರಹ್ಮನಲ್ಲಿ ಆರೋಪಿತವಾಗಿ ಘಟ ಕಾಣುತ್ತಿಲ್ಲ.

**ನಚ—'ಸ್ವರೂಪೇಣ ಅಪ್ರತ್ಯಕ್ಷಸ್ಯಾಪಿ ರಾಹೋಃ ಚಂದ್ರಾವಚ್ಛೇದೇನ ಇವ, ಬ್ರಹ್ಮಣೋऽಪಿ ಘಟಾದ್ಯವಚ್ಛೇದೇನ ಪ್ರತ್ಯಕ್ಷತಾ'—ಇತಿ ಯುಕ್ತಂ । ಶಬ್ದಾದ್ಯವಚ್ಛಿನ್ನಸ್ಯ ಗಗನಾದೇಃ ಶ್ರಾವಣಾದಿತ್ವಾಪಾತಾತ್ । ರಾಹೋಸ್ತು ದೂರದೋಷೇಣ ಅಜ್ಞಾತಸ್ಯ ನೀಲಸ್ಯ ಶುಕ್ಲಭಾಸ್ವರ ಚಂದ್ರ ಸಂಬಂಧಾತ್ ಚಾಕ್ಷುಷತಾ ಯುಕ್ತಾ ಇತಿ ।**

'ರೂಪಾದಿ ರಹಿತತ್ವ, ಅಜ್ಞಾನಾವೃತತ್ವ, ಶಬ್ದೈಕಸಮಧಿಗಮ್ಯತ್ವ— ಈ ಮೂರು ಹೇತುಗಳಿಂದ ಬ್ರಹ್ಮನು ಸ್ವರೂಪೇಣ ಪ್ರತ್ಯಕ್ಷಾಯೋಗ್ಯನೇ. ಆದರೂ ಘಟಾದ್ಯವಚ್ಛೇದೇನ ಪ್ರತ್ಯಕ್ಷನಾಗಬಹುದು, ಸ್ವರೂಪೇಣ ಅಪ್ರತ್ಯಕ್ಷನಾದ ರಾಹು ಚಂದ್ರಾವಚ್ಛೇದೇನ ಪ್ರತ್ಯಕ್ಷನಾಗುವಂತೆ'—ಎಂದು ಹೇಳುವುದೂ ಯುಕ್ತವಲ್ಲ.

ಹೀಗೆ ಹೇಳಿದರೆ ಶಬ್ದಾವಚ್ಛೇದೇನ ಆಕಾಶವೂ ಕಿವಿಗೆ ಕೇಳಿಸಬೇಕಾದೀತು, ಶಬ್ದದಂತೆಯೇ. ಸ್ಪರ್ಶಾವಚ್ಛೇದೇನ ವಾಯುವೂ ಸ್ಪಾರ್ಶನ ಪ್ರತ್ಯಕ್ಷದಲ್ಲಿ ಕಾಣಬೇಕಾದೀತು, ಸ್ಪರ್ಶದಂತೆ ಎಂದು ಅತಿಪ್ರಸಂಗ ಬರುತ್ತದೆ.

'ಹಾಗಾದರೆ ಅಪ್ರತ್ಯಕ್ಷನಾದ ರಾಹು ಚಂದ್ರಾವಚ್ಛೇದೇನ ಪ್ರತ್ಯಕ್ಷನಾಗುವುದು ಹೇಗೆ?' ಎಂದರೆ, ರಾಹು ಸ್ವರೂಪೇಣ ರೂಪಾದಿರಹಿತನಾಗಿದ್ದು ಪ್ರತ್ಯಕ್ಷಾಯೋಗ್ಯನಾಗಿಲ್ಲ, ಮಹತ್ವ ಉದ್ಭೂತನೀಲರೂಪಗಳು ಅವನಲ್ಲಿವೆ. ಅವು ಪ್ರತ್ಯಕ್ಷಯೋಗ್ಯತಾಕ್ಕೆ ಪ್ರಯೋಜಕವಾಗಿವೆ. ದೂರತ್ವದೋಷದಿಂದ ಈ ಪ್ರತ್ಯಕ್ಷಯೋಗ್ಯತೆಯು ಪ್ರತಿರುದ್ಧವಾಗಿದೆ. ಯಾವಾಗ ಚಂದ್ರಗ್ರಹಣ ಕಾಲದಲ್ಲಿ ರಾಹು ಚಂದ್ರನನ್ನು ನುಂಗಲು ಬರುವನೋ ಆಗ ರಾಹುಮಂಡಲ ಚಂದ್ರಮಂಡಲದಿಂದ ಸಂಬದ್ಧವಾಗುತ್ತದೆ. ನೀಲರೂಪದ್ದಾಗಿದ್ದು ದೂರದಲ್ಲಿರುವ ರಾಹುಮಂಡಲವು ಶುಕ್ಲಭಾಸ್ವರ ರೂಪೋಪೇತವಾದ ಚಂದ್ರಮಂಡಲ ಸಂಬಂಧದಿಂದ ಚಾಕ್ಷುಷಜ್ಞಾನಕ್ಕೆ ಗೋಚರವಾಗುತ್ತದೆ. ದೂರದೋಷವು ಆಗ ಪ್ರತ್ಯಕ್ಷಕ್ಕೆ ಪ್ರತಿಬಂಧ ಉಂಟುಮಾಡುವುದಿಲ್ಲ. ಆಕಾಶದಲ್ಲಿ ಹೀಗೆ ಶ್ರಾವಣ ಪ್ರತ್ಯಕ್ಷಯೋಗ್ಯತಾ ಇಲ್ಲ. ಯೋಗ್ಯತಾ ಇಲ್ಲದ ಬ್ರಹ್ಮನು ಶಬ್ದಾವಚ್ಛೇದೇನ 'ಶಬ್ದಃ ಸನ್' ಎಂಬ ಪ್ರತೀತಿಯಲ್ಲಿ ಕಾಣುವುದಾದರೆ ಯೋಗ್ಯತಾ ಇಲ್ಲದ ಆಕಾಶವೂ ಕೂಡ ಶಬ್ದಾವಚ್ಛೇದೇನ ಶ್ರಾವಣಪ್ರತ್ಯಕ್ಷ ಗೋಚರವಾಗಬೇಕಾದೀತು ಎಂದು ಅತಿಪ್ರಸಕ್ತಿ.

❖❖❖

## 20. अंशित्वादिहेतुभङ्गः

अंशित्वादिहेतुष्वपि मतद्वयेऽपि कार्यस्य कारणाभेदेन तदनाश्रितत्वात् सिद्धसाधनम् ! अनाश्रितत्वेनान्याश्रितत्वेन वोपपत्त्यार्थांतरं च । यदि च प्रत्यक्षबाधादेतत्तन्त्वारब्धस्य पक्षत्वेन पक्षधर्मताबलाद्वा नानाश्रितत्वादिकं तर्हि तत एवैतत्तन्तुष्वपि नासत्वम् । अपिचात्यन्ताभावः प्रामाणिकोऽप्रामाणिको वा । आद्येऽद्वैतहानिः । अन्त्ये सिद्धसाधनम् । एतेनात्यन्ताभावमात्रं साध्यमिति निरस्तम् । अत्यन्ताभावो व्यावहारिक इति तु निरस्तम् ।

**कार्यस्येति** ।। उपादेयस्योपादानाभेदेनेत्यर्थः । ननु मन्मते कार्यकारणयोः अत्यन्तभेदादाश्रितत्वसंभवान्न सिद्धसाधनम् । कार्यकारणयोरभेदवादस्तु सत्तैक्याभिप्राय इत्यत आह **अनाश्रितत्वेनेति** ।। **एतेनेति** ।। सामान्यस्य विना विशेषमपर्यवसानादिति भावः ।। **निरस्तमिति** ।। अप्रातिभासिकस्य व्यावहारिकनिषेधप्रतियोगिनः पारमार्थिकत्वापातेनेति भावः ।।

❖❖❖

### ಅಂಶಿತ್ವಾದಿ ಹೇತು ನಿರಾಸ

**ಅಂಶಿತ್ವಾದಿ ಹೇತುಷ್ವಪಿ ಮತದ್ವಯೇऽಪಿ ಕಾರ್ಯಸ್ಯ ಕಾರಣಾಭೇದೇನ ತದನಾಶ್ರಿತತ್ವಾತ್ ಸಿದ್ಧಸಾಧನಂ। ಅನಾಶ್ರಿತತ್ವೇನ ಅನ್ಯಾಶ್ರಿತತ್ವೇನ ವಾ ಉಪಪತ್ತ್ಯಾ ಅರ್ಥಾಂತರಂ ಚ ।**

'ಅಯಂ ಪಟಃ ಏತತ್ತಂತು ನಿಷ್ಠಾತ್ಯಂತಾಭಾವಪ್ರತಿಯೋಗೀ, ಅಂಶಿತ್ವಾತ್ ಇತರಾಂಶಿವತ್' ಈ ಪಟವು ಈ ತಂತು ನಿಷ್ಠ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿದೆ, ಅಂಶಿಯಾದ್ದರಿಂದ, ಇತರ ಅಂಶಿಯಂತೆ' ಎಂದು ಚಿತ್ಸುಖಿಯ ತತ್ತ್ವಪ್ರದೀಪದಲ್ಲಿ ಮಿಥ್ಯಾತ್ವಾನುಮಾನ ಉಕ್ತವಾಗಿದೆ. ನವೀನರು 'ಏತತ್ ಪಟಾತ್ಯಂತಾಭಾವಃ ಏತತ್ತಂತು ನಿಷ್ಠಃ ಏತತ್ಪಟಾನಾದ್ಯಭಾವತ್ವಾತ್ ಏತತ್ ಪಟಾನ್ಯೋನ್ಯಾಭಾವವತ್' ಎಂದು ಮುಂತಾಗಿ ಸ್ವೋಪಾದಾನ ನಿಷ್ಠಾತ್ಯಂತಾಭಾವಪ್ರತಿಯೋಗಿತ್ವ ರೂಪ ಮಿಥ್ಯಾತ್ವಸಾಧಕ ಅನುಮಾನಗಳನ್ನು ಹೇಳಿದ್ದಾರೆ. ಈ ಅಂಶಿತ್ವಾದಿ ಹೇತುಗಳಲ್ಲಿ ಮತದ್ವಯದಲ್ಲಿಯೂ ಕಾರ್ಯಕ್ಕೆ ಕಾರಣಾಭೇದವಿರುವುದರಿಂದ ಸಿದ್ಧಾಂತದಲ್ಲಿ ಭೇದಾಭೇದ

ಅಂಗೀಕೃತವಾದರೂ ವೃತ್ತಿನಿಯಾಮಕ ಸಂಬಂಧವಿಲ್ಲದಿರುವುದರಿಂದ ಕಾರ್ಯವು ಕಾರಣವನ್ನು ಆಶ್ರಯಿಸಿಲ್ಲ. ಕಾರಣದಲ್ಲಿ ಕಾರ್ಯಾತ್ಯಂತಾಭಾವ ಸಿದ್ಧವೇ ಇದೆ. ಅದನ್ನು ಸಾಧನೆ ಮಾಡುವುದು ಸಿದ್ಧಸಾಧನ.

ಇಲ್ಲಿ ಅದ್ವೈತಿ ಹೇಳಬಹುದು—'ನನ್ನ ಮತದಲ್ಲಿ ಕಾರ್ಯಕಾರಣಗಳಿಗೆ, ಅಂದರೆ ಉಪಾದೇಯ ಉಪಾದಾನಗಳಿಗೆ ಅತ್ಯಂತ ಭೇದವೆ ಇದೆಯಾದ್ದರಿಂದ ಕಾರ್ಯವು ಕಾರಣವನ್ನಾಶ್ರಯಿಸಿರುವ ಸಂಭವವಿದೆ. ಅದರಿಂದ ಸಿದ್ಧಸಾಧನವಿಲ್ಲ. ಕಾರ್ಯಕಾರಣಗಳಿಗೆ ಅಭೇದವೆನ್ನುವ ವಾದದ ಅಭಿಪ್ರಾಯ ಸತ್ವೈಕ್ಯವೆಂದು, ಕಾರಣ ವ್ಯತಿರೇಕೇಣ ಕಾರ್ಯಕ್ಕೆ ಸತ್ವವಿಲ್ಲವೆಂದು.' ಅದರಿಂದ ಬೇರೆ ದೋಷವನ್ನು ಹೀಗೆ ಹೇಳಬೇಕು—ಕಾರ್ಯವು ಕಾರಣಕ್ಕಿಂತ ಬೇರೆ ಎನ್ನುವ ಪಕ್ಷದಲ್ಲಿ ಈ ಅನುಮಾನಕ್ಕೆ ಅರ್ಥಾಂತರತ್ವ ಹೇಳಬಹುದು. ಅನ್ಯತ್ರ ಕಾರ್ಯವು ಅನಾಶ್ರಿತವಾಗಿರುವಾಗ ಏತತ್ತಂತುವಿನಲ್ಲಿಯೂ ಅದರ ಅತ್ಯಂತಾಭಾವವನ್ನು ಸಾಧನೆ ಮಾಡಿದ ಮಾತ್ರಕ್ಕೆ ಅದು ಮಿಥ್ಯಾ ಆಗಿರಬೇಕಿಲ್ಲ. 'ಅನಾಶ್ರಿತವಿರಬಹುದು, ಸತ್ಯವೇ ಆಗಿದ್ದರೂ ಅದು ಎಲ್ಲಿಯೂ ಆಶ್ರಯಿಸಿಲ್ಲದಿರಬಹುದು ಎಂದು ಅರ್ಥಾಂತರ. ಅಥವಾ 'ಈ ತಂತುವಿನಲ್ಲಿಲ್ಲ'ವೆಂದರೆ ಬೇರೆ ತಂತುವಿನಲ್ಲಿರಬಹುದು ಎಂದೂ ಸಿದ್ಧವಾಗುವುದರಿಂದ ಅರ್ಥಾಂತರ.

**ಯದಿ ಚ ಪ್ರತ್ಯಕ್ಷಬಾಧಾತ್ ಏತತ್ತಂತ್ವಾರಬ್ಧಸ್ಯ ಪಕ್ಷತ್ವೇನ ಪಕ್ಷಧರ್ಮತಾಬಲಾದ್ವಾ ನ ಅನಾಶ್ರಿತತ್ವಾದಿಕಂ ತರ್ಹಿ ತತ ಏವ ಏತತ್ತಂತುಷ್ವಪಿ ನ ಅಸತ್ವಂ ।**

'ಅನಾಶ್ರಿತತ್ವವಾಗಲಿ ಅನ್ಯಾಶ್ರಿತತ್ವವಾಗಲಿ ಅಂಶಿತ್ವಹೇತುವಿನಿಂದ ಸಿದ್ಧವಾಗಲಾರದು. ಏತತ್ ತಂತುವನ್ನೇ ಪಟವು ಆಶ್ರಯಿಸಿರುವುದು ಪ್ರತ್ಯಕ್ಷ ಕಾಣುತ್ತದೆ. ಅದಕ್ಕೆ ವಿರುದ್ಧವಾಗಿ ಪಟಕ್ಕೆ ಅನಾಶ್ರಿತತ್ವವಾಗಲಿ ಅನ್ಯಾಶ್ರಿತತ್ವವಾಗಲಿ ಸಿದ್ಧವಾಗಲಾರದು, ಅದರಿಂದ ಅರ್ಥಾಂತರವಿಲ್ಲ' ಎಂದು ಹೇಳಿದರೆ, ಅಥವಾ 'ಏತತ್ತಂತ್ವಾರಬ್ಧ ಪಟವು ಪಕ್ಷವಾಗಿರುವಾಗ ಅದರಲ್ಲಿ ಅಂಶಿತ್ವಹೇತು ಬಂದರೆ, ಅಂಶವತ್ತ್ವವೇ ಅಂಶಿತ್ವ, ಅಂಶವು ಏತತ್ತಂತ್ವಾರಬ್ಧರೂಪಪಕ್ಷದಲ್ಲಿ ಏತತ್ತಂತುವೆ. ಅಂಶವತ್ತ್ವವು ಅಂಶಾಶ್ರಿತತ್ವವೆ. ಅದರಿಂದ ಏತತ್ತಂತ್ವಾಶ್ರಿತತ್ವವೆ ಅಂಶಿತ್ವಹೇತುವಿನ ಪಕ್ಷಧರ್ಮತಾ ಬಲದಿಂದ ಸಿದ್ಧವಾಗುತ್ತದೆ. ಅದಕ್ಕೆ ವಿರುದ್ಧವಾಗಿ ಅನಾಶ್ರಿತತ್ವ ಅನ್ಯಾಶ್ರಿತತ್ವ ಸಿದ್ಧವಾಗುವ ಸಂಭವವಿಲ್ಲ' ಎಂದು ಹೇಳಿದರೆ ಪ್ರತ್ಯಕ್ಷವಿರೋಧವಿರುವುದರಿಂದಲೆ ಪಕ್ಷಧರ್ಮತಾಬಲವಿರುವುದರಿಂದಲೆ ಪಟಕ್ಕೆ ಏತತ್ತಂತುವಿನಲ್ಲಿ ಅಸತ್ವ ಅಂದರೆ ಏತತ್ತಂತು ನಿಷ್ಠ ಅತ್ಯಂತಾಭಾವಪ್ರತಿಯೋಗಿತ್ವವೂ ಸಿದ್ಧವಾಗುವುದಿಲ್ಲ ಎನ್ನುತ್ತೇವೆ.

**ಅಪಿ ಚ ಅತ್ಯಂತಾಭಾವಃ ಪ್ರಾಮಾಣಿಕಃ ? ಅಪ್ರಾಮಾಣಿಕೋ ವಾ? ಆದ್ಯೇ ಅದ್ವೈತ ಹಾನಿಃ । ಅಂತ್ಯೇ ಸಿದ್ಧಸಾಧನಂ । ಏತೇನ ಅತ್ಯಂತಾಭಾವ ಮಾತ್ರಂ ಸಾಧ್ಯಮಿತಿ ನಿರಸ್ತಂ । ಅತ್ಯಂತಾಭಾವೋ ವ್ಯಾವಹಾರಿಕ ಇತಿ ತು ನಿರಸ್ತಂ ।**

ಏತತ್ತಂತುನಿಷ್ಠ ಅತ್ಯಂತಾಭಾವವು ಪ್ರಮಾಣಸಿದ್ಧವಾಗಿದೆಯೆ ಅಥವಾ ಇಲ್ಲವೆ? ಪ್ರಮಾಣಸಿದ್ಧವಾಗಿದೆ ಎನ್ನುವ ಮೊದಲನೆ ಪಕ್ಷದಲ್ಲಿ ಬ್ರಹ್ಮನಂತೆ ಅತ್ಯಂತಾಭಾವವೂ ಪ್ರಮಾಣಸಿದ್ಧವಾದ್ದರಿಂದ ಅದ್ವೈತಕ್ಕೆ ಹಾನಿ. ಪ್ರಮಾಣಸಿದ್ಧವಾಗಿಲ್ಲ ಎನ್ನುವ ಎರಡನೆ ಪಕ್ಷದಲ್ಲಿ ಸಿದ್ಧಸಾಧನ. ತಂತುವಿನಲ್ಲಿ ಪಟದ ಅತ್ಯಂತಾಭಾವವು ಅಪ್ರಾಮಾಣಿಕವೆಂದು ಪ್ರತಿವಾದಿಗಳಾದ ನಾವು ಹೇಳುತ್ತಿದ್ದೇವೆ. ಅದನ್ನೇ ನೀವು ಸಾಧನೆ ಮಾಡಿದಂತಾಗುತ್ತದೆ.

'ಅತ್ಯಂತಾಭಾವವನ್ನು ಪ್ರಾಮಾಣಿಕವೆಂದಾಗಲಿ ಅಪ್ರಮಾಣಿಕವೆಂದದಾಗಲಿ ವಿಶೇಷವಿವಕ್ಷೆ ಮಾಡದೆ ಸಾಮಾನ್ಯವಾಗಿ ಅತ್ಯಂತಾಭಾವವಿವಕ್ಷೆ ಮಾಡುತ್ತೇನೆ' ಎಂದರೆ ಅದು ಸರಿಯಲ್ಲ. ಪ್ರಾಮಾಣಿಕವೆಂದು ಅಪ್ರಾಮಾಣಿಕವೆಂದು ಎರಡೇ ವಿಶೇಷಗಳಿರುವಾಗ ಎರಡನ್ನೂ ವಿವಕ್ಷೆ ಮಾಡದೆ ಇದ್ದರೆ ಬೇರೆ ಸಾಮಾನ್ಯವನ್ನು ವಿವಕ್ಷೆ ಮಾಡಲಾಗದು. ಬೇರೆ ಸಾಮಾನ್ಯವೇ ಇಲ್ಲ.

'ವ್ಯಾವಹಾರಿಕ ಅತ್ಯಂತಾಭಾವವನ್ನು ಸಾಧನೆ ಮಾಡುತ್ತೇನೆ. ಆದರಿಂದ ಪಾರಮಾರ್ಥಿಕ ಅದ್ವೈತಕ್ಕೆ ಹಾನಿ ಇಲ್ಲ, ಸಿದ್ಧಸಾಧನವೂ ಇಲ್ಲ' ಎಂದರೆ, ಅದರ ಪ್ರತಿಯೋಗಿಯಾದ ಪ್ರಪಂಚ ಪಾರಮಾರ್ಥಿಕವಾದೀತೆಂಬ ಅನಿಷ್ಟಾಪತ್ತಿ ಬರುತ್ತದೆ. ಪ್ರತಿಯೋಗಿ ಅಭಾವಗಳ ಸತ್ತೆಗಳಲ್ಲಿ ವೈಲಕ್ಷಣ್ಯ ಹೇಳಲೇಬೇಕು. ಇಲ್ಲದಿದ್ದರೆ ವಿರೋಧ ಬರುತ್ತದೆ. ಅಭಾವವನ್ನು ವ್ಯಾವಹಾರಿಕವೆಂದಾಗ ಪ್ರತಿಯೋಗಿ ಪ್ರಾತಿಭಾಸಿಕ ಇಲ್ಲವೆ ಪಾರಮಾರ್ಥಿಕ ವಾಗಬೇಕು. ಪ್ರತಿಯೋಗಿಯಾದ ಪ್ರಪಂಚವನ್ನು ನೀನು ಪ್ರಾತಿಭಾಸಿಕವೆಂದು ಒಪ್ಪುತ್ತಿಲ್ಲವೆಂದಮೇಲೆ ಅದನ್ನು ಪಾರಮಾರ್ಥಿಕವೆನ್ನಬೇಕಾಗುತ್ತದೆ ಎಂದು. ಮತ್ತು ಅಭಾವ ವ್ಯಾವಹಾರಿಕವೆಂದರೆ ಬಾಧ್ಯವಾಯಿತು. ಆಗ ಅದು ಪ್ರತಿಯೋಗಿಯ ತಾತ್ತ್ವಿಕತ್ವಕ್ಕೆ ಅವಿರೋಧಿ ಎಂದು ಅರ್ಥಾಂತರ.

❖❖❖

नन्वभावरूपा धर्मा नाद्वैतं घ्नन्तीति मण्डनोक्तेरभावद्वैतं स्वीकृतमिति चेन्न । अभावे अभावत्वादेस्तदाश्रये चाभावाश्रयत्वादेः भावस्यावश्यकत्वात् । अभावरूपप्रवृत्तिनिमित्तसंभवेन ब्रह्मणोऽद्विती-यादिशब्दवाच्यत्वापातात् । अखण्डार्थेन वेदान्तेन ब्रह्माभावयो-र्द्वयोरसिद्धेश्च । अन्यस्य च तत्वावेदकस्याभावात् । श्रौताद्वितीय-पदस्याभावरूपद्वितीयनिषेध इव भावरूपद्वितीयनिषेधेऽपि मानान्त-रेणाग्र इति स्वपदेन च विरोधाविशेषे भावरूपद्वितीयनिषेधपरत्वेनैव संकोचो नत्वभावरूपद्वितीयनिषेधपरत्वेनेत्यत्र हेत्वभावाच्च । भावस्यापि स्वाभावाभावत्वाच्च । अभेदस्याप्यन्योन्याभावप्रति-

**योगित्वेन तत्सत्यत्वासिद्धेश्च । भेदस्याप्यन्योन्याभावत्वेन तत्सत्यत्वापत्तेश्च । प्रध्वंसादेः प्रतियोगिना सह विरोधाय स्वतुल्यसत्वप्रतियोगिसापेक्षत्वाच्च । भावत्वानिर्वचने भावस्येवा-भावत्वानिर्वचनेऽभावस्यापि सत्वासिद्धेरभावे सत्वार्थं तवाप्यभावत्वा-दिनिर्वचन प्रयासापाताच्च । अभावे दृश्यत्वादेर्व्यभिचारस्य चाभाववद्भावस्यापि सत्यत्वेऽपि दृश्यत्वोपपत्त्या अप्रयोजकत्वस्य चापाताच्च । अभावस्य प्रतियोगिघटितत्वेन भावादपि विशिष्याद्वैतविरोधित्वाच्च ।**

**अभाव इति ।।** अभावत्वमखण्डोपाधिस्तत्संबन्धश्चातिरिक्त इत्यभि-प्रेत्यैतदुक्तम् ।। **अभावाश्रयत्वादेरिति ।।** यद्यप्यभावाश्रयत्वं तदाश्रयान्नातिरिच्यते तथापि तन्नाश्रयमात्रम् । किन्तु तत्स्वरूपविशेषः । स च ब्रह्मनिर्विशेषत्ववादिना नाङ्गीकर्तुं शक्य इति भावः ।। **अद्वितीयादिशब्देनेति ।।** यद्यप्यद्वितीयादिशब्दस्य न पदत्वमिति न प्रवृत्तिनिमित्तापेक्षा । तथाप्यतद्गुणसंविज्ञानबहुव्रीहिणा एकैवपदयोः स्वगतभेदसजातीयभेदनिषेधकयोर्ग्रहणमिति ध्येयम् । किञ्च ब्रह्मण्यबाध्यद्वितीयाभावे किं प्रमाणं वेदान्तो वा अन्यद्वेति विकल्प्य नाद्य इत्याह **अखण्डार्थेनेति ।।** संसर्गासंगिसम्यग्धीजनकेनेत्यर्थः । द्वितीयं निराह **अन्यस्य चेति ।।**

नन्वद्वितीयपदमहिम्नैव द्वितीयाभावः सिद्ध्यति । नच द्वितीयत्वेन तस्यापि निषेधः विरोधादित्यत आह **श्रौतेति ।। मानान्तरेणेति ।।** यस्मिन्द्यौरित्यादि-वाक्यान्तरेणेत्यर्थः ।। **स्वपदेनेति ।।** स्वसमभिव्याहृतपदेनेत्यर्थः । किञ्चाभावरूपा धर्मा नाद्वैतं घ्नन्तीत्यभ्युपगच्छता किमभावशब्देनाभावव्यवहारालम्बनमात्रं विवक्षितं किं वा सप्तमपदार्थः । द्वितीयेऽप्यन्योन्याभावो वा संसर्गाभावो वेति विकल्प्य नाद्य इत्याह **भावस्यापीति ।।** द्वितीये प्रथमं निराह **अभेदस्यापीति ।।** पारमार्थिकाभावप्रतियोगित्वस्यैव मिथ्यात्वे तन्त्रत्वादिति भावः । अन्त्ये दोषमाह **प्रध्वंसादेरिति ।।** किञ्चाभावः पारमार्थिक इति न त्वयाऽभ्युपगन्तुं शक्यः । तथासति तत्सत्यत्वनिर्वाहार्थं त्वयाऽभावत्वस्य निर्वक्तव्यत्वापत्तेः । अन्यथा भावत्वस्य

दुर्वचत्वेन भावस्य मिथ्यात्वमिति न स्यादित्याह **भावत्वानिर्वचन इति** ।। ननु भावत्वेन हेतुविशेषणान्न व्यभिचार इत्यत आह **अभाववदिति ।। अभावस्य प्रतियोगिघटितत्वेनेति** । अतिरिक्ताभावस्य स्वसमानसत्ताकप्रतियोगिनिरूप्यत्वे-नेत्यर्थः ।।

❖❖❖

## ಅಭಾವ ದ್ವೈತ ನಿರಾಸ

**ನನು 'ಅಭಾವರೂಪಾ ಧರ್ಮಾಃ ನ ಅದ್ವೈತಂ ಘ್ನಂತಿ' ಇತಿ ಮಂಡನೋಕ್ತೇಃ ಅಭಾವದ್ವೈತಂ ಸ್ವೀಕೃತಂ ಇತಿ ಚೇನ್ನ। ಅಭಾವೇ ಅಭಾವತ್ವಾದೇಃ ತದಾಶ್ರಯೇ ಚ ಅಭಾವಾಶ್ರಯತ್ವಾದೇಃ ಭಾವಸ್ಯ ಆವಶ್ಯಕತ್ವಾತ್।**

'ಪ್ರಾಮಾಣಿಕ ಅತ್ಯಂತಾಭಾವವನ್ನೇ ಸಾಧನೆ ಮಾಡುತ್ತೇನೆ. ಆಗ ಅದ್ವೈತಕ್ಕೆ ಹಾನಿಯಾಗುವುದಿಲ್ಲವೆ? ಎಂದರೆ ಇಲ್ಲ. ಅಭಾವರೂಪ ಧರ್ಮಗಳಿದ್ದರೆ ಅವು ಅದ್ವೈತಕ್ಕೆ ಹಾನಿ ಉಂಟುಮಾಡುವುದಿಲ್ಲ. 'ಒಂದು ಇದೆ, ಎರಡಿಲ್ಲ' ಎಂದು ಅದ್ವೈತಸಿದ್ಧಾಂತ. ಅದರಲ್ಲಿ 'ಒಂದು ಇದೆ' ಎಂಬ ಅಂಶದಂತೆ 'ಎರಡಿಲ್ಲ' ಎಂಬ ಅಂಶವೂ ಪ್ರಾಮಾಣಿಕ, ಸತ್ಯ ಎಂದು ಒಪ್ಪುತ್ತೇನೆ' ಎಂದು ಮಂಡನಮಿಶ್ರನು ಹೇಳಿದ್ದಾನೆ. ಅದರಿಂದ ನಾನು ಅಭಾವ ದ್ವೈತವನ್ನು ಅಂಗೀಕರಿಸುತ್ತೇನೆ. ಭಾವದ್ವೈತವನ್ನು ಮಾತ್ರ ನಿರಾಕರಿಸುತ್ತೇನೆ. 'ನೇಹ ನಾನಾಸ್ತಿ ಕಿಂಚನ' ಇತ್ಯಾದಿ ಶ್ರುತಿ ಭಾವದ್ವೈತವನ್ನು ನಿಷೇಧಿಸುವ ಅಭಿಪ್ರಾಯದ್ದು'—ಎಂದು ಅದ್ವೈತಿ ಹೇಳುತ್ತಾನೆ.

ಇದು ಸರಿಯಲ್ಲ. ಅಭಾವ ಒಂದನ್ನು ಒಪ್ಪಿದರೆ ಅಭಾವದಲ್ಲಿ ಅಭಾವತ್ವ ಅಭಾವಾಶ್ರಯತ್ವ ಮುಂತಾದ ಭಾವಪದಾರ್ಥಗಳನ್ನೂ ಒಪ್ಪಬೇಕಾಗುತ್ತದೆ. ದ್ವಿತೀಯಾಭಾವಕ್ಕೆ ಅಧಿಕರಣ ಬೇಕಾಗುವುದರಿಂದ ಅಭಾವಾಶ್ರಯವು ಬ್ರಹ್ಮ, ಬ್ರಹ್ಮನಲ್ಲಿ ಅಭಾವಾಶ್ರಯತ್ವ ಮತ್ತು ಅಭಾವದಲ್ಲಿ ಬ್ರಹ್ಮಾಶ್ರಿತತ್ವಗಳನ್ನು ಒಪ್ಪಬೇಕಾಗುವುದು. ಆಶ್ರಯತ್ವ-ಆಶ್ರಿತತ್ವಗಳನ್ನು ಬ್ರಹ್ಮ-ಅಭಾವಗಳ ಸ್ವರೂಪವೆಂದರೂ 'ಅವು ಆಶ್ರಯಮಾತ್ರ ಆಶ್ರಿತಮಾತ್ರ'ವೆನ್ನಲಾಗದು. ವಿಶೇಷವನ್ನು ಒಪ್ಪಬೇಕು. ವಿಶೇಷವನ್ನು ಒಪ್ಪಿದರೆ ನಿರ್ವಿಶೇಷತ್ವಭಂಗ. ವಸ್ತುತಃ ವಿಧಿಮುಖವೇದ್ಯವಾದ ಅಭಾವತ್ವವು ನಿಷೇಧಮುಖ ವೇದ್ಯವಾದ ಅಭಾವದ ಸ್ವರೂಪವಾಗದು. ಅದು ಅಖಂಡೋಪಾಧಿ. ಅದರ ಸಂಬಂಧವೂ ಅತಿರಿಕ್ತ. ಅದರಿಂದ ಅದು ಮಿಥ್ಯಾ ಆಗುವುದರಿಂದ ಅಭಾವಸ್ವರೂಪವೂ ಮಿಥ್ಯಾ ಆಗುವುದು. ಅಭಾವವು ಅಭಾವತ್ವಕ್ಕೆ ಧರ್ಮಿ. ಅದರಲ್ಲಿ ಧರ್ಮಿತ್ವೋಪಪಾದಕವಾದ ಅಭಾವತ್ವ ಮಿಥ್ಯಾ ಆದರೆ ಧರ್ಮಿಸ್ವರೂಪ ಮಿಥ್ಯಾ ಆಗಬೇಕು. ಘಟತ್ವವು ಮಿಥ್ಯಾ ಆದರೆ ಘಟವೂ ಮಿಥ್ಯಾ ಆಗುವಂತೆ.

**ಅಭಾವರೂಪ ಪ್ರವೃತ್ತಿನಿಮಿತ್ತಸಂಭವೇನ ಬ್ರಹ್ಮಣಃ ಅದ್ವಿತೀಯಾದಿ ಶಬ್ದವಾಚ್ಯತ್ವಾಪಾತಾತ್ ।**

ಬ್ರಹ್ಮನನ್ನು ಅದ್ವೈತಿ ಸರ್ವಶಬ್ದಾವಾಚ್ಯನೆಂದೇಕೆ ಹೇಳುತ್ತಾನೆ? ಶಬ್ದಪ್ರವೃತ್ತಿನಿಮಿತ್ತವಾದ ದ್ರವ್ಯ ಗುಣಾದಿ ಧರ್ಮಗಳು ನಿರ್ಧರ್ಮಕ ಬ್ರಹ್ಮನಲ್ಲಿಲ್ಲವಾದ್ದರಿಂದ. ಆದರೆ ಅಭಾವಧರ್ಮವನ್ನು ಅವನು ಒಪ್ಪುವುದರಿಂದ 'ಅದ್ವಿತೀಯಂ ಬ್ರಹ್ಮ' ಎಂದು ಅದ್ವಿತೀಯ ಶಬ್ದವಾಚ್ಯತ್ವವನ್ನು ಒಪ್ಪಬೇಕಾಗುತ್ತದೆ. ಪ್ರವೃತ್ತಿನಿಮಿತ್ತವಾದ ದ್ವಿತೀಯಾಭಾವರೂಪ ಅಭಾವಧರ್ಮವು ಬ್ರಹ್ಮನಲ್ಲಿ ಇದೆ.

ಯದ್ಯಪಿ ಬಹುವ್ರೀಹಿಯಲ್ಲಿ ಅನ್ಯಪದಾರ್ಥದಲ್ಲಿ ಲಕ್ಷಣಾ ಮಾಡುವುದರಿಂದ 'ಅದ್ವಿತೀಯ' ಶಬ್ದಕ್ಕೆ ದ್ವಿತೀಯಾಭಾವವಿಶಿಷ್ಟದಲ್ಲಿ ಶಕ್ತಿಯಿಲ್ಲ. ದ್ವಿತೀಯಾಭಾವವು ಪ್ರವೃತ್ತಿನಿಮಿತ್ತವಾಗುವುದಿಲ್ಲ. ಶಕ್ಯತಾವಚ್ಛೇದಕವಾಗುವುದಿಲ್ಲ. ಆದರೂ ಬಹುವ್ರೀಹಿಯಲ್ಲಿ ಅನ್ಯಪದಾರ್ಥದಲ್ಲಿ ನಿಯಮೇನ ತಾತ್ಪರ್ಯವಿರುವುದರಿಂದ ರೂಢಿಯನ್ನು ಒಪ್ಪಬೇಕು. ಆದರಿಂದ ದ್ವಿತೀಯಾಭಾವವು ಪ್ರವೃತ್ತಿ ನಿಮಿತ್ತವಾಗುವುದು.

ಇದನ್ನು ತಾರ್ಕಿಕರು ಅದ್ವೈತಿಗಳು ಅಂಗೀಕರಿಸಿಲ್ಲವೆಂದರೆ, 'ಸದೇವ, ಏಕಮೇವ ಅದ್ವಿತೀಯಂ' ಎಂದು ಶ್ರುತಿಯಲ್ಲಿ ಏವಕಾರ ಏಕಶಬ್ದಗಳೂ ಅದ್ವಿತೀಯತ್ವವನ್ನೆ ಹೇಳುವುದರಿಂದ ಆ ಶಬ್ದಗಳಿಗೆ ದ್ವಿತೀಯಾಭಾವವು ಪ್ರವೃತ್ತಿನಿಮಿತ್ತವಾಗಿವೆ' ಎಂದು ಸಮಾಧಾನ ವನ್ನು ತಾರ್ಕಿಕರಿಗೆ ಅದ್ವೈತಿಗಳಿಗೆ ಹೇಳಬಹುದು' 'ಅದ್ವಿತೀಯಾದಿಶಬ್ದವಾಚ್ಯತ್ವಾಪಾತಾತ್' ಎಂಬಲ್ಲಿ ಅತದ್ಗುಣ ಸಂವಿಜ್ಞಾನ ಬಹುವ್ರೀಹಿಯಿಂದ ಆದಿಶಬ್ದೋಕ್ತವಾದ ಏವಏಕ ಶಬ್ದಗಳನ್ನಿಟ್ಟುಕೊಳ್ಳಬೇಕು.

**ಅಖಂಡಾರ್ಥೇನ ವೇದಾಂತೇನ ಬ್ರಹ್ಮಾಭಾವಯೋಃ ದ್ವಯೋಃ ಅಸಿದ್ಧೇಶ್ಚ । ಅನ್ಯಸ್ಯ ಚ ತತ್ವಾವೇದಕಸ್ಯ ಅಭಾವಾತ್ । ಶ್ರೌತ ಅದ್ವಿತೀಯ ಪದಸ್ಯ ಅಭಾವರೂಪ ದ್ವಿತೀಯ ನಿಷೇಧೇ ಇವ ಭಾವರೂಪ ದ್ವಿತೀಯ ನಿಷೇಧೇಽಪಿ ಮಾನಾಂತರೇಣ, ಅಗ್ರೇ ಇತಿ ಸ್ವಪದೇನ ಚ ವಿರೋಧಾವಿಶೇಷೇ ಭಾವರೂಪ ದ್ವಿತೀಯ ನಿಷೇಧಪರತ್ವೇನೈವ ಸಂಕೋಚಃ, ನತು ಅಭಾವರೂಪ ದ್ವಿತೀಯ ನಿಷೇಧಪರತ್ವೇನ ಇತ್ಯತ್ರ ಹೇತ್ವಭಾವಾಚ್ಚ ।**

ದ್ವಿತೀಯಾಭಾವರೂಪ ದ್ವಿತೀಯವನ್ನು ತಾತ್ವಿಕವೆನ್ನಲು ಪ್ರಮಾಣವು ಇಲ್ಲ. ವೇದಾಂತವು ಅಖಂಡಾರ್ಥ ಪರ. ಬ್ರಹ್ಮ ಮತ್ತು ದ್ವಿತೀಯಾಭಾವಗಳೆರಡನ್ನು ಅವುಗಳ ಸಂಸರ್ಗವನ್ನು ಅದು ಹೇಳಲಾರದು. ಬೇರೆ ತತ್ವಾವೇದಕಪ್ರಮಾಣವಿಲ್ಲ. ಆದರಿಂದ ಅಭಾವದ್ವೈತವಾದಿಯು ಹೀಗೆ ಹೇಳಬೇಕು—'ಅದ್ವಿತೀಯಂ' ಎಂದು ದ್ವಿತೀಯಾಭಾವವನ್ನು ವಿಧಾನಮಾಡುವ ಶ್ರುತಿಯು ದ್ವಿತೀಯತ್ವೇನ ದ್ವಿತೀಯಾಭಾವವನ್ನು ನಿಷೇಧಮಾಡಿದರೆ ವ್ಯಾಹತವಾಗುತ್ತದೆಯಾದ್ದರಿಂದ ಭಾವರೂಪದ್ವೈತ ನಿಷೇಧಪರತ್ವೇನ ಸಂಕೋಚ ಮಾಡಲೇಬೇಕು. ಹೀಗಾಗಿ ಅದೇ ಶ್ರುತಿಯಿಂದ ಅಭಾವ ಸತ್ಯತ್ವಸಿದ್ಧವಾಗುತ್ತದೆ' ಎಂದು.

ಆದರೆ ಅಭಾವರೂಪ ದ್ವಿತೀಯವನ್ನು ನಿಷೇಧ ಮಾಡುವಾಗ 'ಅದ್ವಿತೀಯ' ಎಂಬ ಸ್ವಪದದ ವಿರೋಧ ಹೇಗೆ ಇದೆಯೋ ಹಾಗೇ ಭಾವರೂಪ ದ್ವಿತೀಯ ನಿಷೇಧ ಮಾಡುವಾಗಲೂ ಪ್ರತ್ಯಕ್ಷಾದಿ ಮತ್ತು 'ಯಸ್ಮಿನ್ ದ್ಯೌಃ' ಇತ್ಯಾದ್ಯಾಗಮಗಳ ವಿರೋಧವಿದೆ. 'ಅಗ್ರೇ ಆಸೀತ್' 'ಸೃಷ್ಟಿಗಿಂತ ಪೂರ್ವದಲ್ಲಿ ಪ್ರಳಯಕಾಲದಲ್ಲಿತ್ತು' ಎಂದು ಕಾಲಸತ್ಯತ್ವವನ್ನು ಹೇಳುವ ಸಮಭಿವ್ಯಾಹೃತ ಸ್ವಪದದಿಂದಲೂ ವಿರೋಧವಿದೆ. ಅಭಾವನಿಷೇಧ ಭಾವನಿಷೇಧಗಳೆರಡರಲ್ಲಿಯೂ ವಿರೋಧ ಸಮಾನವಾಗಿರುವಾಗ ಭಾವರೂಪ ದ್ವಿತೀಯ ನಿಷೇಧಪರತ್ವೇನೈವ ನಿಷೇಧ ಸಂಕೋಚ ಹೊರತು ಅಭಾವರೂಪ ದ್ವಿತೀಯ ನಿಷೇಧ ಪರತ್ವೇನ ಸಂಕೋಚವಲ್ಲ ಎನ್ನುವಲ್ಲಿ ವಿಶೇಷ ಹೇತು ಇಲ್ಲ.

ಭಾವ ಪದಾರ್ಥವನ್ನು ಅಂಗೀಕರಿಸಿ ಅಭಾವ ರೂಪದ್ವಿತೀಯವನ್ನೇ ಶ್ರುತಿ ನಿಷೇಧಿಸಲಿ. ಅಥವಾ ಭಾವ ಅಭಾವಪದಾರ್ಥಗಳೆರಡನ್ನೂ ಅಂಗೀಕರಿಸಿ ಸ್ವತಂತ್ರ ಭಾವಪದಾರ್ಥವನ್ನೇ ನಿಷೇಧಿಸಲಿ. ಭಾವರೂಪ ದ್ವಿತೀಯ ಸಾಮಾನ್ಯನಿಷೇಧಪರವಾಗಿ ಸಂಕೋಚ ಮಾಡಿ ದ್ವಿತೀಯಾಭಾವರೂಪ ದ್ವಿತೀಯವನ್ನು ಏಕೆ ರಕ್ಷಿಸಿಕೊಳ್ಳಬೇಕು? ಆದರಿಂದ ಅಭಾವ ದ್ವೈತಕ್ಕೆ ಪ್ರಮಾಣವಿಲ್ಲದ್ದರಿಂದ ಅದು ಸಿದ್ಧವಾಗುವುದಿಲ್ಲ.

**ಭಾವಸ್ಯಾಪಿ ಸ್ವಾಭಾವಾಭಾವತ್ವಾಚ್ಚ । ಅಭೇದಸ್ಯಾಪಿ ಅನ್ಯೋನ್ಯಾಭಾವ ಪ್ರತಿಯೋಗಿತ್ವೇನ ತತ್‌ಸತ್ಯತ್ವಾಸಿದ್ಧೇಶ್ಚ । ಭೇದಸ್ಯಾಪಿ ಅನ್ಯೋನ್ಯಾಭಾವತ್ವೇನ ತತ್‌ಸತ್ಯತ್ವಾಪತ್ತೇಶ್ಚ ।**

ಅಭಾವಸತ್ಯತ್ವವನ್ನು ಅಂಗೀಕರಿಸಿದರೆ ಭಾವವೂ ಕೂಡ ತನ್ನ ಅಭಾವದ ಅಭಾವ ರೂಪವಾದ್ದರಿಂದ ಸತ್ಯವಾದೀತು. 'ಅಭಾವ ಮಾತ್ರ ಸತ್ಯ. ಅಭಾವ ಪ್ರತಿಯೋಗಿ ಮಿಥ್ಯಾ. ಭಾವವು ಅಭಾವಕ್ಕೆ ಪ್ರತಿಯೋಗಿಯಾದ್ದರಿಂದ ಮಿಥ್ಯಾ' ಎಂದರೆ ಅಭೇದವೂ ಕೂಡ 'ಪಾರಮಾರ್ಥಿಕವಾದ ತಾದಾತ್ಮ್ಯಾಭಾವರೂಪ ಅನ್ಯೋನ್ಯಾಭಾವರೂಪ ಭೇದಕ್ಕೆ ಪ್ರತಿಯೋಗಿಯಾದ್ದರಿಂದ ಮಿಥ್ಯಾ ಆಗಬೇಕಾದೀತು. ಆದಕ್ಕೆ ಸತ್ಯತ್ವ ಸಿದ್ಧವಾಗದೆ ಹೋದೀತು. ಅಭಾವವು ಸತ್ಯವೇ ಆಗಿರುವುದರಿಂದ ಭೇದವೂ ಕೂಡ ಅನ್ಯೋನ್ಯಾಭಾವರೂಪವಾಗಿದ್ದು ಸತ್ಯವೇ ಆದೀತು.

**ಪ್ರಧ್ವಂಸಾದೇಃ ಪ್ರತಿಯೋಗಿನಾ ಸಹ ವಿರೋಧಾಯ ಸ್ವತುಲ್ಯಸತ್ವ ಪ್ರತಿಯೋಗಿ ಸಾಪೇಕ್ಷತ್ವಾಚ್ಚ ।**

ಅಭಾವಕ್ಕೆ ಸತ್ಯತ್ವವನ್ನು ಹೇಳಿದರೆ ಭಾವವೂ ಸತ್ಯವಾಗಬೇಕಾಗುವುದು. ಏಕೆಂದರೆ ಪ್ರಧ್ವಂಸ ಮತ್ತು ಪ್ರಾಗಭಾವಗಳಿಗೆ ಪ್ರತಿಯೋಗಿಯಿಂದ ವಿರೋಧ ಬರಬೇಕಾದರೆ ಪ್ರತಿಯೋಗಿಯಾದ ಭಾವವು ಸತ್ಯವೇ ಆಗಿರಬೇಕು. ತುಲ್ಯ ಸತ್ತಾಕವಾದ ಪ್ರತಿಯೋಗಿಯಿಂದಲೇ ಅವುಗಳಿಗೆ ಏಕಕಾಲತ್ವ ವಿರೋಧ. ಪ್ರಾತಿಭಾಸಿಕ ಘಟದಿಂದ ಘಟಧ್ವಂಸಕ್ಕೆ ವಿರೋಧವಿಲ್ಲ.

**ಭಾವತ್ವಾನಿರ್ವಚನೇ ಭಾವಸ್ಯೇವ ಅಭಾವತ್ವಾನಿರ್ವಚನೇ ಅಭಾವಸ್ಯಾಪಿ ಸತ್ತ್ವಾಸಿದ್ಧೇಃ ಅಭಾವೇ ಸತ್ತ್ವಾರ್ಥಂ ತವಾಪಿ ಅಭಾವತ್ವಾದಿ ನಿರ್ವಚನ ಪ್ರಯಾಸಾಪಾತಾಚ್ಚ ।**

ಭಾವತ್ವವನ್ನು ಯಾವುದೇ ಪ್ರಕಾರದಿಂದ ನಿರ್ವಚನ ಮಾಡಲಾಗುವುದಿಲ್ಲವಾದ್ದರಿಂದ ಅನಿರ್ವಚನೀಯವೆಂದು ಅದ್ವೈತಿ ಹೇಳುತ್ತಾನೆ. ಹಾಗೇ ಅಭಾವತ್ವವನ್ನು ನಿರ್ವಚನ ಮಾಡದೆ ಬಿಟ್ಟರೆ ಅಭಾವವೂ ಅನಿರ್ವಚನೀಯವಾದೀತು. ಅದಕ್ಕೆ ಸತ್ಯತ್ವ ಸಿದ್ಧವಾಗದು. ಆದರಿಂದ ಅಭಾವದಲ್ಲಿ ಸತ್ಯತ್ವ ಸಾಧನೆ ಮಾಡುವುದಕ್ಕಾಗಿ ಅಭಾವತ್ವಾದಿಗಳನ್ನು ನಿರ್ವಚನ ಮಾಡಲೇಬೇಕಾಗುವುದು. ಅದು ಅಶಕ್ಯ. ಭಾವಪದಾರ್ಥಘಟಿತವಾಗಿಯೇ ನಿರ್ವಚನ ಮಾಡಬೇಕಾಗುತ್ತದೆ. ಆಗ ಭಾವ ಸತ್ಯವಾಗುವುದು.

**ಅಭಾವೇ ದೃಶ್ಯತ್ವಾದೇಃ ವ್ಯಭಿಚಾರಸ್ಯ ಚ, ಅಭಾವವದ್ ಭಾವಸ್ಯಾಪಿ ಸತ್ಯತ್ವೇऽಪಿ ದೃಶ್ಯತ್ವೋಪಪತ್ತ್ಯಾ ಅಪ್ರಯೋಜಕತ್ವಸ್ಯ ಚಾಪಾತಾಚ್ಚ ।**

ದ್ವಿತೀಯಾಭಾವ ಸತ್ಯವಾದರೆ, ದೃಶ್ಯತ್ವಾದಿ ಹೇತುಗಳು ಅದರಲ್ಲಿ ಬರುವುದರಿಂದ ವ್ಯಭಿಚಾರವೂ ಬರುವುದು. ಪ್ರಪಂಚಮಿಥ್ಯಾತ್ವ ಸಿದ್ಧಿಯಾಗದೆ ಹೋಗುವುದು, ಪ್ರಪಂಚವೂ ಸತ್ಯವೆಂದೇ ಆಗುವುದು. ಅಭಾವವು ಸತ್ಯವಾದರೂ ದೃಶ್ಯತ್ವ ಕೂಡುವುದರಿಂದ, ಭಾವವೂ ಸತ್ಯವಾದರೂ ದೃಶ್ಯತ್ವ ಕೂಡಬಹುದು. ಆದರಿಂದ ದೃಶ್ಯತ್ವವು ಮಿಥ್ಯಾತ್ವಕ್ಕೆ ಅಪ್ರಯೋಜಕ ವಾಗುವುದು. ಮತ್ತು ದೃಶ್ಯತ್ವ ಹೇತುವಿಗೆ ಅಭಾವದಲ್ಲಿ ವ್ಯಭಿಚಾರ ಬಂದಾಗ ಹೇತುವಿನಲ್ಲಿ 'ಅಭಾವ ಭಿನ್ನತ್ವೇ ಸತಿ' ಎಂದು ವಿಶೇಷಣಕೊಟ್ಟು ವ್ಯಭಿಚಾರಪರಿಹಾರ ಮಾಡಿದರೆ ವ್ಯಭಿಚಾರ ಬಂದಾಗೆಲ್ಲ ಹೀಗೇ ತದ್ಭಿನ್ನತ್ವವಿಶೇಷಣ ಕೊಡುತ್ತ ಹೋದರೆ ಹೇತು ಅಪ್ರಯೋಜಕವೆಂದು ಸಾಬೀತಾಗುವುದು.

**ಅಭಾವಸ್ಯ ಪ್ರತಿಯೋಗಿ ಘಟಿತತ್ವೇನ ಭಾವಾದಪಿ ವಿಶಿಷ್ಯ ಅದ್ವೈತ ವಿರೋಧಿ ತ್ವಾಚ್ಚ ।**

ಭಾವಸತ್ಯತ್ವವನ್ನು ಒಪ್ಪಿದರೆ ಅದು ಅದ್ವೈತಕ್ಕೆ ಹಾನಿ ಉಂಟುಮಾಡುತ್ತದೆ ಎಂದು ಅದ್ವೈತಿಗೆ ಭಯ. ಈಗ ಅಭಾವವನ್ನು ಬ್ರಹ್ಮವ್ಯತಿರಿಕ್ತ ಸತ್ಯ ಎಂದು ಒಪ್ಪಿದರೆ ಅದೇರೀತಿ ಅದ್ವೈತಕ್ಕೆ ಹಾನಿ ಇದೆ, ಮಾತ್ರವಲ್ಲ, ಈ ಅತಿರಿಕ್ತ ಅಭಾವ ಸ್ವಸಮಾನಸತ್ತಾಕ ಪ್ರತಿಯೋಗಿ ನಿರೂಪ್ಯವಾದ್ದರಿಂದ ಭಾವರೂಪವಾದ ಪ್ರತಿಯೋಗಿಯೂ ಸತ್ಯವಾಗಿ ಅದ್ವೈತಕ್ಕೆ ಹಾನಿ ಉಂಟುಮಾಡುತ್ತದೆ. ಭಾವಸತ್ಯತ್ವವನ್ನು ಒಪ್ಪಿದರೆ ಭಾವದಿಂದ ಮಾತ್ರ ಅದ್ವೈತಕ್ಕೆ ಹಾನಿ. ಅಭಾವ ಸತ್ಯತ್ವವನ್ನು ಒಪ್ಪಿದರೆ ಭಾವ ಅಭಾವಗಳೆರಡರಿಂದಲೂ ಅದ್ವೈತಕ್ಕೆ ಹಾನಿ.

ನಿರೂಪಕ ಅಸತ್ಯವಾದರೆ ನಿರೂಪ್ಯಕ್ಕೆ ಸತ್ಯತ್ವ ಕೂಡುವುದಿಲ್ಲವೆಂದು ಅದ್ವೈತಿ ಹೇಳುತ್ತಾನೆ. ಸಾರ್ವಜ್ಞರೂಪವಾದ ಗುಣವು ಮಿಥ್ಯಾ ಏಕೆಂದರೆ ಅದು ಜ್ಞಾನವಿಷಯವಾದ ಸರ್ವದಿಂದ ನಿರೂಪ್ಯವಾಗಿದೆ. ಮಿಥ್ಯಾಭೂತ ಪರೋಪಾಧಿಕವಾದ್ದರಿಂದ ಸಾರ್ವಜ್ಞ ಮಿಥ್ಯಾ. ಅಭಾವವೂ ಕೂಡ

ಮಿಥ್ಯಾಭೂತ ಭಾವರೂಪಪ್ರತಿಯೋಗಿ ನಿರೂಪ್ಯವಾದ್ದರಿಂದ ಮಿಥ್ಯಾ ಆಗಬೇಕು. ಆಗ ಮಾತ್ರ ಅದ್ವೈತಕ್ಕೆ ಹಾನಿ ತಪ್ಪುತ್ತದೆ. ಇದೀಗ ಸ್ವಸಮಾನಸತ್ತಾಕಪ್ರತಿಯೋಗಿ ನಿರೂಪ್ಯವಾದ ಅಭಾವವನ್ನು ಸತ್ಯವೆಂದು ಒಪ್ಪಿದ್ದರಿಂದ 'ವಿಶಿಷ್ಟ' ವಿಶೇಷವಾಗಿ ಅದ್ವೈತಕ್ಕೆ ಹಾನಿ.

❖❖❖

**किञ्चात्यन्ताभावप्रतियोगित्वं स्वरूपेण वा पारमार्थिकत्वेन वा । नोभयमपि, निरस्तत्वात् । अन्यासमवेतस्यांशित्वमेतत्तन्तु समवेतत्वं विना न युक्तमिति विरुद्धश्च। कस्यचित् पटस्य संयोगवृत्त्या एतत्तन्तुषु सत्त्वादनैकांतिकश्च । समवायवृत्त्या एतत्तन्तुष्वसत्त्वं तु विशेषणासत्वेनापि युक्तम् । इह तन्तुषु पट इति प्रत्यक्षबाधितश्च ।**

**अयं पटः एतत्तन्तुनिष्ठात्यन्ताभावप्रतियोगी न । एतत्तन्त्वारब्धत्वाद् व्यतिरेकेण पटान्तरवदिति सत्प्रतिपक्षश्च । नचाप्रसिद्धविशेषणता । एतत्तन्तुनिष्ठात्यन्ताभावप्रतियोगित्वं किञ्चिन्निष्ठात्यन्ताभावप्रतियोगि संसर्गाभावप्रतियोगित्वव्याप्यत्वात् प्रागभावप्रतियोगित्ववदिति सामान्यतस्तत्सिद्धेः । एतत्तन्त्वनारब्धत्वं चोपाधिः । नचैतत्तन्त्वारब्धसंयोगे साध्याव्यापकम् । आवयोस्संयोगः स्वात्यन्ताभावासमानाधिकरण इति संमतेः । द्रव्यत्वावच्छिन्नसाध्यव्यापकत्वोपपत्तेश्चोपाधिरेव प्रयोजकः । साध्यवति ब्रह्मणि उपाधिवद्धेतोरभावात् । अनुकूलतर्काभावे च व्यतिरेकहीनस्याप्युपाधित्वाच्च । नह्यंशित्वं साध्यं विना न युक्तम् ।**

**उक्तहेतुनैवैतत्पटार्थक्रियाकारित्वाद्यभावस्यापि सुसाधत्वादाभाससाम्यं च ।**

**विरुद्धश्चेति ।।** स्वस्य पक्षधर्मतासिद्ध्यर्थं साध्याभावसापेक्षत्वात् तेन साध्यसाधने विरोध इति भावः । किञ्चैतत्तन्तुनिष्ठात्यन्ताभावप्रतियोगित्वं संयोगेन समवायेन संबन्धान्तरेण वेति विकल्प्याद्ये दोषमाह **कस्यचिदिति ।।** यद्यपि

पटान्तरासंयुक्त तन्त्वारब्धपटस्य पक्षत्वे नायं दोषः । तथापि सिद्धसाधनमित्यत्र तात्पर्यम् ।। द्वितीये दोषमाह **समवायवृत्त्येति ।।** आवाभ्यां समवायस्यानभ्युपगमादिति भावः । तृतीय आह **इहेति ।** एतच्च नैयायिकदिशा बोध्यम् । सिद्धान्ते एतादृशप्रती-तेरेवासिद्धेरिति ।। **नचेति ।।** यद्यप्यभावसाध्यकव्यतिरेकिणि न साध्याप्रसिद्धिर्दोषः । साध्यप्रसिद्धिं विनापि साध्याभावहेत्वभावयोर्भावरूपतया व्याप्तिग्रहसंभवात् । तथापि साध्याभावत्वेन तत्प्रतीतेः साध्यप्रसिद्धिं विना असम्भवेन साध्याप्रसिद्धिर्दोष एवेति । (साध्याभावत्वेन व्याप्तिग्रहासंभवात् साध्याप्रसिद्धिर्दोष एवेति) ।। **संसर्गाभावेति ।।** अत्र संसर्गाभावपदं अन्योन्याभावप्रतियोगित्वे व्यभिचारवारणाय ।। **आवयोरिति ।।** नच संयोगस्य व्याप्यवृत्तित्वं मूले वृक्षः कपिसंयोगी शाखायां नेत्यनुभवबाधितमिति वाच्यम् । एतदनुभवादेव मूलावच्छिन्नवृक्षात् शाखावच्छिन्नवृक्षस्य भिन्नत्वसिद्ध्या संयोगतदत्यन्ताभावयोर्भिन्नाश्रितत्वस्यैव सिद्धेः । नच प्रत्यभिज्ञाविरोधः । तस्या जातिविषयत्वात् । संयोगस्याव्याप्यवृत्तित्वमभिप्रेत्याह **द्रव्यत्वेति ।।** द्रव्यत्वेति साध्यव्यापकतायामसाधारणं रूपमाह । उपाधिरेवेत्येवकारो भिन्नक्रमः प्रयोजक एवोपाधिरिति । यो यद्व्यतिरेकप्रयुक्तव्यतिरेकप्रतियोगी स तं प्रति प्रयोजक इति कृत्वा उपाधिवदिति व्यतिरेकदृष्टान्तः । अन्यथोपाधिवत् हेतोर्भावादित्युक्त्यापत्तेरिति द्रष्टव्यम् । प्रयोजकत्वमन्यदेवेति मन्दाशङ्कानिरासार्थमाह **हेतोरिति ।।** तथाच तेन विनापि भवतः साध्यस्य तदप्रयोजकत्वेनोपाधेः साध्यव्यापकतासिद्धेः साध्यव्यापकव्यभिचारिहेतोः साध्यव्यभिचारित्वमिति समग्रवाक्यस्य निष्कर्षितोऽर्थः (निर्गलितोऽर्थ इति पाठान्तरम्)

ननु यत्रैतत्तन्त्वनारब्धत्वाभावः तत्र साध्याभाव इति व्यतिरेकग्रहः पक्ष एव वाच्यः । स चाद्यापि नोभयोः सम्प्रतिपन्न इति व्यतिरेकहीनोऽयं कथमुपाधिरित्यत आह **अनुकूलेति ।।** त्वदुक्तहेतावनुकूलतर्काभावे व्यतिरेकाग्रहो नान्वयसहचारजन्यव्यापकत्वग्रहे विरोधिशङ्काधायक इत्यर्थः । अनुकूलतर्काभावमेवोपपादयति **न ह्यंशित्वमिति ।।** ननु सहचारदर्शन व्यभिचारादर्शनाभ्यामेव व्याप्तिग्रहसंभवे कानुकूलतर्कापेक्षापीत्यत आह **उक्तहेतुनैवेति ।।**

## ಅಂಶಿತ್ವಹೇತು ದೋಷಪೂರ್ಣವಾಗಿದೆ

**ಕಿಂಚ ಅತ್ಯಂತಾಭಾವ ಪ್ರತಿಯೋಗಿತ್ವಂ ಸ್ವರೂಪೇಣ ವಾ? ಪಾರಮಾರ್ಥಿಕತ್ವೇನ ವಾ? ನೋಭಯಮಪಿ। ನಿರಸ್ತತ್ವಾತ್।**

'ಅಯಂ ಪಟಃ ಏತತ್ತಂತು ನಿಷ್ಠ ಅತ್ಯಂತಾಭಾವಪ್ರತಿಯೋಗೀ ಅಂಶಿತ್ವಾತ್' ಎಂದು ಪಟಕ್ಕೆ ಏತತ್ತಂತು ನಿಷ್ಠ ಅತ್ಯಂತಾಭಾವಪ್ರತಿಯೋಗಿತ್ವವನ್ನು ಸಾಧನೆ ಮಾಡುತ್ತಿದ್ದಾನೆ. ಇಲ್ಲಿ ಅತ್ಯಂತಾಭಾವ ಪ್ರತಿಯೋಗಿತ್ವವು ಸ್ವರೂಪೇಣ ಅಂದರೆ ಪಟತ್ವಾವಚ್ಛಿನ್ನವೆ? ಅಥವಾ ಪಾರಮಾರ್ಥಿಕತ್ವಾವಚ್ಛಿನ್ನವೆ? ಎರಡೂ ಸರಿಯಲ್ಲ ಎಂದು ಮಿಥ್ಯಾತ್ವನಿರುಕ್ತಿ ಭಂಗದಲ್ಲಿ ಹೇಳಿದ್ದೇವೆ. ಇಲ್ಲಿ ಪುನಃ ಅದನ್ನೇ ಹೇಳುತ್ತಿರುವುದು ಈ ಅಂಶಿತ್ವಾನುಮಾನ ಭಂಗಕ್ಕಾಗಿ.

ಪಟಕ್ಕೆ ಸ್ವರೂಪೇಣ ಅತ್ಯಂತಾಭಾವ ಪ್ರತಿಯೋಗಿತ್ವವನ್ನು ಹೇಳಿದರೆ ಪಟವು ನಿಃಸ್ವರೂಪ ಅತ್ಯಂತಾಸತ್ತಾದೀತು. ಅಸದ್‌ವಿಲಕ್ಷಣತ್ವರೂಪ ಮಿಥ್ಯಾತ್ವಕ್ಕೆ ಅದು ವಿರೋಧಿ. ಆದರಿಂದ ಅದನ್ನು ಅದ್ವೈತಿ ಒಪ್ಪುವುದಿಲ್ಲ. ಪಾರಮಾರ್ಥಿಕತ್ವೇನ ಅತ್ಯಂತಾಭಾವಪ್ರತಿಯೋಗಿತ್ವವನ್ನು ಹೇಳಿದರೆ ಅದು ಪಾರಮಾರ್ಥಿಕತ್ವ ನಿಷೇಧದಲ್ಲಿ ಪರ್ಯವಸಾನವಾಗುವುದರಿಂದ, ಬ್ರಹ್ಮ ನಿರ್ಧರ್ಮಕವಾದ್ದರಿಂದ ಪಾರಮಾರ್ಥಿಕತ್ವ ರಹಿತವಾದರೂ ಸ್ವರೂಪೇಣ ಸತ್ಯವಾಗುವಂತೆ ಪಟವೂ ಪಾರಮಾರ್ಥಿಕತ್ವ ರಹಿತವಾದರೂ ಸ್ವರೂಪೇಣ ಸತ್ಯವಾಗಬಹುದು. ಆದರಿಂದ ಅಂಶಿತ್ವಾನುಮಾನ ಮಿಥ್ಯಾತ್ವಸಾಧಕ ವಾಗುವುದಿಲ್ಲ.

**ಅನ್ಯಾಸಮವೇತಸ್ಯ ಅಂಶಿತ್ವಂ ಏತತ್ತಂತು ಸಮವೇತತ್ವಂ ವಿನಾ ನ ಯುಕ್ತಂ ಇತಿ ವಿರುದ್ಧಶ್ಚ।**

ಅಂಶಿತ್ವಹೇತುವಿಗೆ ವಿರುದ್ಧ ವ್ಯಭಿಚಾರ ಬಾಧ ಸತ್‌ಪ್ರತಿಪಕ್ಷ ಉಪಾಧಿ ಆಭಾಸಸಾಮ್ಯ ದೋಷಗಳನ್ನು ಕ್ರಮವಾಗಿ ಹೇಳಲು ತೊಡಗಿ ಮೊದಲಿಗೆ ವಿರುದ್ಧತ್ವವನ್ನು ಹೇಳುತ್ತಿದ್ದಾರೆ.

ಏತತ್ತಂತು ಎಂದರೆ ಈ ಪಟಕ್ಕೆ ಉಪಾದಾನವಾದ ತಂತು. ಈ ತಂತುವಿಗಿಂತ ವ್ಯತಿರಿಕ್ತವಾದ ಯಾವುದೇ ತಂತುವಿನಲ್ಲಿ ಈ ಪಟ ಇಲ್ಲವೆಂದು ಸಿದ್ಧವಾಗಿದೆ. ಆದರಿಂದ ಈ ಪಟರೂಪವಾದ ಪಕ್ಷದಲ್ಲಿ ಅಂಶಿತ್ವ ಬರಬೇಕೆಂದರೆ ಈ ಪಟವು ಏತತ್ತಂತು ರೂಪ ಅಂಶದಲ್ಲಿ ಇದ್ದೇತೀರಬೇಕು. ಆದರಿಂದ ಏತತ್ತಂತು ನಿಷ್ಠ ಅತ್ಯಂತಾಭಾವ ಅಪ್ರತಿಯೋಗಿತ್ವರೂಪ ಸಾಧ್ಯಾಭಾವಕ್ಕೆ ವ್ಯಾಪ್ಯವಾಯಿತು ಅಂಶಿತ್ವಹೇತು. ಸಾಧ್ಯಾಭಾವವ್ಯಾಪ್ಯವಾದ ಹೇತುವನ್ನು ಸಾಧ್ಯಸಾಧನಗೆ ಪ್ರಯೋಗಿಸುವುದರಿಂದ ಹೇತು ವಿರುದ್ಧವಾಗಿದೆ.

**ಕಸ್ಯಚಿತ್ ಪಟಸ್ಯ ಸಂಯೋಗ ವೃತ್ತ್ಯಾ ಏತತ್ತಂತುಷು ಸತ್ವಾತ್ ಅನೈಕಾಂತಿಕಶ್ಚ। ಸಮವಾಯ ವೃತ್ತ್ಯಾ ಏತತ್ತಂತುಷು ಅಸತ್ವಂ ತು ವಿಶೇಷಣಾಸತ್ವೇನಾಪಿ ಯುಕ್ತಂ।**

ಯಾವುದೊಂದು ಪಟವು ಏತತ್ ತಂತುವಿನಲ್ಲಿ ಸಂಯೋಗ ಸಂಬಂಧದಿಂದ ಇರುವುದರಿಂದ ಆದರಲ್ಲಿ ಏತತ್ ತಂತು ನಿಷ್ಠ ಅತ್ಯಂತಾಭಾವಪ್ರತಿಯೋಗಿತ್ವರೂಪ ಸಾಧ್ಯವಿಲ್ಲ, ಹೇತುವಾದ ಅಂಶತ್ವ ಇದೆ. ಆದರಿಂದ ಹೇತು ಅನೈಕಾಂತಿಕ.

पटान्तरासंयुक्त तन्त्वारब्धपटस्य पक्षत्वे नायं दोषः। तथापि सिद्धसाधनमित्यत्र तात्पर्यम् ॥ द्वितीये दोषमाह **समवायवृत्त्येति** ॥ आवाभ्यां समवायस्यानभ्युपगमादिति भावः। तृतीय आह **इहेति**। एतच्च नैयायिकदिशा बोध्यम्। सिद्धान्ते एतादृशप्रती-तेरेवासिद्धेरिति ॥ **नचेति** ॥ यद्यप्यभावसाध्यकव्यतिरेकिणि न साध्याप्रसिद्धिर्दोषः। साध्यप्रसिद्धिं विनापि साध्याभावहेत्वभावयोर्भावरूपतया व्याप्तिग्रहसंभवात्। तथापि साध्याभावत्वेन तत्प्रतीतेः साध्यप्रसिद्धिं विना असम्भवेन साध्याप्रसिद्धिर्दोष एवेति। (साध्याभावत्वेन व्याप्तिग्रहासंभवात् साध्याप्रसिद्धिर्दोष एवेति) ॥ **संसर्गाभावेति** ॥ अत्र संसर्गाभावपदं अन्योन्याभावप्रतियोगित्वे व्यभिचारवारणाय ॥ **आवयोरिति** ॥ नच संयोगस्य व्याप्यवृत्तित्वं मूले वृक्षः कपिसंयोगी शाखायां नेत्यनुभवबाधितमिति वाच्यम्। एतदनुभवादेव मूलावच्छिन्नवृक्षात् शाखावच्छिन्नवृक्षस्य भिन्नत्वसिद्ध्या संयोगतदत्यन्ताभावयोर्भिन्नाश्रितत्वस्यैव सिद्धेः। नच प्रत्यभिज्ञाविरोधः। तस्या जातिविषयत्वात्। संयोगस्याव्याप्यवृत्तित्वमभिप्रेत्याह **द्रव्यत्वेति** ॥ द्रव्यत्वेति साध्यव्यापकतायामसाधारणं रूपमाह। उपाधिरेवेत्येवकारो भिन्नक्रमः प्रयोजक एवोपाधिरिति। यो यद्व्यतिरेकप्रयुक्तव्यतिरेकप्रतियोगी स तं प्रति प्रयोजक इति कृत्वा उपाधिवदिति व्यतिरेकदृष्टान्तः। अन्यथोपाधिवत् हेतोर्भावादित्युक्त्यापत्तेरिति द्रष्टव्यम्। प्रयोजकत्वमन्यदेवेति मन्दाशङ्कानिरासार्थमाह **हेतोरिति** ॥ तथाच तेन विनापि भवतः साध्यस्य तदप्रयोजकत्वेनोपाधेः साध्यव्यापकतासिद्धेः साध्यव्यापकव्यभिचारिहेतोः साध्यव्यभिचारित्वमिति समग्रवाक्यस्य निष्कर्षितोऽर्थः (निर्गलितोऽर्थ इति पाठान्तरम्)

ननु यत्रैतत्तन्त्वनारब्धत्वाभावः तत्र साध्याभाव इति व्यतिरेकग्रहः पक्ष एव वाच्यः। स चाद्यापि नोभयोः सम्प्रतिपन्न इति व्यतिरेकहीनोऽयं कथमुपाधिरित्यत आह **अनुकूलेति** ॥ त्वदुक्तहेतावनुकूलतर्काभावे व्यतिरेकाग्रहो नान्वयसहचारजन्यव्यापकत्वग्रहे विरोधिशङ्काधायक इत्यर्थः। अनुकूलतर्काभावमेवोपपादयति **न ह्यंशित्वमिति** ॥ ननु सहचारदर्शन व्यभिचारादर्शनाभ्यामेव व्याप्तिग्रहसंभवे कानुकूलतर्कापेक्षापीत्यत आह **उक्तहेतुनैवेति** ॥

## ಅಂಶಿತ್ವಹೇತು ದೋಷಪೂರ್ಣವಾಗಿದೆ

**ಕಿಂಚ ಅತ್ಯಂತಾಭಾವ ಪ್ರತಿಯೋಗಿತ್ವಂ ಸ್ವರೂಪೇಣ ವಾ? ಪಾರಮಾರ್ಥಿಕತ್ವೇನ ವಾ? ನೋಭಯಮಪಿ । ನಿರಸ್ತತ್ವಾತ್ ।**

'ಅಯಂ ಪಟಃ ಏತತ್ತಂತು ನಿಷ್ಠ ಅತ್ಯಂತಾಭಾವಪ್ರತಿಯೋಗೀ ಅಂಶಿತ್ವಾತ್' ಎಂದು ಪಟಕ್ಕೆ ಏತತ್ತಂತು ನಿಷ್ಠ ಅತ್ಯಂತಾಭಾವಪ್ರತಿಯೋಗಿತ್ವವನ್ನು ಸಾಧನೆ ಮಾಡುತ್ತಿದ್ದಾನೆ. ಇಲ್ಲಿ ಅತ್ಯಂತಾಭಾವ ಪ್ರತಿಯೋಗಿತ್ವವು ಸ್ವರೂಪೇಣ ಅಂದರೆ ಪಟತ್ವಾವಚ್ಛಿನ್ನವೆ? ಅಥವಾ ಪಾರಮಾರ್ಥಿಕತ್ವಾವಚ್ಛಿನ್ನವೆ? ಎರಡೂ ಸರಿಯಲ್ಲ ಎಂದು ಮಿಥ್ಯಾತ್ವನಿರುಕ್ತಿ ಭಂಗದಲ್ಲಿ ಹೇಳಿದ್ದೇವೆ. ಇಲ್ಲಿ ಪುನಃ ಅದನ್ನೇ ಹೇಳುತ್ತಿರುವುದು ಈ ಅಂಶಿತ್ವಾನುಮಾನ ಭಂಗಕ್ಕಾಗಿ.

ಪಟಕ್ಕೆ ಸ್ವರೂಪೇಣ ಅತ್ಯಂತಾಭಾವ ಪ್ರತಿಯೋಗಿತ್ವವನ್ನು ಹೇಳಿದರೆ ಪಟವು ನಿಃಸ್ವರೂಪ ಅತ್ಯಂತಾಸತ್ತಾದೀತು. ಅಸದ್‌ವಿಲಕ್ಷಣತ್ವರೂಪ ಮಿಥ್ಯಾತ್ವಕ್ಕೆ ಅದು ವಿರೋಧಿ. ಅದರಿಂದ ಅದನ್ನು ಅದ್ವೈತಿ ಒಪ್ಪುವುದಿಲ್ಲ. ಪಾರಮಾರ್ಥಿಕತ್ವೇನ ಅತ್ಯಂತಾಭಾವಪ್ರತಿಯೋಗಿತ್ವವನ್ನು ಹೇಳಿದರೆ ಅದು ಪಾರಮಾರ್ಥಿಕತ್ವ ನಿಷೇಧದಲ್ಲಿ ಪರ್ಯವಸಾನವಾಗುವುದರಿಂದ, ಬ್ರಹ್ಮ ನಿರ್ಧರ್ಮಕವಾದ್ದರಿಂದ ಪಾರಮಾರ್ಥಿಕತ್ವ ರಹಿತವಾದರೂ ಸ್ವರೂಪೇಣ ಸತ್ಯವಾಗುವಂತೆ ಪಟವೂ ಪಾರಮಾರ್ಥಿಕತ್ವ ರಹಿತವಾದರೂ ಸ್ವರೂಪೇಣ ಸತ್ಯವಾಗಬಹುದು. ಅದರಿಂದ ಅಂಶಿತ್ವಾನುಮಾನ ಮಿಥ್ಯಾತ್ವಸಾಧಕ ವಾಗುವುದಿಲ್ಲ.

**ನ್ಯಾಸಮವೇತಸ್ಯ ಅಂಶಿತ್ವಂ ಏತತ್ತಂತು ಸಮವೇತತ್ವಂ ವಿನಾ ನ ಯುಕ್ತಂ ಇತಿ ವಿರುದ್ಧಶ್ಚ ।**

ಅಂಶಿತ್ವಹೇತುವಿಗೆ ವಿರುದ್ಧ ವ್ಯಭಿಚಾರ ಬಾಧ ಸತ್‌ಪ್ರತಿಪಕ್ಷ ಉಪಾಧಿ ಆಭಾಸಸಾಮ್ಯ ದೋಷಗಳನ್ನು ಕ್ರಮವಾಗಿ ಹೇಳಲು ತೊಡಗಿ ಮೊದಲಿಗೆ ವಿರುದ್ಧತ್ವವನ್ನು ಹೇಳುತ್ತಿದ್ದಾರೆ.

ಏತತ್ತಂತು ಎಂದರೆ ಈ ಪಟಕ್ಕೆ ಉಪಾದಾನವಾದ ತಂತು. ಈ ತಂತುವಿಗಿಂತ ವ್ಯತಿರಿಕ್ತವಾದ ಯಾವುದೇ ತಂತುವಿನಲ್ಲಿ ಈ ಪಟ ಇಲ್ಲವೆಂದು ಸಿದ್ಧವಾಗಿದೆ. ಅದರಿಂದ ಈ ಪಟರೂಪವಾದ ಪಕ್ಷದಲ್ಲಿ ಅಂಶಿತ್ವ ಬರಬೇಕೆಂದರೆ ಈ ಪಟವು ಏತತ್ತಂತು ರೂಪ ಅಂಶದಲ್ಲಿ ಇದ್ದೇತೀರಬೇಕು. ಅದರಿಂದ ಏತತ್ತಂತು ನಿಷ್ಠ ಅತ್ಯಂತಾಭಾವ ಅಪ್ರತಿಯೋಗಿತ್ವರೂಪ ಸಾಧ್ಯಾಭಾವಕ್ಕೆ ವ್ಯಾಪ್ಯವಾಯಿತು ಅಂಶಿತ್ವಹೇತು. ಸಾಧ್ಯಾಭಾವವ್ಯಾಪ್ಯವಾದ ಹೇತುವನ್ನು ಸಾಧ್ಯಸಾಧನೆಗೆ ಪ್ರಯೋಗಿಸುವುದರಿಂದ ಹೇತು ವಿರುದ್ಧವಾಗಿದೆ.

**ಕಸ್ಯಚಿತ್ ಪಟಸ್ಯ ಸಂಯೋಗ ವೃತ್ತ್ಯಾ ಏತತ್ತಂತುಷು ಸತ್ತ್ವಾತ್ ಅನೈಕಾಂತಿಕಶ್ಚ । ಸಮವಾಯ ವೃತ್ತ್ಯಾ ಏತತ್ತಂತುಷು ಅಸತ್ತ್ವಂ ತು ವಿಶೇಷಣಾಸತ್ವೇನಾಪಿ ಯುಕ್ತಂ ।**

ಯಾವುದೊಂದು ಪಟವು ಏತತ್ ತಂತುವಿನಲ್ಲಿ ಸಂಯೋಗ ಸಂಬಂಧದಿಂದ ಇರುವುದರಿಂದ ಅದರಲ್ಲಿ ಏತತ್ ತಂತು ನಿಷ್ಠ ಅತ್ಯಂತಾಭಾವಪ್ರತಿಯೋಗಿತ್ವರೂಪ ಸಾಧ್ಯವಿಲ್ಲ, ಹೇತುವಾದ ಅಂಶತ್ವ ಇದೆ. ಅದರಿಂದ ಹೇತು ಅನೈಕಾಂತಿಕ.

ಯದ್ಯಪಿ ಯಾವ ಬೇರೆ ಪಟವೂ ಏತತ್ತಂತು ಸಂಯುಕ್ತವಾಗಿಲ್ಲ. ಅಂಥ ತಂತುಪಿನಿಂದಾದ ಪಟವನ್ನೇ ಪಕ್ಷ ಮಾಡುತ್ತೇನೆ. ಆದರಿಂದ ವ್ಯಭಿಚಾರವಿಲ್ಲ ಎಂದು ಅದ್ವೈತಿ ಹೇಳಬಹುದು. ಆಗ, ಏತತ್ತಂತುವಿನಲ್ಲಿ ಈ ಪಟವು ಸಂಯೋಗ ಸಂಬಂಧದಿಂದ ಇರುವುದೇ ಇಲ್ಲವಾದ್ದರಿಂದ ಅದರಲ್ಲಿ ಸಂಯೋಗೇನ ಅತ್ಯಂತಾಭಾವ ಪ್ರತಿಯೋಗಿತ್ವ ಸಾಧನೆ ಮಾಡಲು ಹೊರಟರೆ ಸಿದ್ಧಸಾಧನವನ್ನು ಹೇಳುವ ತಾತ್ಪರ್ಯವೆಂದು ತಿಳಿಯಬೇಕು. ಸಮವಾಯ ಸಂಬಂಧದಿಂದ ಈ ಪಟವು ಏತ್ತಂತುವಿನಲ್ಲಿದೆ ಎಂದು ಮನಸ್ಸಿನಲ್ಲಿಟ್ಟುಕೊಂಡು ಸಮವಾಯ ಸಂಬಂಧದಿಂದ ಏತತ್ತಂತುಗಳಲ್ಲಿಲ್ಲ ವೆಂದು ಅವನು ಸಾಧನೆ ಮಾಡುವುದಾದರೆ, ದ್ವೈತಿ ಅದ್ವೈತಿಗಳಿಬ್ಬರೂ ತಂತುಪಟಗಳಿಗೆ ಸಮವಾಯ ಸಂಬಂಧವನ್ನು ಒಪ್ಪದಿರುವುದರಿಂದ ಮಿಥ್ಯಾತ್ವವಿಲ್ಲದೆಯೆ, ಸಮವಾಯರೂಪ ವಿಶೇಷಣವಿಲ್ಲದ್ದ ರಿಂದಲೇ ಏತತ್ತಂತು ಅಸಮವೇತತ್ವರೂಪ ವಿಶಿಷ್ಟವು ಕೂಡುವುದರಿಂದ ಸಿದ್ಧಸಾಧನವೆ.

**ಇಹ ತಂತುಷು ಪಟ ಇತಿ ಪ್ರತ್ಯಕ್ಷ ಬಾಧಿತಶ್ಚ ।**

'ಈ ತಂತುಗಳಲ್ಲಿ ಪಟವಿದೆ' ಎನ್ನುವ ಪ್ರತ್ಯಕ್ಷವು 'ಈ ತಂತುಗಳಲ್ಲಿ ಪಟವಿಲ್ಲ' ಎಂಬ ಸಾಧ್ಯಾನುಮಿತಿಗೆ ಪ್ರಬಲವಾದ ಬಾಧಕವಾಗಿರುವುದರಿಂದ ಬಾಧದೋಷ.

ವಸ್ತುತಃ ನಮ್ಮ ಸಿದ್ಧಾಂತದಲ್ಲಿ ತಂತುಗಳಿಗಿಂತ ಬೇರೆ ಪಟವೆ ಇಲ್ಲ. ಪ್ರತ್ಯೇಕ ತಂತುಗಳಿಗೂ ಪಟಕ್ಕೂ ಭೇದಾಭೇದವಿದ್ದರೂ ಪರಸ್ಪರ ಸಂಯುಕ್ತವಾದ ಸಕಲ ತಂತು ಸಮುದಾಯಕ್ಕೂ ಪಟಕ್ಕೂ ಅತ್ಯಂತಾಭೇದವೆ. ಆದರಿಂದ ಪಟವು ತನ್ನಲ್ಲಿ ತಾನಿಲ್ಲ. ಹಾಗೆ ಪ್ರತ್ಯಕ್ಷವೂ ಇಲ್ಲ. ಆದರೂ ತಾರ್ಕಿಕರು ಸಂಯುಕ್ತ ತಂತು ಸಮೂಹವನ್ನು ಪಟಕ್ಕೆ ಸಮವಾಯಿಕಾರಣವೆನ್ನುತ್ತಾರೆ. ಅವರ ಪ್ರಕಾರ ತಂತು ಪಟಗಳಿಗೆ ಅತ್ಯಂತ ಭೇದವೆ. ಆದರಿಂದ ಕಾರ್ಯವು ಸಮವಾಯಿಕಾರಣದಲ್ಲಿ ಸಮವೇತ ವಾಗಿರುವುದರಿಂದ 'ಈ ತಂತುಗಳಲ್ಲಿ ಪಟವಿದೆ' ಎಂಬ ಪ್ರತ್ಯಕ್ಷವಿದೆ ಎಂದು ಒಪ್ಪುತ್ತಾರೆ. ಅವರೂ ಈ ವಾದದಲ್ಲಿ ಅದ್ವೈತಿಗಳಿಗೆ ಪ್ರತಿವಾದಿಗಳಾಗಿರುವುದರಿಂದ ಅವರ ರೀತಿಯಿಂದ ಪ್ರತ್ಯಕ್ಷ ಬಾಧವಿದೆ.

**ಅಯಂ ಪಟಃ ಏತತ್ತಂತು ನಿಷ್ಠ ಅತ್ಯಂತಾಭಾವ ಪ್ರತಿಯೋಗೀ ನ । ಏತತ್ತಂತ್ವಾರಬ್ಧತ್ವಾತ್ ವ್ಯತಿರೇಕೇಣ ಪಟಾಂತರವತ್ । ಇತಿ ಸತ್‌ಪ್ರತಿಪಕ್ಷಶ್ಚ । ನ ಚ ಅಪ್ರಸಿದ್ಧವಿಶೇಷಣತಾ । ಏತತ್ತಂತು ನಿಷ್ಠ ಅತ್ಯಂತಾಭಾವ ಪ್ರತಿಯೋಗಿತ್ವಂ ಕಿಂಚಿನ್ನಿಷ್ಠ ಅತ್ಯಂತಾಭಾವ ಪ್ರತಿಯೋಗಿ, ಸಂಸರ್ಗಾಭಾವ ಪ್ರತಿಯೋಗಿತ್ವ ವ್ಯಾಪ್ಯತ್ವಾತ್ । ಪ್ರಾಗಭಾವಪ್ರತಿಯೋಗಿತ್ವವತ್ । ಇತಿ ಸಾಮಾನ್ಯತಃ ತತ್‌ಸಿದ್ಧೇಃ।**

'ಈ ಪಟವು ಈ ತಂತುನಿಷ್ಠ ಅತ್ಯಂತಾಭಾವಪ್ರತಿಯೋಗಿ ಅಲ್ಲ, ಈ ತಂತುವಿನಿಂದಾದುದ ರಿಂದ, ಇದಕ್ಕೆ ವ್ಯತಿರೇಕದೃಷ್ಟಾಂತ ಇನ್ನೊಂದು ಪಟ'—ಎಂದು ಸತ್ಪ್ರತಿಪಕ್ಷ. ಈ ಪ್ರತಿಪಕ್ಷಾನುಮಾನದಲ್ಲಿ 'ಏತತ್ ತಂತುನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವಾಭಾವ'ವೆಂಬ ಸಾಧ್ಯವು ಅಪ್ರಸಿದ್ಧವೆಂದು ಅಪ್ರಸಿದ್ಧ ವಿಶೇಷಣತ್ವ ದೋಷವಿದೆ ತಾನೆ? ಎಂದರೆ, ಇಲ್ಲ. 'ಏತತ್‌ತಂತುನಿಷ್ಠ

ಅತ್ಯಂತಾಭಾವ ಪ್ರತಿಯೋಗಿತ್ವವು ಯಾವುದಾದರೊಂದು ಕಡೆ ಅತ್ಯಂತಾಭಾವಪ್ರತಿಯೋಗಿಯಾಗಿರುತ್ತದೆ. ಸಂಸರ್ಗಾಭಾವ ಪ್ರತಿಯೋಗಿತ್ವಕ್ಕೆ ವ್ಯಾಪ್ಯವಾದ್ದರಿಂದ, ಪ್ರಾಗಭಾವಪ್ರತಿಯೋಗಿತ್ವದಂತೆ'—ಎಂಬ ಅನುಮಾನದಿಂದ ಸಾಮಾನ್ಯತಃ ಪ್ರಸಿದ್ಧವೇ ಆಗಿದೆ.

ಈ ತಂತುವಿನಿಂದ ಈ ಪಟ ಉಂಟಾಗಿದೆ, ಆರಬ್ಧವಾಗಿದೆ, ಆದರಿಂದ ಈ ಪಟದಲ್ಲಿ 'ಏತತ್ತಂತ್ವಾರಬ್ಧತ್ವ' ಎಂಬ ಹೇತುವಿದೆ. ಬೇರೆ ಯಾವ ಪಟವೂ ಏತತ್ತಂತ್ವಾರಬ್ಧವಲ್ಲ. ಆದರಿಂದ 'ಈ ಪಟ' ಎಂಬ ಪಕ್ಷಕ್ಕಿಂತ ಬೇರೆ ಯಾವ ಪದಾರ್ಥದಲ್ಲಿಯೂ ಏತತ್ತಂತ್ವಾರಬ್ಧತ್ವರೂಪ ಹೇತು ಇಲ್ಲ. ಪಕ್ಷದಲ್ಲಿ ಮಾತ್ರ ಇದೆ. 'ಏತತ್ತಂತು ನಿಷ್ಠ ಅತ್ಯಂತಾಭಾವ ಪ್ರತಿಯೋಗಿತ್ವಾಭಾವ'ವು ಏತತ್ತಂತು ನಿಷ್ಠತ್ವವೆ. ಈ ಸಾಧ್ಯವನ್ನು ಪಕ್ಷದಲ್ಲಿ ಸಾಧಿಸಬೇಕಾಗಿದೆ. ಹೇತು ಸಾಧ್ಯಗಳಿಗೆ ವ್ಯಾಪ್ತಿಯನ್ನು ದೃಷ್ಟಾಂತದಲ್ಲಿ ತಿಳಿಯಬೇಕು. 'ಪ್ರಕೃತ ಹೇತುವಿರುವಲ್ಲಿ ಸಾಧ್ಯವಿರುತ್ತದೆ' ಎಂಬ ಅನ್ವಯವ್ಯಾಪ್ತಿಯನ್ನು ತಿಳಿಯಲು, 'ಇಲ್ಲಿ ಹೇತುವಿದೆ ಸಾಧ್ಯವೂ ಇದೆ' ಎಂದು ತೋರಿಸಲು, ಒಂದು ಅನ್ವಯದೃಷ್ಟಾಂತ, ಹೇತುಸಾಧ್ಯಗಳೆರಡೂ ಇರುವ ದೃಷ್ಟಾಂತವಿಲ್ಲ. ಏತತ್ತಂತುನಿಷ್ಠತ್ವರೂಪಸಾಧ್ಯವು ಪಕ್ಷವಾದ ಈಪಟದಲ್ಲಿ ಹೊರತು ಬೇರೆ ಎಲ್ಲಿಯೂ ಇಲ್ಲ. ಬೇರೆ ಪಟ ಯಾವುದೂ ಏತತ್ತಂತು ನಿಷ್ಠವಾಗಲಾರದು. ಹೀಗಾಗಿ ಏತತ್ತಂತ್ವಾರಬ್ಧತ್ವ ಹೇತುವೂ ಏತತ್ತಂತು ನಿಷ್ಠತ್ವರೂಪ ಸಾಧ್ಯವೂ ಎರಡೂ ಇರುವ ಅನ್ವಯ ದೃಷ್ಟಾಂತ ಸಿಗದಿರುವುದರಿಂದ ವ್ಯತಿರೇಕ ದೃಷ್ಟಾಂತವನ್ನೇ ನೀಡಬೇಕು.

ಎಲ್ಲಿ ಸಾಧ್ಯವಿಲ್ಲವೋ ಅಲ್ಲಿ ಹೇತುವೂ ಇಲ್ಲ ಎಂದು ವ್ಯತಿರೇಕವ್ಯಾಪ್ತಿ. ಇದಕ್ಕೆ ಈ ಸಾಧ್ಯಾಭಾವ ಹೇತ್ವಭಾವ ಎರಡೂ ಇರುವ ದೃಷ್ಟಾಂತ ಬೇಕು. ಅದು ಸಿಗುತ್ತಿಲ್ಲ. ವ್ಯತಿರೇಕವ್ಯಾಪ್ತಿಯನ್ನು ಹೇಗೆ ತಿಳಿಯಬೇಕು?

ಯದ್ಯಪಿ ಏತತ್ತಂತುನಿಷ್ಠತ್ವಾಭಾವ ಏತ್ತತಂತ್ವಾರಬ್ಧತ್ವಾಭಾವ ರೂಪವಾದ ಸಾಧ್ಯಾಭಾವ ಹೇತ್ವಭಾವಗಳು ಏತತ್‌ಪಟ ವ್ಯತಿರಿಕ್ತವಾದ ಎಲ್ಲ ಪದಾರ್ಥಗಳಲ್ಲಿಯೂ ಇರುವುದರಿಂದ ದೃಷ್ಟಾಂತಾನ್ವೇಷಣ ಮಾಡುವ ಪ್ರಸಂಗವಿಲ್ಲ. ಆದರೆ ಸಾಧ್ಯಾಭಾವವು 'ಏತತ್ತಂತು ನಿಷ್ಠತ್ವಾಭಾವ' ರೂಪವಾದ್ದರಿಂದ ಅಭಾವಜ್ಞಾನಕ್ಕೆ ಪ್ರತಿಯೋಗಿಜ್ಞಾನ ಕಾರಣವಾದ್ದರಿಂದ ಪ್ರತಿಯೋಗಿಯಾದ ಏತತ್ತಂತುನಿಷ್ಠತ್ವವನ್ನು ಒಂದುಕಡೆ ಕಂಡಿರಬೇಕು. ಆಗ ಏತತ್ತಂತುನಿಷ್ಠತ್ವಾಭಾವಜ್ಞಾನ ಶಕ್ಯ. ಆದರೆ ಏತತ್ತಂತುನಿಷ್ಠತ್ವವು ಪಕ್ಷವಾದ ಏತತ್‌ಪಟವನ್ನು ಬಿಟ್ಟು ಬೇರೆಲ್ಲಿಯೂ ಕಂಡಿಲ್ಲದಿರುವುದರಿಂದ ಅದು ಅಪ್ರಸಿದ್ಧ. ಪ್ರತಿಯೋಗಿ ಅಪ್ರಸಿದ್ಧವಾದರೆ ಅಭಾವವೂ ಅಪ್ರಸಿದ್ಧವಾಗುತ್ತದೆ. ಆದರಿಂದ, ಅದಕ್ಕೆ ಹೇತ್ವಭಾವದಿಂದ ವ್ಯಾಪ್ತಿಯನ್ನು ತಿಳಿಯಲಾಗುವುದಿಲ್ಲ.

ಯದ್ಯಪಿ ಏತತ್ತಂತು ನಿಷ್ಠತ್ವವು ಪಕ್ಷವಾದ ಏತತ್‌ವ್ಯತಿರಿಕ್ತವಾದ ಯಾವ ಪದಾರ್ಥದಲ್ಲಿಯೂ ಪ್ರಸಿದ್ಧವಾಗಿಲ್ಲ ಎನ್ನುವಂತಿಲ್ಲ. ಏತತ್ತಂತುವಿನ ರೂಪಾದಿಗಳಲ್ಲಿ ಅದು ಪ್ರಸಿದ್ಧವೆ ಇದೆ. ಆದರೆ ಇಲ್ಲಿ ಏತತ್‌ಪಟವು ಮಾತ್ರವೇ ಪಕ್ಷವಲ್ಲ. ಏತತ್ತಂತು ಸಮವೇತವಾದ ಪಟರೂಪವಾದ ದ್ರವ್ಯ,

ರೂಪಾದಿಗುಣ, ಚಲನಾದಿಕರ್ಮ, ತಂತುತ್ವಾದಿ ಸಾಮಾನ್ಯವೆಲ್ಲವೂ ಪಕ್ಷವೆ. 'ಅಯಂ ಪಟಃ' ಎಂದು ಲಾಘವಕ್ಕಾಗಿ ಹೇಳಿದೆ.

ವಸ್ತುತಃ 'ಏತತ್‌ಪಟಾದಿಯು ಪಕ್ಷ. ಈ ಪಕ್ಷದಲ್ಲಿ ಹೊರತು ಬೇರೆಲ್ಲಿಯೂ ಏತತ್‌ತಂತು ಸಮವೇತತ್ವವು ಕಂಡಿಲ್ಲವೆಂದಮೇಲೆ ಏತತ್‌ಪಟಸಮವೇತತ್ವಾಭಾವರೂಪ ಸಾಧ್ಯಾಭಾವಜ್ಞಾನ ಬರುವುದು ಶಕ್ಯವಿಲ್ಲ. ಪಕ್ಷದಲ್ಲಿ ಇದನ್ನು ಸಾಧನಮಾಡಬೇಕಷ್ಟೆ. ಆದರಿಂದ ಶಶವಿಷಾಣ ಅಪ್ರಸಿದ್ಧವಾದ್ದರಿಂದ ಶಶವಿಷಾಣಾಭಾವಜ್ಞಾನ ತಾರ್ಕಿಕರ ಪ್ರಕಾರ ಬರುವುದಿಲ್ಲ, ಹೇಗೋ, ಹಾಗೇ ಏತತ್‌ತಂತುಸಮವೇತತ್ವದ ಅಭಾವಜ್ಞಾನ ಬರಲಾರದು. ಅದಕ್ಕೆ ಸಾಮಾನ್ಯತಃ ಪ್ರಸಿದ್ಧಿ ಸಂಪಾದನೆಗೆ ಅನುಮಾನ ಹೇಳಬೇಕು—

ಏತತ್ತಂತುನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವವು ಕಿಂಚಿನ್ನಿಷ್ಠ ಅತ್ಯಂತಾಭಾವಪ್ರತಿಯೋಗಿ ಯಾಗಿದೆ. ಸಂಸರ್ಗಾಭಾವ ಪ್ರತಿಯೋಗಿತ್ವಕ್ಕೆ ವ್ಯಾಪ್ಯವಾದ್ದರಿಂದ, ಪ್ರಾಗಭಾವ ಪ್ರತಿಯೋಗಿತ್ವದಂತೆ' ಎಂದು. ಏತತ್ತಂತುನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವವು ಇರುವಲ್ಲೆಲ್ಲ, ಸಂಸರ್ಗಾಭಾವ ಪ್ರತಿಯೋಗಿತ್ವವಿದೆ. ಸಂಸರ್ಗಾಭಾವ ಪ್ರತಿಯೋಗಿತ್ವವ್ಯಾಪ್ಯತ್ವವೆಂಬ ಹೇತು ಏತತ್ತಂತು ನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವರೂಪಪಕ್ಷದಲ್ಲಿದೆ. ಮತ್ತು ಅದು ಕೇವಲಾನ್ವಯಿಯಲ್ಲ, ಎಂದಮೇಲೆ, ಕಿಂಚಿನ್ನಿಷ್ಠ ಅತ್ಯಂತಾಭಾವ ಪ್ರತಿಯೋಗಿತ್ವರೂಪ ಸಾಧ್ಯಕ್ಕೆ ವ್ಯಾಪ್ಯವೇ ಆಗಿದೆ. ಹೀಗಾಗಿ ಏತತ್ತಂತುನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವವು ಕಿಂಚಿನ್ನಿಷ್ಠಾತ್ಯಂತಾಭಾವ ಪ್ರತಿಯೋಗಿ ಎಂದು ಸಿದ್ಧವಾಗುವುದು. ಏತತ್ತಂತುನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವವು ಯನ್ನಿಷ್ಠಾತ್ಯಂತಾಭಾವ ಪ್ರತಿಯೋಗಿಯೋ, ಅದು, ಏತತ್ತಂತುನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವ ರಹಿತವಾಗಿದೆ. ಅಂದರೆ ಏತತ್ತಂತುನಿಷ್ಠವೇ ಆಗಿದೆ, ಎಂದಂತಾಯಿತು.

ಹೀಗೆ ಏತತ್ತಂತು ನಿಷ್ಠತ್ವರೂಪಪ್ರತಿಯೋಗಿ ಪ್ರಸಿದ್ಧವಾದ್ದರಿಂದ ಏತತ್ತಂತುನಿಷ್ಠತ್ವಾಭಾವರೂಪ ಸಾಧ್ಯಾಭಾವ ಪ್ರಸಿದ್ಧವಾಯಿತು. ಅದಕ್ಕೆ ಏತತ್ತಂತ್ವಾರಬ್ಧತ್ವಾಭಾವ ರೂಪ ಹೇತ್ವಭಾವ ವ್ಯಾಪ್ತಿಯು ಎಲ್ಲಕಡೆ ಗ್ರಹಣವಾಗುವುದರಿಂದ ಸಾಧ್ಯಾಭಾವವ್ಯಾಪಕೀಭೂತ ಅಭಾವ ಪ್ರತಿಯೋಗಿತ್ವರೂಪ ವ್ಯತಿರೇಕವ್ಯಾಪ್ತಿಯು ಹೇತುವಿನಲ್ಲಿ ಗೃಹೀತವಾಗುತ್ತದೆ. ಸತ್ಪ್ರತಿಪಕ್ಷಹೇತು ನಿರ್ದುಷ್ಟವೆನಿಸುತ್ತದೆ.

**ಏತತ್ತಂತ್ವನಾರಬ್ಧತ್ವಂ ಚ ಉಪಾಧಿಃ। ನಚ ಏತತ್ತಂತ್ವಾರಬ್ಧಸಂಯೋಗೇ ಸಾಧ್ಯಾವ್ಯಾಪಕತ್ವಂ। ಅವಯೋಃ ಸಂಯೋಗಃ ಸ್ವಾತ್ಯಂತಾಭಾವಾಸಮಾನಾಧಿಕರಣ ಇತಿ ಸಂಮತೇಃ। ದ್ರವ್ಯತ್ವಾವಚ್ಛಿನ್ನಸಾಧ್ಯವ್ಯಾಪಕತ್ವೋಪಪತ್ತೇಶ್ಚ।**

ಸತ್ಪ್ರತಿಪಕ್ಷವನ್ನು ಹೇಳಿದ ಬಳಿಕ ಈಗ ಉಪಾಧಿಯನ್ನು ಹೇಳುತ್ತಾರೆ.

ಏತತ್ತಂತು ನಿಷ್ಠ ಅತ್ಯಂತಾಭಾವಪ್ರತಿಯೋಗಿತ್ವರೂಪಸಾಧ್ಯ ವ್ಯಾಪಕವೂ ಅಂಶಿತ್ವರೂಪ ಹೇತುವಿಗೆ ಅವ್ಯಾಪಕವೂ ಆಗಿರುವ ಏತತ್ತಂತ್ವನಾರಬ್ಧತ್ವರೂಪ ಉಪಾಧಿ ಈ ಅಂಶಿತ್ವಾನುಮಾನಕ್ಕಿದೆ.

ಏತತ್ತಂತು ನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವವೆಲ್ಲೆಲ್ಲಿರುವುದೋ ಅಲ್ಲೆಲ್ಲ ಏತತ್ತಂತ್ವನಾರಬ್ಧತ್ವರೂಪ ಉಪಾಧಿ ಇರುವುದು ಪಟಾಂತರ ಘಟಾದಿ ವಸ್ತುಗಳಲ್ಲೆಲ್ಲ ಕಂಡಿದೆ. ಅಂಶಿತ್ವರೂಪ ಸಾಧನಉಳ್ಳ ಏತತ್‌ಪಟರೂಪಪಕ್ಷದಲ್ಲಿ ಏತತ್ತಂತ್ವನಾರಬ್ಧತ್ವ ರೂಪ ಉಪಾಧಿ ಇಲ್ಲ. ಸಾಧನಾವ್ಯಾಪಕತ್ವ ಬಂದಿತು.

ಯದ್ಯಪಿ ಏತತ್ತಂತ್ವಾರಬ್ಧವಾದ ಸಂಯೋಗದಲ್ಲಿ ಏತತ್ತಂತುನಿಷ್ಠಾತ್ಯಂತಾಭಾವಪ್ರತಿಯೋಗಿತ್ವ ರೂಪ ಸಾಧ್ಯವಿದೆ. ಏತತ್ತಂತ್ವಾರಬ್ಧವಾದ ಸಂಯೋಗ ಯದ್ಯಪಿ ಏತತ್ತಂತು ನಿಷ್ಠವೆ. ಆದರೂ ಅದು ಅವ್ಯಾಪ್ಯವೃತ್ತಿಯಾದ್ದರಿಂದ ಏತತ್ತಂತು ನಿಷ್ಠಾತ್ಯಂತಾಭಾವ ಪ್ರತಿಯೋಗಿಯೂ ಆಗುವುದು. ಆದರಿಂದ ಪ್ರತಿಯೋಗಿತ್ವರೂಪ ಸಾಧ್ಯವಿದೆ. ಆದರೆ ಏತತ್ತಂತ್ವನಾರಬ್ಧತ್ವರೂಪ ಉಪಾಧಿ ಇಲ್ಲ. ಅದು ಏತತ್ತಂತ್ವಾರಬ್ಧವೇ ಆಗಿದೆ. ಹೀಗೆ ಉಪಾಧಿಗೆ ಸಾಧ್ಯವ್ಯಾಪಕತ್ವಭಂಗ ಬಂದಿತು. ಎಂದು ಅದ್ವೈತಿ ಹೇಳಬಹುದು. ಅದಕ್ಕೆ ಸಮಾಧಾನ ಹೀಗೆ—

'ಸಂಯೋಗವು ಅವ್ಯಾಪ್ಯವೃತ್ತಿಯಾದ್ದರಿಂದ ಸ್ವಾತ್ಯಂತಾಭಾವ ಸಮಾನಾಧಿಕರಣವಾಗಿದೆ, ಆದರಿಂದ ಏತತ್ತಂತು ನಿಷ್ಠಾತ್ಯಂತಾಭಾವಪ್ರತಿಯೋಗಿತ್ವರೂಪಸಾಧ್ಯವು ಸಂಯೋಗದಲ್ಲಿದೆ' ಎನ್ನುವುದು ಸಂಯೋಗಕ್ಕೆ ಅವ್ಯಾಪ್ಯವೃತ್ತಿತ್ವವನ್ನು ಒಪ್ಪುವ ತಾರ್ಕಿಕರ ರೀತಿಯಾಯಿತು. ಇದನ್ನು ನಾವು ದ್ವೈತಿ ಅದ್ವೈತಿಗಳು ಇಬ್ಬರೂ ಒಪ್ಪುವುದಿಲ್ಲ. ಸಂಯೋಗವು ಸ್ವಾತ್ಯಂತಾಭಾವ ಅಸಮಾನಾಧಿಕರಣ ವೆಂದೇ ಇಬ್ಬರೂ ಒಪ್ಪುತ್ತೇವೆ. ಆದರಿಂದ ಸಂಯೋಗದಲ್ಲಿ ಉಪಾಧಿಗೆ ಸಾಧ್ಯಾವ್ಯಾಪಕತ್ವವನ್ನು ಹೇಳಲಾಗದು.

'ಮೂಲದಲ್ಲಿ ವೃಕ್ಷವು ಕಪಿ ಸಂಯೋಗಿ, ಶಾಖೆಯಲ್ಲಿ ಅಲ್ಲ' ಎಂಬ ಅನುಭವದಿಂದ ಬಾಧಿತವಾದ್ದರಿಂದ ಸಂಯೋಗಕ್ಕೆ ವ್ಯಾಪ್ಯವೃತ್ತಿತ್ವವನ್ನು ಒಪ್ಪಬಾರದು' ಎಂದರೆ, ಅದು ಸರಿಯಲ್ಲ. ಈ ಅನುಭವದಿಂದಲೇ ಮೂಲಾವಚ್ಛಿನ್ನವೃಕ್ಷದಿಂದ ಶಾಖಾವಚ್ಛಿನ್ನ ವೃಕ್ಷಕ್ಕೆ ಭೇದ ಸಿದ್ಧವಾಗುವುದು. ಆದರಿಂದ ಸಂಯೋಗ ತದತ್ಯಂತಾಭಾವಗಳು ಭಿನ್ನಾಶ್ರಿತವೇ ಹೊರತು ಸಮಾನಾಧಿಕರಣವಲ್ಲ. 'ಅದೇ ವೃಕ್ಷ ಇದೆ'ಂದು ಪ್ರತ್ಯಭಿಜ್ಞೆಯು ವೃಕ್ಷತ್ವಜಾತಿವಿಷಯಕವಾಗಿದೆ. ಭೇದಸಿದ್ಧಿಗೆ ಅದು ಬಾಧಕವಲ್ಲ.

ದ್ರವ್ಯತ್ವಾವಚ್ಛಿನ್ನ ಸಾಧ್ಯವ್ಯಾಪಕತ್ವವು ಉಪಾಧಿಗೆ ಕೂಡುವುದರಿಂದಲೂ ಸಾಧ್ಯವ್ಯಾಪಕತ್ವ ಭಂಗವಿಲ್ಲ. ಏತತ್ ಪಟರೂಪ ಪಕ್ಷವು ದ್ರವ್ಯವಾಗಿದೆ. ಆದರಿಂದ ದ್ರವ್ಯತ್ವಾವಚ್ಛಿನ್ನ ಸಾಧ್ಯವ್ಯಾಪಕತ್ವವು ಉಪಾಧಿಗೆ ಬರುತ್ತದೆ. ಸಂಯೋಗವು ಗುಣ, ಹೊರತು ದ್ರವ್ಯವಲ್ಲ. ದ್ರವ್ಯವಾಗಿದ್ದು ಸಾಧ್ಯವತ್ತಾದುದು ಏನಿದೆಯೋ ಅದೆಲ್ಲವೂ ಏತತ್ತಂತ್ವನಾರಬ್ಧವೇ ಆಗಿರುವುದು ಘಟಾದಿಗಳಲ್ಲಿ ಕಂಡಿದೆ. ಹೀಗಾಗಿ ದ್ರವ್ಯತ್ವಾವಚ್ಛಿನ್ನ ಸಾಧ್ಯವ್ಯಾಪಕವಾದ ಉಪಾಧಿ ಪಕ್ಷದಲ್ಲಿಲ್ಲದ್ದರಿಂದ ದ್ರವ್ಯತ್ವಾವಚ್ಛಿನ್ನ ಸಾಧ್ಯವೂ ಪಕ್ಷದಲ್ಲಿಲ್ಲವಾಗಿದೆ. ಪಕ್ಷದಲ್ಲಿ ದ್ರವ್ಯತ್ವವಿಶಿಷ್ಟಸಾಧ್ಯಾಭಾವವು, ವಿಶೇಷಣವಾದ ದ್ರವ್ಯತ್ವವು ಪಕ್ಷದಲ್ಲಿ ಇರುವುದರಿಂದ, ವಿಶೇಷ್ಯವಾದ ಸಾಧ್ಯವಿಲ್ಲದ ಪ್ರಯುಕ್ತವೇ ಎನ್ನಬೇಕು. ಆದರಿಂದ ಉಪಾಧ್ಯಭಾವದಿಂದ ಪಕ್ಷದಲ್ಲಿ ಸಾಧ್ಯಾಭಾವ ಸಿದ್ಧವಾಗುವುದು.

**ಉಪಾಧಿರೇವ ಪ್ರಯೋಜಕಃ ಸಾಧ್ಯವತಿ ಬ್ರಹ್ಮಣಿ ಉಪಾಧಿವತ್ ಹೇತೋಃ ಅಭಾವಾತ್ ।**

'ಪ್ರಯೋಜಕ ಏವ ಉಪಾಧಿಃ' ಎಂದು ಏವಕಾರಕ್ಕೆ ಭಿನ್ನಕ್ರಮ. 'ಉಪಾಧಿವತ್' ಎಂದು ವ್ಯತಿರೇಕದೃಷ್ಟಾಂತ. ಹಾಗಲ್ಲದಿದ್ದರೆ 'ಉಪಾಧಿವತ್ ಹೇತೋಃ ಭಾವಾತ್' ಹೇಳುವ ಪ್ರಸಂಗವಿತ್ತು. 'ಪ್ರಯೋಜಕತ್ವ'ವು ಇಲ್ಲಿ 'ಯಾವದು ಯಾವುದರ ವ್ಯತಿರೇಕಪ್ರಯುಕ್ತವಾದ ವ್ಯತಿರೇಕಕ್ಕೆ ಪ್ರತಿಯೋಗಿಯೋ ಅದು ಅದಕ್ಕೆ ಪ್ರಯೋಜಕ ಅಂದರೆ, ಸಾಧ್ಯಾಭಾವ ವ್ಯಾಪಕಾಭಾವ ಪ್ರತಿಯೋಗಿಯು ಸಾಧ್ಯಕ್ಕೆ ಪ್ರಯೋಜಕವಾದ ಹೇತು. ಇಂಥ ಪ್ರಯೋಜಕತ್ವವು ಇಲ್ಲಿ ವಿವಕ್ಷಿತ ಎಂದು ತಿಳಿಸಲು 'ಹೇತೋಃ' ಎಂದಿದ್ದಾರೆ. ಇದು, 'ಅದು ಇರುವಲ್ಲಿ ಇಲ್ಲ, ಅದಿಲ್ಲದಲ್ಲಿಯೂ ಇದೆ' ಎಂದರೆ, ಅದಕ್ಕೆ ಇದು ನ್ಯೂನಾಧಿಕವೃತ್ತಿಯಾದರೆ, ಅದಕ್ಕೆ ಇದು ಅಪ್ರಯೋಜಕ. ಅದಿಲ್ಲದಿದ್ದರೆ ಇದು ಇರುವುದಿಲ್ಲ ಎನ್ನುವಂತಿದ್ದರೆ ಮಾತ್ರ ಅದಕ್ಕೆ ಇದು ಪ್ರಯೋಜಕ. ಏತತ್ತಂತು ನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವರೂಪ ಸಾಧ್ಯವುಳ್ಳ ಬ್ರಹ್ಮನಲ್ಲಿ ಏತತ್ತಂತ್ವನಾರಬ್ಧತ್ವರೂಪ ಉಪಾಧಿ ಇದೆ. ಆದರೆ ಹಾಗೇ ಅಂಶಿತ್ವಹೇತುವಿಲ್ಲ. ಹೇತುವಿಲ್ಲದಿರುವಲ್ಲಿಯೂ ಇರಬಲ್ಲ ಸಾಧ್ಯಕ್ಕೆ ಹೇತು ಅಪ್ರಯೋಜಕ. ಉಪಾಧಿಗೆ ಹೀಗೆ ಸಾಧ್ಯವ್ಯಾಪಕತ್ವ ಸಿದ್ಧವಾಗುವುದರಿಂದ ಸಾಧ್ಯವ್ಯಾಪಕ ಉಪಾಧಿಗೆ ವ್ಯಭಿಚಾರಿಯಾದ ಹೇತುವಿಗೆ ಸಾಧ್ಯವ್ಯಭಿಚಾರಿತ್ವ ಸಿದ್ಧವಾಗುವುದು ಎಂದು ಸಮಗ್ರವಾಕ್ಯದ ನಿರ್ಗಳಿತಾರ್ಥ.

**ಅನುಕೂಲ ತರ್ಕಾಭಾವೇ ಚ ವ್ಯತಿರೇಕ ಹೀನಸ್ಯಾಪಿ ಉಪಾಧಿತ್ವಾಚ್ಚ । ನ ಹ್ಯಂಶಿತ್ವಂ ಸಾಧ್ಯಂ ವಿನಾ ನ ಯುಕ್ತಂ ।**

ಎಲ್ಲಿ ಏತತ್ತಂತ್ವನಾರಬ್ಧತ್ವಾಭಾವವಿರುವುದೋ ಅಲ್ಲಿ ಏತತ್ತಂತುನಿಷ್ಠಾತ್ಯಂತಾಭಾವ ಪ್ರತಿಯೋಗಿತ್ವಾಭಾವವೂ ಇರುತ್ತದೆ ಎಂದು ಉಪಾಧ್ಯಭಾವ ಸಾಧ್ಯಾಭಾವಗಳ ಸಹಚಾರ ಗ್ರಹಣವು ಪಕ್ಷದಲ್ಲಿಯೇ ಎಂದು ಹೇಳಬೇಕು. ಆದರೆ ಅದು ಉಭಯಸಂಪ್ರತಿಪನ್ನವಿನ್ನೂ ಆಗಿಲ್ಲ. ಅದರಿಂದ ವ್ಯತಿರೇಕಗ್ರಹಣವಿಲ್ಲದಿರುವ ಈ ಉಪಾಧಿ ಹೇಗೆ ಉಪಾಧಿ ಎನಿಸುತ್ತದೆ ಎಂದರೆ, ಹೀಗೆ ಹೇಳಬೇಕು— ನೀನು ಹೇಳಿದ ಅಂಶಿತ್ವ ಹೇತುವಿಗೆ ಅನುಕೂಲತರ್ಕವಿಲ್ಲದಿರುವಾಗ ಉಪಾಧಿ ವ್ಯತಿರೇಕ ಸಾಧ್ಯವ್ಯತಿರೇಕ ಗ್ರಹಣವಿಲ್ಲದಿರುವುದು ಅನ್ವಯ ಸಹಚಾರ ಜನ್ಯವ್ಯಾಪಕತ್ವಗ್ರಹಕ್ಕೆ ವಿರೋಧಿಯಾಗಬಲ್ಲ ಪ್ರಬಲ ಶಂಕೆಗೆ ಕಾರಣವಾಗುವುದಿಲ್ಲ. ಅನುಕೂಲತರ್ಕ ಏಕೆ ಇಲ್ಲವೆಂದರೆ, ಅಂಶಿತ್ವಹೇತುವು ಸಾಧ್ಯವಿಲ್ಲದಿದ್ದರೆ ಅನುಪಪನ್ನವಾಗುವುದೆನ್ನುವ ಪ್ರಸಂಗವಿಲ್ಲ.

**ಉಕ್ತಹೇತುನೈವ ಏತತ್‌ಪಟಾರ್ಥಕ್ರಿಯಾಕಾರಿತ್ವಾದ್ಯಭಾವಸ್ಯಾಪಿ ಸುಸಾಧತ್ವಾತ್ ಆಭಾಸಸಾಮ್ಯಂ ಚ ।**

'ಅಯಂ ಪಟಃ ಏತತ್ ಪಟೋಚಿತ ಅರ್ಥಕ್ರಿಯಾಕಾರೀ ನ ಭವತಿ, ಅಂಶಿತ್ವಾತ್, ಪಟಾಂತರವತ್ ।' ಎಂದು ನೀನು ಹೇಳುವ ಅಂಶಿತ್ವ ಹೇತುವಿನಿಂದಲೇ 'ಈ ಪಟದಲ್ಲಿ ಈ ಪಟಕ್ಕೆ

ಉಚಿತವಾದ ಅರ್ಥಕ್ರಿಯೆ ಮಾಡುವ' ಸಾಮರ್ಥ್ಯವಿಲ್ಲ. ಬೇರೆ ಪಟದಲ್ಲಿ ಹೇಗೆ ಈ ಪಟಕ್ಕೆ ಉಚಿತವಾದ ಅರ್ಥಕ್ರಿಯಾ ಸಾಮರ್ಥ್ಯವಿಲ್ಲವೋ ಹಾಗೆ ಎಂದು ಆಭಾಸವಾದ ಅನುಮಾನದ ಸಾಮ್ಯವನ್ನು ನಿನ್ನ ಅನುಮಾನಕ್ಕ ಹೇಳಬಹುದು. ಆದರಿಂದ ಆಭಾಸ ಸಾಮ್ಯ.

❖❖❖

**यत्तु विमतं ज्ञानव्यतिरेकेणासत् ज्ञानव्यतिरेकेणानुपलभ्यमानत्वादिति विद्यासागरीयं बौद्धोक्त सहोपलंभ युक्त्युद्गिरणम्, तत्र ज्ञानाद्भेदेनानुपलभ्यमानत्वं वा हेतुः? ज्ञानविरहप्रयुक्तोपलब्धिविरहवत्त्वं वा ? आद्येऽसिद्धिः । घटस्य ज्ञानमिति हि धीः । न तु घटो ज्ञानमिति । नान्त्यः । ज्ञानस्योपलब्धित्वेन तद्विरहस्य तद्विरहाप्रयुक्तत्वात् । उपलब्धिसामग्रीविरहप्रयुक्तत्वाच्च ।**

ननु ज्ञानाभावकालेऽनुपलभ्यमानत्वादिति हेत्वर्थः । स च भेदाभेदसाधारण इत्यत आह **उपलब्धीति** ।। एतावता ज्ञानोपलब्धिसामग्र्योः समनियतत्वमायातं, न तूपलब्धिविषयस्यासत्वं ज्ञानत्वं वेति भावः । अत एव ज्ञानाविषयक प्रतीत्यविषयकत्वादिति हेत्वर्थो विवक्षित इति परास्तम् । एतावताप्युभयविषयतानियामक समाजावश्यकत्वमायातम् । न त्वपरस्यासत्वम् । किञ्चैवं हेत्वर्थमभिदधतो ज्ञानाविषयकप्रतीतिरेवासिद्धा । अन्यथा तदविषयकत्वासिद्धेर्हेतोर्भागासिद्धिप्रसङ्गः । नच ज्ञानाविषयकाविषयकत्वमर्थः । नचैवमप्रसिद्धिः । ज्ञानाविषयकस्य घटादेरेव प्रसिद्धत्वादिति वाच्यम् । ज्ञानाविषयकेच्छाविषयत्वेन विमतेऽसिद्धिप्रसङ्गादिति ।। ज्ञानव्यतिरेकेणेति तृतीयार्थस्य प्रकारत्वेऽपि एतदेव दूषणं द्रष्टव्यम् । यद्यपि परस्य नैवं व्याप्तिः सम्प्रतिपन्ना । तथापि स्वमतावष्टम्भेनैतदुक्तमिति द्रष्टव्यम् ।

❖❖❖

## 21. ಬೌದ್ಧಯುಕ್ತಿ ವಮನಕ್ಕೆ ಶಾಂತಿ

ಯತ್ತು, ವಿಮತಂ ಜ್ಞಾನವ್ಯತಿರೇಕೇಣ ಅಸತ್, ಜ್ಞಾನವ್ಯತಿರೇಕೇಣ ಅನುಪಲಭ್ಯಮಾನತ್ವಾತ್, ಇತಿ ವಿದ್ಯಾಸಾಗರೀಯಂ ಬೌದ್ಧೋಕ್ತ ಸಹೋಪಲಂಭ ಯುಕ್ತ್ಯುದ್ಗಿರಣಂ, ತತ್ರ ಜ್ಞಾನಾತ್ ಭೇದೇನ ಅನುಪಲಭ್ಯಮಾನತ್ವಂ ವಾ ಹೇತುಃ ?

**ಜ್ಞಾನವಿರಹಪ್ರಯುಕ್ತ ಉಪಲಬ್ಧಿ ವಿರಹವತ್ತ್ವಂ ವಾ? ಆದ್ಯೇ ಅಸಿದ್ಧಿಃ। ಘಟಸ್ಯ ಜ್ಞಾನಮಿತಿ ಹಿ ಧೀಃ। ನತು ಘಟೋ ಜ್ಞಾನಮಿತಿ।**

'ವಿವಾದಗೋಚರವಾದ ಪ್ರಪಂಚವು ಜ್ಞಾನಕ್ಕಿಂತ ಬೇರೆಯಾಗಿ ಇಲ್ಲ, ಜ್ಞಾನಕ್ಕಿಂತ ಬೇರೆಯಾಗಿ ಕಾಣುವುದಿಲ್ಲವಾದ್ದರಿಂದ' ಎಂದು ವಿದ್ಯಾಸಾಗರನು ಹೇಳಿದ ಅನುಮಾನದಲ್ಲಿ ಅವನು ಬೌದ್ಧೋಕ್ತವಾದ 'ಸಹೋಪಲಂಭ ನಿಯಾಮಾತ್ ಅಭೇದೋ ನೀಲತದ್ಧಿಯೋಃ' ಎಂಬ ಯುಕ್ತಿಯನ್ನೇ ವಾಂತಿ ಮಾಡಿದ್ದಾನೆ. ಅದರಲ್ಲಿ ಹೇತುವು 'ಜ್ಞಾನದಿಂದ ವಿಷಯವು ಭಿನ್ನವಾಗಿ ಕಾಣುವುದಿಲ್ಲ'ವೆಂದೆ? ಅಥವಾ 'ಜ್ಞಾನವಿಲ್ಲದಿದ್ದರೆ ವಿಷಯ ಕಾಣುವುದಿಲ್ಲ'ವೆಂದೆ? ಜ್ಞಾನಕ್ಕಿಂತ ಭಿನ್ನವಾಗಿ ಕಾಣುವುದಿಲ್ಲವೆನ್ನುವ ಮೊದಲನೆ ಪಕ್ಷ ಯುಕ್ತವಲ್ಲ, ಹೇತು ಅಸಿದ್ಧವಾಗಿದೆ. 'ಘಟದ ಜ್ಞಾನ' ಎಂದೇ ಪ್ರತೀತಿ ಹೊರತು ಘಟವೇ ಜ್ಞಾನವೆಂದಲ್ಲ.

**ನಾಂತ್ಯಃ। ಜ್ಞಾನಸ್ಯ ಉಪಲಬ್ಧಿತ್ವೇನ ತದ್ವಿರಹಸ್ಯ ತದ್ವಿರಹಾಪ್ರಯುಕ್ತತ್ವಾತ್। ಉಪಲಬ್ಧಿಸಾಮಗ್ರೀವಿರಹ ಪ್ರಯುಕ್ತತ್ವಾಚ್ಚ।**

'ಜ್ಞಾನವಿಲ್ಲದೆ ಇದ್ದರೆ ವಿಷಯ ಕಾಣುವುದಿಲ್ಲ' ಎನ್ನುವ ಎರಡನೆ ಪಕ್ಷವೂ ಸರಿಯಲ್ಲ, ಜ್ಞಾನವೇ 'ಉಪಲಬ್ಧಿ' ಅಂದರೆ ಕಾಣ್ಕೆಯಾಗಿರುವುದರಿಂದ 'ಕಾಣ್ಕೆ ಇಲ್ಲದಿರುವುದು ಜ್ಞಾನವಿಲ್ಲ ದಿರುವುದರಿಂದ' ಎನ್ನಲಾಗದು. ಮತ್ತು ಕಾಣ್ಕೆ ಏಕಿಲ್ಲವೆಂದು ಕೇಳಿದರೆ ಜ್ಞಾನಸಾಮಗ್ರಿ ಇಲ್ಲದ್ದರಿಂದ ಎನ್ನಬೇಕು ಹೊರತು ಜ್ಞಾನವಿಲ್ಲದ್ದರಿಂದ ಎಂದಲ್ಲ.

'ಜ್ಞಾನವಿಲ್ಲದಿರುವಾಗ ಕಾಣ್ಕೆ ಇಲ್ಲ' ಎಂದು ಹೇತುವಾದರೆ, ಯದ್ಯಪಿ ಹೀಗೆ ಹೇಳುವುದು, ಜ್ಞಾನ ಮತ್ತು ಕಾಣ್ಕೆಗಳಿಗೆ ಭೇದ ಅಭೇದಗಳೆಂಬ ಎರಡೂ ಪಕ್ಷಗಳಲ್ಲಿ ಯುಕ್ತವಾಗುವುದು. ಆದರೆ, ಈ ಹೇತುವಿನಿಂದ ಜ್ಞಾನ ಕಾಣ್ಕೆಗಳೆರಡರ ಎರಡೂ ಸಾಮಗ್ರಿಗಳು ಸಮವ್ಯಾಪ್ತವೆಂದುಮಾತ್ರ ಸಿದ್ಧವಾಗುವುದು ಹೊರತು ವಿಷಯ ಅಸತ್ತೆಂದು ಸಿದ್ಧವಾಗುವುದಿಲ್ಲ, ವಿಷಯವು ಜ್ಞಾನವೇ ಎಂದಂತಾಗುವುದೂ ಇಲ್ಲ.

'ಜ್ಞಾನವಿಷಯಕವಲ್ಲದ ಪ್ರತೀತಿಗೆ ವಸ್ತು ವಿಷಯವಾಗುವುದಿಲ್ಲ' ಎಂದು ಹೇತುಮಾಡಿದರೆ ಪ್ರತೀತಿಯಲ್ಲಿ ಜ್ಞಾನಭಾನಸಾಮಗ್ರಿ ಮತ್ತು ವಿಷಯಭಾನಸಾಮಗ್ರಿಗಳು ಜೊತೆಗೆ ಸೇರಬೇಕೆಂದು ಹೇಳಿದಂತಾಯಿತು ಹೊರತು ವಿಷಯವು ಅಸತ್ತೆಂದಾಗುವುದಿಲ್ಲ, ಮತ್ತು ಹೀಗೆ ಹೇತ್ವರ್ಥವನ್ನು ಹೇಳುವವನಿಗೆ ಜ್ಞಾನಅವಿಷಯಕಪ್ರತೀತಿ ಎಂಬುದೇ ಅಪ್ರಸಿದ್ಧ. ಯಾವುದೇ ಪ್ರತೀತಿ ಜ್ಞಾನವಿಷಯಕವೇ ಆಗಿರಬೇಕಾಗುತ್ತದೆ. ಜ್ಞಾನಾವಿಷಯಕ ಪ್ರತೀತಿ ಸಿದ್ಧವೆಂದರೆ ಆ ಸಿದ್ಧಿಯಲ್ಲಿ ಪ್ರತೀತಿಅವಿಷಯತ್ವ ಬರಲಿಲ್ಲ, ವಿಷಯತ್ವವೇ ಬಂದಿತೆಂದು ಭಾಗಾಸಿದ್ಧಿ ಪ್ರಸಂಗ.

'ಜ್ಞಾನಅವಿಷಯಕ ಅವಿಷಯತ್ವವೇ ಹೇತು. ಜ್ಞಾನಅವಿಷಯಕವು ಅಪ್ರಸಿದ್ಧವಲ್ಲ, ಘಟವೇ ಪ್ರಸಿದ್ಧವಾಗಿದೆ ಎಂದು ಹೇತುಪ್ರಸಿದ್ಧಿ'. ಎನ್ನುವುದಾದರೆ ಜ್ಞಾನಅವಿಷಯಕ ಇಚ್ಛಾ ವಿಷಯತ್ವವೇ

ಪ್ರಪಂಚದಲ್ಲಿ ಬರುತ್ತದೆ. ಅವಿಷಯತ್ವವಲ್ಲ ಎಂದು ಅಸಿದ್ಧಿ. ಯದ್ಯಪಿ 'ಜ್ಞಾನವಿಲ್ಲದೇ ಇದ್ದರೆ ವಿಷಯ ಕಾಣುವುದಿಲ್ಲ' ಎಂಬ ವ್ಯಾಪ್ತಿ ಅದ್ವೈತಿಗೆ ಅಭಿಪ್ರೇತವಲ್ಲ. ಆದರೂ 'ವೃತ್ತಿಪ್ರತಿಫಲಿತ ಚೈತನ್ಯಪ್ರಕಾಶವಿಲ್ಲದಿದ್ದರೆ ಘಟಾದಿಗಳು ಪ್ರಕಾಶವಾಗುವುದಿಲ್ಲ. ಆದರಿಂದ ಅವು 'ಮಿಥ್ಯಾ' ಎನ್ನುವ ತನ್ನ ಮತದ ರೀತಿಯಿಂದ ಅದ್ವೈತಿ ಹೇಳುತ್ತಿದ್ದಾನಷ್ಟೆ. ಅದ್ವೈತಸಿದ್ಧಿಯಲ್ಲಿ ಹೀಗೇ ಹೇಳಿದೆ. ನ್ಯಾಯಾಮೃತ ಈ ಹೇತು ಸಾಧ್ಯಗಳನ್ನು ಪೂರ್ತಿಯಾಗಿ ನಿರಾಕರಿಸಿದೆ.

❖❖❖

**यत्तु विमतं मिथ्या धीकाल एवान्यथा प्रमितत्वाच्चित्र-निम्नोन्नतादिवत्, भारूपवस्तुसंलग्नत्वात्सवितृच्छिद्रवत् । नचासिद्धिः । इदानीमेव ''इदं सर्वं यदयमात्मे''ति श्रुत्या अशेषानात्मनः आत्मत्वप्रमितेः । घटादिकं स्फुरतीति भारूपवस्तुसंलग्नत्वाच्चेति कौमुद्युक्तम् ।**

**तत्राद्येऽन्यथेत्यस्य यद्यात्मत्वेनेत्यर्थः तदा सदात्मत्वेन प्रमितत्वस्यामिथ्यात्व व्याप्तत्वाद्विरुद्धो हेतुः । यदि प्रतिपन्नोपाधिस्थ निषेध प्रतियोगित्वेनेति तर्ह्यसिद्धिः । व्यर्थविशेषणता च । द्वितीयस्तु सवित्रादावात्मनि चानैकान्तिकः । तस्यापि सविता प्रकाशते आत्मा स्फुरतीति भारूपसंलग्नत्वादिति दिक् ।**

यद्यपि विमतं मिथ्येति धीकाल एवान्यथा प्रमितत्वं पक्षे नोभयवादि सम्प्रतिपन्नम् । श्रुत्यनुसंधानकालेऽपि क्लृप्तदोषरहित परीक्षिताप्रामाण्यशङ्काशून्य-विपरीत प्रत्यक्षसत्वेन पक्षे श्रुत्याप्यात्मत्व प्रमितेरसम्भवात् । तथाप्येतदनुमानमद्वैत श्रद्धालूक्तत्वादुपन्यस्य दूष्यत इति द्रष्टव्यम् । द्वितीय हेतावसिद्धिमुद्धर्तुमाह **घटादिकमिति ।। तत्रेति ।।** उपन्यस्त हेत्वोरित्यर्थः ।। **असिद्धिरिति ।।** अन्यतरासिद्धिरित्यर्थः ।। **व्यर्थविशेषणता चेति ।।** धीकाल एवेत्यस्यानु-पयोगादित्यर्थः ।। सवितुः पक्षत्वादाहात्मनि चेति ।। किञ्च पक्षदृष्टान्तसाधारणैकहेत्व-भावादनुमानाप्रवृत्तिः । नच प्रकाशत्वं तत्, प्रकाशजनकत्वरूपस्य तस्य स्फुरणावृत्ति-

त्वात् प्रकाशापरनामकज्ञानरूपत्वस्य च सवित्रवृत्तित्वादिति दूषणमभिप्रेत्याह **इति दिगिति** ।।

❖❖❖

**ಯತ್ತು 'ವಿಮತಂ ಮಿಥ್ಯಾ, ಧೀಕಾಲೇ ಏವ ಅನ್ಯಥಾ ಪ್ರಮಿತತ್ವಾತ್, ಚಿತ್ರನಿಮ್ನೋನ್ನತಾದಿವತ್, ಭಾರೂಪವಸ್ತು ಸಂಲಗ್ನತ್ವಾತ್, ಸವಿತೃಛಿದ್ರವತ್। ನಚಾಸಿದ್ಧಿಃ। ಇದಾನೀಮೇವ 'ಇದಂ ಸರ್ವಂ ಯದಯಮಾತ್ಮಾ' ಇತಿ ಶ್ರುತ್ಯಾ ಅಶೇಷಾನಾತ್ಮನಃ ಆತ್ಮತ್ವ ಪ್ರಮಿತೇಃ। 'ಘಟಾದಿಕಂ ಸ್ಫುರತಿ' ಇತಿ ಭಾರೂಪ ವಸ್ತು ಸಂಲಗ್ನತ್ವಾಚ್ಚ' ಇತಿ ಕೌಮುದ್ಯುಕ್ತಂ।**

ಕೌಮುದಿಯಲ್ಲಿ ಹೀಗೆ ಹೇಳಿದೆ—ವಿವಾದಗೋಚರವಾದ ಪ್ರಪಂಚ ಮಿಥ್ಯಾ, ಅದರ ಜ್ಞಾನ ಬರುವಾಗಲೇ ವಿಪರೀತವಾಗಿ ಪ್ರಮಿತವಾಗುವುದರಿಂದ, ಗೋಡೆಯ ಮೇಲೆ ಚಿತ್ರದಲ್ಲಿ ಬರೆದ ಏರುತಗ್ಗುಗಳಂತೆ. ಮತ್ತು ಬೆಳಗುವ ವಸ್ತುವಿನಿಂದ ಕೂಡಿದ್ದರಿಂದ, ಸೂರ್ಯನ ಕಪ್ಪುಚುಕ್ಕೆಗಳಂತೆ. ಎರಡೂ ಹೇತುಗಳಿಗೆ ಅಸಿದ್ಧಿ ಇಲ್ಲ. ಈಕಾಲದಲ್ಲಿಯೆ, ಅಂದರೆ, ಪ್ರಪಂಚಜ್ಞಾನ ಬರುತ್ತಿರುವಾಗಲೇ 'ಈ ಪ್ರಪಂಚವೆಲ್ಲ ನಮ್ಮ ಆತ್ಮವೆ' ಎನ್ನುವ ಶ್ರುತಿಯಿಂದ ಎಲ್ಲ ಅನಾತ್ಮಗಳೂ ಆತ್ಮವೆಂದು ಯಥಾರ್ಥಜ್ಞಾನ ಬರುತ್ತದೆ. ಮತ್ತು 'ಘಟಾದಿಗಳು ಬುದ್ಧಿಯಲ್ಲಿ ಹೊಳೆಯುತ್ತವೆ' ಎಂದು 'ಹೊಳೆಯುವ ಜ್ಞಾನರೂಪ ವಸ್ತುಯುಕ್ತ ವಾಗಿರುವುದರಿಂದ' ಎಂದು.

**ತತ್ರ ಆದ್ಯೇ ಅನ್ಯಥೇತ್ಯಸ್ಯ ಯದಿ ಆತ್ಮತ್ವೇನ ಇತ್ಯರ್ಥಃ ತದಾ ಸದಾತ್ಮತ್ವೇನ ಪ್ರಮಿತತ್ವಸ್ಯ ಅಮಿಥ್ಯಾತ್ವ ವ್ಯಾಪ್ತತ್ವಾತ್ ವಿರುದ್ಧೋ ಹೇತುಃ।**

'ಧೀಕಾಲೇ ಏವ ಅನ್ಯಥಾ ಪ್ರಮಿತತ್ವ' ಎಂಬ ಮೊದಲನೆ ಹೇತುವಿನಲ್ಲಿ 'ಅನ್ಯಥಾ' ಎಂದರೆ 'ಆತ್ಮತ್ವೇನ ಯಥಾರ್ಥಜ್ಞಾನ ಗೋಚರವಾಗುತ್ತದೆ' ಎಂದರೆ 'ಸತ್ಯನಾದ ಆತ್ಮ' ಎಂದು ಯಥಾರ್ಥವಾಗಿ ತಿಳಿಯುವುದು ಅಮಿಥ್ಯಾತ್ವಕ್ಕೇ ವ್ಯಾಪ್ಯವಾಗಿರುವುದರಿಂದ ಸಾಧ್ಯಾಭಾವ ವ್ಯಾಪ್ತವಾದ ಈ ಹೇತುವು ವಿರುದ್ಧವೆನಿಸುವುದು.

ವಸ್ತುತಃ ಈ ಹೇತು ಪಕ್ಷದಲ್ಲಿರುವುದು ವಾದಿ ಪ್ರತಿವಾದಿಗಳಿಗೆ ಇಬ್ಬರಿಗೂ ಸಮ್ಮತವಲ್ಲ. ಶ್ರುತ್ಯನುಸಂಧಾನ ಕಾಲದಲ್ಲಿಯೂ ಕ್ಲೃಪ್ತದೋಷರಹಿತ, ಪರೀಕ್ಷಿತ, ಅಪ್ರಾಮಾಣ್ಯಶಂಕಾಶೂನ್ಯ, ವಿಪರೀತ ಪ್ರತ್ಯಕ್ಷ ಇರುವುದರಿಂದ ಶ್ರುತಿಯಿಂದಲೂ ಹೀಗೆ ಆತ್ಮತ್ವಪ್ರಮಿತಿ ಬರುವ ಸಂಭವವಿಲ್ಲ. ಆದರೂ ಅದ್ವೈತಪ್ರದ್ವಾಳು ಒಬ್ಬನು ಹೇಳಿದ್ದರಿಂದ ಅದನ್ನು ಅನುವಾದಿಸಿ ನಿರಾಸಮಾಡುತ್ತಿದ್ದಾರೆ.

**ಯದಿ ಪ್ರತಿಪನ್ನೋಪಾಧಿಸ್ಥ ನಿಷೇಧ ಪ್ರತಿಯೋಗಿತ್ವೇನೇತಿ ತರ್ಹಿ ಅಸಿದ್ಧಿಃ ವ್ಯರ್ಥವಿಶೇಷಣತಾ ಚ।**

'ಅನ್ಯಥಾ' ಎಂದರೆ 'ಪ್ರತಿಪನ್ನೋಪಾಧೌ ನಿಷೇಧ ಪ್ರತಿಯೋಗಿತ್ವೇನ' ಪ್ರಮಿತತ್ವವು ಹೇತು ಎಂದಾದರೆ ನಮಗೆ ಅಸಿದ್ಧಿ. ಮತ್ತು ಅನ್ಯಥಾಪ್ರಮಿತತ್ವವೇ ಸಾಕು. 'ಧೀಕಾಲೇ ಏವ' ಎಂದು ವಿಶೇಷಣವನ್ನು ಸೇರಿಸಿದ್ದು ವ್ಯರ್ಥ. ವ್ಯರ್ಥವಿಶೇಷಣತಾ ಎಂದು ಹೇತುದೋಷ. ವಿಶೇಷಣವನ್ನು ಬಿಟ್ಟರೆ, ಹೇತುವು ಸಾಧ್ಯಕ್ಕಿಂತ ಅವಿಶಿಷ್ಟವಾಗುವುದು ದೋಷ.

**ದ್ವಿತೀಯಸ್ತು ಸವಿತ್ರಾದೌ ಆತ್ಮನಿ ಚ ಅನೈಕಾಂತಿಕಃ। ತಸ್ಯಾಪಿ 'ಸವಿತಾ ಪ್ರಕಾಶತೇ' 'ಆತ್ಮಾ ಸ್ಫುರತಿ' ಇತಿ ಭಾರೂಪ ವಸ್ತು ಸಂಲಗ್ನತ್ವಾತ್ ಇತಿ ದಿಕ್।**

ಭಾರೂಪವಸ್ತು ಸಂಲಗ್ನತ್ವರೂಪ ದ್ವಿತೀಯ ಹೇತುವು ಸವಿತೃ ಮುಂತಾದ ಬೆಳಕಿನ ವಸ್ತುವಿನಲ್ಲಿ ವ್ಯಭಿಚರಿತ. ಆತ್ಮನಲ್ಲಿಯೂ ವ್ಯಭಿಚಾರ. ಎರಡೂ ಬೆಳಕಾದ್ದರಿಂದ ಪಕ್ಷಬಹಿರ್ಭೂತವಾದ್ದರಿಂದ ವ್ಯಭಿಚಾರವನ್ನು ಹೇಳುತ್ತಿದ್ದಾರೆ. ಸವಿತ್ರಾದಿಯೂ ಮಿಥ್ಯಾ ಆದ್ದರಿಂದ ಪಕ್ಷದಲ್ಲಿಯೇ ಸೇರಿದೆ ಎಂದರೆ ಆತ್ಮನಲ್ಲಿ ವ್ಯಭಿಚಾರವಿದ್ದೇ ಇದೆ. ಸವಿತೃ ಬೆಳಗುತ್ತಾನೆ ಆತ್ಮ ಬೆಳಗುತ್ತದೆ ಎಂದು ಎರಡೂ ಬೆಳಗುವ ವಸ್ತುವಿನಿಂದ ಸಂಯುಕ್ತವಾಗಿದೆ. ಹೇತು ಬರುತ್ತದೆ. ಸಾಧ್ಯವಾದ ಮಿಥ್ಯಾತ್ವವಿಲ್ಲ.

ಪಕ್ಷ ದೃಷ್ಟಾಂತಗಳಲ್ಲಿ ಸಾಧಾರಣವಾದ ಹೇತುವಿಲ್ಲದ್ದರಿಂದ ಅನುಮಾನ ಪ್ರವೃತ್ತಿಯೆ ಸಾಧ್ಯವಿಲ್ಲ. 'ಪ್ರಕಾಶತ್ವ'ವೇ ಸಾಧಾರಣ ಹೇತು ಎಂದರೆ ಪ್ರಕಾಶಜನಕತ್ವರೂಪ ಪ್ರಕಾಶತ್ವವು ಸ್ಫುರಣದಲ್ಲಿಲ್ಲ. ಜ್ಞಾನಪ್ರಕಾಶರೂಪತ್ವವು ಸವಿತೃನಲ್ಲಿ ಇಲ್ಲ.

❖❖❖

एतेन नवीनानामनुमानानि निरस्तानि ।

आद्ये सिद्धसाधनादि दोषात् ।

द्वितीये अव्याप्यवृत्तित्वानधिकरणशब्देनावयवावृत्तित्वोक्तावयव्यादेरपक्षत्वापातात् । स्वसमानाधिकरणात्यन्ताभावाप्रतियोगित्वोक्तौ च तदप्रतियोगिनि तत्प्रतियोगित्वस्य बाधितत्वात् । अनात्मत्वस्य निरस्तत्वाच्च ।

तृतीये स्वरूपेणात्यन्ताभावप्रतियोगित्वे साध्ये अत्यन्तासत्वापातात् । धर्मावच्छेदेन तत्प्रतियोगित्वे साध्ये अर्थान्तरत्वात् । नित्यद्रव्याणामपि काले सत्वेन दृष्टान्तस्य साध्यवैकल्याच्च ।

चतुर्थे न व्यावहारिकप्रतियोगिक इत्यपि सुसाधत्वेनाभाससाम्यात् । वक्ष्यमाणदूषणगणग्रासाच्च ।

**आद्य इति ।** एतत्पटात्यन्ताभावः एतत्तन्तुनिष्ठ इत्यनुमान इत्यर्थः ।। सिद्धसाधनादीत्यादिशब्देनार्थान्तरादिदूषण परिग्रहः ।। कार्यस्य कारणाभेदेन तदनाश्रितत्वव्युत्पादनात् अवृत्तित्वेनाप्युपपन्नत्वव्युत्पादनाच्चेति भावः ।। **द्वितीय इति ।।** स्वसमानाधिकरणात्यन्ताभाव प्रतियोगित्व साध्यकानुमान इत्यर्थः ।। **निरस्तत्वादिति ।।** जडत्वहेतुभङ्ग इत्यर्थः ।। **धर्मावच्छेदेनेति ।।** पारमार्थिकत्व-रूपधर्मावच्छेदेनेत्यर्थः ।।

### ।। इत्यंशित्वादिहेतुभङ्गः ।।

## 22. ನವೀನಾನುಮಾನಗಳ ನಿರಾಸ

**ಏತೇನ ನವೀನಾನಾಂ ಅನುಮಾನಾನಿ ನಿರಸ್ತಾನಿ । ಆದ್ಯೇ ಸಿದ್ಧಸಾಧನಾದಿದೋಷಾತ್ । ದ್ವಿತೀಯೇ ಅವ್ಯಾಪ್ಯವೃತ್ತಿತ್ವಾನಧಿಕರಣ ಶಬ್ದೇನ ಅವಯವಅವೃತ್ತಿತ್ವೋಕ್ತೌ ಅವಯವ್ಯಾದೇಃ ಅಪಕ್ಷತ್ವಾಪಾತಾತ್ । ಸ್ವಸಮಾನಾಧಿಕರಣಅತ್ಯಂತಾಭಾವ ಅಪ್ರತಿಯೋಗಿತ್ವೋಕ್ತೌ ಚ ತದಪ್ರತಿಯೋಗಿನಿ ತತ್ಪ್ರತಿಯೋಗಿತ್ವಸ್ಯ ಬಾಧಿತತ್ವಾತ್ ಅನಾತ್ಮತ್ವಸ್ಯ ನಿರಸ್ತತ್ವಾಚ್ಚ ।**

ಹಿಂದೆ ಹೇಳಿದ ನವೀನರ ನಾಲ್ಕು ಅನುಮಾನಗಳೂ ಅಯುಕ್ತವಾಗಿವೆ.

ಅವುಗಳಲ್ಲಿ ಮೊದಲನೆಯ ಅನುಮಾನ— ಇದು ಸಿದ್ಧಸಾಧನದೋಷ ದುಷ್ಟವಾಗಿದೆ.

'ಏತತ್ಪಟಾತ್ಯಂತಾಭಾವಃ ಏತತ್‌ತಂತುನಿಷ್ಠಃ ಏತತ್ಪಟಾನಾದ್ಯಭಾವತ್ವಾತ್, ಏತತ್ಪಟಾನ್ಯೋನ್ಯಾಭಾವವತ್' 'ಈ ಪಟದ ಅತ್ಯಂತಾಭಾವವು ಈ ತಂತುನಿಷ್ಠವಾಗಿದೆ, ಈ ಪಟದ ಅನಾದಿ ಅಭಾವವಾದ್ದರಿಂದ, ಈ ಪಟದ ಅನ್ಯೋನ್ಯಾಭಾವದಂತೆ' ಎನ್ನುವುದು ಮೊದಲನೆ ಅನುಮಾನ. ಇಲ್ಲಿ ನಮ್ಮ ಸಿದ್ಧಾಂತದಲ್ಲಿ ಕಾರ್ಯಕಾರಣಗಳಿಗೆ ಅಭೇದವಿರುವುದರಿಂದ ತಂತುವೇ ಪಟವೆಂದಮೇಲೆ ಪಟ ತನ್ನ ಸ್ವರೂಪವೇ ಆದ ತಂತುವಿನಲ್ಲಿ ತಾನಿರುವ ಸಾಧ್ಯತೆ ಇಲ್ಲದಿರುವುದರಿಂದ ತನ್ನ ಅಭಾವ ತನ್ನ ತಂತುವಿನಲ್ಲಿ ಇರುವುದು ಸಿದ್ಧವೇ ಆಗಿದೆ ಎಂದು ಸಿದ್ಧಸಾಧನ.

'ಸಿದ್ಧಸಾಧನಾದಿ ದೋಷಾತ್' ಎಂಬಲ್ಲಿ ಆದಿಶಬ್ದದಿಂದ ಅರ್ಥಾಂತರತ್ವದೋಷಗ್ರಹಣ ಮಾಡಬೇಕು. ಕಾರ್ಯಕಾರಣಗಳಿಗೆ ಅಭೇದವಿರುವುದರಿಂದ ಅನಾಶ್ರಿತತ್ವದಂತೆ ಅವೃತ್ತಿತ್ವವೂ ಸಿದ್ಧವಾಗಬಹುದಾದ್ದರಿಂದ ಅವೃತ್ತಿತ್ವವಿಟ್ಟುಕೊಂಡು ಸಾಧ್ಯಪರ್ಯವಸಾನದಿಂದ ಅರ್ಥಾಂತರ.

ಎರಡನೆ ಅನುಮಾನ— 'ವಿಮತಂ ವಾ ಬ್ರಹ್ಮಪ್ರಮಾನ್ಯೇನೇತ್ಯಾದಿ ವಿಪ್ರತಿಪತ್ತಿವಾಕ್ಯೋಕ್ತ ವಿಶೇಷಣತ್ರಯವತ್ತ್ವೇ ಸತಿ ಅವ್ಯಾಪ್ಯವೃತ್ತಿತ್ವಾನಧಿಕರಣಂ ವಾ, ಸ್ವಸಮಾನಾಧಿಕರಣ ಅತ್ಯಂತಾಭಾವ

ಪ್ರತಿಯೋಗಿ. ಅನಾತ್ಮತ್ವಾತ್ ಸಂಯೋಗವತ್' ವಿಪ್ರತಿಪತ್ತಿಗೋಚರವಾದ ಪ್ರಪಂಚವು ಪಕ್ಷ. ಅಥವಾ ವಿಪ್ರತಿವಾಕ್ಯದಲ್ಲಿ ಹೇಳಿದ ಮೂರು ವಿಶೇಷಣಗಳಿಂದ, ಅಂದರೆ, ಬ್ರಹ್ಮಪ್ರಮಾನ್ಯೇನ ಸಪ್ರಕಾರೇಣ ವಾ ಅಬಾಧ್ಯತ್ವ, ಅಸದ್ವಿಲಕ್ಷಣತ್ವ, ಬ್ರಹ್ಮಾನ್ಯತ್ವ ಎಂಬ ಈ ಮೂರು ವಿಶೇಷಣಗಳಿಂದ ಯುಕ್ತವಾಗಿದ್ದು, ಅವ್ಯಾಪ್ಯವೃತ್ತಿತ್ವಾನಧಿಕರಣವಾದುದು ಪಕ್ಷ. ಇದು ಸ್ವಸಮಾನಾಧಿಕರಣ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿದೆ. ಅನಾತ್ಮತ್ವವಿರುವುದರಿಂದ ಸಂಯೋಗದಂತೆ—ಇದು ನವೀನರ ಎರಡನೆ ಅನುಮಾನ.

ಅವ್ಯಾಪ್ಯವೃತ್ತಿತ್ವಾನಧಿಕರಣವು ಇಲ್ಲಿ ಪಕ್ಷ. 'ಅವ್ಯಾಪ್ಯ' ಅಂದರೆ ಆಶ್ರಯವನ್ನು ಪೂರ್ತಿ ವ್ಯಾಪಿಸದೆ ಕೇವಲ ಅವಯವದಲ್ಲಿ 'ವೃತ್ತಿತ್ವ' ಇರುವುದು ಅವ್ಯಾಪ್ಯವೃತ್ತಿತ್ವ. ಇದು ಅವಯವಿಯಲ್ಲಿ ಮಾತ್ರ ಸಂಭವಿ. ನಿರವಯವ ಗಗನಾದಿಗಳಲ್ಲಿ ಅಸಂಭವಿ. ಆದರಿಂದ ಅವ್ಯಾಪ್ಯವೃತ್ತಿತ್ವಾನಧಿ ಕರಣತ್ವವಿಲ್ಲದ್ದರಿಂದ ಪಕ್ಷವಲ್ಲವೆಂದಾಗುವುದು. ಆದರಲ್ಲಿ ಮಿಥ್ಯಾತ್ವ ಸಿದ್ಧವಾಗದೆ ಹೋದೀತು.

'ಅವ್ಯಾಪ್ಯವೃತ್ತಿತ್ವ'ವೆಂದು ಸ್ವಸಮಾನಾಧಿಕರಣ ಅತ್ಯಂತಾಭಾವ ಪ್ರತಿಯೋಗಿತ್ವವೆಂಬ ಪಾರಿಭಾಷಿಕ ಅವ್ಯಾಪ್ಯವೃತ್ತಿತ್ವವಿಟ್ಟುಕೊಳ್ಳುವುದಾದರೆ ಸ್ವಸಮಾನಾಧಿಕರಣಾತ್ಯಂತಾಭಾವ ಅಪ್ರತಿಯೋಗಿತ್ವವನ್ನು 'ಅವ್ಯಾಪ್ಯವೃತ್ತಿತ್ವಾನಧಿಕರಣ' ಶಬ್ದದಿಂದ ಗ್ರಹಿಸಬೇಕು. ಆಗ ಸ್ವಸಮಾನಾಧಿ ಕರಣಾತ್ಯಂತಾಭಾವ ಅಪ್ರತಿಯೋಗಿಯಲ್ಲಿ ಸ್ವಸಮಾನಾಧಿಕರಣಾತ್ಯಂತಾಭಾವ ಪ್ರತಿಯೋಗಿತ್ವರೂಪ ಮಿಥ್ಯಾತ್ವ ಸಾಧನೆ ಮಾಡುವುದು ಶಕ್ಯವಿಲ್ಲ. ಅದು ಬಾಧಿತವಾಗುವುದು.

'ಅಪ್ರತಿಯೋಗಿತ್ವವು ಕಲ್ಪಿತ, ಪ್ರತಿಯೋಗಿತ್ವವು ಪಾರಮಾರ್ಥಿಕ, ಅವುಗಳಿಗೆ ವಿರೋಧ ವಿಲ್ಲದ್ದರಿಂದ ಬಾಧ ಇಲ್ಲ' ಎಂದರೆ ಈ ಕಲ್ಪಿತ–ಪಾರಮಾರ್ಥಿಕ ವ್ಯವಸ್ಥೆ ಈ ಅನುಮಾನದಿಂದ ಪ್ರಪಂಚ ಮಿಥ್ಯಾತ್ವ ಸಿದ್ಧವಾದ ಬಳಿಕ ಹೇಳಬಹುದಾದುದು. ಈ ವ್ಯವಸ್ಥೆಯನ್ನು ಒಪ್ಪಿದರೆ ಅನುಮಾನ ಅಬಾಧಿತವಾಗುವುದರಿಂದ ಮಿಥ್ಯಾತ್ವಸಿದ್ಧಿ. ಮಿಥ್ಯಾತ್ವ ಸಿದ್ಧಿಯಾದರೆ ಈ ವ್ಯವಸ್ಥಾಸಿದ್ಧಿ ಎಂದು ಅನ್ಯೋನ್ಯಾಶ್ರಯದೋಷ.

ಅನಾತ್ಮತ್ವ ಹೇತುವನ್ನು ಜಡತ್ವಹೇತುಭಂಗ ಪ್ರಕರಣದಲ್ಲಿ 'ನ ತಾವದಾತ್ಮತ್ವಂ ಜಾತಿಃ' ಇತ್ಯಾದಿಯಾಗಿ ವಿಕಲ್ಪಪೂರ್ವಕ ನಿರಾಸ ಮಾಡಿದ್ದೇವೆ.

ಮೂರನೆ ಅನುಮಾನ— 'ವಿಮತಂ ನಿತ್ಯದ್ರವ್ಯಾನ್ಯತ್ ಕೇವಲಾನ್ವಯ್ಯತ್ಯಂತಾ ಭಾವಪ್ರತಿಯೋಗಿ, ಪದಾರ್ಥತ್ವಾತ್ ನಿತ್ಯದ್ರವ್ಯವತ್' 'ವಿವಾದಗ್ರಸ್ತವಾದ ನಿತ್ಯದ್ರವ್ಯಾನ್ಯ ಘಟಾದಿಪ್ರಪಂಚವು ಕೇವಲಾನ್ವಯಿಯಾದ ಅತ್ಯಂತಾಭಾವಕ್ಕೆ ಪ್ರತಿಯೋಗಿ, ಪದಾರ್ಥವಾದ್ದರಿಂದ ನಿತ್ಯದ್ರವ್ಯದಂತೆ.' ಎಂದು.

ಇಲ್ಲಿ ಸ್ವರೂಪೇಣ ಅತ್ಯಂತಾಭಾವ ಪ್ರತಿಯೋಗಿತ್ವಸಾಧನೆ ಮಾಡಿದರೆ ಪ್ರಪಂಚ

ಅತ್ಯಂತಾಸತ್ತಾಗಬೇಕಾದೀತು. ಅಸದ್ವಿಲಕ್ಷಣವೆಂದು ಒಪ್ಪುವ ನಿನಗೆ ಅಪಸಿದ್ಧಾಂತ ದೋಷ. ಪಾರಮಾರ್ಥಿಕತ್ವರೂಪ ಧರ್ಮಾವಚ್ಛೇದೇನ ಅತ್ಯಂತಾಭಾವಪ್ರತಿಯೋಗಿತ್ವ ಸಾಧನ ಮಾಡಿದರೆ ಪಾರಮಾರ್ಥಿಕತ್ವಾಭಾವ ಸಿದ್ಧವಾದರೂ ಬ್ರಹ್ಮದಂತೆ ಪ್ರಪಂಚವೂ ಸತ್ಯವಾಗಿದ್ದೇ ಪಾರಮಾರ್ಥಿಕತ್ವಾಭಾವ ಉಳ್ಳದ್ದಾಗಬಹುದಾದ್ದರಿಂದ ಅರ್ಥಾಂತರ. 'ಇದಾನೀಂ ಆಕಾಶಃ' 'ಈ ಕಾಲದಲ್ಲಿಯೂ ಆಕಾಶವಿದೆ' ಎಂದು, ದೃಷ್ಟಾಂತವಾದ ನಿತ್ಯದ್ರವ್ಯವು ಕಾಲವೃತ್ತಿಯಾದ್ದರಿಂದ ಕೇವಲಾನ್ವಯಿ ಅತ್ಯಂತಾಭಾವಪ್ರತಿಯೋಗಿತ್ವರೂಪ ಸಾಧ್ಯವಿಲ್ಲ, ಸಾಧ್ಯವೈಕಲ್ಯವಿದೆ.

ನಾಲ್ಕನೆ ಅನುಮಾನ— 'ಆತ್ಮತ್ವಾವಚ್ಛಿನ್ನಧರ್ಮಿತಾಕೋ ಭೇದಃ, ನ ಪರಮಾರ್ಥಸತ್ ಪ್ರತಿಯೋಗಿಕಃ, ಅನಾತ್ಮ ಮಾತ್ರ ಪ್ರತಿಯೋಗಿಕತ್ವಾತ್, ಶುಕ್ತಿರೂಪ್ಯ ಪ್ರತಿಯೋಗಿಕ ಭೇದವತ್' ಆತ್ಮತ್ವಾವಚ್ಛಿನ್ನ ಧರ್ಮಿತಾಕವಾದ 'ಆತ್ಮಾ ಅನಾತ್ಮಾ ನ' ಎಂಬ ಭೇದವು ಪಾರಮಾರ್ಥಿಕ ಸತ್ಯವಾದ ಪ್ರತಿಯೋಗಿ ಉಳ್ಳದ್ದಲ್ಲ, ಅನಾತ್ಮಮಾತ್ರಪ್ರತಿಯೋಗಿಕವಾದ್ದರಿಂದ, ಶುಕ್ತಿರಜತಪ್ರತಿಯೋಗಿಕ ಭೇದದಂತೆ'.

ಇಲ್ಲಿ 'ನ ಪರಮಾರ್ಥಸತ್‌ಪ್ರತಿಯೋಗಿಕಃ' ಎಂದು ಸಾಧನೆ ಮಾಡುವ ಮೂಲಕ ಆತ್ಮಧರ್ಮಿಕಭೇದ ಪ್ರತಿಯೋಗಿಯಾದ ಅನಾತ್ಮಕ್ಕೆ ಪಾರಮಾರ್ಥಿಕತ್ವಾಭಾವವನ್ನು ಅದ್ವೈತಿ ಸಾಧನ ಮಾಡುತ್ತಿದ್ದಾನೆ. ಆದರೆ ಅದೇರೀತಿ ಆತ್ಮಧರ್ಮಿಕ ಭೇದವನ್ನು ಪಕ್ಷಮಾಡಿ 'ನ ವ್ಯಾವಹಾರಿಕ ಸತ್‌ಪ್ರತಿಯೋಗಿಕಃ' ಎಂದೂ ಇದೇ ಹೇತುವಿನಿಂದ ಸಾಧನೆ ಮಾಡಲು ಬರುತ್ತದೆ. ಅನಾತ್ಮಕ್ಕೆ ವ್ಯಾವಹಾರಿಕಸತ್ವವೂ ಇಲ್ಲವೆಂದಾಗುತ್ತದೆ. ಆದರಿಂದ ಅಭಾಸಸಾಮ್ಯ.

'ಸನ್ ಘಟಃ' ಎಂದು ಮುಂತಾದ ಪ್ರತ್ಯಕ್ಷಬಾಧಾದಿ ಅನೇಕ ದೋಷಗಳನ್ನು ಮಿಥ್ಯಾತ್ವಾನುಮಾನಗಳಿಗೆ ಮುಂದೆ ಹೇಳಲಿರುವುದರಿಂದ ಈ ಅನುಮಾನವೂ ಆ ದೋಷಗಳಿಂದ ದುಷ್ಟವಾಗುತ್ತದೆ.

❖❖❖

# 23. दृश्यत्वादेरुपाधिविवरणम्

**सोपाधिकाश्च दृश्यत्वादयः । स्वबाधकाभिमताबाध्यदोषप्रयुक्त-भानत्वस्य तदबाध्यबाधकं प्रति निषेध्यत्वेन विषयत्वस्य वा पक्षाद् व्यावृत्तस्य समव्याप्तिमतो व्यतिरेकव्याप्तिमतश्चोपाधित्वात् । नच पर्वतावयववृत्त्यन्यत्वापर्वतीयवह्निसामग्रीयुक्तत्वादेरिव पक्षमात्र-व्यावर्तकविशेषणवत्त्वात्पक्षेतरत्वम् । वह्निना धूमे साध्ये आर्द्रेन्धनप्रभववह्निमत्त्वादेरिव वक्ष्यमाणानुकूलतर्कैस्साध्य-व्यापकत्वानिश्चयात् । बाधिते पक्षेतरत्वस्याप्युपाधित्वाच्च । इह च वक्ष्यमाणप्रत्यक्षादिबाधात् ।**

**स्वबाधकाभिमतेति** ।। स्वशब्दः समभिव्याहृतपरः । स्वस्य बाधकत्वेनाभिमतं यन्नेदं रजतमिति ज्ञानं तदबाध्यो यो दोषः काचादिः तत्प्रयुक्तं तत्प्रयोज्यं भानं यस्य तत्त्वमित्यर्थः । अत्र साधनव्यापकतानिरासार्थं **स्वेति** ।। अविद्यारूपदोषस्य प्रपञ्चबाधकब्रह्मज्ञानबाध्यत्वात् साध्यव्यापकत्वे सति साधनाव्यापकत्वमक्षुण्णमिति भावः । यदि शुक्तिरूप्यभानेऽपि, अधिष्ठानाज्ञानमेव दोषः तदा अज्ञानरूपदोषस्य, तद्बाधकबाध्यत्वान्नास्य साध्यव्यापकतेति उपाध्यन्तरमाह **तदबाध्येति** ।। प्रपञ्चबाधिकायाश्चरमवृत्तेः स्वबाध्यत्वात् प्रातिभासिकरूप्यादिबाधकस्य शुक्त्यादि-याथार्थ्यज्ञानस्य च स्वाबाध्यत्वात् अस्योपाधित्वमुभयसंप्रतिपन्नमित्यर्थः । उपाधिशब्दार्थगवेषणायां समव्याप्तस्यैवोपाधित्वमित्यभिप्रेत्याह **समव्याप्तिमत इति** ।। **नचेति** ।। यद्यपि पर्वतावयववृत्त्यन्यत्वं पर्वतावयववृत्तिरूपादिकमपि व्यावर्तयतीति न पक्षमात्रव्यावर्तकम् । तथापि तत्तुल्ययोगक्षेमत्वादिदमुदाहृतमिति द्रष्टव्यम् । नन्वार्द्रेन्धनप्रभववह्निमत्त्वादेः पक्षमात्रव्यावर्तकतया नोपादानं, किन्तु समव्याप्तस्यैवोपाधित्वमित्यभिप्रायेण । प्रकृते तु विशेष्यमात्रस्यैव समव्याप्तत्वात् वैषम्यमित्यत आह **बाधित इति** ।।

❖❖❖

## ದೃಶ್ಯತ್ವಾದಿ ಹೇತುಗಳಿಗೆ ಉಪಾಧಿದೋಷ

**ಸೋಪಾಧಿಕಾಶ್ಚ ದೃಶ್ಯತ್ವಾದಯಃ। ಸ್ವಬಾಧಕಾಭಿಮತ ಅಬಾಧ್ಯದೋಷಪ್ರಯುಕ್ತ ಭಾನತ್ವಸ್ಯ ತದ್‌ಬಾಧ್ಯ ಬಾಧಕಂ ಪ್ರತಿ ನಿಷೇಧ್ಯತ್ವೇನ ವಿಷಯತ್ವಸ್ಯ ವಾ ಪಕ್ಷಾದ್‌ವ್ಯಾವೃತ್ತಸ್ಯ ಸಮವ್ಯಾಪ್ತಿಮತಃ ವ್ಯತಿರೇಕ ವ್ಯಾಪ್ತಿಮತಶ್ಚ ಉಪಾಧಿತ್ವಾತ್।**

ದೃಶ್ಯತ್ವಾದಿ ಹೇತುಗಳೆಲ್ಲವೂ ಸೋಪಾಧಿಕವಾಗಿವೆ. ಎರಡು ಉಪಾಧಿಗಳನ್ನು ಹೇಳುತ್ತಿದ್ದಾರೆ– ಇಲ್ಲಿ ಉಪಾಧ್ಯಧಿಕರಣವು 'ಸ್ವ' ಶಬ್ದದಿಂದ ಗೃಹೀತವಾಗುತ್ತದೆ. 'ಸ್ವಬಾಧಕತ್ವೇನ' ಅಂದರೆ ಶುಕ್ತಿರಜತ ಬಾಧಕತ್ವೇನ ಅಭಿಮತವಾದ 'ನೇದಂ ರಜತಂ' ಎಂಬ ಬಾಧಕಜ್ಞಾನದಿಂದ ಅಬಾಧ್ಯವಾದ ಕಾಚಾದಿ ದೋಷಪ್ರಯುಕ್ತ ಭಾನ ಉಳ್ಳದ್ದು ಶುಕ್ತಿರಜತ. ದೋಷಪ್ರಯುಕ್ತಭಾನತ್ವರೂಪ ಉಪಾಧಿಯು ಸಾಧ್ಯಉಳ್ಳ ಶುಕ್ತಿರಜತದೃಷ್ಟಾಂತದಲ್ಲಿದೆ. ಆದರಿಂದ ಸಾಧ್ಯವ್ಯಾಪಕವಾಗಿದೆ. ದೋಷಕ್ಕೆ ಸ್ವಬಾಧಕಾಭಿಮತಾಬಾಧ್ಯತ್ವವಿಶೇಷಣವಿರುವುದರಿಂದ ಸಾಧನವ್ಯಾಪಕತ್ವವಿಲ್ಲ. ಏಕೆಂದರೆ ಸ್ವಶಬ್ದ ದಿಂದ ಆರೋಪ್ಯವಾದ ಪ್ರಪಂಚವನ್ನಿಟ್ಟುಕೊಳ್ಳಬೇಕು. ಸಾಧನಉಳ್ಳ ಈ ಪಕ್ಷದಲ್ಲಿ ಅವಿದ್ಯಾರೂಪ ದೋಷವು ಸ್ವಬಾಧಕಾಭಿಮತವಾದ ಪ್ರಪಂಚಬಾಧಕವಾದ ಬ್ರಹ್ಮಜ್ಞಾನದಿಂದ ಬಾಧ್ಯವೇ ಆಗಿದೆ. ಅಬಾಧ್ಯವಾಗಿಲ್ಲ. ಹೀಗೆ ಸಾಧ್ಯವ್ಯಾಪಕ ಸಾಧನಾವ್ಯಾಪಕವಾದ್ದರಿಂದ ಸ್ವಬಾಧಕಾಭಿಮತಾಬಾಧ್ಯ ದೋಷಪ್ರಯುಕ್ತಭಾನತ್ವವು ಉಪಾಧಿಯಾಗಿದೆ. ಇದು ಮೊದಲನೆ ಉಪಾಧಿ.

ಇನ್ನು ಎರಡನೆ ಉಪಾಧಿ. ಸ್ವಬಾಧಕಾಭಿಮತವಾದ 'ನೇದಂ ರಜತಂ' ಎಂಬ ಜ್ಞಾನರೂಪಬಾಧಕದಿಂದ ಅಬಾಧ್ಯವಾದ ಅದೇ 'ನೇದಂ ರಜತಂ' ಜ್ಞಾನರೂಪಬಾಧಕ್ಕೆ ನಿಷೇಧ್ಯತ್ವೇನ ವಿಷಯವು ಶುಕ್ತಿರಜತವಾಗಿದೆ. ನಿಷೇಧ್ಯತ್ವೇನ ವಿಷಯತ್ವವು ಸಾಧ್ಯಉಳ್ಳ ಶುಕ್ತಿರಜತದಲ್ಲಿದೆ. ಆದರಿಂದ ಎರಡನೇ ಉಪಾಧಿಯು ಸಾಧ್ಯವ್ಯಾಪಕವಾಗಿದೆ. ಇದು ಸಾಧನವುಳ್ಳ ಪಕ್ಷದಲ್ಲಿಲ್ಲದ್ದರಿಂದ ಸಾಧನಾವ್ಯಾಪಕವಾಗಿದೆ. ಏಕೆಂದರೆ ಪಕ್ಷದಲ್ಲಿ 'ಸ್ವ' ಎಂದರೆ ಘಟಾದಿ, ಅದಕ್ಕೆ ಬಾಧಕತ್ವೇನ ಅಭಿಮತವಾದ ಬ್ರಹ್ಮಜ್ಞಾನದಿಂದ ಬಾಧ್ಯವಾಗಿದೆ, ತಾನೇ ಬ್ರಹ್ಮಜ್ಞಾನ. ಬಾಧ್ಯವೇ ಆದ ಬಾಧಕಬ್ರಹ್ಮಜ್ಞಾನಕ್ಕೆ ನಿಷೇಧ್ಯತ್ವೇನ ಘಟಾದಿಯು ವಿಷಯವಾಗಿದೆ. ಬಿದಿರುಮೆಳೆಯ ಬೆಂಕಿಯೂ ಕತಕ ಬೀಜದ ಚೂರ್ಣವೂ ಹೇಗೆ ತನಗೆ ತಾನೇ ಬಾಧಕವೋ ಹಾಗೇ ಬಾಧಕ ಚರಮವೃತ್ತಿಯೂ ತನಗೆ ತಾನೇ ಬಾಧಕವೆಂದು ಅದ್ವೈತಮತವಿದೆ. ಸ್ವಬಾಧಕಾಭಿಮತಾಬಾಧ್ಯ ಬಾಧಕಕ್ಕೆ ನಿಷೇಧ್ಯತ್ವೇನ ವಿಷಯವಾಗಿಲ್ಲ. ವಿಶೇಷಣಾಭಾವ ಪ್ರಯುಕ್ತ ವಿಶಿಷ್ಟಾಭಾವವಿದೆ. ಆದರಿಂದ ಸಾಧನಉಳ್ಳ ಪಕ್ಷದಲ್ಲಿ ಈ ಎರಡನೆ ಉಪಾಧಿಯೂ ಬರುವುದಿಲ್ಲ, ಆದರಿಂದ ಸಾಧನಾವ್ಯಾಪಕ ವಾಗಿದೆ. ಹೀಗೆ 'ಸ್ವಬಾಧಕಾಭಿಮತ ಅಬಾಧ್ಯದೋಷ ಪ್ರಯುಕ್ತಭಾನತ್ವ' ಮತ್ತು 'ಸ್ವಬಾಧಕಾಭಿಮತ ಅಬಾಧ್ಯ ಬಾಧಕಂ ಪ್ರತಿ ನಿಷೇಧ್ಯತ್ವೇನ ವಿಷಯತ್ವ' ಎಂದು ಎರಡೂ ಉಪಾಧಿಗಳು ಯುಕ್ತವೆ.

ಶುಕ್ತಿರೂಪ್ಯ ಜ್ಞಾನದಲ್ಲಿ ಕಾಚಾದಿ ಸಾದೃಶ್ಯಾದಿ ದೋಷಗಳನ್ನು ಗ್ರಹಣ ಮಾಡಿ ಮೊದಲನೆ ಉಪಾಧಿಯನ್ನು ಹೇಳಿದ್ದಾರೆ. ಅಧಿಷ್ಠಾನದ ಅಜ್ಞಾನವನ್ನೇ ಅಲ್ಲಿಯೂ ದೋಷವೆಂದು ಅದ್ವೈತಿ

ಹೇಳಿದರೆ, ಆಗ ಅಜ್ಞಾನರೂಪದೋಷವು ಶುಕ್ತಿರೂಪ್ಯಜ್ಞಾನ ಬಾಧಕ ಶುಕ್ತಿತತ್ತ್ವದಿಂದ ಬಾಧ್ಯವೇ ಆಗಿದೆ. ಅಬಾಧ್ಯದೋಷವೆನಿಸುವುದಿಲ್ಲ. ಆದರಿಂದ ಸಾಧ್ಯವ್ಯಾಪಕತ್ವ ಬಾರದಿರುವುದರಿಂದ ಎರಡನೆ ಉಪಾಧಿಯನ್ನು ಹೇಳಿದ್ದಾರೆ. ಇವುಗಳಿಗೆ ವ್ಯತಿರೇಕವ್ಯಾಪ್ತಿ ಇದೆ. ಉಪಾಧ್ಯಭಾವಉಳ್ಳ ಬ್ರಹ್ಮನಲ್ಲಿ ಸಾಧ್ಯಾಭಾವವಿದೆ. ಸಾಧ್ಯಾಭಾವಾವಿನಾಭಾವ್ಯಭಾವಪ್ರತಿಯೋಗಿತ್ವವೇ ಉಪಾಧಿತ್ವ. ಪಕ್ಷಾದ್ ವ್ಯಾವೃತ್ತವಾದ್ದರಿಂದ ಸಾಧನಾವ್ಯಾಪಕ. ಸಮವ್ಯಾಪ್ತವೂ ಆಗಿದೆ. ಸಾಧ್ಯಸಮವ್ಯಾಪ್ತವೇ ಹೇತುವಿಗೆ ಉಪಾಧಿ. 'ಉಪಾಧಿ' ಶಬ್ದಾರ್ಥವೇ ಇದು.

**ನ ಚ ಪರ್ವತಾವಯವ ವೃತ್ತ್ಯನ್ಯತ್ವ– ಅಪರ್ವತೀಯ ವಹ್ನಿಸಾಮಗ್ರೀ ಯುಕ್ತತ್ವಾದೇಃ ಇವ, ಪಕ್ಷ ಮಾತ್ರ ವ್ಯಾವರ್ತಕ ವಿಶೇಷಣವತ್ತ್ವಾತ್ ಪಕ್ಷೇತರತ್ವಂ। ವಹ್ನಿನಾ ಧೂಮೇ ಸಾಧ್ಯೇ ಆರ್ದ್ರೇಂಧನ ಪ್ರಭವ ವಹ್ನಿಮತ್ತ್ವಾದೇರಿವ ವಕ್ಷ್ಯಮಾಣ ಅನುಕೂಲತರ್ಕೈಃ ಸಾಧ್ಯವ್ಯಾಪಕತ್ವ ನಿಶ್ಚಯಾತ್। ಬಾಧಿತೇ ಪಕ್ಷೇತರತ್ವಸ್ಯಾಪಿ ಉಪಾಧಿತ್ವಾಚ್ಚ। ಇಹ ಚ ವಕ್ಷ್ಯಮಾಣ ಪ್ರತ್ಯಕ್ಷಾದಿ ಬಾಧಾತ್।**

'ಪರ್ವತಾವಯವ ವೃತ್ತಿಯೇ ಆಗಿರುವ ಪರ್ವತದಲ್ಲಿ ಪರ್ವತಾವಯವ ವೃತ್ತ್ಯನ್ಯತ್ವ ಬರುವುದಿಲ್ಲ. ಅಪರ್ವತೀಯ ವಹ್ನಿಸಾಮಗ್ರೀಯುಕ್ತತ್ವವೂ ಪರ್ವತದಲ್ಲಿ ಬರುವುದಿಲ್ಲ. ಈ ಎರಡು ಧರ್ಮಗಳು ಪರ್ವತ ಮಾತ್ರ ವ್ಯಾವರ್ತಕ ವಿಶೇಷಣ ಘಟಿತವಾಗಿವೆ. ಅಪ್ರಯೋಜಕವಾಗಿವೆ. ಪರ್ವತೇತರತ್ವದಂತೆ.

ಯದ್ಯಪಿ ಪರ್ವತಾವಯವ ವೃತ್ತ್ಯನ್ಯತ್ವವು ಪರ್ವತಾವಯವವೃತ್ತಿ ರೂಪಾದಿಯನ್ನೂ ಕೂಡ ವ್ಯಾವೃತ್ತಿ ಮಾಡುತ್ತದೆ. ಪರ್ವತಮಾತ್ರವ್ಯಾವರ್ತಕವಾಗಿಲ್ಲ. ಆದರೂ ಪರ್ವತೇತರತ್ವದಂತೇ ಪಕ್ಷಮಾತ್ರವ್ಯಾವರ್ತಕಕ್ಕೆ ತುಲ್ಯಯೋಗಕ್ಷೇಮವಾಗಿದೆ ಪಕ್ಷಮಾತ್ರ ವ್ಯಾವರ್ತಕವಾಗಿರುವ ಪರ್ವತೇತ್ವ ರೂಪಉಪಾಧಿಗೆ ಯೋಗಕ್ಷೇಮಗಳು ಹೀಗೆ— ಪ್ರಕೃತಹೇತುವಿಗೆ ಅನುಕೂಲತರ್ಕವಿಲ್ಲದಿದ್ದರೆ ಪಕ್ಷದಲ್ಲಿಯೇ ಸಾಧ್ಯವ್ಯಾಪಕತಾಭಂಗ. ಅನುಕೂಲತರ್ಕವಿಲ್ಲದಿದ್ದರೆ ಪಕ್ಷದಲ್ಲಿ ಸಾಧ್ಯನಿಶ್ಚಯ ವಿಲ್ಲದಿರುವುದರಿಂದ ಸಾಧ್ಯವ್ಯಾಪಕತಾಭಂಗವಿಲ್ಲ. ಪರ್ವತಾವಯವ ವೃತ್ತ್ಯನ್ಯತ್ವರೂಪಉಪಾಧಿಗೂ ಈ ಯೋಗಕ್ಷೇಮಗಳು ಸಮಾನ ಎಂಬ ಅಭಿಪ್ರಾಯದಿಂದ ಇದನ್ನು ಉದಾಹರಿಸಿದ್ದಾರೆ.

ಹಾಗೇ 'ಸ್ವಬಾಧಕಾಭಿಮತ ಅಬಾಧ್ಯದೋಷ ಪ್ರಯುಕ್ತ ಭಾನತ್ವ' ಎಂಬ ಧರ್ಮದಲ್ಲಿ 'ಸ್ವಬಾಧಕಾಭಿಮತ ಅಬಾಧ್ಯತ್ವ' ವಿಶೇಷಣವು ಪಕ್ಷಮಾತ್ರವ್ಯಾವರ್ತಕವಾಗಿದೆ. ಅದಿಲ್ಲದಿದ್ದರೆ 'ದೋಷಪ್ರಯುಕ್ತ ಭಾನತ್ವ'ವು ಶುಕ್ತಿರಜತದಲ್ಲಿಯೂ ಪ್ರಪಂಚದಲ್ಲಿಯೂ ಬರುತ್ತಿತ್ತು. ಪಕ್ಷದಲ್ಲಿ ಅದು ಬಂದರೆ ಅದು ಸಾಧನವ್ಯಾಪಕವಾಗುವುದು. ಸಾಧನಾವ್ಯಾಪಕತ್ವವೇ ಬರಬೇಕಾಗಿದೆ. ಅದಕ್ಕೆ ಪಕ್ಷ ಮಾತ್ರ ವ್ಯಾವರ್ತಕವಾಗಿ ವಿಶೇಷಣ ಹಾಕಿದೆ ಹೊರತು ಅದಕ್ಕೆ ಅನುಕೂಲತರ್ಕಾದಿ ಬೇರೆ ಪ್ರಯೋಜನವಿಲ್ಲ. ಆದರಿಂದ ಉಪಾಧಿಯು ಅಪ್ರಯೋಜಕ, ಪಕ್ಷೇತರತ್ವದಂತೆ' ಎಂಬ ಆಕ್ಷೇಪ ಇಲ್ಲಿ ಬರುತ್ತದೆ.

ಹಾಗೇ 'ಬಾಧಕಂ ಪ್ರತಿ ನಿಷೇಧ್ಯತ್ವೇನ ವಿಷಯತ್ವ'ವೇ ಮಿಥ್ಯಾತ್ವವ್ಯಾಪಕ. ಅದನ್ನೇ ಉಪಾಧಿ

ಎನ್ನಬಹುದಿತ್ತು. ಆದರೆ ಅದು ಅದ್ವೈತಮತದಲ್ಲಿ ಪ್ರಪಂಚದಲ್ಲಿ ಬರುತ್ತದೆ. ಬಾಧಕವಾದ ಬ್ರಹ್ಮಜ್ಞಾನಕ್ಕೆ ನಿಷೇಧ್ಯತ್ವೇನ ವಿಷಯವಾಗಿದೆ. ಪ್ರಪಂಚದಲ್ಲಿ ಬಂದರೆ ಅದಕ್ಕೆ ಸಾಧನಾವ್ಯಾಪಕತ್ವ ಬರುವುದಿಲ್ಲ. ಆದಕ್ಕೆ ಪಕ್ಷಮಾತ್ರ ವ್ಯಾವರ್ತಕವಾದ ವಿಶೇಷಣವನ್ನು ಸೇರಿಸಿ 'ಸ್ವಬಾಧಕಾಭಿಮತ ಅಬಾಧ್ಯ ಬಾಧಕಂ ಪ್ರತಿ' ಎಂದು ಹೇಳಿದ್ದಾರೆ. ಆದರಿಂದ ಇದೂ ಪಕ್ಷೇತರತ್ವದಂತೆ ಅಪ್ರಯೋಜಕವೇ' ಎಂಬ ಆಕ್ಷೇಪ ಬರುತ್ತದೆ.

ಆದಕ್ಕೆ ಸಮಾಧಾನ ನೀಡಬೇಕು. ಅದು ಹೀಗೆ— 'ಪರ್ವತೋ ಧೂಮವಾನ್ ವಹ್ನೇಃ' ಎಂದು ವಹ್ನಿಯಿಂದ ಧೂಮಸಾಧನಮಾಡುವಾಗ ಆರ್ದ್ರೇಂಧನಪ್ರಭವ ವಹ್ನಿಮತ್ತ್ವವು ಉಪಾಧಿ. ಹಸಿಕಟ್ಟಿಗೆಯಲ್ಲಿ ಉಂಟಾಗುವ ಬೆಂಕಿ ಹೊಗೆ ಉಂಟುಮಾಡುತ್ತದೆ. ಸಾಧ್ಯವಾದ ಧೂಮಕ್ಕೆ ಹಸಿಕಟ್ಟಿಗೆಯ ಬೆಂಕಿ ವ್ಯಾಪಕ. ಕಟ್ಟಿಗೆ ಹಸಿಯಾದಷ್ಟೂ ಬೆಂಕಿ ಹೆಚ್ಚು ಧೂಮವನ್ನು ಉಗುಳುತ್ತದೆ. ಆದರಿಂದ 'ಹಸಿಕಟ್ಟಿಗೆ' ಎಂಬ ವಿಶೇಷಣಘಟಿತವಾದ ಉಪಾಧಿಗೆ ಅನುಕೂಲತರ್ಕವಿರುವುದರಿಂದ ಧೂಮವ್ಯಾಪಕತ್ವ ನಿರ್ಣಯವಾಗುತ್ತದೆ. ಪ್ರಕೃತ ಸಾಧ್ಯವಾದ ಮಿಥ್ಯಾತ್ವವು ಭ್ರಮ ವಿಷಯತ್ವ ರೂಪವಾದ್ದರಿಂದ ದೋಷ ಹೆಚ್ಚಿದಷ್ಟೂ ಭ್ರಮ ಹೆಚ್ಚಾಗುವುದು ಅನುಕೂಲತರ್ಕ. ಆದರಿಂದ ದೋಷಕ್ಕೆ ಸ್ವಬಾಧಕಾಭಿಮತಾಬಾಧ್ಯತ್ವ ವಿಶೇಷಣ ಸಾರ್ಥಕವೆ. ಪಕ್ಷಮಾತ್ರ ವ್ಯಾವರ್ತಕವಾಗುವುದಿಲ್ಲ. ಸಾಧನಾವ್ಯಾಪಕತ್ವಕ್ಕಾಗಿಯೇ ಸೇರಿಸಿದ್ದಲ್ಲ. ಸಾಧ್ಯವ್ಯಾಪಕತಾ ನಿರ್ಣಯಕ್ಕಾಗಿ ಸೇರಿಸಲಾಗಿದೆ. ಪಕ್ಷೇತರತ್ವಕ್ಕೆ ಹೀಗೆ ಸಾಧ್ಯವ್ಯಾಪಕತಾಗ್ರಾಹಕ ಅನುಕೂಲ ತರ್ಕವಿಲ್ಲದಿರುವುದರಿಂದ ಅದು ಉಪಾಧಿ ಯಾಗುವುದಿಲ್ಲ. 'ಹಸಿಕಟ್ಟಿಗೆ ಎಂಬ ವಿಶೇಷಣವನ್ನು ಪಕ್ಷಮಾತ್ರ ವ್ಯಾವಕರ್ತಕವಾಗಲೆಂದು ಕೊಟ್ಟಿಲ್ಲ. ಸಮವ್ಯಾಪ್ತಿಗಾಗಿ ಕೊಟ್ಟಿದೆ. ಪ್ರಕೃತ ದೋಷ ಪ್ರಯುಕ್ತಭಾನತ್ವರೂಪವಿಶೇಷ್ಯಕ್ಕೇ ಸಮವ್ಯಾಪ್ತಿ ಇದೆ. ಅದರಿಂದ ವಿಶೇಷಣ ವ್ಯರ್ಥ. ಮತ್ತು ವಿಶೇಷಣವಿಲ್ಲದಿದ್ದರೂ ಸಾಧನವ್ಯಾಪಕತ್ವ ಸಂದೇಹ ವಿರುವುದರಿಂದ ಸಂದಿಗ್ಧೋಪಾಧಿ ಇದ್ದೇ ಇದೆ. ಅದು ವ್ಯಭಿಚಾರ ಸಂಶಯ ಉಂಟುಮಾಡಿ ದೋಷವಾಗಬಹುದು' ಎಂಬ ಆಕ್ಷೇಪ ಬರುತ್ತದೆ. ಆದಕ್ಕೆ ಇದು ಬಾಧಸ್ಥಳವಾದ್ದರಿಂದ ಪಕ್ಷಮಾತ್ರ ವ್ಯಾವರ್ತಕ ತುಲ್ಯವಾದರೂ ದೋಷವಿಲ್ಲ ಎನ್ನುತ್ತಾರೆ.

ವಸ್ತುತಸ್ತು ಬಾಧಿತಸ್ಥಳದಲ್ಲಿ ಪಕ್ಷೇತರತ್ವಕ್ಕೂ ಉಪಾಧಿತ್ವ ಕೂಡುತ್ತದೆ. 'ವಹ್ನಿ ಅನುಷ್ಣವಾಗಿದೆ ಪದಾರ್ಥವಾದ್ದರಿಂದ' ಎಂದು ಅನುಮಾನ ಪ್ರಯೋಗಮಾಡಿದರೆ ಪ್ರತ್ಯಕ್ಷ ಬಾಧವಿದೆ. ಹೇತು ಸಾಧ್ಯಗಳಿಗೆ ವ್ಯಾಪ್ತಿಗ್ರಾಹಕ ಅನುಕೂತರ್ಕವಿಲ್ಲ. ಅಲ್ಲಿ ಪಕ್ಷೇತರತ್ವವನ್ನು ಉಪಾಧಿ ಎನ್ನಲು ಬರುತ್ತದೆ. ಪಕ್ಷೇತರತ್ವ ಉಪಾಧಿ ಇಲ್ಲದ ಪಕ್ಷದಲ್ಲಿ ಸಾಧ್ಯವಿಲ್ಲದ್ದರಿಂದ ಉಪಾಧಿಯಲ್ಲಿ ಸಾಧ್ಯವ್ಯಾಪಕತಾಕ್ಕೆ ಭಂಗ ಬರುವುದಿಲ್ಲ. ಪ್ರಕೃತದಲ್ಲಿಯೂ 'ಸನ್‌ಘಟಃ' ಎಂದು ಪ್ರತ್ಯಕ್ಷಬಾಧವಿರುವುದರಿಂದ, ಪಕ್ಷಮಾತ್ರ ವ್ಯಾವರ್ತಕ ವಿಶೇಷಣಘಟಿತವಾಗಿ ಪಕ್ಷೇತರತ್ವ ತುಲ್ಯವಾದ ಈ ಎರಡೂ ಉಪಾಧಿಗಳು ಸಾಧ್ಯರಹಿತವಾದ ಪಕ್ಷದಲ್ಲಿಯೇ ಅಭಾವಪ್ರತಿಯೋಗಿಗಳಾಗುವುದರಿಂದ, ಸಾಧ್ಯಾಭಾವಾ

ಪಿನಾಭಾವ್ಯಭಾವಪ್ರತಿಯೋಗಿತ್ವರೂಪ ಉಪಾಧಿತ್ವವು ಅವುಗಳಿಗೆ ಯುಕ್ತವೆ. ಪ್ರತ್ಯಕ್ಷಬಾಧವನ್ನು ಮುಂದೆ ಸಮರ್ಥಿಸುತ್ತಾರೆ.

❖❖❖

**यद्वा यथा अनुकूलतर्काभावान्मित्रातनयत्वेन श्यामत्वे साध्ये शाकपाकजत्वं तस्मिन्साध्ये श्यामत्वमुपाधिस्तथेहापि बाध्यत्वादिरूपे मिथ्यात्वे साध्ये विपरीतप्रमाविषयत्वदोषप्रयुक्तभानत्वादिकं तस्मिन्साध्ये मिथ्यात्वमुपाधिरस्तु । युगपदुभयसाधने त्वर्थान्तरम् । मिथ्यात्व एव विप्रतिपत्तेः । बाधो भ्रांतिपूर्वकः, विपरीतप्रमा तु नेति तयोर्भेदः । यद्वा अधिष्ठानाभिमतसमसत्ताकदोषवद्धेतुजन्यज्ञान-विषयत्वमुपाधिः । ब्रह्मणोऽपि बौद्धकल्पितदोषवद्वेदजन्यज्ञानविषय-त्वात् । समव्याप्त्यर्थमधिष्ठानसमसत्ताकेति विशेषणम् । नतु पक्षव्यावृत्त्यर्थम् । येन पक्षेतरत्वं स्यात् । यद्वा वेदतात्पर्य-विषयाद्धर्माधर्मादिरूपात्साक्षिवेद्यात्सुखदुःखादिरूपाद्वा पक्षैकदेशाद् व्यावृत्तं श्रुतितात्पर्याविषयत्वं दोषजन्यधीविषयत्वं वा पक्षमात्राद् व्यावृत्तं प्रतिभासमात्रशरीरत्वं वोपाधिः । नच तवापि ज़गत्प्रतिभासमात्रशरीरं प्रतिकर्मव्यवस्थाद्ययोगादिति दिक् ॥**

यद्वा पक्षमात्रव्यावर्तकविशेषणमनुपादेयमेव । नचैवं साधनव्यापकत्वान्नाय-मुपाधिः । तन्निश्चयाभावेन सन्दिग्धोपाधित्वस्येष्टत्वात् । व्यभिचारसंशयाधायकतया तस्यापि दूषणसमर्थत्वादित्याह **यद्वेति** ॥

ननु साध्यव्याप्यहेत्वव्यापकतया साध्याव्यापकत्वनिश्चयात् संदिग्धोपाधित्वमपि नास्तीत्यत आह **अनुकूलतर्काभावादिति** ॥ हेतावनुकूलतर्काभावदशाया-मेवोपाधेर्दूषणत्वमित्यर्थः । अर्थान्तरमित्यापाततः । युगपदुभयसाधनेऽप्येकांशस्यो-पाधित्वमिति द्रष्टव्यम् । ननु विपरीतप्रमाविषयत्वं नोपाधिः । तस्यैव साध्यत्वाभिमतबाध्यत्वरूपत्वात् । अन्यथानुमानमात्रोच्छेदापत्तेरित्यत आह **बाध इति** ॥ **नतु पक्षव्यावृत्त्यर्थमिति** ॥ यद्यप्यधिष्ठानसमसत्ताकत्वविशेषणमावश्यकम् । तथापि समव्याप्त्यर्थमेवोपात्तेन तेन पक्षे व्यावृत्तिरपि सिध्यतीति भावः ।

ननु वादिप्रतिवाद्युभयाङ्गीकृत एव दोषो वाच्यः । अन्यथाधिष्ठानसमसत्ताकत्वस्यापि दोषे बौद्धाभिमतत्वेन पुनरप्युपाधेर्न समव्याप्तत्वमित्यत आह **यद्वेति** ।। **पक्षैकदेशादिति** ।। नच साध्याभावसाधने उपाधिव्यतिरेकस्य भागासिद्धत्वं, व्यभिचारोन्नायकतयैव दोषत्वसंभवादिति भावः ।। **श्रुतितात्पर्येति** ।। नच धर्मादौ मुख्यतः श्रुतितात्पर्याविषयत्वमस्त्येवेति वाच्यम् । मुख्यत्वस्याद्याप्यनिरूपणादिति भावः ।।

**प्रतिकर्मेति** ।। लोकमर्यादातिक्रमे उन्मत्तवदुपेक्षणीयत्वापत्तेरिति भावः ।।

## ।। इति दृश्यत्वादेरुपाधिविवरणम् ।।

❖❖❖

**ಯದ್ವಾ ಯಥಾ ಅನುಕೂಲ ತರ್ಕಾಭಾವಾತ್ ಮಿತ್ರಾತನಯತ್ವೇನ ಶ್ಯಾಮತ್ವೇ ಸಾಧ್ಯೇ ಶಾಕಪಾಕಜತ್ವಂ, ತಸ್ಮಿನ್ ಸಾಧ್ಯೇ ಶ್ಯಾಮತ್ವಂ ಉಪಾಧಿಃ, ತಥಾ ಇಹಾಪಿ ಬಾಧ್ಯತ್ವರೂಪೇ ಮಿಥ್ಯಾತ್ವೇ ಸಾಧ್ಯೇ ವಿಪರೀತ ಪ್ರಮಾವಿಷಯತ್ವ-ದೋಷಪ್ರಯುಕ್ತಭಾನತ್ವಾದಿಕಂ, ತಸ್ಮಿನ್ ಸಾಧ್ಯೇ ಮಿಥ್ಯಾತ್ವಂ ಉಪಾಧಿರಸ್ತು ।**

ಅಥವಾ ಪಕ್ಷೇತರತ್ವತುಲ್ಯವೆಂಬ ಶಂಕೆಗೂ ಅವಕಾಶವಿಲ್ಲದಂತೆ ವಿಶೇಷಣರಹಿತವಾಗಿ ಬೇರೆಯೇ ರೀತಿಯಿಂದ ಉಪಾಧಿಗಳನ್ನು ಹೇಳಬಹುದು. ಏಕೆಂದರೆ ಪ್ರಕೃತಹೇತುವಿಗೆ ಅನುಕೂಲ ತರ್ಕವಿಲ್ಲ. ಹೇತುವಿಗೆ ಅನುಕೂಲರ್ಕವಿಲ್ಲದಿದ್ದಾಗಲೆ ಉಪಾಧಿ ದೋಷವಾಗುವುದು.

'ಇವನು ಶ್ಯಾಮವರ್ಣದವನು, ಮಿತ್ರಾತನಯನಾದ್ದರಿಂದ' ಎಂಬಲ್ಲಿ ಅನುಕೂಲತರ್ಕ ವೇನೂ ಇಲ್ಲದಿರುವುದರಿಂದ ಮಾತೃಗರ್ಭಸ್ಥ ಶಾಕಪಾಕಜತ್ವವನ್ನು ಉಪಾಧಿಯಾಗಿ ಹೇಳಬಹುದು. ಉಪಾಧಿಗೆ ಸಾಧನಾವ್ಯಾಪಕತ್ವವನ್ನು ಹೇಳುವುದಕ್ಕಾಗಿ ಅದೇ ಮಿತ್ರಾತನಯತ್ವ ಹೇತುವಿನಿಂದ ಶಾಕಪಾಕಜತ್ವವನ್ನು ಕೂಡ ಸಾಧಿಸುತ್ತೇನೆ ಎಂದರೆ, ಅದಕ್ಕೆ ಶ್ಯಾಮತ್ವವು ಉಪಾಧಿ ಎನ್ನಬಹುದು. ಎರಡಕ್ಕೂ ಅನುಕೂಲತರ್ಕವಿಲ್ಲ. ಹಾಗೇ ಪ್ರಕೃತದಲ್ಲಿ ದೃಶ್ಯತ್ವ ಹೇತುವಿನಿಂದ ಬಾಧ್ಯತ್ವರೂಪ ಮಿಥ್ಯಾತ್ವ ಸಾಧನೆ ಮಾಡುವಾಗ ವಿಪರೀತಪ್ರಮಾವಿಷಯತ್ವ ದೋಷಪ್ರಯುಕ್ತಭಾನತ್ವಾದಿಗಳನ್ನು ಉಪಾಧಿ ಎನ್ನಬೇಕು. 'ಅದೇ ದೃಶ್ಯತ್ವ ಹೇತುವಿನಿಂದ ಈ ಉಪಾಧಿಗಳನ್ನು ಕೂಡ ಪಕ್ಷದಲ್ಲಿ ಸಾಧನೆ ಮಾಡುತ್ತೇನೆ. ಆಗ ಉಪಾಧಿಗಳು ಸಾಧನವ್ಯಾಪಕವಾಗುವುವು' ಎಂದರೆ ನೀನು ವಿಪರೀತ ಪ್ರಮಾವಿಷಯತ್ವಾದಿ ಉಪಾಧಿ ಸಾಧನೆ ಮಾಡುವಾಗ ನಾವು ಮಿಥ್ಯಾತ್ವವನ್ನು ಉಪಾಧಿ ಎನ್ನುತ್ತೇವೆ.

**ಯುಗಪದುಭಯ ಸಾಧನೇ ತು ಅರ್ಥಾಂತರಂ । ಮಿಥ್ಯಾತ್ವ ಏವ ವಿಪ್ರತಿಪತ್ತೇಃ ।**

'ಶ್ಯಾಮತ್ವ ಸಾಧ್ಯವಾದರೆ ಶಾಕಪಾಕಜತ್ವ ಉಪಾಧಿ, ಶಾಕಪಾಕಜತ್ವ ಸಾಧ್ಯವಾದರೆ ಶ್ಯಾಮತ್ವ ಉಪಾಧಿ. ಈ ಅನ್ಯೋನ್ಯ ಉಪಾಧಿತ್ವವನ್ನು ಪರಿಹರಿಸಿಕೊಳ್ಳುವುದಕ್ಕಾಗಿ, ಅನ್ಯೋನ್ಯ ಸಾಧ್ಯತ್ವವನ್ನು ಬಿಟ್ಟು ಯುಗಪತ್ ಉಭಯ ಸಾಧ್ಯತ್ವವನ್ನೇ ಅಂಗೀಕರಿಸುತ್ತೇನೆ' ಎಂದು ಶ್ಯಾಮತ್ವವಾದಿ ಹೇಳಬಹುದು. ಹಾಗೇ ನಾನೂ ಕೂಡ ಮಿಥ್ಯಾತ್ವವನ್ನೂ ನೀವು ಹೇಳುವ ವಿಪರೀತಪ್ರಮಾ ವಿಷಯತ್ವಾದಿ ಉಪಾಧಿಗಳನ್ನೂ ಯುಗಪತ್ ದೃಶ್ಯತ್ವಹೇತುವಿನಿಂದಲೇ ಸಾಧನೆ ಮಾಡುತ್ತೇನೆ. ಆಗ ಉಪಾಧಿಗಳಿಗೆ ಸಾಧನವ್ಯಾಪಕತ್ವ ಬರುತ್ತದೆ' ಎಂದು ಮಾಯಾವಾದಿ ಹೇಳಿದರೆ ಅದು ಸರಿಯಲ್ಲ.

ಉಭಯ ಸಾಧನೆ ಮಾಡುವಾಗಲೂ ಒಂದಕ್ಕೆ ಉಪಾಧಿತ್ವ ಅಪರಿಹಾರ್ಯ. ಮಿತ್ರಾತನಯತ್ವ ಹೇತುವಿನಿಂದ ಶಾಕಪಾಕಜತ್ವವನ್ನು ಸಾಧನೆ ಮಾಡುವಾಗ ಶ್ಯಾಮತ್ವವು ಸಂದಿಗ್ಧ ಸಾಧನವ್ಯಾಪಕ ವಾಗುವುದರಿಂದ ಉಪಾಧಿ ಸಂದೇಹವಿರುವಂತೆ, ಉಭಯ ಸಾಧನೆ ಮಾಡುವಾಗಲೂ ಅವುಗಳಲ್ಲಿ ಒಂದು ಸಂದಿಗ್ಧ ಸಾಧನವ್ಯಾಪಕವಾಗುವುದು.

ಈ ದೋಷದೊಂದಿಗೆ ಇನ್ನೊಂದು ದೋಷವು ಉಂಟು. ಅದು ಅರ್ಥಾಂತರದೋಷ. ಏಕೆಂದರೆ ಮಿಥ್ಯಾತ್ವದಲ್ಲಿಯೇ ವಿಪ್ರತಿಪತ್ತಿ ಬಂದಿರುವಾಗ ಮಿಥ್ಯಾತ್ವದೊಂದಿಗೆ ಉಪಾಧಿಗಳನ್ನು ಸಾಧನೆ ಮಾಡಿದರೆ ಅನಾಕಾಂಕ್ಷಿತಾಭಿಧಾನರೂಪ ಅರ್ಥಾಂತರವೆಂಬ ನಿಗ್ರಹಸ್ಥಾನ ಬರುತ್ತದೆ.

**ಬಾಧೋ ಭ್ರಾಂತಿಪೂರ್ವಕಃ ವಿಪರೀತ ಪ್ರಮಾ ತು ನೇತಿ ತಯೋರ್ಭೇದಃ ।**

ಇಲ್ಲಿ ದೋಷಪ್ರಯುಕ್ತಭಾನತ್ವವನ್ನು ಉಪಾಧಿಯಾಗಿ ಹೇಳಿದ್ದು, ಹಿಂದೆ ಸ್ವಬಾಧಕಾಭಿಮತ ಅಬಾಧ್ಯದೋಷಪ್ರಯುಕ್ತಭಾನತ್ವರೂಪ ಉಪಾಧಿಯನ್ನು ಹೇಳಿದ್ದರಿಂದ ವಿಶಿಷ್ಟರೂಪದ ಆ ಉಪಾಧಿ ಯಲ್ಲಿ ವಿಶೇಷ್ಯಾಂಶವಾದ ದೋಷಪ್ರಯುಕ್ತಭಾನತ್ವ ಪ್ರಕೃತವಾದ್ದರಿಂದ ಎನ್ನಬಹುದು. ಆದರೆ ವಿಪರೀತ ಪ್ರಮಾವಿಷಯತ್ವವನ್ನು ಉಪಾಧಿಯಾಗಿ ಹೇಳಲು ಅದು ಹೀಗೆ ಹಿಂದೆ ಪ್ರಕೃತವಾಗಿಲ್ಲ. ಬಾಧಕಪ್ರಮಾಂ ಪ್ರತಿ ನಿಷೇಧ್ಯತ್ವೇನ ವಿಷಯತ್ವವನ್ನು ಉಪಾಧಿಯಾಗಿ ಹೇಳಬಹುದಿತ್ತು. ಸ್ವಬಾಧಕಾಭಿಮತ ಅಬಾಧ್ಯ ಬಾಧಕಪ್ರಮಾಂ ಪ್ರತಿ ನಿಷೇಧ್ಯತ್ವೇನ ವಿಷಯತ್ವರೂಪ ಉಪಾಧಿಯನ್ನು ಹೇಳುವಾಗ ಪ್ರಕೃತವಾಗಿದೆ. 'ಬಾಧ್ಯತ್ವರೂಪ ಸಾಧ್ಯವೂ ಬಾಧಕಂ ಪ್ರತಿ ನಿಷೇಧ್ಯತ್ವೇನ ವಿಷಯತ್ವವೂ ಒಂದೇ ಆಗುವುದರಿಂದ ಆ ಉಪಾಧಿಯನ್ನು ಬಿಡಬೇಕಾಯಿತು' ಎನ್ನುವುದಾದರೆ ವಿಪರೀತ ಪ್ರಮಾವಿಷಯತ್ವವೂ ಕೂಡ ಹಾಗೇ ಬಾಧ್ಯತ್ವರೂಪ ಸಾಧ್ಯಕ್ಕಿಂತ ಬೇರೆಯಲ್ಲವಾದ್ದರಿಂದ ಬಿಡಬೇಕಿತ್ತು ಎಂಬ ಜಿಜ್ಞಾಸೆ ಬಂದರೆ ಹೇಳುತ್ತಾರೆ—

ಬಾಧ್ಯತ್ವವು ಬೇರೆ, ವಿಪರೀತಪ್ರಮಾವಿಷಯತ್ವವು ಬೇರೆ' ಎಂದು. ಬಾಧ್ಯತ್ವವು ಭ್ರಾಂತಿಪೂರ್ವಕ ಸ್ವಾತ್ಯಂತಾಭಾವಪ್ರಮಾಂ ಪ್ರತಿ ನಿಷೇಧ್ಯತ್ವೇನ ವಿಷಯತ್ವರೂಪವಾಗಿದೆ. ವಿಪರೀತ ಪ್ರಮಾವಿಷಯತ್ವವು ಭ್ರಾಂತಿಗೆ ಪ್ರಸಕ್ತಿಯೇ ಇಲ್ಲದಿರುವಾಗ, 'ಇದು ಶುಕ್ತಿ, ಸ್ವೇತರಸರ್ವ ವಿಲಕ್ಷಣ, ರಜತಕ್ಕಿಂತಲೂ ವಿಲಕ್ಷಣ, ರಜತವಲ್ಲ' ಎಂದು. ಕೇವಲ ಸ್ವಾತ್ಯಂತಾಭಾವ ಪ್ರಮಾಂ ಪ್ರತಿ ನಿಷೇಧ್ಯತ್ವೇನ

ವಿಷಯತ್ವರೂಪವಾಗಿದೆ. ಅದರಿಂದ ಬಾಧ್ಯತ್ವವು ಸಾಧ್ಯವಾಗಿರುವಾಗ ವಿಪರೀತ ಪ್ರಮಾವಿಷಯತ್ವವು ಉಪಾಧಿಯಾಗಲು ಅಡ್ಡಿ ಇಲ್ಲ.

**ಯದ್ವಾ ಅಧಿಷ್ಠಾನಾಭಿಮತ ಸಮಸತ್ತಾಕ ದೋಷವದ್ಧೇತುಜನ್ಯ ಜ್ಞಾನವಿಷಯತ್ವಂ ಉಪಾಧಿಃ। ಬ್ರಹ್ಮಣೋऽಪಿ ಬೌದ್ಧ ಕಲ್ಪಿತ ದೋಷವದ್ವೇದ ಜನ್ಯ ಜ್ಞಾನವಿಷಯತ್ವಾತ್ ಸಮವ್ಯಾಪ್ತ್ಯರ್ಥಂ ಅಧಿಷ್ಠಾನ ಸಮಸತ್ತಾಕೇತಿ ವಿಶೇಷಣಂ। ನತು ಪಕ್ಷವ್ಯಾವೃತ್ತ್ಯರ್ಥಂ, ಯೇನ ಪಕ್ಷೇತರತ್ವಂ ಸ್ಯಾತ್।**

ಪಕ್ಷ ಮಾತ್ರ ವ್ಯಾವರ್ತಕ ವಿಶೇಷಣವತ್ವ ಶಂಕೆಗೇ ಅವಕಾಶವಿಲ್ಲದಂಥ, ಸಾಧನಾವ್ಯಾಪಕ ವೆಂದು 'ಸರ್ವಸಂಮತವಾದ ಉಪಾಧಿಯನ್ನು ಹೇಳಬೇಕೆಂದರೆ ಅದು ಹೀಗೆ—'ಅಧಿಷ್ಠಾನವೆಂದು ಅಭಿಪ್ರೇತವಾದುದಕ್ಕೆ ಸಮಸತ್ತಾಕವಾದ ದೋಷಉಳ್ಳ ಹೇತುಜನ್ಯಜ್ಞಾನಕ್ಕೆ ವಿಷಯವಾಗಿರುವುದು ಉಪಾಧಿ' ಎಂದು. ಬ್ರಹ್ಮನೂ ಕೂಡ ಬೌದ್ಧರು ಕಲ್ಪಿಸುವ 'ಯದನೃತಂ ತದಪ್ರಮಾಣಂ ದೃಷ್ಟಂ ಯಥೋನ್ಮತ್ತವಾಕ್ಯಂ' ಎಂದು ಮುಂತಾದ ಅನೃತ ವ್ಯಾಘಾತಾದಿರೂಪ ದೋಷಉಳ್ಳ ವೇದಜನ್ಯ ಜ್ಞಾನಕ್ಕೆ ವಿಷಯನಾಗುವುದರಿಂದ ದೋಷವದ್ಧೇತುಜನ್ಯಜ್ಞಾನ ವಿಷಯತ್ವರೂಪ ಉಪಾಧಿ ಬ್ರಹ್ಮನಲ್ಲಿದೆ. ಸಾಧ್ಯವಾದ ಮಿಥ್ಯಾತ್ವವಿಲ್ಲ. ಸಾಧ್ಯವ್ಯಾಪಕತ್ವವು ಈ ಉಪಾಧಿಗೆ ಇದ್ದರೂ ಉಪಾಧಿ ವ್ಯಾಪಕತ್ವ ಸಾಧ್ಯಕ್ಕೆ ಇಲ್ಲ. ಸಮವ್ಯಾಪ್ತಿ ಇಲ್ಲ ಎಂದಾಗುತ್ತದೆ. ಅದಕ್ಕೆ ದೋಷಕ್ಕೆ ಅಧಿಷ್ಠಾನಾಭಿಮತ ಸಮಸತ್ತಾಕತ್ವ ವಿಶೇಷಣ ಬೇಕು. ಆಗ, ಅಧಿಷ್ಠಾನಾಭಿಮತ ವೇದವು ವ್ಯಾವಹಾರಿಕ. ಅದರಲ್ಲಿ ಬೌದ್ಧ ಕಲ್ಪಿತವಾದ ದೋಷವು ಪ್ರಾತಿಭಾಸಿಕ. ಹೀಗಾಗಿ ಅಧಿಷ್ಠಾನ ಸಮಸತ್ತಾಕದೋಷವದ್‌ವೇದಜನ್ಯ ಜ್ಞಾನವಿಷಯತ್ವ ಬ್ರಹ್ಮನಲ್ಲಿಲ್ಲ. ಅದರಿಂದ ಸಮವ್ಯಾಪ್ತಿಗೆ ಭಂಗವಿಲ್ಲ. ಸಮವ್ಯಾಪ್ತಿಗಾಗಿ ದೋಷಕ್ಕೆ ಅಧಿಷ್ಠಾನಸಮಸತ್ತಾಕತ್ವವೆಂಬ ವಿಶೇಷಣ ನೀಡಿದ್ದರಿಂದ ಪಕ್ಷವ್ಯಾವೃತ್ತಿ ಸಿದ್ಧಿಸುತ್ತದೆ ಹೊರತು ಈ ಉಪಾಧಿಯು ಪಕ್ಷಮಾತ್ರವ್ಯಾವರ್ತಕ ವಿಶೇಷಣ ಘಟಿತವಾಗಿಲ್ಲ, ಪಕ್ಷೇತರತ್ವ ತುಲ್ಯವಾಗಿಲ್ಲ.

ವಾದಿಪ್ರತಿವಾದಿ ಉಭಯ ಸಮ್ಮತವಾದ ದೋಷವನ್ನೇ ಹೇಳಬೇಕು. ಇಲ್ಲದಿದ್ದರೆ ಅಧಿಷ್ಠಾನ ಸಮಸತ್ತಾಕತ್ವವನ್ನೂ ಕೂಡ ದೋಷದಲ್ಲಿ ಬೌದ್ಧನು ಹೇಳುತ್ತಾನೆ, ಅದರಿಂದ ವಿಶೇಷಣ ಕೊಟ್ಟರೂ ಉಪಾಧಿಗೆ ಸಮವ್ಯಾಪ್ತಿ ಇಲ್ಲವೆಂದಾಗುವುದು ಎಂದರೆ, ಶ್ರುತಿತಾತ್ಪರ್ಯಾವಿಷಯತ್ವಾದಿ ಬೇರೆ ಉಪಾಧಿಗಳನ್ನು ಮುಂದೆ ಹೇಳುತ್ತಾರೆ.

**ಯದ್ವಾ ವೇದತಾತ್ಪರ್ಯವಿಷಯಾತ್ ಧರ್ಮಾಧರ್ಮಾದಿರೂಪಾತ್, ಸಾಕ್ಷಿ ವೇದ್ಯಾತ್ ಸುಖದುಃಖಾದಿರೂಪಾದ್ವಾ ಪಕ್ಷೈಕದೇಶಾತ್ ವ್ಯಾವೃತ್ತಂ ಶ್ರುತಿತಾತ್ಪರ್ಯಾ ವಿಷಯತ್ವಂ ದೋಷಜನ್ಯ ಧೀವಿಷಯತ್ವಂ ವಾ, ಪಕ್ಷ ಮಾತ್ರಾದ್ ವ್ಯಾವೃತ್ತಂ ಪ್ರತಿಭಾಸಮಾತ್ರ ಶರೀರತ್ವಂ ವಾ ಉಪಾಧಿಃ। ನ ಚ ತವಾಪಿ ಜಗತ್ ಪ್ರತಿಭಾಸಮಾತ್ರ ಶರೀರಂ। ಪ್ರತಿಕರ್ಮವ್ಯವಸ್ಥಾದ್ಯಯೋಗಾತ್ ಇತಿ ದಿಕ್।**

ಅಥವಾ ಶ್ರುತಿ ತಾತ್ಪರ್ಯಅವಿಷಯತ್ವವು ಉಪಾಧಿ. ಇದು ವೇದತಾತ್ಪರ್ಯವಿಷಯವಾದ ಪಕ್ಷೈಕದೇಶವಾದ ಧರ್ಮಾಧರ್ಮಾದಿಗಳಿಂದ ವ್ಯಾವೃತ್ತವಾಗಿದೆ. ದೋಷ ಜನ್ಯಧೀವಿಷಯತ್ವವೂ ಉಪಾಧಿ. ಇದು ಪಕ್ಷೈಕದೇಶವಾದ ಸಾಕ್ಷಿವೇದ್ಯ ಸುಖದುಃಖಾದಿಗಳಿಂದ ವ್ಯಾವೃತ್ತವಾಗಿದೆ. ಪಕ್ಷದ ಏಕದೇಶದಲ್ಲಿಯಾದರೂ ಈ ಉಪಾಧಿ ವ್ಯಾವೃತ್ತವಾದರೆ ಅಲ್ಲಿ ಸಾಧ್ಯಾಭಾವವನ್ನು ಸಾಧಿಸುತ್ತದೆ. ಅಲ್ಲಿ ಸಾಧನವಿರುವುದರಿಂದ ಹೇತುವಿಗೆ ಸಾಧ್ಯವ್ಯಭಿಚಾರಜ್ಞಾನ ಉಂಟಾಗುತ್ತದೆ. ಆ ಮೂಲಕ ಉಪಾಧಿಯು ದೋಷವೆನಿಸುತ್ತದೆ.

ಬ್ರಹ್ಮನಲ್ಲಿಯೆ ಶ್ರುತಿತಾತ್ಪರ್ಯ, ಧರ್ಮಾಧರ್ಮಾದಿಗಳಲ್ಲಿ ಶ್ರುತಿತಾತ್ಪರ್ಯವಿಲ್ಲ ಎಂದು ಅದ್ವೈತಿ ಹೇಳುವಂತಿಲ್ಲ. ಹಾಗೆ ಹೇಳಿದರೆ ಧರ್ಮಾಧರ್ಮಾದಿ ಸಿದ್ಧಿಯಾಗಲಾರದು. ವಸ್ತುತಃ ಅವಾಂತರ ತಾತ್ಪರ್ಯವನ್ನು ಅವನು ಅಂಗೀಕರಿಸಿದ್ದಾನೆ. ಆದರೂ ಮುಖ್ಯತಾತ್ಪರ್ಯಾವಿಷಯತ್ವ ಬಂತು ತಾನೆ? ಎಂದರೆ 'ತಾತ್ಪರ್ಯ ಮುಖ್ಯ'ವೆನ್ನುವುದು ಮಿಥ್ಯಾತ್ವಸಿದ್ಧವಾದ ನಂತರವೇ ಹೊರತು ಈಗ ಅಲ್ಲ. ಆದರಿಂದ ಪಕ್ಷೈಕದೇಶದಲ್ಲಿ ಈ ಉಪಾಧಿಗೆ ಸಾಧನಾವ್ಯಾಪಕತ್ವವಿದ್ದೇ ಇದೆ.

'ಉಪಾಧಿಯು ಪಕ್ಷಾದ್‌ವ್ಯಾವೃತ್ತವಾಗಲೇಬೇಕು. ಇಲ್ಲದಿದ್ದರೆ ಉಪಾಧ್ಯಭಾವದಿಂದ ಪಕ್ಷದಲ್ಲಿ ಸಾಧ್ಯಾಭಾವಸಾಧನೆ ಮಾಡಲಾಗದು. ಅಸಿದ್ಧಿ ಬಂದೀತು. ಹಾಗೇ ಉಪಾಧಿಯು ಪಕ್ಷೈಕದೇಶದಿಂದ ಮಾತ್ರವ್ಯಾವೃತ್ತವಾದರೆ ಉಪಾಧ್ಯಭಾವಕ್ಕೆ ಭಾಗಾಸಿದ್ಧಿ.'— ಎಂದರೆ ಅದು ಸರಿಯಲ್ಲ. ಆಗ ಉಪಾಧಿಯನ್ನು ಪಕ್ಷೈಕದೇಶದಲ್ಲಿ ಹೇತುವಿಗೆ ವ್ಯಭಿಚಾರಉನ್ನಾಯಕವಾಗುವುದರಿಂದಲೇ ದೋಷವೆನ್ನಲು ಬರುತ್ತದೆ.

ಯದ್ಯಪಿ ಸಾಕ್ಷಿಯು ಅವಿದ್ಯಾವೃತ್ತ್ಯುಪಹಿತ ಚೈತನ್ಯರೂಪ. ಅವಿದ್ಯೆಯು ದೋಷ. ಹೀಗಾಗಿ ದೋಷಪ್ರಯುಕ್ತ ಧೀವಿಷಯತ್ವವು ಸಾಕ್ಷಿವೇದ್ಯ ಸುಖಾದಿಗಳಲ್ಲಿದೆ, ಅವಿಷಯತ್ವವಿಲ್ಲ. ಆದರೂ 'ದೋಷಪ್ರಯುಕ್ತ' ಎನ್ನದೆ 'ದೋಷಜನ್ಯ'ವೆಂದಿದ್ದರಿಂದ ದೋಷಜನ್ಯಧೀವಿಷಯತ್ವವು ಸುಖಾದಿ ವ್ಯಾವೃತ್ತವಾಗಿದೆ.

ಪ್ರತಿಭಾಸ ಮಾತ್ರ ಶರೀರತ್ವವೂ ಕೂಡ ಉಪಾಧಿ. ಇದು ಪಕ್ಷಮಾತ್ರ ವ್ಯಾವೃತ್ತವಾಗಿದೆ. ಅಂದರೆ ಪಕ್ಷದಲ್ಲಿ ಎಲ್ಲಿಯೂ ಇಲ್ಲ. ಆದರಿಂದ ಸಾಧನಾವ್ಯಾಪಕವಾಗಿದೆ.

'ಪ್ರತಿಭಾಸಮಾತ್ರ ಶರೀರತ್ವವೆಂದರೆ ಬ್ರಹ್ಮಜ್ಞಾನೇತರ ಬಾಧ್ಯತ್ವ. ಇದು ಮಿಥ್ಯಾಭೂತ ದೇಹಾತ್ಮೈಕ್ಯದಲ್ಲಿಲ್ಲ. ಆದರಿಂದ ಸಾಧ್ಯವ್ಯಾಪಕತ್ವ ಭಂಗ'— ಎಂದು ಸಿದ್ಧಿಕಾರ ಹೇಳುವುದು ಸರಿಯಲ್ಲ ಬ್ರಹ್ಮಜ್ಞಾನೇತರವಾದ ದೇಹಾತ್ಮವಿವೇಕದಿಂದ ದೇಹಾತ್ಮೈಕ್ಯವು ಬಾಧ್ಯವಾಗಿದೆ. ಮತ್ತು ದೇಹಾತ್ಮೈಕ್ಯ ಭ್ರಮವೆಂಬುದೇ ಅಸಿದ್ಧ. 'ನನ್ನ ಶರೀರ' ಎಂದೇ ಸರ್ವಾನುಭವ ಸಿದ್ಧವಾಗಿದೆ, 'ನಾನು ಶರೀರ' ಎಂಬ ಭ್ರಮ ಯಾರಿಗೂ ಇಲ್ಲ ಎಂಬುದನ್ನು ಮುಂದೆ ದೇಹಾತ್ಮೈಕ್ಯಾಧ್ಯಾಸಭಂಗ ಪ್ರಕರಣದಲ್ಲಿ ಹೇಳುತ್ತಾರೆ.

'ದೃಷ್ಟಿಸೃಷ್ಟಿಪಕ್ಷದಲ್ಲಿ ಪ್ರತಿಭಾಸಮಾತ್ರ ಶರೀರತ್ವವನ್ನು ಜಗತ್ತಿಗೆ ಒಪ್ಪಿದ್ದೇನೆ' ಎಂದು ಸಿದ್ಧಿಕಾರ

ಹೇಳುತ್ತಾನೆ. ಆದರೆ ಹಾಗೆ ಒಪ್ಪಿದ್ದರೆ ಜಗತ್ತಿಗೆ ಅರ್ಥಕ್ರಿಯಾಕಾರಿತ್ವ ಇಲ್ಲವಾದೀತು. ಪ್ರತಿಕರ್ಮ ವ್ಯವಸ್ಥೆ ಅರ್ಥಹೀನವಾದೀತು. ಏಕೆಂದರೆ ಬ್ರಹ್ಮಚೈತನ್ಯರೂಪಜ್ಞಾನದಲ್ಲಿ ಘಟಾದಿ ಅಧ್ಯಸ್ತವಾಗಿದೆ. ಆದರಿಂದ ಒಮ್ಮೆಲೆ ಎಲ್ಲ ಜೀವರಿಗೂ ಘಟಾದಿಪ್ರಕಾಶ ಪ್ರಸಕ್ತವಾದಾಗ ಯಾರ ಇಂದ್ರಿಯಜನ್ಯ ಅಂತಃಕರಣ ವೃತ್ತಿಯಿಂದ ಯಾವ ವಿಷಯಾವಚ್ಛಿನ್ನ ಬ್ರಹ್ಮಚೈತನ್ಯದ ಅಜ್ಞಾನಾವರಣ ನಾಶ ವಾಗುವುದೋ ಅವನಿಗೆ ಬ್ರಹ್ಮಚೈತನ್ಯದಿಂದ ಆ ವಿಷಯ ಪ್ರಕಾಶವಾಗುವುದೆಂದು ಅದ್ವೈತಿ ಒಪ್ಪಿದ್ದಾನೆ.

ದೃಷ್ಟಿಸೃಷ್ಟಿ ಪಕ್ಷವಿಟ್ಟುಕೊಂಡರೆ ಅನ್ಯೋನ್ಯಾಶ್ರಯ. ಚೈತನ್ಯರೂಪಜ್ಞಾನ ವ್ಯಕ್ತವಾದರೆ ಘಟಾದಿ ಸ್ವರೂಪ ಸೃಷ್ಟಿಯಾಗುವುದು. ಘಟಾದಿ ಸ್ವರೂಪ ಸ್ಪಷ್ಟವಾದರೆ ಅದಕ್ಕೆ ಸನ್ನಿಕೃಷ್ಟವಾದ ಇಂದ್ರಿಯಜನ್ಯವೃತ್ತಿಯಿಂದ ಅಜ್ಞಾನಾವರಣ ಭಂಗವಾದಾಗ ಚೈತನ್ಯರೂಪಜ್ಞಾನ ವ್ಯಕ್ತವಾಗುವುದು ಎಂದು ಅನ್ಯೋನ್ಯಾಶ್ರಯ. ಆದರಿಂದ ದೃಷ್ಟಿಸೃಷ್ಟಿ ಪಕ್ಷವೆ ಅಪ್ರಾಮಾಣಿಕವೆನ್ನಬೇಕು. ವಾದಿಯು ಅಪ್ರಾಮಾಣಿಕವಾದ ದೃಷ್ಟಿಸೃಷ್ಟಿಪಕ್ಷವನ್ನು ಅಂಗೀಕರಿಸಿ ಲೋಕಮರ್ಯಾದಾತಿಕ್ರಮ ಮಾಡಿದರೆ ಅವನನ್ನು ಉನ್ಮತ್ತನೆಂದು ಉಪೇಕ್ಷಿಸಬೇಕಾಗುತ್ತದೆ.

❖❖❖

# 24. दृश्यत्वादेराभाससाम्यविवरणम्

विमतं प्रातिभासिकं दृश्यत्वाच्छुक्तिरूप्यवत् । ब्रह्म मिथ्या व्यवहारविषयत्वादसद्विलक्षणत्वाद्वा शुक्तिरूप्यवदित्याभाससाम्यं च ।

जगतोऽप्रातिभासिकत्वग्राहिप्रत्यक्षं ब्रह्मणस्सत्यत्वश्रुतिश्चानुमान-विरोधादप्रमाणम् । विपक्षे च गौरवम् । व्यवहृतिव्यवहार्ययोः संबन्धान्तराभावात्सर्वं व्यवहार्यं व्यवहृतावध्यस्तमित्यादि च बाधकमिति सुवचत्वात् ॥

गौरवमिति ॥ ब्रह्मान्यत्वस्य हेतुविशेषणत्वे गौरवमित्यर्थः ॥ सर्वमिति ॥ यथा तव सर्वं दृश्यमध्यस्तं तद्वदित्यर्थः ।

॥ इति दृश्यत्वादेराभाससाम्यम् ॥

❖❖❖

## ದೃಶ್ಯತ್ವಾದಿಹೇತುಗಳಿಗೆ ಆಭಾಸಸಾಮ್ಯ

ವಿಮತಂ ಪ್ರಾತಿಭಾಸಿಕಂ, ದೃಶ್ಯತ್ವಾತ್ ಶುಕ್ತಿರೂಪ್ಯವತ್। ಬ್ರಹ್ಮ ಮಿಥ್ಯಾ, ವ್ಯವಹಾರ ವಿಷಯತ್ವಾತ್, ಅಸದ್ವಿಲಕ್ಷಣತ್ವಾದ್ ವಾ ಶುಕ್ತಿರೂಪ್ಯವತ್ ಇತಿ ಆಭಾಸ ಸಾಮ್ಯಂ ಚ ।

ಜಗತಃ ಅಪ್ರಾತಿಭಾಸಿಕತ್ವ ಗ್ರಾಹಿ ಪ್ರತ್ಯಕ್ಷಂ ಬ್ರಹ್ಮಣಃ ಸತ್ಯತ್ವಶ್ರುತಿಶ್ಚ ಅನುಮಾನ ವಿರೋಧಾತ್ ಅಪ್ರಮಾಣಂ। ವಿಪಕ್ಷೇ ಚ ಗೌರವಂ।

ವ್ಯವಹೃತಿ ವ್ಯವಹಾರ್ಯಯೋಃ ಸಂಬಂಧಾಂತರಾಭಾವಾತ್ ಸರ್ವಂ ವ್ಯವಹಾರ್ಯಂ ವ್ಯವಹೃತೌ ಅಧ್ಯಸ್ತಂ ಇತ್ಯಾದಿ ಚ ಬಾಧಕಂ ಇತಿ ಸುವಚತ್ವಾತ್।

ಪ್ರಾತಿಭಾಸಿಕವೆ ಅಪ್ರಾತಿಭಾಸಿಕವೆ ಎಂದು ವಿವಾದ ಗೋಚರವಾಗಿರುವ ಬ್ರಹ್ಮ ಮತ್ತು ಜಗತ್ತುಗಳು ಪ್ರಾತಿಭಾಸಿಕವಾಗಿವೆ, ದೃಶ್ಯತ್ವವಿರುವುದರಿಂದ, ಶುಕ್ತಿರೂಪ್ಯದಂತೆ. ಬ್ರಹ್ಮ ಮಿಥ್ಯಾ, ವ್ಯವಹಾರವಿಷಯವಾದ್ದರಿಂದ, ಅಥವಾ ಅಸದ್ ವಿಲಕ್ಷಣವಾದ್ದರಿಂದ, ಶುಕ್ತಿರೂಪ್ಯದಂತೆ ಎಂದು ಜಗನ್ಮಿಥ್ಯಾತ್ವ ಸಾಧಕ ದೃಶ್ಯತ್ವಾದ್ಯನುಮಾನಗಳಿಗೆ ಆಭಾಸಸಾಮ್ಯ.

ಮಿಥ್ಯಾತ್ವಾನುಮಾನಕ್ಕೆ ಬಾಧಕವಾಗಬಲ್ಲ ಜಗತ್‌ಸತ್ಯತ್ವಗ್ರಾಹಿ ಪ್ರತ್ಯಕ್ಷಶ್ರುತಿಗಳು ಈ ಅನುಮಾನವಿರೋಧದಿಂದ ಅಪ್ರಮಾಣವಾಗುವಂತೆಯೇ ಪ್ರಾತಿಭಾಸಿಕತ್ವಾನುಮಾನಕ್ಕೆ ಬಾಧಕವಾಗಬಲ್ಲ, ಜಗತ್ತಿಗೆ ಅಪ್ರಾತಿಭಾಸಿಕತ್ವಗ್ರಾಹಿ ಪ್ರತ್ಯಕ್ಷವಾಗಲಿ, ಬ್ರಹ್ಮನಿಗೆ ಸತ್ಯತ್ವಗ್ರಾಹಿ ಶ್ರುತಿಯಾಗಲಿ ಎರಡೂ ಪ್ರಾತಿಭಾಸಿಕತ್ವಾನುಮಾನ ವಿರೋಧದಿಂದ ಅಪ್ರಮಾಣವೆನ್ನುತ್ತೇವೆ.

'ವಿಪಕ್ಷೇ' ಹೇತುವಿರಲಿ, ಸಾಧ್ಯವಿರಬೇಕಾಗಿಲ್ಲ ಎಂದು ಅಪ್ರಯೋಜಕತ್ವವನ್ನು ಹೇಳುವಾಗ ಬ್ರಹ್ಮಜಗತ್ತುಗಳೆರಡನ್ನು ಸತ್ಯವೆಂದು ಒಪ್ಪುವುದು ಗೌರವ. ಮತ್ತು ಬ್ರಹ್ಮಭಿನ್ನತ್ವವನ್ನು ಹೇತುವಿನಲ್ಲಿ ವಿಶೇಷಣವೆಂದರೂ ಬ್ರಹ್ಮ ಪಾರಮಾರ್ಥಿಕ, ಜಗತ್ತು ವ್ಯಾವಹಾರಿಕ, ಶುಕ್ತಿರಜತಾದಿಗಳು ಪ್ರಾತಿಭಾಸಿಕ ಎಂದು ಸತ್ತಾ ತ್ರೈವಿಧ್ಯ ಒಪ್ಪುವುದು ಮಹಾ ಗೌರವ. ಎಲ್ಲವೂ ಪ್ರಾತಿಭಾಸಿಕವೆಂದರೆ ಮಹಾಲಾಘವ. ಮತ್ತು ಅನುಕೂಲತರ್ಕವೂ ಅಪ್ರಯೋಜಕತ್ವ ಶಂಕೆಗೆ ಬಾಧಕವಾಗಿದೆ. ದೃಕ್ ದೃಶ್ಯಗಳಿಗೆ ಬೇರೆ ಸಂಬಂಧವಿಲ್ಲದ್ದರಿಂದ ನಿನ್ನ ಮತದಲ್ಲಿ ದೃಶ್ಯವೆಲ್ಲವೂ ದೃಕ್ಕಿನಲ್ಲಿ ಅಧ್ಯಸ್ತವೆಂದು ಅಂಗೀಕೃತವಾಗಿದೆ, ಅದರಂತೇ ವ್ಯವಹಾರ ಮತ್ತು ವ್ಯವಹಾರ ಗೋಚರಗಳಿಗೆ ಬೇರೆ ಸಂಬಂಧವಿಲ್ಲದ್ದರಿಂದ ವ್ಯವಹಾರದಲ್ಲಿ ವ್ಯವಹಾರಗೋಚರವು ಅಧ್ಯಸ್ತವೆಂದು ಒಪ್ಪಲೇಬೇಕಾಗುವುದರಿಂದ ವ್ಯವಹಾರ ಗೋಚರವಾದ ಬ್ರಹ್ಮಜಗತ್ತುಗಳೆರಡೂ ಪ್ರಾತಿಭಾಸಿಕವೆ ಎಂದು ಅನುಕೂಲತರ್ಕವಿದೆ ಎನ್ನುತ್ತೇವೆ. ಅದರಿಂದ, ಬ್ರಹ್ಮಜಗತ್ತುಗಳು ಪ್ರಾತಿಭಾಸಿಕವಲ್ಲವೆಂದರೆ ಅವುಗಳಿಗೆ ವ್ಯವಹಾರವಿಷಯತ್ವವಿಲ್ಲ ವಾದೀತೆಂದೂ, ದೃಶ್ಯತ್ವವಿಲ್ಲ ವಾದೀತೆಂದೂ ಹೇತೂಚ್ಛಿತ್ತಿಯೂ ವಿಪಕ್ಷೇ ಬಾಧಕವಾಗಿದೆ.

ಇಲ್ಲಿ ಅದ್ವೈತಿ ಹೇಳಬಹುದು— 'ಬ್ರಹ್ಮನಿಗೆ ಮಿಥ್ಯಾತ್ವವನ್ನು ಹೇಳಿದರೆ ಶೂನ್ಯವಾದಾಪತ್ತಿ. ಜಗತ್ತಿಗೆ ಪ್ರಾತಿಭಾಸಿಕತ್ವವನ್ನು ಹೇಳಿದರೆ ವ್ಯವಹಾರಾನುಪಪತ್ತಿ'. ಇದಕ್ಕೆ ನಾವು ಹೇಳುತ್ತೇವೆ— 'ಬ್ರಹ್ಮವ್ಯತಿರಿಕ್ತವೆಲ್ಲವೂ ಮಿಥ್ಯಾ ಆದರೂ ಬ್ರಹ್ಮ ನಿರ್ವಿಶೇಷವಾಗುವುದರಿಂದ ಶೂನ್ಯವಾದಾಪತ್ತಿಯೆ. ಮತ್ತು ಜಗತ್ತು ಮಿಥ್ಯಾ ಆದರೂ ಅರ್ಥಕ್ರಿಯಾಕಾರಿಯಾಗಲಾರದು' ಎಂದು.

'ಬ್ರಹ್ಮಜ್ಞಾನೇತರ ಬಾಧ್ಯತ್ವರೂಪ ಪ್ರಾತಿಭಾಸಿಕತ್ವವು ದೇಹಾತ್ಮೈಕ್ಯದಲ್ಲಿ ಇಲ್ಲ. ಅಲ್ಲಿ ಹೇತು ವ್ಯಭಿಚರಿತವಾಗಿದೆ'—ಎಂದರೆ,

'ಇಲ್ಲ. ದೇಹಾತ್ಮೈಕ್ಯವೆಂಬುದೇ ಇಲ್ಲ. ಹಾಗೆ ಭ್ರಾಂತಿ ಯಾರಿಗೂ ಬರುವುದಿಲ್ಲ. ಬಂದರೂ ದೇಹಾತ್ಮವಿವೇಕ ರೂಪವಾದ ಬ್ರಹ್ಮಜ್ಞಾನೇತರ ಜ್ಞಾನದಿಂದಲೇ ಅದು ಬಾಧಿತವಾಗುತ್ತದೆ'.

'ವಿಶಿಷ್ಟಬ್ರಹ್ಮ ಪ್ರಾತಿಭಾಸಿಕವೆಂದರೆ ಸಿದ್ಧಸಾಧನ, ಶುದ್ಧಬ್ರಹ್ಮನನ್ನು ಹಾಗೆ ಹೇಳಲು ಹೇತು ಅಸಿದ್ಧ'.—

'ಇಲ್ಲ. ಶುದ್ಧಬ್ರಹ್ಮನಿಗೇ ಮಿಥ್ಯಾತ್ವವನ್ನು ಹೇಳುತ್ತೇವೆ. ವೃತ್ತಿವ್ಯಾಪ್ಯತ್ವ ಅವನಲ್ಲಿ ಸಿದ್ಧವೇ ಇದೆಯಾದ್ದರಿಂದ ವ್ಯವಹಾರ ವಿಷಯತ್ವರೂಪ ಹೇತು ಅದರಿಂದಲೇ ಅವನಲ್ಲಿ ಸಿದ್ಧವಾಗುತ್ತದೆ.

'ಅಸದ್ ವಿಲಕ್ಷಣತ್ವವೆಂದರೆ ಕ್ವಚಿದಪ್ಯುಪಾಧೌ ಸತ್ತ್ವೇನ ಪ್ರತೀತ್ಯನರ್ಹವಿಲಕ್ಷಣತ್ವ, ಅಂದರೆ ಕ್ವಚಿದುಪಾಧೌ ಸತ್ತ್ವೇನ ಪ್ರತೀತ್ಯರ್ಹತ್ವ, ಈ ಹೇತು ಶುದ್ಧಬ್ರಹ್ಮನಲ್ಲಿ ಅಸಿದ್ಧ'—

'ಇಲ್ಲ. 'ಸ್ವೇ ಮಹಿಮ್ನಿ ಪ್ರತಿಷ್ಠಿತಃ' ಎಂಬ ಶ್ರುತಿಯಿಂದ ಹೇತು ಸಿದ್ಧವೇ ಇದೆ.'

ಹೀಗೆ ಆಭಾಸಸಾಮ್ಯದಿಂದ, ಮಿಥ್ಯಾತ್ವಾನುಮಾನದಲ್ಲಿ, ಇಷ್ಟರವರೆಗೆ ವಾದಿಪ್ರತಿವಾದಿಗಳಿಗೆ ಕಂಡುಬಂದ ದೋಷಗಳಿಂದ ಹೊರತಾಗಿ ಇತರ ದೋಷಗಳೂ ಸುಲಭವಾಗಿ ಕಂಡುಬರುತ್ತವೆ. ಆದರಿಂದ ಆಭಾಸಸಾಮ್ಯವು ಮಿಥ್ಯಾತ್ವಾನುಮಾನಕ್ಕೆ ದೋಷವಾಗುತ್ತದೆ.

❖❖❖



# ಶ್ರೀಶ್ರೀಶ್ರೀಮತ್ಸುಬುಧೇಂದ್ರತೀರ್ಥರು

ಪ್ರಸ್ತುತ ಪೀಠಾಧೀಶರು

**ಶ್ರೀರಾಘವೇಂದ್ರಸ್ವಾಮಿಮಠ,** ಮಂತ್ರಾಲಯ.